# ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಮಾನವೀಕರಣದ ನೆಲೆಗಳು

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಪಿಎಚ್. ಡಿ ಮಹಾಪ್ರಬಂಧ



ಸಂಶೋಧಕ
ರೇವಯ್ಯ ಒಡೆಯರ್

ಮಾರ್ಗದರ್ಶಕರು
ಪ್ರೊ. ಎ. ವಿ. ನಾವಡ
ಮುಖ್ಯಸ್ಥರು, ಹಸ್ತಪ್ರತಿಶಾಸ್ತ್ರ ವಿಭಾಗ






ಭಾಷಾನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ಸೆಪ್ಟೆಂಬರ್ ೨೦೦೦

# ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಮಾನವೀಕರಣದ ನೆಲೆಗಳು

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಪಿಎಚ್. ಡಿ ಮಹಾಪ್ರಬಂಧ

ಸಂಶೋಧಕ
ರೇವಯ್ಯ ಒಡೆಯರ್



ಮಾರ್ಗದರ್ಶಕರು
ಪ್ರೊ. ಎ. ವಿ. ನಾವಡ
ಮುಖ್ಯಸ್ಥರು, ಹಸ್ತಪ್ರತಿಶಾಸ್ತ್ರ ವಿಭಾಗ



ಭಾಷಾನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ಸೆಪ್ಟೆಂಬರ್ ೨೦೦೦



## ಪ್ರಮಾಣ ಪತ್ರ

**ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಮಾನವೀಕರಣದ ನೆಲೆಗಳು** ಎಂಬ ವಿಷಯದ ಕುರಿತು ಪ್ರೊ. ಎ. ವಿ. ನಾವಡ ಅವರ ಮಾರ್ಗದರ್ಶನದಲ್ಲಿ ಸಂಶೋಧನಾತ್ಮಕ ಅಧ್ಯಯನ ಮಾಡಿ ಈ ಮಹಾಪ್ರಬಂಧವನ್ನು ಪಿಎಚ್.ಡಿ.ಪದವಿಗಾಗಿ ಸಿದ್ಧಪಡಿಸಿದ್ದೇನೆ.

ಈ ಮಹಾಪ್ರಬಂಧವನ್ನು ಯಾವುದೇ ವಿಶ್ವವಿದ್ಯಾಲಯಕ್ಕೆ ಪದವಿ ಅಥವಾ ಡಿಪ್ಲೋಮಾಗಳಿಗಾಗಿ ಪ್ರಸ್ತುತ ಪಡಿಸಿಲ್ಲ. ಅಲ್ಲದೆ ಇದು ಇಲ್ಲಿಯವರೆಗೆ ಎಲ್ಲಿಯೂ ಇಡಿಯಾಗಿ ಅಥವಾ ಬಿಡಿಯಾಗಿ ಪ್ರಕಟಗೊಂಡಿಲ್ಲ ಮತ್ತು ಇದು ನನ್ನ ಸ್ವತಂತ್ರ ಸಂಶೋಧನ ಅಧ್ಯಯನವಾಗಿದೆ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ : ೩೦ - ೦೯ - ೨೦೦೦
ಸ್ಥಳ : ವಿದ್ಯಾರಣ್ಯ

(ರೇವಯ್ಯ ಒಡೆಯರ್)
ಸಂಶೋಧಕರು

# ಮಾರ್ಗದರ್ಶಕರ ಪತ್ರ

ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಮಾನವೀಕರಣದ ನೆಲೆಗಳು ಎಂಬ ವಿಷಯದ ಕುರಿತು ಶ್ರೀ ರೇವಯ್ಯ ಒಡೆಯರ್ ಅವರು ನನ್ನ ಮಾರ್ಗದರ್ಶನದಲ್ಲಿ ಸಂಶೋಧನಾತ್ಮಕ ಅಧ್ಯಯನ ಮಾಡಿ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಸಿದ್ಧಪಡಿಸಿದ್ದಾರೆ.

ಈ ಮಹಾಪ್ರಬಂಧವನ್ನು ಯಾವುದೇ ವಿಶ್ವವಿದ್ಯಾಲಯಕ್ಕೆ ಪದವಿ ಅಥವಾ ಡಿಪ್ಲೊಮಗಳಿಗಾಗಿ ಪ್ರಸ್ತುತಪಡಿಸಿಲ್ಲ. ಅಲ್ಲದೆ ಇದು ಇಲ್ಲಿಯವರೆಗೆ ಎಲ್ಲಿಯೂ ಇಡಿಯಾಗಿ ಅಥವಾ ಬಿಡಿಯಾಗಿ ಪ್ರಕಟಗೊಂಡಿಲ್ಲ ಮತ್ತು ಇದು ಅವರ ಸ್ವತಂತ್ರ ಸಂಶೋಧನ ಅಧ್ಯಯನವಾಗಿದೆ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ : ೩೦-೦೯-೨೦೦೦
ಸ್ಥಳ : ವಿದ್ಯಾರಣ್ಯ

ಪ್ರೊ. ಎ. ವಿ. ನಾವಡ
ಮಾರ್ಗದರ್ಶಕರು

# ನಿವೇದನೆ

ಕನ್ನಡ ನಾಡು ಯಾವತ್ತೂ ತನ್ನ ನೆನಪಿನಲ್ಲಿಟ್ಟುಕೊಳ್ಳುವಂತಹ ಸಾಹಿತ್ಯ ಕೃತಿಗಳನ್ನು ರಚಿಸಿದ, ಬದುಕು - ಬರಹ ಏಕೀಭವಿಸಿ ಜೀವಿಸಿದ ನಾಡೋಜ ಶಿವರಾಮ ಕಾರಂತರ ಕಾದಂಬರಿಗಳ ಕುರಿತು ಪಿಎಚ್. ಡಿ. ಪದವಿಗಾಗಿ ಅಧ್ಯಯನ ಮಾಡಲು ಅನುವು ಮಾಡಿಕೊಟ್ಟ ಉಪಕುಲಪತಿಗಳಾದ ಡಾ. ಚಂದ್ರಶೇಖರ ಕಂಬಾರ ಮತ್ತು ಡಾ. ಎಂ. ಎಂ. ಕಲಬುರ್ಗಿ ಅವರಿಗೆ, ಸಾಹಿತ್ಯ ಹಾಗೂ ಸಾಹಿತ್ಯೇತರ ಅಧ್ಯಯನ ಶಿಸ್ತುಗಳ ಮಾನದಂಡವಾದ ಮಾನವೀಕರಣದಂತಹ ಲೋಕವಿಸ್ತಾರವಾದ ಸಿದ್ಧಾಂತವನ್ನು ಶಿವರಾಮ ಕಾರಂತರ ಕಾದಂಬರಿ ಸಾಹಿತ್ಯದ ಮೂಲಕ; ಅತಿಸೂಕ್ಷ್ಮದಿಂದ ಸೂಕ್ಷ್ಮದ ಕಡೆಗೆ ಸಾಗುವಂತಹ ಅಧ್ಯಯಿನಿಸುವ ಪರಿಕ್ರಮವನ್ನು ಪರಿಚಯಿಸಿ, ಸಲಹೆ ಸೂಚನೆಗಳನ್ನಿತ್ತ ಕುಲಸಚಿವರಾದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಅವರಿಗೆ, ಹಾಗೂ ಕನ್ನಡದ ಮೇರುಪರ್ವತ ಕಾರಂತರನ್ನು ಅರಿಯುವಂತಹ ಅನ್ಯ ಅಧ್ಯಯನ ಶಿಸ್ತುಗಳನ್ನು ಪರಿಚಯಿಸಿ ನನ್ನ ಜ್ಞಾನದ ಪರಿಧಿಯನ್ನು ವಿಸ್ತೃತಗೊಳಿಸಿ, ನನ್ನೆಲ್ಲಾ ತಪ್ಪುಗಳನ್ನು ಮನ್ನಿಸಿ ಸಹನೆಯಿಂದ ಮಾರ್ಗದರ್ಶನವನ್ನಿತ್ತ ಪ್ರೊ. ಎ. ವಿ. ನಾವಡ ಅವರಿಗೆ ಅನಂತ ಕೃತಜ್ಞತೆಗಳು.

ಅಧ್ಯಯನದ ಸಂದರ್ಭದಲ್ಲಿ ತಮ್ಮ ಕಾರ್ಯಬಾಹುಳ್ಯದ ನಡುವೆ ಬಿಡುವು ಮಾಡಿಕೊಂಡು ಅಗತ್ಯ ವಾದ ಮಾಹಿತಿಯನ್ನು ಕೊಟ್ಟು ಪ್ರಬಂಧದ ವಿಸ್ತೃತ ಅಧ್ಯಯನಕ್ಕೆ ಸಲಹೆಗಳನ್ನಿತ್ತ ಡಾ. ಎಚ್. ಎಸ್. ರಾಘುವೇಂದ್ರರಾವ್ ಅವರಿಗೆ, ಅಂತೆಯೇ ಪ್ರಬಂಧದ ಸಮಸ್ಯೆಗಳನ್ನು ಯಾವತ್ತೂ ಮುಕ್ತವಾಗಿಯೇ ಚರ್ಚಿಸಿದ ಡಾ. ರಹಮತ್ ತರೀಕೆರೆ, ವಿ. ಬಿ. ತಾರಕೇಶ್ವರ್, ಡಾ. ಮೋಹನ್ ಕುಂಟಾರ್ ಅವರಿಗೆ, ಮಹಾಪ್ರಬಂಧದ ರಚನೆಗೆ ಅಗತ್ಯ ಪೂರಕ ಗ್ರಂಥಗಳನ್ನು ಒದಗಿಸಿ, ಜಗತ್ತಿನ ಜ್ಞಾನವನ್ನು ಪರಿಚಯಿಸಿಕೊಳ್ಳಲು ನೆರವಾದ ಗ್ರಂಥಾಲಯದ ಸಿಬ್ಬಂದಿವರ್ಗಕ್ಕೆ, ನನ್ನ ಅಧ್ಯಯನಕ್ಕೆ ನೆರವನ್ನಿತ್ತ ಡಾ. ವೀರೇಶ್ ಬಡಿಗೇರ, ಡಾ. ಎಫ್. ಟಿ. ಹಳ್ಳಿಕೇರಿ, ಡಾ. ಕೆ. ರವೀಂದ್ರನಾಥ ಅವರಿಗೆ, ಈ ಅಧ್ಯಯನದ ಕರ ಡು ಪ್ರತಿಗಳನ್ನು ತಿದ್ದುವಲ್ಲಿ ನೆರವಾಗಿ ಸಲಹೆಗಳನ್ನು ಕೊಟ್ಟ ಹಿರಿಯ ಗೆಳೆಯರಾದ ಸುಜ್ಞಾನಮೂರ್ತಿ ಅವರಿಗೆ, ನನ್ನ ಮೌನಕ್ಕೆ ಹಲವಾರು ಅರ್ಥ ಕಟ್ಟಿ ಸಕಲ ರೀತಿಯಿಂದಲೂ ನೆರವನ್ನಿತ್ತ ರಾಜ್‌ಕುಮಾರ್, ಶಿವಪುತ್ರ ಅವರಿಗೆ,

ಕನ್ನಡ ವಿಶ್ವವಿದ್ಯಾಲಯದ ಸಂಶೋಧನ ಗೆಳೆಯರ ಬಳಗದಿಂದ ಶ್ರೀ ಎಸ್. ಎಂ.ಗಂಗಾಧರ, ಶ್ರೀ ಜೆ.ಕೃಷ್ಣ ಮತ್ತು ನಾನು ಮೂರು ಜನರು ಸೇರಿ 'ಮಾನವ ಕೇಂದ್ರಿತ ನೆಲೆ'ಯಲ್ಲಿ ಅಧ್ಯಯನ ನಡೆಸುವ ಉದ್ದೇಶ ಹಾಕಿಕೊಂಡಿದ್ದೇವೆ. ಮಾನವನನ್ನೇ ಕೇಂದ್ರವಾಗಿಟ್ಟುಕೊಂಡು ಭೂತ, ಭವಿಷ್ಯ ಹಾಗೂ ವರ್ತಮಾನಗಳ ಮೂರು ಮುಖಗಳನ್ನು ಹಾಗೂ ಸಂಸ್ಕೃತಿ, ಪರಿಚಲನೆ ಮತ್ತು ಅಭಿವೃದ್ಧಿಗಳನ್ನು ಬಿಂಬಿಸುವ ಮೂರು ಅಧ್ಯಯನ ಕ್ರಮಗಳನ್ನು ಆರಂಭಿಸಿದ್ದೇವೆ. ಭೂತ-ಸಂಸ್ಕೃತಿಯ ಪ್ರತೀಕವಾಗಿ **ಶಂಬಾ; ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ**, ಭವಿಷ್ಯ-ಪರಿಚಲನೆಯ ಪ್ರತೀಕವಾಗಿ **ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಮಾನವೀಕರಣದ ನೆಲೆಗಳು** ಹಾಗೂ ವರ್ತಮಾನ-ಅಭಿವೃದ್ಧಿಯ ಪ್ರತೀಕವಾಗಿ **ಮಾನವ ಅಭಿವೃದ್ಧಿ ಮತ್ತು ಮಾನವ ದುಸ್ಥಿತಿಗಳ ಪ್ರಾದೇಶಿಕ ಆಯಾಮಗಳ ಅಧ್ಯಯನ** ಎಂಬ ಅಧ್ಯಯನ ನಿಟ್ಟುಗಳು ನಮ್ಮ ನಡುವೆ ನಡೆದಿವೆ. ಈ ಮೂರು ಅಧ್ಯಯನಗಳು ಮಾನವೀಕರಣದ ಪ್ರಕ್ರಿಯೆಯಲ್ಲಿ ಸಾಗುತ್ತಿರುವುದು ಗಮನಾರ್ಹ. ಸಾಂಸ್ಕೃತಿಕ ನೆಲೆಗಟ್ಟಿನಿಂದ ಆರಂಭವಾಗುವ ಗಂಗಾಧರ ಅವರ ಅಧ್ಯಯನ ಇಡೀ ಕನ್ನಡಿಗರ ಸಮಗ್ರ ಜೀವನ ಶೈಲಿಯನ್ನು ಪರಿಚಯಿಸುತ್ತದೆ. ಅಲ್ಲದೆ ಸಂಶೋಧನೆಯ ನೆಲೆಯಿಂದ ಆರಂಭವಾಗಿ ಭಾಷೆ, ಜನ, ಸಂಪ್ರದಾಯಗಳನ್ನು ಶಿವರಾಮ ಕಾರಂತರ ಕಾದಂಬರಿಗಳನ್ನು ಅಧ್ಯಯನಿಸುವ ಈ ಪ್ರಬಂಧದ ಸೃಜನವನ್ನು ಅವಲಂಬಿಸಿದೆ. ಇಲ್ಲಿ ವಾಸ್ತವತೆಗೆ ಹೆಚ್ಚು ಮಹತ್ವಕೊಡಲಾಗಿದೆ. ಕಾರಂತರ ಬದುಕು-ಬರಹವನ್ನಾಧರಿಸಿ ಇಡೀ ಕನ್ನಡಿಗರ ಬದುಕನ್ನೇ ಅವಲೋಕಿಸಲಾಗಿದೆ. ಕನ್ನಡಿಗರ ಮಾನವೀಕರಣವನ್ನು ಕಾರಂತರ ಕಾದಂಬರಿಗಳು ಪ್ರತಿನಿಧಿಸುವತ್ತಾದ್ದರಿಂದ ಅವರ ಪ್ರಾತಿನಿಧಿಕ ಕಾದಂಬರಿಗಳ ಮೂಲಕ ಕನ್ನಡಿಗರ ಮಾನವೀಕರಣದ ನೆಲೆಗಳನ್ನು ಗುರುತಿಸುವ ಕೆಲಸ ಇಲ್ಲಿ ನಡೆದಿದೆ. ಇದು ಸದಾ ಪರಿಚಲನೆಗೊಳ್ಳುತ್ತಿರುವ ಕ್ರಿಯೆಯಾದ್ದರಿಂದ ವರ್ತಮಾನವನ್ನು ಪ್ರತಿನಿಧಿಸುತ್ತದೆ. ಅದೇ ರೀತಿ 'ಮಾನವಮುಖಿ ಅಭಿವೃದ್ಧಿ'ಯನ್ನು ಹೈದ್ರಾಬಾದ್ -ಕರ್ನಾಟಕವನ್ನು ಅನುಲಕ್ಷಿಸಿ ಕೈಗೊಂಡ ಶ್ರೀ ಕೃಷ್ಣ ಅವರ ಅಧ್ಯಯನವು ಆರೋಗ್ಯ, ಶಿಕ್ಷಣ, ವರಮಾನ ಹಾಗೂ ಬಡತನಗಳನ್ನು ಅವಲಂಬಿಸಿದೆ. ಮಾನವೀಕರಣದ ಪ್ರಕ್ರಿಯೆಗೆ ಆರೋಗ್ಯ, ಶಿಕ್ಷಣ ಹಾಗೂ ವರಮಾನ ತುಂಬಾ ಸಹಾಯಕಾರಿ. ಇವುಗಳಿಲ್ಲದಿದ್ದರೆ ನಮ್ಮ ಮಾನವೀಕರಣವೇ ನಶ್ವರ. ಆದ್ದರಿಂದ ಈ ಮೂರು ಅಧ್ಯಯನಗಳ ಉದ್ದೇಶ ಮಾನವೀಕರಣ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆದ ಈ ಮೂರು ಮುಖಗಳ ಅಧ್ಯಯನವು ಇತಿಹಾಸ, ಸೃಜನ ಸಾಹಿತ್ಯ ಹಾಗೂ ವಾಸ್ತವ ಜೀವನ(ಕ್ಷೇತ್ರಕಾರ್ಯವನ್ನವಲಂಬಿಸಿ)ಗಳ ನೆಲೆಯಲ್ಲಿ ಸಾಗಿದೆ. ಮೂರು ಅಧ್ಯಯನಗಳು ಸಮಗ್ರ ಕರ್ನಾಟಕವನ್ನು ಪ್ರತಿನಿಧಿಸುತ್ತವೆ. ನಮ್ಮ ಈ ಉದ್ದೇಶದ ಫಲವನ್ನು

ಮಾನವೀಕರಣದ ಬೆಳವಣಿಗೆಯಲ್ಲಿ ನಿರೀಕ್ಷಿಸುತ್ತೇವೆ. ಇಂತಹ ಸಹಾನುವರ್ತಿ ಅಧ್ಯಯನ ಕೈಗೊಂಡ ಶ್ರೀ ಎಸ್.ಎಂ.ಗಂಗಾಧರ ಮತ್ತು ಶ್ರೀ ಜೆ.ಕೃಷ್ಣ ಅವರಿಗೆ,

ನನ್ನ ಓದಿನಿಂದ ತಮ್ಮ ಸಹನೆಯನ್ನು ಪರೀಕ್ಷೆಗೊಡ್ಡಿರುವ ತಂದೆ, ತಾಯಿಗಳಿಗೆ, ಪ್ರಬಂಧದ ರಚನೆಯುದ್ದಕ್ಕೂ ಮಾನವೀಯ ನೆಲೆಯ ನೆರವನ್ನಿತ್ತು ಸದಾ ಶುಭ ಕೋರಿದ ಗೆಳೆಯರಾದ ಡಾ. ಮಂಜುನಾಥ ತೆಲಿಗಿ, ಚೆನ್ನಪ್ಪ ಎ., ಯರ್ರಿಸ್ವಾಮಿ ಎಂ., ನಿಸಾರ್ ಅಹಮದ್, ಕುಮಾರ್ ಆರ್. ಬಿ., ಬಸವರಾಜ ಎಚ್.ಈ., ನಾಗರಾಜ ಎಂ., ಮಾರುತಿ ವಿ.ಸೀ, ಪ್ರಭುಸೊಪ್ಪಿನ, ಕಾಂತರಾಜು ಎನ್.ಎಸ್., ಈರಪ್ಪ ಮೆಟ್ಟಿ, ಉಜ್ಜಯಿನಿಯ ಕೊಟ್ರೇಶ್ ಕೆ., ದಿ॥ ಕೆ. ಮಹೇಶ್ ಮೊದಲಾದ ಮಾನವೀಯ ಹೃದಯವುಳ್ಳ ಗೆಳೆಯರಿಗೆ,

ಬಂಧುವಲ್ಲದ ನನ್ನನ್ನು ಬಂಧುವೆಂದು ತಿಳಿದು ತಮ್ಮ ಮಾನವೀಯ ಸಂಬಂಧ ಮೆರೆದು ಯಾವತ್ತೂ ಮರೆಯಲಾರದಂತಹ ಬಂಧುಗಳಾದ ಅಕ್ಕ ಶ್ರೀಮತಿ ವಿಜಯಲಕ್ಷ್ಮಿ, ಗೋಪಾಲರಾವ್, ಶ್ರೀಮತಿ ಶಶಿಕಲಾ, ಕು. ದೀಪಾ ಅವರಿಗೆ, ಹಾಗೂ ಮಹಾಪ್ರಬಂಧವನ್ನು ಅಂದವಾಗಿ ಪುಟ ವಿನ್ಯಾಸ ಗೊಳಿಸಿಕೊಟ್ಟ ಎ. ಎಂ. ಕೃಪಾಶಂಕರ್ ಅವರಿಗೆ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

**ರೇವಯ್ಯ ಒಡೆಯರ್**

# ಪರಿವಿಡಿ

ಅಧ್ಯಾಯ ೧

# ಅಧ್ಯಯನದ ಮುಖಚರ್ಯೆ

ವೈಜ್ಞಾನಿಕ ಜಗತ್ತು ವಿಶಾಲಗೊಳ್ಳುತ್ತಾ ಸಾಗುತ್ತಿರುವ ಕ್ರಿಯೆಗೆ ಅಭಿಮುಖವಾಗಿ ಪರಿಸರ ಮತ್ತು ಮಾನವನ ಬದುಕು ಹಿಮ್ಮುಖವಾಗಿ ಸಂಚರಿಸುತ್ತಿದೆ. ದಿನೇ ದಿನೇ ಹೆಚ್ಚುತ್ತಿರುವ ಭಯೋತ್ಪಾದಕರ ಚಟುವಟಿಕೆಗಳಿಂದ ಮನುಷ್ಯ ಜೀವನದ ಮೌಲ್ಯ ಭಯದ ನೆರಳಲ್ಲಿ ಅವಿತುಕೊಳ್ಳತೊಡಗಿದೆ. ವಿಜ್ಞಾನ ಹಾಗೂ ಭಯೋತ್ಪಾದನೆಗಳ ನಡುವೆ ಮಾನವೀಯತೆ ನಲುಗುತ್ತಿದೆ. ಪರಿಸರದ ಅವನತಿ, ಮನುಷ್ಯ ಜೀವನ ಭಯಗಳೆರಡು ಸಂಕೀರ್ಣವೂ, ವಿಶಾಲವೂ ಆಗಿರುವ ವಿಶ್ವವನ್ನು ಸಂಕುಚಿತಗೊಳಿಸುತ್ತವೆ. ಪರಿಸರ ನಾಶದಿಂದಾಗಿ ಭೀಕರ ಬರಗಾಲದ ಛಾಯೆ ಭಾರತ(ಗುಜರಾತ್, ರಾಜಸ್ಥಾನ, ಬಿಹಾರಗಳಲ್ಲಿ), ಕಾಂಬೋಡಿಯಾ, ಸೋಮಾಲಿಯಾ ಮೊದಲಾದ ದೇಶಗಳಲ್ಲಿ ಆವರಿಸಿರುವುದನ್ನು ಕಾಣಬಹುದು. ಭಯೋತ್ಪಾದನೆ ಮಾನವನ ನೆಮ್ಮದಿಯ ಜೀವನಕ್ಕೆ ಬೆಂಕಿ ಹಚ್ಚುತ್ತಿದೆ. ಅಫಘಾನಿಸ್ತಾನ, ಪಾಕಿಸ್ತಾನಗಳ ಭಯೋತ್ಪಾದಕರು ಭಾರತ, ಶ್ರೀಲಂಕಾ ಮತ್ತಿತರ ರಾಷ್ಟ್ರಗಳಲ್ಲಿ ಹಚ್ಚಿಸುತ್ತಿರುವ ಕಿಚ್ಚು ಹೆಚ್ಚುತ್ತಿದೆ. ಭೂಮಿ ಮೇಲೆ ವಾಸಿಸುವ ಪ್ರತಿ ಪ್ರಾಣಿಯೂ ಸಮಾನ, ಬೇಧ-ಭಾವ, ಮೇಲು-ಕೀಳು, ದ್ವೇಷ-ಪ್ರೀತಿ ಮೊದಲಾದ ವಿರೋಧಿ ಪ್ರಕ್ರಿಯೆಗಳಿಗೆ ಅವಕಾಶ ಕೊಡಬಾರದೆನ್ನುವ 'ಸಮಾನತೆ'ಯ ತತ್ವ ಇಂದು ಅರ್ಥ ಕಳೆದುಕೊಳ್ಳುತ್ತಿದೆ. ಪ್ರಾಣಿ-ಪಕ್ಷಿ-ಸಸ್ಯ ಮತ್ತು ಮನುಷ್ಯ ಎಲ್ಲರೂ ಒಂದೇ, ಮನುಷ್ಯನಿಗೆ ಯೋಚನೆ ಮತ್ತು ಭಾಷೆಗಳ ಸೌಲಭ್ಯಗಳಿಂದಾಗಿ ಪ್ರಾಣಿ ಮತ್ತಿತರ ವರ್ಗಗಳಿಗಿಂತ ಮುಂದಿದ್ದಾನೆ ಅಷ್ಟೆ. ಈ ಎರಡೂ ಸೌಲಭ್ಯಗಳು ಪ್ರಾಣಿಗಳಿಗಿದ್ದರೆ ಅವು ಸಹ ಮನುಷ್ಯನ ಜಗತ್ತನ್ನು ಮೀರಿಸುತ್ತಿದ್ದೇವೆನೋ? ಪ್ರಾಣಿಯಲ್ಲಿರುವ ಮನುಷ್ಯತ್ವ(ಪ್ರಾಣಿತ್ವ?) ಮಾನವನಲ್ಲಿಲ್ಲ. ಕಾಗೆ ಒಂದಗುಳ ಕಂಡರೆ ತನ್ನ ಬಳಗವನ್ನು ಕೂಗಿ ಕರೆಯುವುದು. ನಾಯಿ ಅನ್ನ ಹಾಕಿದವನ ಮನೆಯ ಕಾಯುವುದು. ಮನುಷ್ಯ ಪ್ರಾಣಿ-ಪಕ್ಷಿಗಳಿಗಿಂತ ಭಿನ್ನವಾಗಿರುವುದು ಮೆದುಳಿನ ರಚನೆ, ನೆನಪಿನಶಕ್ತಿ ಮತ್ತು ಭಾಷೆಯ ಸೌಲಭ್ಯಗಳಿಂದ.

ವಿಜ್ಞಾನ ನಮಗೆ ಏನೆಲ್ಲ ಕೊಟ್ಟಿದೆ. ಕೊನೆಗೆ ನಮ್ಮನ್ನು ಶತ್ರುಗಳಿಂದ ರಕ್ಷಣೆ ಮಾಡಿಕೊಳ್ಳುವ ಅಣ್ವಸ್ತ್ರಗಳನ್ನೂ ಕೂಡ. ಇಂದು ಮನುಷ್ಯ ಪ್ರತಿ ವಿಷಯಕ್ಕೂ ವಿಜ್ಞಾನವನ್ನು ಅವಲಂಬಿಸುತ್ತಿದ್ದಾನೆ. ಇದು ತೀರಾ ಅತಿರೇಕದ ನಂಬಿಕೆ. ಅಂದರೆ ವಿಜ್ಞಾನವನ್ನು ತಿರಸ್ಕರಿಸಬೇಕು ಎಂಬುದು ನನ್ನ ವಾದವಲ್ಲ. ಅವಶ್ಯವಿದ್ದಷ್ಟೆ ಪಡೆದುಕೊಳ್ಳಬೇಕು. ಅತಿ ಹೆಚ್ಚು ನಂಬಿದರೆ ಏನಾಗುತ್ತದೆ ಎಂಬುದಕ್ಕೆ ಹಿರೋಶಿಮಾ, ನಾಗಸಾಕಿ, ಚೆರ್ನೋಬಿಲ್‌ಗಳೇ ಸಾಕ್ಷಿ. ಅಣು ಪರೀಕ್ಷೆಯನ್ನು ಮಾಡುತ್ತಾ ಪೈಪೋಟಿ ಗಿಳಿದಿರುವ ಭಾರತ, ಪಾಕಿಸ್ತಾನಗಳೂ ಕೂಡ ಮಾನವ ಜಗತ್ತಿನ ಬಗ್ಗೆ ಗಮನವಿಡಬೇಕು.

ಮಾನವನ ಜೀವನದಲ್ಲಿ ಎದುರಾಗುತ್ತಿರುವ, ಅವನ ಮಾನವೀಯತೆಗೆ ಧಕ್ಕೆ ಬರುತ್ತಿರುವ ಸಂದರ್ಭಗಳನ್ನು ನಿವಾರಿಸಿಕೊಳ್ಳುವಂತೆ ತಿಳಿ ಹೇಳುವ ಅಗತ್ಯತೆಯಿದೆ. ಇನ್ನೊಬ್ಬರಿಗೆ ತೊಂದರೆಯಾದರೂ ಚಿಂತೆಯಿಲ್ಲ ನನಗೆ ಮಾತ್ರ ಲಾಭವಾದರೆ ಸಾಕು ಎನ್ನುವ ಮನಸುಗಳನ್ನು ಪರಿವರ್ತಿಸಬೇಕಾಗಿದೆ. ಪರಿವರ್ತನೆಯ ಹಾದಿಯೇ ಮಾನವೀಕರಣದ ಪ್ರಕ್ರಿಯೆಯಾಗಿದೆ. 'ಯಾರೊಬ್ಬರಿಗೆ ನನ್ನಿಂದ ಒಳ್ಳೆಯದನ್ನು ಮಾಡಲು ಸಾಧ್ಯವಿಲ್ಲದಿರಬಹುದು. ಆದರೆ ಕೆಡಕನ್ನುಂಟು ಮಾಡದೆ ಇದ್ದರೆ ಸಾಕು' ಎಂಬ ಸಾಮಾನ್ಯ ನಿಯಮದ ಆಧಾರದ ಮೇಲೆ ಜೀವನ ಸಾಗಿಸಿದರೆ ಅದೇ ಮಾನವೀಕರಣ. ಇಂತಹ ಮಾನವೀಕರಣದ ಪ್ರಕ್ರಿಯೆಗಳು ಭಿನ್ನ ಪರಿಸರ, ಪರಿಸ್ಥಿತಿ, ಪ್ರದೇಶಗಳಲ್ಲಿ ಭಿನ್ನ ಭಿನ್ನವಾಗಿರುವುದರಿಂದ-ಅಂತಹ ಭಿನ್ನತೆಗಳನ್ನು ಗುರುತಿಸಲು ಇಡೀ ಕನ್ನಡ ಕಾದಂಬರಿ ಸಾಹಿತ್ಯದ ಅವಲೋಕನವೇ ನಡೆದಿದೆ.

ಜಾಗತಿಕ ಮಟ್ಟದಲ್ಲಿ ನಿರ್ಮಾಣವಾಗಿರುವ ಮಾನವತಾವಾದವು ವ್ಯಕ್ತಿಮಟ್ಟದಿಂದ ಆರಂಭವಾಗಿ ಕುಟುಂಬ-ಸಮಾಜ-ರಾಜ್ಯ-ರಾಷ್ಟ್ರದ ಮಟ್ಟದಲ್ಲಿ ಸಾಗಿ ವಿಶ್ವದಲ್ಲಿ ಪರಿಕ್ರಮಗೊಳ್ಳುತ್ತದೆ. ವಿಶ್ವದ ನೆಲೆಯಲ್ಲಿ ಮಾನವರಲ್ಲಿ ಭಿನ್ನತೆಯಿಲ್ಲ, ಹೆಣ್ಣು-ಗಂಡು, ಜಾತಿ-ಮತ, ಮೇಲು-ಕೀಳು, ಬಡವ-ಬಲ್ಲಿದ, ದೇಶಿ-ವಿದೇಶಿ, ಪಾಶ್ಚಾತ್ಯ-ಪೌರಾತ್ಯ ಎಂಬ ಐಡೆಂಟಿಟಿಗಳು ಸಹ ಮರೆಯಾಗುತ್ತವೆ. ಇಂತಹ ಗುರುತಿಸುವಿಕೆಗಳು ಕೇವಲ ಹೆಸರಿಗಷ್ಟೆ. ಮಾನವೀಕರಣದ ಸಂದರ್ಭದಲ್ಲಿ ಜೀವಜಗತ್ತಿನ ಮಾನವರೆಲ್ಲ ಒಂದೇ. ಈ ಸಾಮಾನ್ಯ ತತ್ವದಡಿಯಲ್ಲಿ ಹುಟ್ಟಿದ ಪೆಟ್ರಾರ್ಕ್‌ನ ಸಿದ್ಧಾಂತವು ಮುಂದೆ ಮಾರ್ಕ್ಸ್, ಏಂಜೆಲ್ಸ್, ಹೆಗಲ್ ಮೊದಲಾದ ಪಾಶ್ಚಾತ್ಯ ತತ್ವಜ್ಞಾನಿಗಳ ಚಿಂತನೆಯಲ್ಲಿ ವಿಶಿಷ್ಟವಾಗಿ ಬೆಳವಣಿಗೆ ಹೊಂದಿತು. ಈ ವಾದವನ್ನು ಭಾರತೀಯ ತತ್ವಜ್ಞಾನಿಗಳು ಕೂಡ ಆದರದಿಂದಲೇ ಸ್ವಾಗತಿಸಿಕೊಂಡು ಚಿಂತನೆ ನಡೆಸಿದರು. ಅದಕ್ಕೂ ಮೊದಲೇ ಭಾರತದಲ್ಲಿಯೇ ಈ ಸಿದ್ಧಾಂತವು ಇತ್ತು. ಆದರೆ ಅದು ಸಂಪ್ರದಾಯಿಕ ಮೌಲ್ಯಗಳನ್ನು ಆದರಿಸಿತ್ತು. ಎರಡರ ಸಮ್ಮಿಳನದಿಂಧ ರೂಪುಗೊಂಡ ಸಿದ್ಧಾಂತ ಹೆಚ್ಚು ಅರ್ಥವನ್ನು ಗಳಿಸಿತು.

ಈ ರೀತಿಯಾಗಿ ಹುಟ್ಟಿರುವ ಮಾನವತಾ ಸಿದ್ಧಾಂತವು ನನ್ನ ಅಧ್ಯಯನದಲ್ಲಿ 'ಮಾನವೀಕರಣ'ವಾಗಿ ಚರ್ಚಿತಗೊಂಡಿದೆ. ಇದರ ಸಂಪೂರ್ಣ ಬೆಳವಣಿಗೆಯನ್ನು ಮುಂದಿನ ಅಧ್ಯಾಯದಲ್ಲಿ ಚರ್ಚಿಸಿದ್ದೇನೆ.

ಮಾನವತಾವಾದದ ಪಿತಾಮಹ ಎಂದು ಪೆಟ್ರಾರ್ಕ್ ಅವರನ್ನು ಗುರುತಿಸಿದ್ದಾರೆ. ಅದೇ ರೀತಿ ಭಾರತದಲ್ಲಿ ನವಮಾನವತಾವಾದದ ಆರಂಭಿಗರಾದ ಎಂ.ಎನ್.ರಾಯ್ ಅವರು ಹೊಸವಾದವನ್ನು ಹುಟ್ಟು ಹಾಕಿದ್ದಾರೆ. ಈ ವಾದಕ್ಕೆ ತತ್ವಜ್ಞಾನಿಗಳು ಒಂದು ರೂಪಕೊಡಲಷ್ಟೇ ಕಾರಣಕರ್ತರು. ಆದರೆ ವ್ಯಕ್ತಿಯೇ ಈ ವಾದದ ನೇತಾರ. ಪ್ರತಿವ್ಯಕ್ತಿಯಲ್ಲಿಯೂ ತನ್ನದೇ ಆದ ಮಾನವೀಯತೆ ಇರುತ್ತದೆ. ಅದರಿಂದ ಅವನು ನೈತಿಕ ಗುಣಗಳನ್ನು ಮೆರೆಯುತ್ತಾನೆ. ಅನೈತಿಕ ಚಟುವಟಿಕೆಗಳನ್ನು ಮಾಡಬಾರದು. ಅಷ್ಟೆ. ಆದರೆ ನೈತಿಕ-ಅನೈತಿಕ, ಮಾನವೀಯ-ಅಮಾನವೀಯವೆಂದು ಗುರುತಿಸುವ ಕೆಲಸ ಮಾತ್ರ ಸಾರ್ವತ್ರಿಕ. ಅದನ್ನೇ ಪೆಟ್ರಾರ್ಕ್, ಎಂ.ಎನ್.ರಾಯ್, ರವೀಂದ್ರನಾಥ್ ಠಾಗೋರ್ ಮೊದಲಾದವರು ಮಾಡಿದರು. ಈ ಮೊದಲಾದ ವಿವರಣಾತ್ಮಕ ಅಧ್ಯಯನ ಮುಂದಿನ ಅಧ್ಯಾಯದಲ್ಲಿದೆ.

## ಉದ್ದೇಶ-ಚೌಕಟ್ಟು

'ಹಿಜಬುಲ್ ಮುಜಾಹಿದ್ದಿನ್' ISI, 'ದೀನ್ ದಾರ್ ಸಿದ್ದಿಕಿ ಚನ್ನಬಸವೇಶ್ವರ ಸಂಘಟನೆ', JKLF, LTTE, 'ಬಿಹಾರದ ರಣವೀರ ಸೇನೆ', 'ನಕ್ಸಲೈಟ್ಸ್' - ಮೊದಲಾದ ಮಾನವ ವಿರೋಧಿ ಚಟುವಟಿಕೆಗಳ ಸಂಘಟನೆಗಳು ಮಾಡುವ ಅಮಾನವೀಯ ಕೃತ್ಯಗಳು. ಕೊಡಗಿನ ಅಜಲು ಪದ್ದತಿ, ದೇವದಾಸೀ ಪದ್ದತಿ, ವೇಶ್ಯೆಯ ಅಮಾನವೀಯ ಬದುಕು ಮತ್ತು ಅರೆಬೆತ್ತಲೆಯಂತಹ ಅಮಾನವೀಯ ಪದ್ದತಿಗಳು ನಮ್ಮ ನಡುವೆ ದಿನನಿತ್ಯ ನಡೆಯುತ್ತಿವೆ. ಸಂಘಟನೆಗಳನ್ನು ಸರ್ಕಾರ ಕಾನೂನಿನ ಮೂಲಕ ನಿಷೇಧಿಸಿದರೂ ತಮ್ಮ ಕಾರ್ಯ ಮಾಡುತ್ತವೆ. ಹಾಗೂ ಪದ್ಧತಿಗಳನ್ನು ಸರ್ಕಾರ ನಿಷೇಧಿಸಿದರೂ ಜನತೆಯ ಮನಸ್ಸಿನಲ್ಲಿ ಉಳಿದಿರುತ್ತವೆ. ಈ ಕಾರ್ಯ ಜರೂರಾಗಿ ಆಗಬೇಕಾಗಿದೆ.

ಮಾನವ ಕೇಂದ್ರಿತ ನೆಲೆಯಲ್ಲಿ ಸಂಪ್ರದಾಯಗಳನ್ನು ದೂರೀಕರಿಸಬೇಕು. ಅಷ್ಟೆ ಮುಖ್ಯವಾಗಿ ಮಾನವೀಯ ಮನಸ್ಸುಗಳನ್ನು ಬೆಳೆಸಬೇಕು. ಹೃದಯ ವೈಶಾಲ್ಯ, ಔದಾರ್ಯದ ಸ್ನೇಹಶೀಲತೆ, ಪ್ರೀತಿ, ಅನುಕಂಪಗಳು ಮನಸ್ಸನ್ನಲಂಕರಿಸಬೇಕು. ಮಾನವೀಕರಣದ ಪ್ರಕ್ರಿಯೆಗೆ ಮಾನವನ ಮನಸ್ಸು ಮೊದಲು ಸಿದ್ಧವಾಗಿರಬೇಕು. ಕನ್ನಡ ಸಾಹಿತ್ಯದಲ್ಲಿ ಇಂತಹ ಮಾನವೀಯ ಮನಸ್ಸುಗಳನ್ನು ಗುರುತಿಸುವ ಪ್ರಯತ್ನ ಒಂದೆಡೆಯಾದರೆ ಕನ್ನಡದ ಇತಿಹಾಸದಲ್ಲಿ ಮಾನವೀಯತೆ ಮೆರೆದ ಅರಸುಗಳ ಕಾರ್ಯ ನಮ್ಮೆಲ್ಲರ ಬಾಳಿಗೆ ಆದರ್ಶವಾಗಬೇಕು. ಪ್ರತಿಯೊಬ್ಬ ವ್ಯಕ್ತಿಯೂ ಮಾನವೀಕರಣದ ಸಂಚಾಲಕನಾಗಬೇಕೆಂಬುದೆ ಸದುದ್ದೇಶ.

ಅಧ್ಯಾಯ ಎರಡರಲ್ಲಿ 'ಮಾನವೀಯ ಮೌಲ್ಯಗಳು', 'ಮಾನವ ಹಕ್ಕುಗಳು' ಹಾಗೂ 'ಮಾನವತಾವಾದ' ಗಳನ್ನು ಮೂಲವಾಗಿಟ್ಟುಕೊಂಡು ಮಾನವೀಕರಣದ ಪ್ರಕ್ರಿಯೆಗೆ ಪ್ರವೇಶ ಮಾಡಲಾಗಿದೆ. ಮಾನವೀಕರಣದ ಅಗತ್ಯತೆ ಹಾಗೂ ಅನುಷ್ಠಾನದ ಬಗ್ಗೆ ಪ್ರತಿ ಮನುಷ್ಯನೂ ಕಾಳಜಿ

ಹೊಂದಬೇಕಾಗಿದೆ. ಈ ನಿಟ್ಟಿನಲ್ಲಿ ರಾಷ್ಟ್ರಮಟ್ಟದಿಂದ ಹಿಡಿದು ಕನ್ನಡಿಗನ ಮನದವರೆಗೂ ನಡೆದಿರುವ ಚರ್ಚೆಯನ್ನು ಗಮನಿಸಲಾಗಿದೆ. ಮಾನವೀಕರಣದ ವಿರೋಧಿ ನೆಲೆಯಾದ ಅಮಾನವೀಕರಣದ ಕುರಿತು ಚರ್ಚೆ ಮಾಡಲಾಗಿದೆ. ಮಾನವೀಕರಣದ ನಿಯೋಗಿ(Agents)ಗಳನ್ನು ಗುರುತಿಸಿ ಅವುಗಳು ಮಾಡುವ ಹಾಗೂ ಮಾಡಬೇಕಾದ ಅನಿವಾರ್ಯ ಕೆಲಸಗಳನ್ನು ಗುರುತಿಸಲಾಗಿದೆ. ಇದು ವ್ಯಕ್ತಿ ಮುಖಿಯಿಂದ ಸಮಾಜ ಮುಖಿಯಾಗಿ ಸಾಗುವ ಪ್ರಕ್ರಿಯೆಯಾದ್ದರಿಂದ ಸಾಹಿತ್ಯೇತರ ಚಟುವಟಿಕೆಗಳನ್ನು ಗಮನಿಸಲಾಗಿದೆ.

ಮೂರನೆಯ ಅಧ್ಯಾಯವು ಕನ್ನಡದ ಕಾದಂಬರಿ ಸಾಹಿತ್ಯದಲ್ಲಿ ಮಾನವೀಕರಣ ಪರಿಚಾರಣೆಗೊಂಡಿರುವ ರೀತಿ-ನೀತಿಗಳನ್ನು ಗಮನಿಸಲಾಗಿದೆ. ಇಡೀ ಕಾದಂಬರಿ ಸಾಹಿತ್ಯಕ್ಕೆ ಪ್ರಾತಿನಿಧಿಕ ಎನ್ನಬಹುದಾದ ಪ್ರಮುಖ ಬರಹಗಾರರನ್ನು ಹಾಗೂ ಮಾನವೀಕರಣದ ಪ್ರಮುಖ ಕೃತಿಗಳನ್ನು ಗಮನಿಸಲಾಗಿದೆ.

ನಾಲ್ಕನೆಯ ಅಧ್ಯಾಯ 'ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಮಾನವೀಕರಣದ ನೆಲೆಗಳನ್ನು ಗುರುತಿಸುವ ಸಾಹಸ ನಡೆದಿದೆ. ಮೊದಲು ಮಾನವೀಕರಣ ಕುರಿತ ಅವರ ಚಿಂತನೆ ನೋಡಿದ ನಂತರ ಕಾದಂಬರಿಗಳನ್ನು ಗಮನಿಸಲಾಗಿದೆ. ಅವರು ಬರೆದ ೪೫ ಕಾದಂಬರಿಗಳಲ್ಲಿ ಪ್ರಮುಖ ಹತ್ತು ಕಾದಂಬರಿಗಳನ್ನು ವಿಸ್ತೃತ ಅಧ್ಯಯನಕ್ಕಾಗಿ, ಇನ್ನೂ ಹತ್ತು ಕಾದಂಬರಿಗಳನ್ನು ಸ್ಥೂಲ ನೋಟಕ್ಕಾಗಿ ಆಯ್ಕೆಮಾಡಿಕೊಳ್ಳಲಾಗಿದೆ. ವಿಸ್ತೃತ ಅಧ್ಯಯನದ ಕಾದಂಬರಿಗಳಲ್ಲಿ ಸ್ವಾತಂತ್ರ್ಯ ಪೂರ್ವದ ಐದು ಹಾಗೂ ಸ್ವಾತಂತ್ರ್ಯೋತ್ತರದ ಐದು ಕಾದಂಬರಿಗಳನ್ನು ಕೈಗೆತ್ತಿಕೊಳ್ಳಲಾಗಿದೆ. ಕೊನೆಗೆ ಅವರ ಕಾದಂಬರಿಗಳಲ್ಲಿ ಅನಿವಾರ್ಯವಾಗಿ ಅಥವಾ ಅನವಶ್ಯಕವಾಗಿ ವ್ಯಕ್ತವಾಗಿರುವ ಅಮಾನವೀಕರಣದ ಪ್ರಕ್ರಿಯೆಗಳನ್ನು ಸಹ ಪರಿಗಣಿಸಲಾಗಿದೆ.

ಕೊನೆಯ ಅಧ್ಯಾಯ ಮಹಾ ಪ್ರಬಂಧದ ಸಮಾರೋಪವಾಗಿದೆ. 'ಸಾಹಿತ್ಯ ಅಧ್ಯಯನಗಳು ಸಮಾಜಕ್ಕೆ ಸ್ಪಂದಿಸುವುದಿಲ್ಲ' ಎನ್ನುವ ವಾದವನ್ನು ಗಮನದಲ್ಲಿಟ್ಟುಕೊಂಡು ಕಾರಂತರ ಕಾದಂಬರಿಗಳು ಮಾನವೀಕರಣದ ಮೂಲಕ ಸಮಾಜಕ್ಕೆ ಸ್ಪಂದಿಸಿರುವ ರೀತಿ, ಮಾನವೀಕರಣವು ವ್ಯಕ್ತಿಯ, ಕುಟುಂಬದ, ಸಮಾಜದ, ರಾಷ್ಟ್ರದ ಹಾಗೂ ಜಗತ್ತಿನ ಸಮಸ್ಯೆಗಳಿಗೆ ಯಾವ ರೀತಿ ಸ್ಪಂದಿಸಿದೆ ಮತ್ತು ಸ್ಪಂದಿಸಬಲ್ಲದು ಎನ್ನುವುದನ್ನು ತೋರಿಸಿಕೊಡಲಾಗಿದೆ. ನಮ್ಮ ಎಲ್ಲ ಅಧ್ಯಯನಗಳು ಮಾಡಬೇಕಾದ ಮುಖ್ಯ ಕೆಲಸವೆಂದರೆ ಮಾನವನ ಒಳಿತಷ್ಟೆ. ಅದನ್ನು ಕಂಡುಕೊಳ್ಳಬೇಕಾದರೆ ಮಾನವೀಕರಣದಂತಹ ಅಧ್ಯಯನಗಳು ಅತ್ಯಗತ್ಯ.

ಅನುಬಂಧದಲ್ಲಿ ಈ ಅಧ್ಯಯನಕ್ಕೆ ಅಗತ್ಯವಾಗಿ ಹಾಗೂ ಪೂರಕವಾಗಿ ಬಳಸಿಕೊಂಡ ಸಹಾಯಕ ಸಾಹಿತ್ಯದ ಮಾಹಿತಿ ಇದೆ. ಈ ರೀತಿಯ ಉದ್ದೇಶ-ಚೌಕಟ್ಟುಗಳನ್ನಿಟ್ಟುಕೊಂಡ ಮಾನವೀಕರಣದ ಅಧ್ಯಯನ ಶಿವರಾಮ ಕಾರಂತರ ಕಾದಂಬರಿಗಳ ಅಧ್ಯಯನವೆನ್ನುವುದು ಒಂದು ನೆಪವಾಗಿರಬಹುದು.

ಕಾರಂತರು ಬಯಸುವ ಮಾನವೀಕರಣವೇ ಇಲ್ಲಿ ಮುಖ್ಯ. ಅವರ ಬಾಳ್ವೆಯೇ ಬೆಳಕು ಕೃತಿಯಲ್ಲಿ "ಬಾಳ್ವೆ ಇರುವುದೇ ಬದುಕುವುದಕ್ಕಾಗಿ; ಬದುಕಿನಿಂದ ಬೆಳೆಯುವುದಕ್ಕಾಗಿ" ಎನ್ನುವ ಮಾತು ಮುಖ್ಯವಾಗುತ್ತದೆ.

ಕಾರಂತರ ಕಾದಂಬರಿಗಳನ್ನು ಅವಗಾಹನಿಸುವ ಮೂಲಕ 'ಮಾನವೀಕರಣ ಸಿದ್ಧಾಂತ'ವನ್ನು ಕಟ್ಟುವಿಕೆಯು ಒಂದೆಡೆಯಾದರೆ, ಆ ಮಾನವೀಕರಣ ಸಿದ್ಧಾಂತದ ಮೂಲಕ ಕನ್ನಡ ಕಾದಂಬರಿಗಳನ್ನು ಅರ್ಥೈಸುವ ಪ್ರಯೋಗ ನಡಿದಿದೆ. ಅಥವಾ ಇದು ಮಾನವೀಕರಣ ಸಿದ್ಧಾಂತ ನಿರ್ಮಾಣ. ನಂತರ ಕನ್ನಡ ಕಾದಂಬರಿಗಳು ಹಾಗೂ ಕಾರಂತರ ಕಾದಂಬರಿಗಳ ಅಧ್ಯಯನ ನಡೆಯಬಹುದು. ಎರಡು ಪರಿಕ್ರಮಗಳೂ ನಡೆದಿವೆ. ಕಾದಂಬರಿ ಸಾಹಿತ್ಯದ ಅವಲೋಕನದ ಮೊತ್ತದಲ್ಲಿ ಕಂಡುಬರುವ ಮುಖ್ಯ ಆಶಯಗಳೆಂದರೆ ೧. ಇಹದ ಬದುಕನ್ನು ವಿವರಿಸುವುದರ ಜೊತೆಗೆ ಅಮೂರ್ತವಾಗಿರುವ ಮಾನವೀಕರಣ ಮತ್ತು ಆಧ್ಯಾತ್ಮೀಕರಣವನ್ನು ಸಮ್ಮಿಲಗೊಳಿಸುವುದು. ೨. ನಿತ್ಯದ ಜೀವನ ವ್ಯವಹಾರಗಳನ್ನು ಮಾನವನಲ್ಲಿ ಕೇಂದ್ರೀಕೃತಗೊಳಿಸುವುದು. ೩. ಬದುಕಿನ ಅನುಭವಗಳನ್ನು ವ್ಯಕ್ತಿ ಪ್ರಜ್ಞೆಯಿಂದ ಸಾರ್ವತ್ರಿಕಗೊಳಿಸುವುದು. ೪. ವೈಚಾರಿಕತೆಯ ಬೆಳವಣಿಗೆಯೊಂದಿಗೆ ಪರಿಸರ ಪ್ರಜ್ಞೆಯನ್ನು ಉಳಿಸಿ ಕೊಳ್ಳುವುದು. ಈ ನಾಲ್ಕು ಆಶಯಗಳು ಕಾರಂತರನ್ನೊಳಗೊಂಡಕ್ಕೆ ಕನ್ನಡದ ಎಲ್ಲಾ ಲೇಖಕರಲ್ಲೂ ಕಂಡುಬಂದಿವೆ.

ಮಾನವೀಕರಣದ ನೆಲೆಗಳನ್ನು ಗುರುತಿಸುವುದು ತುಂಬಾ ಕಷ್ಟವಾಗಿರುವುದರಿಂದ ಇದೊಂದು ರೀತಿಯ ಹಿಡಿಯಲೂ ಬಾರದ, ಕೈಬಿಡಲು ಬಾರದಂತಹ ವಸ್ತುವಿನ ಗುಣವನ್ನು ಅವಲಂಬಿಸಿರುವುದರಿಂದ, ಅಧ್ಯಯನದುದ್ದಕ್ಕೂ ಸಾರ್ವತ್ರಿಕ ನೆಲೆಯನ್ನು ಅನುಸರಿಸಲಾಗಿದೆ. ಮಾನವೀಕರಣವನ್ನು ವೈಯಕ್ತಿಕ ನೆಲೆ, ಕೌಟುಂಬಿಕ ನೆಲೆ, ಸಾಮಾಜಿಕ ನೆಲೆ, ಭಾಷಿಕ ನೆಲೆ, ರಾಷ್ಟ್ರೀಯ ನೆಲೆ ಹಾಗೂ ಜಾಗತಿಕ ನೆಲೆ ಎಂದು ವರ್ಗೀಕರಿಸಬಹುದಾದರೂ 'ಜಾಗತಿಕ ನೆಲೆ'ಯಲ್ಲಿ ಎಲ್ಲವೂ ಅಳವಡುವುದರಿಂದ ಇನ್ನುಳಿದವುಗಳು ಅರ್ಥಕಳೆದುಕೊಳ್ಳುತ್ತವೆ. ಆದ್ದರಿಂದ ಇವನ್ನು ಕೈಬಿಟ್ಟು ಮಾನವೀಕರಣದ ನಿಯೋಗಿಗಳನ್ನು ನೇಮಿಸಿ ಅದರ ಆಳ ಆಗಲಗಳನ್ನು ವಿಸ್ತರಿಸಲು ಅಥವಾ ತಿಳಿಯಲು ಯತ್ನಿಸಲಾಗಿದೆ.

ಮಾನವೀಕರಣದಂತಹ ಪ್ರಮೇಯದೊಂದಿಗೆ ಕಾರಂತರ ಕಾದಂಬರಿಗಳನ್ನು ಅರಿಯುವ ಉದ್ದೇಶವೆಂದರೆ ವ್ಯಕ್ತಿಯಿಂದ ಹಿಡಿದು ಜಾಗತಿಕ ಮಟ್ಟದಲ್ಲೂ ಕೇಳಿಬರುವ ಅಮಾನವೀಯ ನಿಲುವುಗಳನ್ನು ಹಾಗೂ ಮಾನವನಿಗೆ ಎದುರಾಗ ಬಹುದಾದ ಸಮಸ್ಯೆಗಳನ್ನು ಕೊಂಚಮಟ್ಟಿಗಾದರೂ ನಿವಾರಿಸುವ ಪ್ರಯತ್ನ ಮಾನವೀಕರಣದಿಂದ ಸಾಧ್ಯವೆಂಬುದು. ಮೌನವು ಸಮಸ್ಯೆಯನ್ನು ಬಗೆಹರಿಸ ಲಾರದು ಆದ್ದರಿಂದ ರಾಜತಾಂತ್ರಿಕ ಅಥವಾ ಮಾನವಮುಖಿ ನೆಲೆಯ ಅನುಸಂಧಾನ ಮಾರ್ಗಗಳು ಸಮಸ್ಯೆಯನ್ನು ಬಗೆಹರಿಸುತ್ತವೆ. ಇತ್ತೀಚೆಗೆ 'ಹಿಜ್‌ಬುಲ್ ಮುಜಾಹಿದ್ದೀನ್' ಸಂಘಟನೆಯು

ಜಮ್ಮು-ಕಾಶ್ಮೀರ ವಿಷಯದ ಕುರಿತು ಕದನ ಘೋಷಿಸಿದಾಗ, ಭಾರತ ಸರ್ಕಾರ ಮಾನವೀಯ ನೆಲೆಯನ್ನು ಗಮನದಲ್ಲಿಟ್ಟುಕೊಂಡು ಕದನ ವಿರಾಮ ಘೋಷಿಸಿತು. ಆದರೆ ಸಂಘಟನೆ ಮೊಂಡುತನ ಮಾಡಿ ಕದನ ವಿರಾಮದ ನಿಯಮಗಳನ್ನು ಪಾಲಿಸದೆ ಅಮಾನವೀಯತೆ ಕೃತ್ಯಕ್ಕೆ ಅಣಿಯಾಯಿತು.

ಅಮೇರಿಕ ದೇಶವು ಮಾನವೀಕರಣದ ಪರಿಕಲ್ಪನೆಯನ್ನು ಗಮನದಲ್ಲಿಟ್ಟಕೊಂಡು ಅಣುಬಾಂಬ್ ತಯಾರಿಕೆಗೆ ಅತ್ಯವಶ್ಯಕವಾಗಿದ್ದ, ಭಾರಿ ಮೊತ್ತದ 'ಪ್ಲುಟೋನಿಯಂ' ಅನ್ನು ನಾಶಪಡಿಸಿತು. ಇದು ಮಾನವೀಕರಣಕ್ಕೆ ದೊರೆತ ವಿಜಯವೆಂದೇ ಹೇಳುತ್ತೇನೆ. ಇಂತಹ ಸದುದ್ದೇಶಗಳು ನೆರವೇರಲೆಂಬುದೇ ಮಾನವೀಕರಣದ ಸದಿಚ್ಚೆ.

ಜಾಗತಿಕ ಮಟ್ಟದ ಸಿದ್ಧಾಂತವನ್ನು ಕನ್ನಡದ ಕಾದಂಬರಿ ಸಾಹಿತ್ಯದ ಮೂಲಕ ಶಿವರಾಮ ಕಾರಂತರ ಕಾದಂಬರಿಗಳನ್ನು ಪ್ರವೇಶಿಸುವ ಉದ್ದೇಶ ಸೂಕ್ಷ್ಮಸ್ಥರದ ಅಧ್ಯಯನದ ಪರಿಪ್ರೇಕ್ಷ ಹೊಂದಿದೆ. ಮಾನವತಾವಾದವು ಸಾಹಿತ್ಯದ ಇತರೆ ಸಿದ್ಧಾಂತಗಳಾದ ಅಸ್ತಿತ್ವವಾದ, ಸೌಂದರ್ಯವಾದ, ನೈಜವಾದ, ಅಭಿವ್ಯಕ್ತಿವಾದ, ನವ್ಯವಾದ ಮತ್ತು ವಾಸ್ತವತಾವಾದಗಳೊಂದಿಗೆ ಹೊಂದಿರುವ ಅಂತಸ್ಸಂಬಂಧ ಹಾಗೂ ಅದು ಮಾನವೀಕರಣ ಸಿದ್ಧಾಂತವಾಗಿ ರೂಪುಗೊಳ್ಳುವಿಕೆಯನ್ನು ಅಧ್ಯಯನದ ಸಂದರ್ಭದಲ್ಲಿ ಚರ್ಚಿಸಲಾಗಿದೆ. ಇತರೆ ವಾದಗಳೊಂದಿಗಿನ ಸಂಬಂಧವು ಕಾರಂತರ ಕಾದಂಬರಿಗಳನ್ನು ಅನ್ಯ ಶಿಸ್ತುಗಳ ಮೂಲಕವೂ ಅಭ್ಯಸಿಸುವ ಚೌಕಟ್ಟನ್ನು ನಿರ್ಮಿಸಿಕೊಳ್ಳಲಾಗಿತ್ತು.

ವೈಯಕ್ತಿಕ ನೆಲೆಯಿಂದ ಆರಂಭವಾಗಿ ಅಂತರ ರಾಷ್ಟ್ರೀಯ ಮಟ್ಟದವರೆಗೂ ಸಾಗುವ ಮಾನವೀಕರಣದ ಪ್ರಕ್ರಿಯೆಗಳು ಮಾನವನ ಬದುಕಿಗೆ ಚಿರಶಾಂತಿ ಒದಗಿಸಬಲ್ಲವು. ಸಾಮಾಜಿಕನು ಕೈಗೊಳ್ಳುವ ಪ್ರತಿಯೊಂದು ಕೆಲಸಗಳು ಮಾನವೀಯತೆಯನ್ನು, ನೈತಿಕತೆಯನ್ನು ಪ್ರಶ್ನಿಸುತ್ತವೆ. ಮಾನವೀಕರಣದ ಪ್ರಶ್ನೆ ಬಂದಾಗ ಎಂತಹ ಕಟ್ಟುನಿಟ್ಟಾದ ಕಾನೂನು ಸಹ ತಲೆಬಾಗಿದ ಉದಾಹರಣೆಗಳಿವೆ. ಕಾನೂನು ಮಾನವೀಯತೆಯ ಅರಿವಿಲ್ಲದ ಸಂದರ್ಭದಲ್ಲಿ ಕಠೋರವಾಗಬಹುದು. ಸಮಾಜದಲ್ಲಿ ಮಾತ್ರ ಮಾನವೀಯತೆಗೆ ಅಪಾರ ಮೌಲ್ಯವಿದೆ, ಎಂದೆಂದೂ ಗೆಲ್ಲುತ್ತದೆ. ಸತ್ಯಕ್ಕೆ ಯಾವತ್ತೂ ಕೊನೆಯಿಲ್ಲವೋ ಹಾಗೆಯೇ ಮಾನವೀಕರಣಕ್ಕೂ ಕೊನೆಯಿಲ್ಲ. ಆ ಕ್ಷಣದ ಸತ್ಯವಾಗಿರುತ್ತದೆ. ಅಂದರೆ ನಂತರ ಮೌಲ್ಯ ಕಳೆದುಕೊಳ್ಳುತ್ತದೆ ಎಂದಲ್ಲ, ಅದನ್ನು ಮೀರಿಸುವಂತಹ ಮಾನವೀಯತೆ ಮೆರೆಯಬಲ್ಲ ವ್ಯಕ್ತಿಗಳು, ಘಟನೆಗಳು ನಿರ್ಮಾಣವಾಗಬಹುದು.

'ಮನಸ್ಸಿದ್ದರೆ ಮಾರ್ಗ' ಎಂಬ ನುಡಿಗಟ್ಟು ಪುಸ್ತಕ - ಮಾತಿನಲ್ಲಿ ಇಡದೆ, ಮನಸ್ಸಿಗೆ ಶಕ್ತಿಕೊಟ್ಟು ಮಾನವೀಯ ಅಂತಃಕರಣವನ್ನು ಮೆರೆಯಬೇಕಾಗಿರುವ ತುರ್ತಿನ ಸಂದರ್ಭ ಮಾನವ ಜಗತ್ತಿನ ಮುಂದೆ ಹಿಂದೆಂದಿಗಿಂತಲೂ ಇಂದು ಹೆಚ್ಚಿದೆ. ದಿನೇ ದಿನೇ ಹೆಚ್ಚುತ್ತಿರುವ ಅಮಾನುಷ ಘಟನೆಗಳಿಗೆ

ಕಡಿವಾಣ ಹಾಕಿ ನಮ್ಮ ಮುಂದಿನ ಪೀಳಿಗೆಗೆ ಶುಭದಿನಗಳನ್ನು ಉಡುಗೊರೆಯನ್ನಾಗಿ ಕೊಡುವ ಆಶಯ ಪ್ರಬಂಧದ್ದು. ಮುಂದಿನ ಪೀಳಿಗೆಯ ಜನತೆಯ ಬಗ್ಗೆ ಎಚ್ಚರವಿಲ್ಲದೆ ಬಾಳಿದ ನಮ್ಮನ್ನು ಅವರು ತೆಗಳಬಾರದು. ನಾವು 'ಕೊಂಡದ್ದಕ್ಕಿಂತ ಕೊಡುವುದು ಹೆಚ್ಚಾಗಬೇಕು'. ಆಗಲೇ ಬಾಳಿದ ವ್ಯಕ್ತಿಯ ಜೀವನ ಸಾರ್ಥಕ. ಮತ್ತು ಕಾರಂತ, ಕುವೆಂಪು, ಶಂಬಾ ಅವರಂತಹ ಹಿರಿಯ ಚೇತನಗಳಿಗೆ ಗೌರವ ಸಲ್ಲುತ್ತದೆ. ಅವರ ಬದುಕು ನಮಗೆ ಆದರ್ಶನೀಯ.

ಅಧ್ಯಾಯ ೨

# ಮಾನವೀಕರಣದ ತಾತ್ವಿಕ ಪರಿಕಲ್ಪನೆ

'ಮನುಕುಲ ನಾಶಕ್ಕೆ ಅಣುಬಾಂಬ್ ಬೇಕಿಲ್ಲ. ಅಣುಸ್ಥಾವರ ಸಾಕು' ಎನ್ನುವ ಭೀಕರ ಸತ್ಯದ ಮಾತು ಕೇಳಿದರೆ ಮನ ಕಲಕುತ್ತದೆ. ಅಣುಸ್ಥಾವರಗಳು ನಿಧಾನವಾಗಿ ಪ್ರಗತಿಯ ನೆಪದಲ್ಲಿ ಅಧೋಗತಿಗೆ ಕೊಂಡೊಯ್ಯುತ್ತಿವೆ. ಮನುಕುಲದ ಅವಸಾನದ ಚರಿತ್ರೆ ಆರಂಭವಾದದ್ದೇ ಅಣುಬಾಂಬಿನ ಉಗಮದಿಂದ. ಎರಡನೇ ಮಹಾಯುದ್ಧದಲ್ಲಿ ಪ್ರಯೋಗಿಸಲಾದ ಅಣುಬಾಂಬ್‌ಗಳ ಭೀಕರ ಪರಿಣಾಮ ಹಿರೋಶಿಮಾ, ನಾಗಸಾಕಿಗಳಲ್ಲಿ ಇಂದಿಗೂ ಇದೆ. -ಮುಂದೆಯೂ ಇರುತ್ತದೆ. ಅಲ್ಲಿನ ಪ್ರತಿ ಮಗುವೂ ಅಂಗ ವೈಕಲ್ಯ. ಕೊಡುಗೆಯನ್ನು ಹುಟ್ಟುತ್ತಲೇ ಹೊತ್ತು ತರುತ್ತದೆ. ರಷ್ಯಾ ದೇಶದ ಚರ್ನೋಬಿಲ್ ಅಣುಸ್ಥಾವರ ಕುಸಿದು ಬಿದ್ದಿದ್ದರಿಂದ (೧೯೮೬ರ ಏಪ್ರಿಲ್ ೨೫) ೧೬ ದಿನಗಳ ಕಾಲ ಉಂಟಾದ ಅಣು ವಿಕಿರಣದ ಕ್ರಿಯೆ ಎರಡನೇ ಮಹಾಯುದ್ಧದ ದುರಂತಕ್ಕಿಂತಲೂ ಹೆಚ್ಚಿನ ಪರಿಣಾಮವನ್ನು ಉಂಟುಮಾಡಿದೆ. ಭಾರತದ ಭೂಪಾಲ್ ಅನಿಲ ದುರಂತದ ಘಟನೆಯಿಂದ ಇಂದಿಗೂ ಅಲ್ಲಿನ ಜನತೆಯ ಶ್ವಾಸಕೋಶ ವಿಷಗಾಳಿಯನ್ನೇ ಸೇವಿಸುತ್ತಿದೆ. ಅಮೆರಿಕಾದ ೧೯೭೯ರ ಥೀಮೈಲ್ ಐಲೆಂಡ್ ಅಣುಸ್ಥಾವರದ ಅಪಘಾತ ಕೂಡ ರಷ್ಯಾ ಸ್ಥಾವರದಂತಹ ಪರಿಣಾಮವನ್ನುಂಟು ಮಾಡಿದೆ. ಇಂಗ್ಲೆಂಡ್ ದೇಶದ ೧೯೫೬ರ ವಿಂಡ್ ಸ್ಕೆಲ್ ಎಂಬ ಅಣುಸ್ಥಾವರದ ದುರಂತವು 'ಡೌನ್ ಸಿಂಡ್ರೋಮ್'ಎಂಬ ಕಾಯಿಲೆಯನ್ನೇ ಹಬ್ಬಿಸಿತು. ಇಂತಹ ಹತ್ತು ಹಲವು ಘಟನೆಗಳು ಇತಿಹಾಸದಲ್ಲಿ ಕರಾಳತೆಯನ್ನು ಸಾರುತ್ತಿದ್ದಾಗ್ಯೂ ಭಾರತ ಪಾಕಿಸ್ತಾನಗಳು ಅಣುಪರೀಕ್ಷೆಯನ್ನು ಮಾಡುತ್ತಿರುವುದು ಮಾನವೀಕರಣಕ್ಕೆ ಮಾಡುವ ಅವಮಾನವೇ ಸರಿ. ಪ್ರತಿ ಸಮಸ್ಯೆಗೂ ಪರಿಹಾರವಿದ್ದೇ ಇರುವುದರಿಂದ ಇರಾನ್-ಇರಾಕ್‌ನಂತಹ ಸಮಸ್ಯೆ, ಕಾಶ್ಮೀರದಂತಹ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುವುದು ಮಾನವೀಯ ಮೌಲ್ಯವುಳ್ಳ ನಾಯಕರಿಗೆ ದೊಡ್ಡದೇನೂ ಅಲ್ಲ.

ಕಾರ್ಗಿಲ್ ವಲಯದಲ್ಲಿ ಮೇ ೨೬ರಂದು (೧೯೯೯) ಭಾರತ ಸರ್ಕಾರ ಕಾಶ್ಮೀರದಲ್ಲಿ ನೆಲಸಿರುವ ಉಗ್ರಗಾಮಿಗಳ ವಿರುದ್ಧ 'ವಿಜಯ್ ಕಾರ್ಯಚರಣೆ'ಯನ್ನು ಕೈಗೊಂಡು ಎರಡು ತಿಂಗಳ ಕಾಲ ಸತತವಾಗಿ ಹೋರಾಟ ನಡೆಸಿತು. ಈ ಕಾರ್ಯಾಚರಣೆಯು ದೇಶದ ರಕ್ಷಣೆಯ ದೃಷ್ಟಿಯಿಂದ

ಅನಿವಾರ್ಯವಾಗಿತ್ತು ಎನ್ನುವುದು ಒಂದು ಕಡೆ ಸರಿ. ಆದರೆ ಇನ್ನೊಂದು ಕಡೆ ಪಾಕಿಸ್ತಾನೀ ಸೈನಿಕರನ್ನು ಹೊರದೂಡುವಾಗ ಉಂಟಾದ ಸಾವು-ನೋವುಗಳ, ಅಮಾನವೀಯ ಕೃತ್ಯಗಳು ಅನಿವಾರ್ಯವಾಗಿದ್ದಿಲ್ಲ. ಈ ಹೆಸರಿನಲ್ಲಿ ಪಾಕಿಸ್ತಾನಿ ಸೈನಿಕರು ಭಾರತೀಯ ಸೈನಿಕರ ದೇಹಗಳ ಅಂಗಾಂಗಗಳನ್ನು ಅಮಾನವೀಯವಾಗಿ ಕತ್ತರಿಸಿದ್ದಾರೆ. ಅಂತೆಯೇ ಭಾರತೀಯ ಸೈನಿಕರು ಪಾಕಿಸ್ತಾನಿ ಸೈನಿಕರನ್ನು ಹೊಡೆದುರುಳಿಸುವಾಗ ಯಾವ ಅಂತಃಕರಣವೂ ಅಡ್ಡ ಬರದೇ ಇರುವುದು ಆಶ್ಚರ್ಯವೇ ಸರಿ. ಯುದ್ಧದ ನೀತಿಯೇ ಅಂತಃಕರಣವನ್ನು ಮರೆತಾಗ ಸೈನಿಕ ಪಾಲಿಸದೆ ವಿಧಿಯಿಲ್ಲ. ಕಾರ್ಗಿಲ್ ವಲಯಕ್ಕೆ ಪಾಕಿಸ್ತಾನಿ ಸೈನಿಕ ಭಾರತೀಯ ನೆಲದಲ್ಲಿ ಅತಿಕ್ರಮವಾಗಿ ಪ್ರವೇಶ ಮಾಡಿದ್ದಾನೆ. ಅದಕ್ಕೆ ಎರಡೂ ಕಡೆಯವರು ಕದನದ ಸಂದರ್ಭದಲ್ಲಿ ಪ್ರಾಣ ತೆತ್ತಿದ್ದಾರೆ. ಇಲ್ಲಿ ಮುಖ್ಯವಾದುದೆಂದರೆ ಈ ಸಮಸ್ಯೆಯನ್ನು ಎರಡೂ ದೇಶದ ಗಣ್ಯರು, ರಾಜತಾಂತ್ರಿಕರು ಕೂಡಿ ಬಗೆಹರಿಸಬಹುದಿತ್ತು. ಪರಿಹಾರ ಸುಲಭದಲ್ಲೇ ಇದೆ. ಆದರೆ ದಾರಿಯನ್ನು ಕಠಿಣಗೊಳಿಸಿದವರು ಪಾಕಿಸ್ತಾನೀ ನಾಯಕರು. ಅವರು ತಮ್ಮ ಅತಿಕ್ರಮ ಪ್ರವೇಶ ಮತ್ತು ಪರಿಹಾರದ ಮಾತುಕತೆಗೆ ಒಪ್ಪದೆ ಮೊಂಡುತನಕ್ಕೆ ಬಿದ್ದು ಅಪಾರ ಹಾನಿಯನ್ನು ಅನುಭವಿಸಿದ್ದು ಸರ್ವವಿದಿತ. ಈ ಹಾನಿ ಭೌತಿಕ ಮತ್ತು ದೈಹಿಕ (ಮಾನವ) ಎರಡೂ ನಿಟ್ಟಿನಲ್ಲಿ ಸಾಗಿದೆ. ಪಾಕಿಸ್ತಾನವು ತನ್ನ ಕಾಲ ಮೇಲೆ ತಾನು ಕಲ್ಲು ಹಾಕಿಕೊಳ್ಳುವಂತಹ ಕೆಲಸ ಮಾಡಿದ್ದಲ್ಲದೆ ಅಪಾರ ಮಾನವ ಸಂಪತ್ತನ್ನು ಅನಾಮತ್ತಾಗಿ ಬಲಿಕೊಟ್ಟಿದೆ. ಪಾಕಿಸ್ತಾನ ಸರ್ಕಾರ, ತನ್ನ ಸೈನಿಕರನ್ನು ಅಥವಾ ಉಗ್ರಗಾಮಿಗಳನ್ನು ಭಾರತದ ನೆಲಕ್ಕೆ ಕಳುಹಿಸಿದರೆ ಅವರು (ಭಾರತ) ಸುಮ್ಮನಿರುವುದಿಲ್ಲ, ತಕ್ಕ ಹಾನಿಯನ್ನು ಅನುಭವಿಸಬೇಕಾಗುತ್ತದೆ ಎಂದು ತಿಳಿದೂ ಕಳುಹಿಸಿದ್ದು ಅವರ ಮೂರ್ಖತನವೇ ಸರಿ. ಇಂತಹ ತಪ್ಪನ್ನು ಮಾನವೀಯ ಜಗತ್ತು ಎಂದೂ ಕ್ಷಮಿಸಲಾರದು. ಇಲ್ಲಿ ಪಾಕ್‌ಗೆ ಇರುವ ಮಾನವೀ ಅಂತಃಕರಣ ಹಟ ಸ್ವಭಾವದ್ದಾದರೆ, ಭಾರತದ ಅಂತಃಕರಣ ಸವಾಲಿನ ಸ್ವರೂಪದ್ದು ಎಂಬುದನ್ನು ಸೂಕ್ಷ್ಮವಾಗಿ ಗಮನಿಸಬಹುದು.

ದೇಶದ ರಕ್ಷಣೆಗೆ ಪ್ರಾಣತ್ಯಾಗ ಮಾಡಿದ, 'ವೀರಪುತ್ರ', 'ಹೆಮ್ಮೆಯ ಪುತ್ರ' ಎಂದು ಯೋಧ ವೈರಿಯೊಂದಿಗೆ ಕಾದಾಡಿ ಮಡಿದಾಗ ಕೂಗುವ ಘೋಷವಾಕ್ಯಗಳು. ಇವು ಪ್ರತಿ ಮಾನವನ ನರನಾಡಿಗಳನ್ನು ಬಿಸಿನೆತ್ತರಿನಿಂದ ಗಟ್ಟಿಗೊಳಿಸುತ್ತವೆ. ಆದರೆ ಈ ರೀತಿ ಪ್ರಚೋದಿಸುವ ಮೊದಲು ದೇಶದ ಯುವಕ, ಸೈನ್ಯಕ್ಕೆ ಸೇರಿದ್ದು ಯಾರಿಗಾಗಿ? ಅವನ ಅನಿವಾರ್ಯತೆಗಳೇನು? ಅವನಿಗೂ ಮತ್ತು ದೇಶಕ್ಕೂ ಆಪತ್ತು ಒದಗದಂತೆ ಇರಲು ಸಾಧ್ಯವಿದೆಯೇ? ಎಂಬ ಪ್ರಶ್ನೆಗಳನ್ನು ಹಾಕಿಕೊಂಡಾಗ-ಭಾರತದ ಅಥವಾ ಪಾಕಿಸ್ತಾನದ ಬಡ ಪ್ರಜೆ ತನ್ನ ಜೀವನಕ್ಕಾಗಿ, ಕುಟುಂಬದ ಬಡತನ ನೀಗಿಸಲಿಕ್ಕಾಗಿ ಇತರೆ ರಂಗ (ಶಿಕ್ಷಣ, ತಾಂತ್ರಿಕ, ವಾಣಿಜ್ಯ, ರಾಜಕೀಯ)ಗಳಲ್ಲಿ ಉದ್ಯೋಗ ಸಿಗದೆ ದೇಶ ರಕ್ಷಣೆ ಎಂಬ ಹಣೆಪಟ್ಟಿಯೊಂದಿಗೆ ಸೈನ್ಯಕ್ಕೆ ಸೇರುತ್ತಾನೆ. ಇದೇ ಕೆಲಸವನ್ನು ಶ್ರೀಮಂತ ವರ್ಗದ ಯುವಕ ಏಕೆ ಮಾಡುವುದಿಲ್ಲ?

ಈ ಕಾರ್ಗಿಲ್ ಕಾರ್ಯಾಚರಣೆಯ ಸಂದರ್ಭದಲ್ಲಿ ಮಾನವೀಯತೆಯ ಬಲಿ ಸ್ಪಷ್ಟವಾಗಿಯೇ ಕಾಣುತ್ತದೆ. ಹಗಲು ದರೋಡೆಯಂತೆ ರಾಜಕೀಯ ಧುರೀಣರು ದೇಶದ ಪ್ರಜ್ಞಾವಂತ, ಬಲಿಷ್ಠ ಯುವಕನನ್ನು ಆಹುತಿಗಯ್ಯುತ್ತಾರೆ. ಇದಕ್ಕೆ ಪ್ರತಿಯಾಗಿ ಮಾನವೀಯತೆ ಎಂದು ಬಾಯಿ ಬಡಿದುಕೊಂಡರೆ ದೇಶದ ರಕ್ಷಣೆ ಮಾಡುವುದು ಹೇಗೆ? ಮತ್ತು ಯಾರು? ಎಂಬ ಪ್ರಶ್ನೆ ಹುಟ್ಟುವುದು ಸಹಜ. ಸಂಬಂಧಪಟ್ಟ ದೇಶಗಳು ತಮ್ಮ ಗಡಿಭಾಗಗಳಲ್ಲಿ ಬೇರೆಯವರ ಪ್ರವೇಶಕ್ಕೆ ನಿಯಮಗಳನ್ನು ರೂಪಿಸಿಕೊಂಡರೆ ಸಾಕು. ಈ ತತ್ವ ಇಂದಿನ ಪರಿಸ್ಥಿತಿಯಲ್ಲಿ ಕನಸಿನಲ್ಲೂ ಕಾಣಬರದು. ಆದರೆ ವಿಶ್ವಸಂಸ್ಥೆಯಂತಹ ಸಂಘಟನೆಗಳಿಂದ ಈ ಕಾರ್ಯ ಸಾಧ್ಯ. ಮಾನವನ ಹಕ್ಕುಗಳ ಉಲ್ಲಂಘನೆ ದಿನೇ ದಿನೇ ಇಂತಹ ಅವಿವೇಕತನದಿಂದ ಜರುಗುತ್ತವೆ. ಹೀಗಾಗಿ ಪ್ರತಿ ಸಮಸ್ಯೆಗೂ ಮಾನವೀಯ ಮುಖವನ್ನು ತೊಡಿಸಿ ನೋಡಿದಾಗ ಅರ್ಧಸಮಸ್ಯೆ ಬಗೆ ಹರಿಯುತ್ತದೆ.

"ಪೋಲಿಸರ ಬೂಟು, ಲಾಠಿಗಳಿಗೆ ನನ್ನ ನೋವಿನ ಕೂಗು ಕೇಳಲೇ ಇಲ್ಲ. ಮನಸ್ಸಿಗೆ ಬಂದಂತೆ ಮನಸೋ ಇಚ್ಛೆ ಹೊಡೆದರು, ನಿಂದಿಸಿದರು. ಅವರ ಅಟ್ಟಹಾಸದಲ್ಲಿ ನಾನು ಭೂಮಿಗಿಳಿದು ಹೋದೆ, ನನ್ನ ಆಕ್ರಂದನ ಕೇಳಲು ಯಾರೂ ಇರಲಿಲ್ಲ. ಇಡೀ ರಾತ್ರಿ ಒಂದು ಪೋಲಿಸ್ ಠಾಣೆಯಿಂದ ಮತ್ತೊಂದು ಠಾಣೆಗೆ ಸುತ್ತಿಸಿದರು. ಪ್ರತಿ ಠಾಣೆಯಲ್ಲೂ ಏಟುಗಳು ತಪ್ಪಲಿಲ್ಲ. ದೌರ್ಜನ್ಯ ಕಡಿಮೆಯಾದ ಮೇಲೂ ನಮ್ಮ ನೋವು ಕೇಳುವ ಮನಸ್ಸುಗಳು ಅಲ್ಲಿರಲಿಲ್ಲ. ಇಷ್ಟೆಲ್ಲ ದೌರ್ಜನ್ಯವೆಸಗಲು ನಾನು ಮಾಡಿದ ತಪ್ಪಾದರೂ ಏನು? ಎಂಬುದೆ ನನಗರ್ಥವಾಗುತ್ತಿಲ್ಲ"[೧] ಇದು ೧೯೯೮ರ ಜುಲೈನಲ್ಲಿ ನಡೆದ 'ಬಾಗೂರು-ನವಿಲೆ ದೌರ್ಜನ್ಯ'ದಲ್ಲಿನ ಸತ್ಯಾಗ್ರಹಿಯಾದ ಆಶಾ ಅವರು ತೋಡಿಕೊಂಡ ಅಳಲು. ಕರ್ನಾಟಕದ ಇತಿಹಾಸದಲ್ಲಿ ದಾಖಲಾದ ಇನ್ನೊಂದು ಅಮಾನವೀಯ ಕೃತ್ಯವಿದು. ಬಾಗೂರು ನವಿಲೆ ಸುರಂಗ ಕಾಲುವೆಯ ನಿರ್ಮಾಣದಿಂದ ಅಂತರ್ಜಲವು ಬತ್ತಿ ರೈತರ ತೆಂಗಿನ ಮರಗಳು ನೀರಿಲ್ಲದೆ ಒಣಗುತ್ತಿದ್ದವು. ಆಹಾರ ಬೆಳೆಗಳೂ ಒಣಗಿ ಹೋಗುತ್ತಿದ್ದವು. ಭೀಕರ ಪರಿಸ್ಥಿತಿ ಉದ್ಭವಿಸುವ ಮೊದಲೇ ಎಚ್ಚತ್ತ ರೈತರು ಮತ್ತು ಮಹಿಳೆಯರು ನ್ಯಾಯಕ್ಕಾಗಿ ಮನವಿ ಸಲ್ಲಿಸಿದರು. ಸರ್ಕಾರ ಮನವಿಗೆ ಕಿವಿಗೊಡದಿದ್ದಾಗ ೯೦ ದಿನಗಳ ಕಾಲ ಶಾಂತಿಯುತ ಮುಷ್ಕರ ನಡೆಸಿದರು. ಕೊನೆಗೆ ಮುಷ್ಕರ ನಿರತರ ಮೇಲೆ ಪೋಲಿಸರು ಅಮಾನುಷವಾಗಿ ವರ್ತಿಸಿದ್ದರು. "....ವೃದ್ಧರ ಮೇಲೆ ಪೋಲಿಸರು ಸರಿತಪ್ಪುಗಳ ವಿವೇಚನೆ ಕಳೆದುಕೊಂಡು ಬೇಕಾಬಿಟ್ಟಿಯಾಗಿ ಬಲಪ್ರಯೋಗ ಮಾಡಿದ್ದಾರೆ. ಗರ್ಭಿಣಿ ಸ್ತ್ರೀಯರನ್ನೂ ಈ ಖಾಕಿಧಾರಿಗಳು ಬಿಟ್ಟಿಲ್ಲ. ಮುದುಕಿಯರನ್ನು ಮಕ್ಕಳನ್ನು ನಿಷ್ಕರುಣೆಯಿಂದ ಚಚ್ಚಿದ್ದಾರೆ. ಕುರುಡರನ್ನೂ ಬಿಟ್ಟಿಲ್ಲ, ತಲೆಕೆಟ್ಟವರಂತೆ ಪೋಲಿಸರು ವರ್ತಿಸಿದ್ದಾರೆ"[೨] ಎಂದು ಮಾನವಹಕ್ಕುಗಳ ಆಯೋಗ ಅಭಿಪ್ರಾಯಪಟ್ಟು ಪರಿಹಾರಕ್ಕೆ ಆದೇಶ ನೀಡಿದೆ. ಸಾಮಾನ್ಯ ಜನತೆಯ ಮೇಲೆ ನಡೆಸುವ ದೌರ್ಜನ್ಯ, ಅಮಾನವೀಯ ವರ್ತನೆಯ ಒಂದು ಉದಾಹರಣೆಯಷ್ಟೆ. ಇಂತಹ

ಘಟನೆಗಳು ಇತಿಹಾಸ ಮತ್ತು ವರ್ತಮಾನದಲ್ಲಿ ಅನೇಕ. ಅಧಿಕಾರ ಇದೆ ಎಂದು ಪೋಲಿಸರು ತಮ್ಮತನ (ಮನುಷ್ಯತ್ವ)ವನ್ನು ಮರೆತು ವರ್ತಿಸುವುದು ಹಿತವೂ ಅಲ್ಲ, ಸಭ್ಯವೂ ಅಲ್ಲ. ಒಂದು ವೇಳೆ ಪೋಲಿಸರೇ ಅಂತಹ ಸ್ಥಿತಿಯಲ್ಲಿದ್ದರೆ ಏನು ಮಾಡುತ್ತಿದ್ದರು? 'ಮನುಷ್ಯ ತಾನು ನೋವನ್ನು ಸಹಿಸಿಕೊಳ್ಳುವುದಿಲ್ಲವಾದ್ದರಿಂದ ಇತರರಿಗೂ ನೋವನ್ನುಂಟು ಮಾಡಬಾರದು' ಎನ್ನುವ ಕಾಂಟ್‌ನ ಮಾತು ಮುಖ್ಯವಾಗುತ್ತದೆ.

ಮಾನವೀಯ ಇತಿಹಾಸದಲ್ಲಿ ಇತ್ತೀಚಿಗೆ(೨೪ - ೦೬ - ೨೦೦೦) ದಾಖಲಾದ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲೂಕಿನ ಹಂಗರಹಳ್ಳಿಯ ಅಮಾನವೀಯ ಘಟನೆ ಮಾನವೀಯ ಪ್ರಜೆಗಳು ತಲೆತಗ್ಗಿಸುವಂತೆ ಮಾಡಿದೆ. ಕಲ್ಲುಗಣಿಯಲ್ಲಿ ೧೫ ಕೆ.ಜಿ. ತೂಕದ ಸರಪಳಿಯನ್ನು ಕಾಲಿಗೆ ಕಟ್ಟಿಕೊಂಡು ಕೆಲಸ ಮಾಡುತ್ತಿದ್ದ ಐದು ಮಂದಿ ಜೀತದಾಳುಗಳನ್ನು ಇತ್ತೀಚಿಗೆ ಮುಕ್ತ ಮಾಡಲಾಯಿತು. ೨೧ನೇ ಶತಮಾನದಲ್ಲೂ ಮಾನವನನ್ನು ಪ್ರಾಣಿಗಿಂತಲೂ ಕೀಳಾಗಿ ನಡೆಸಿಕೊಳ್ಳುತ್ತಿರುವ ಜೀತಪದ್ಧತಿಯ ಘಟನೆಗಳನ್ನು ಕೇಳಿದರೆ, ನಾಗರಿಕರು ನಾಚಬೇಕೇ? ಅಥವಾ ವ್ಯವಸ್ಥೆಯ ರೂವಾರಿಗಳನ್ನು ಶ್ಲಾಘಿಸಬೇಕೇ ತಿಳಿಯದಾಗಿದೆ! ಇಂತಹ ಪದ್ಧತಿಗಳನ್ನು ನಿರ್ಮೂಲ ಮಾಡಬೇಕಾದ ಸರ್ಕಾರವೇ ವ್ಯವಸ್ಥೆಯ ಭಾಗವಾಗಿದ್ದರೆ ಏನೂ ಮಾಡಲಿಕ್ಕಾಗದು. ೧೫ ಕೆ.ಜಿ.ತೂಕದ ಸರಪಳಿಯ ಭಾರವೇ ಸಹಿಸಲು ಅಸಾಧ್ಯವಾದದ್ದು, ಅದರ ಜೊತೆಗೆ ಕೆಲಸ ಮಾಡಬೇಕಾದದ್ದು, ಇನ್ನು ಅಸಾಧ್ಯ. ಮಾನವನ ಸಾಮರ್ಥ್ಯದ ಬಳಕೆಯ ರೀತಿಯನ್ನು ಗಮನಿಸಿದರೆ ಒಂದಡೆ ಶ್ಲಾಘನೆ, ಇನ್ನೊಂದೆಡೆ ಅಮಾನವೀಯ. ಶ್ಲಾಘನೀಯ ಏಕೆಂದರೆ ಮಾನವ ಶರೀರದ ಸಮರ್ಥ ಬಳಕೆ, ಅವನಿಗೆ ಕಾಲುಕಟ್ಟಿದಾಗ್ಯೂ ಕೆಲಸ ಮಾಡುವುದು. ಈ ರೀತಿ ಕಾಲುಕಟ್ಟಿಸಿಕೊಳ್ಳದವರೂ ಕೆಲಸ ಮಾಡಿದರೆ ಆರ್ಥಿಕ ಮುಗ್ಗಟ್ಟು ತಲೆದೋರಲಾರದು. ಈ ರೀತಿ ಸಮರ್ಥವಾಗಿ ಬಳಸುವುದಕ್ಕೆ ಕಾಲಿಗೆ ಸರಪಳಿ ಕಟ್ಟಲಾಗಿದೆ ಎಂಬುದು ಅಮಾನವೀಯ ಅಂಶ. ಇಂತಹ ಅಮಾನವೀಯ ಘಟನೆಗಳನ್ನು ಖಂಡಿಸಬೇಕಾದದ್ದು, ನಿರ್ಮೂಲನೆ ಮಾಡಬೇಕಾದದ್ದು, ಮಾನವೀಕರಣದ ತುರ್ತು ಕಾರ್ಯವಾಗಿದೆ.

ಹಿಟ್ಲರ್, ಮುಸಲೋನಿ, ನೆಪೋಲಿಯನ್, ಸಿಕಂದರ್, ಸೀಜರ್, ಕೈಸರ್ ಹಾಗೂ ಕಮೂನಿಸ್ಟ್ ನಾಯಕರು ಪ್ರಜೆಗಳನ್ನು ಎಂದೂ ಮಾನವರಂತೆ ಕಾಣಲಿಲ್ಲ ಎಂಬ ಕೂಗಿದೆ. ಭೂಮಂಡಲವನ್ನೇ ತಮ್ಮ ಪದತಲದಲ್ಲಿ ಮೆಟ್ಟಬೇಕೆಂದವರು. ಹಿಟ್ಲರ್‌ನು ಸಾವಿರಾರು ಯಹೂದಿಗಳ ಹತ್ಯೆಗೆ ಕಾರಣನಾದ, ನೆಪೋಲಿಯನ್ ಕೂಡ ಅಷ್ಟೆ. ಈ ಎಲ್ಲ ನಾಯಕರು ತಮ್ಮ ಕಠಿಣ ನೀತಿಯಿಂದ ಗಳಿಸಿದ್ದೇನು? ಸಾರ್ವಭೌಮರಾಗಬೇಕು ಎನ್ನುವ ಆಕಾಂಕ್ಷೆ ಇತ್ತು. ಅದನ್ನು ಜನರ ಪ್ರೀತಿಯಿಂದಲೂ ಗಳಿಸಬಹುದಿತ್ತು. ಈ ನಾಯಕರ ಅಮಾನವೀಯ ವರ್ತನೆಯನ್ನು ಖಂಡಿಸುವುದರ ಜೊತೆಗೆ ಮಾನವತಾವಾದ ಆರಂಭವಾಯಿತು. ಪ್ರತಿ ಪ್ರಜೆಯಲ್ಲೂ ಹುಟ್ಟಿನೊಂದಿಗೆ ಬರುವ ಗುಣ ಇದು.

ಆದರೂ ಬೆಳೆದ, ಬೆಳೆಸಿದ ಪರಿಸರ ಪ್ರಭಾವ ಬೀರಿ ಮನುಷ್ಯನನ್ನು ಅಮಾನುಷ ಕೃತ್ಯಕ್ಕೆ ಎಳೆಯಬಹುದು. ಇದಕ್ಕೆ ಸಂಸ್ಕೃತಿಯ ಆಶ್ರಯ ಮುಖ್ಯವಾಗುತ್ತದೆ. ಯುರೋಪಿನ ಇತಿಹಾಸದಲ್ಲಿ ಮನುಷ್ಯನಿಗೆ ಮನುಷ್ಯನೇ ಶತ್ರುವಾಗಿ ಕಾಣುತ್ತಾನೆ. ಪ್ರೀತಿ, ಕರುಣೆ, ಅನುಕಂಪೆ ಮತ್ತು ಮನುಷ್ಯತ್ವ ಮಾಯವಾಗಿ ಬಿಟ್ಟಿತ್ತು. ದೇಶ ದೇಶಗಳ ನಡುವೆ ಕಬ್ಬಿಣದ ಪರದೆ ನಿರ್ಮಾಣವಾಗಿತ್ತು. ಈ ಸಂದರ್ಭದಲ್ಲಿ ಪೆಟ್ರಾರ್ಕ್, ಮಾರ್ಕ್ಸ್ ಪ್ರತಿಪಾದಿಸಿದ ಮಾನವತಾವಾದವು ದಯನೀಯವಾಗಿ ಬದುಕುತ್ತಿದ್ದ ಮನುಷ್ಯನಿಗೆ ಆಶಾಕಿರಣವಾಯಿತು.

ಇಲ್ಲಿ ನಾಲ್ಕು ಚಿತ್ರಗಳು ಪ್ರಸ್ತಾಪಗೊಂಡಿವೆ. ೧. ಭಾರತ-ಪಾಕಿಸ್ತಾನಗಳ ನಡುವಿನ ಕಾರ್ಗಿಲ್ ಕಾರ್ಯಾಚರಣೆ, ೨.ಬಾಗೂರು-ನವಿಲೆ ರೈತರ ಮೇಲಿನ ದೌರ್ಜನ್ಯ, ೩. ಹಂಗರಹಳ್ಳಿಯ ಜೀತಪದ್ಧತಿ ೪.ರಷ್ಯಾ/ಯುರೋಪ್ ರಾಷ್ಟ್ರಗಳಲ್ಲಿನ ನಿರಂಕುಶ ಪ್ರಭುಗಳ ಆಳ್ವಿಕೆ. ಸೈನಿಕರು ಅಲ್ಲಿನ ಪ್ರಜೆಗಳು ರೈತರು ಮತ್ತು ಕಾರ್ಮಿಕರು ಈ ನಾಲ್ಕು ಘಟನೆಗಳಲ್ಲಿ ತತ್ತರಿಸಿಬಿಟ್ಟಿದ್ದಾರೆ. ದೇಶ ರಕ್ಷಣೆಯ ನೆಪದಲ್ಲಿ ಪಾಕಿಸ್ತಾನ-ಭಾರತಗಳು ಸೈನಿಕರ ಮತ್ತು ಆ ಭಾಗದ ಪ್ರಜೆಗಳ ಮಾನವೀ ಬದುಕನ್ನು ಅಂತ್ಯಗೊಳಿಸುತ್ತವೆ. ಆಡಳಿತದ ನೆಪದಿಂದ-ರೈತರ ಮೇಲೆ ಪೋಲಿಸರು ಮಾನವೀಯತೆ ಮರೆತು ವರ್ತಿಸಿದ್ದಾರೆ. ಸಾರ್ವಭೌಮನಾಗಬೇಕು ಎಂಬ ತನ್ನ ಆಕಾಂಕ್ಷೆಗಾಗಿ ಸಾವಿರಾರು ಜನರ ಮೇಲೆ ದಾಳಿ ನಡೆಸಿ ಮಾನವನ ಹಕ್ಕು ಮತ್ತು ಕರ್ತವ್ಯಗಳನ್ನು ಕಿತ್ತುಕೊಳ್ಳಲಾಗಿದೆ. ಹಿಟ್ಲರ್, ಮುಸಲೋನಿಯರು ನಾಸಿಝಂ ಮತ್ತು ಫ್ಯಾಸಿಝಂಗಳ ಮೂಲಕ ಜನರ ಮೇಲಿನ ದಬ್ಬಾಳಿಕೆಯನ್ನು ಪ್ರತಿಭಟಿಸುವ ಸಿದ್ಧಾಂತವೇ ಮಾನವತಾವಾದವಾಗಿ ಬೆಳೆಯಿತು. ಇದು ಪುನರುಜ್ಜೀವನ ಕಾಲದಲ್ಲಿ ಪ್ರಕಾಶ ಪಡೆಯಿತು.

## ಮನಃಶಾಸ್ತ್ರೀಯ ಮಾನವತಾವಾದ

ಸಾಹಿತ್ಯದಲ್ಲಿ ಮನಃಶಾಸ್ತ್ರವು ಅಳವಡಿಸಲಾದ ರೀತಿ ಪಾತ್ರಗಳ ವ್ಯಕ್ತಿತ್ವದಲ್ಲಿ ಹಾಗೂ ಸಾಹಿತಿಯ ಬರವಣಿಗೆಯಲ್ಲಿ ಕೃತಿಗಳ ಪಾತ್ರಗಳು ತಮ್ಮ 'ಮನಸ್ ತತ್ವ'ವನ್ನು ಬಿಟ್ಟುಕೊಡುವಲ್ಲಿ ಯಶಸ್ವಿಯಾಗುವುದು. ಲೇಖಕನು ಸಮರ್ಥವಾಗಿ ಮನಃಶಾಸ್ತ್ರವನ್ನು ಬಳಸಿದಾಗ ಈ ಮನಃಶಾಸ್ತ್ರದ ನಿರೂಪಣೆಯಿಂದ ಅಲ್ಲಿನ ಪಾತ್ರಗಳು ಮಾನವೀಕರಣಗೊಳ್ಳುವಲ್ಲಿ ಯಶಸ್ಸು ಸಾಧಿಸುತ್ತವೆ. ಮಾನವತಾವಾದವು ಮನಃಶಾಸ್ತ್ರದ ಪಾತಳಿಯ ಮೇಲೆ ನಿಲ್ಲುವುದು ಅದರ ಮೂಲ ತಾತ್ವಿಕ ಸ್ವರೂಪದಲ್ಲಿ. ಕೃತಿಯ ಪ್ರತಿ ಪಾತ್ರದ ಮನಸ್ಸು ಬಿಂಬಿತವಾಗುವುದು ನಿರೂಪಕನ ಮನಃಸ್ಥಿತಿಯ ಮೇಲೆ. ಮನಃಶಾಸ್ತ್ರದ ಪ್ರತಿಪಾದಕನಾದ ಫ್ರಾಯ್ಡ್ 'ಮನಸ್ಸಿನ ಜೊತೆಗೆ ಸಾಮಾಜಿಕವೆನ್ನಬಹುದಾದ, ಮಾನವಿಕವೆನ್ನಬಹುದಾದ ಹಲವಾರು ಅಂಶಗಳು ಸೇರಿಕೊಂಡಿರುತ್ತವೆ' ಎಂದಿದ್ದಾನೆ. ಫ್ರಾಯ್ಡ್,

ಯೂಂಗ್ ಮತ್ತು ಎರಿಕ್ ಫ್ರೇಮ್ ಇವರು 'ಸಾಮಾಜಿಕನ ಮನಃಸ್ಥಿತಿ ವಿಕಾರವಾಗದಂತೆ, ಅವನ ಹಾಗೂ ಅವನ ಸಮಾಜಕ್ಕೆ ಸದ್ವರ್ತನೆ ಅಗತ್ಯವಾಗುತ್ತದೆ' ಎಂದಿದ್ದಾರೆ. ಮನಃಸ್ಥಿತಿಯ ವಿಕಾರತೆ ಅಮಾನವೀಯವಾಗುತ್ತದೆ. ಅದು ವ್ಯಕ್ತಿಯ ಅಪವರ್ತನೆಗೆ ಮೂಲವಾಗುವುದರಿಂದ ವ್ಯಕ್ತಿಯ ಮಾನವತೆ ನಷ್ಟದ ದಾರಿ ಹಿಡಿಯುತ್ತದೆ. ಮನಃಶಾಸ್ತ್ರದ ಸುಸ್ಥಿತಿಯಿಂದ ಆರೋಗ್ಯಕರ ವ್ಯಕ್ತಿ, ಸಮಾಜ ನಿರ್ಮಾಣಗೊಳ್ಳುವುದರಿಂದ ಆರೋಗ್ಯಕರವಾದ ಮಾನವೀಯ ಜಗತ್ತು ರೂಪುಗೊಳ್ಳುತ್ತದೆ. ಇದರಿಂದ ಮನಃಶಾಸ್ತ್ರವು ಸಹ ಮಾನವತಾವಾದಕ್ಕೆ ಅತ್ಯಗತ್ಯ.

### ಮಾನವಶಾಸ್ತ್ರೀಯ ಮಾನವತಾವಾದ

ಈ ಪರಿಕಲ್ಪನೆಯ ನೆಲೆಯಲ್ಲಿ ಅಂತರ್‌ಸಂಬಂಧಿ ರಚನೆಯನ್ನು ಗುರುತಿಸಬಹುದೇ ಹೊರತು ಮೇಲ್ಪದರ ಸಂಬಂಧವನ್ನು ಗಣಿಸಲಿಕ್ಕಾಗದು. ಮಾನವನ ಪಳೆಯುಳಿಕೆಗಳನ್ನು-ಅವನ ಗತಕಾಲದ ಜೈವಿಕ ಚರಿತ್ರೆಯನ್ನು ಅಭ್ಯಾಸಿಸುವ ಸಂದರ್ಭದಲ್ಲಿ ಮಾನವೀಯ ಅಂಶಗಳನ್ನು ಅವಲೋಕಿಸುವ ಕೆಲಸವನ್ನು ಮಾಡುತ್ತದೆ. ಮಾನವೀಯ ನೆಲೆಗಟ್ಟು ಮಾನವಶಾಸ್ತ್ರದೊಳಗೆ ಅಡಕಗೊಂಡಿರುವ ವೈಧಾನಿಕತೆಯನ್ನು ಸಾಂಸ್ಕೃತಿಕ ಮಾನವಶಾಸ್ತ್ರಜ್ಞರು ಮತ್ತು ಸಾಂಸ್ಕೃತಿಕ ತತ್ತ್ವಶಾಸ್ತ್ರಜ್ಞರು ಅಧ್ಯಯನ ನಡೆಸಿದ್ದಾರೆ. 'ಮನುಷ್ಯ'(Man) ಎಂಬುದು 'ಸಾಂಸ್ಕೃತಿಕ ಬೆಳವಣಿಗೆ'ಯ(Cultural Growth)ಸಂಕೇತವಾಗಿ ರೂಪುಗೊಂಡಿತ್ತು. ಗತಕಾಲದ ಚರಿತ್ರೆಯನ್ನು ಮತ್ತು ಭವಿಷ್ಯದ ಮುನ್ಸೂಚನೆಯನ್ನು ವರ್ತಮಾನದ ಘಟನೆಗಳೊಂದಿಗೆ ಅನುಸಂಧಾನಿಸುವ ಕೊಂಡಿಯಾಗಿ 'ಮನುಷ್ಯ' ನಿಂತಿದ್ದಾನೆ ಎಂಬುದು ಸಿ.ಜಿ. ಹ್ಯೂಮ್ ಅವರ ವಾದದ ತಿರುಳಾಗಿದೆ. ಇದೇ ರೀತಿಯಾಗಿ ಕ್ರೋಬರ್, ಇ.ಬಿ.ಟೇಲರ್ ಮೊದಲಾದವರು ಕಥನಾತ್ಮಕವಾಗಿ ಮಾನವನ ಚರಿತ್ರೆಯನ್ನು ನಿರೂಪಿಸಿದ್ದಾರೆ. ಮಾನವನ ದಾಖಲಾತಿಯಲ್ಲಿರುವ, ಮೌಖಿಕವಾಗಿರುವ ಜನಪದೀಯ ಕಥನಗಳನ್ನು ಈ ತತ್ತ್ವಜ್ಞಾನಿಗಳು ಸಂಗ್ರಹಿಸಿ ವಿಶ್ಲೇಷಿಸಿದರು. ತೃತೀಯ ಜಗತ್ತಿನ ರಾಷ್ಟ್ರಗಳಿಗೆ ಈ ಮಾನವಶಾಸ್ತ್ರೀಯ ಮಾನವೀಯ ಪ್ರಜ್ಞೆ ಅತ್ಯಗತ್ಯವಾಗಿತ್ತು. ಬ್ರಿಟಿಷ್ ವಸಾಹತೀಕರಣದ ಸಂದರ್ಭದಲ್ಲಿ ಮತ್ತು ನಂತರದಲ್ಲೂ ಮಾನವತೆಗೆ ಸಾಕಷ್ಟು ಗಮನ ಕೊಟ್ಟಿಲ್ಲವೆಂಬ ಕೊರಗು ಒಂದೆಡೆ ಇದೆ. ಆದರೆ ಅನೇಕ ಸಾಂಸ್ಕೃತಿಕ ಮಾನವಶಾಸ್ತ್ರಜ್ಞರು ಮಾನವಶಾಸ್ತ್ರವನ್ನು ದಾಖಲು ಮಾಡುವುದರ ಮೂಲಕ ಮತ್ತು ಜಗತ್ತಿಗೆ ಅದನ್ನು ಪಾಲಿಸುವುದರ ಅನಿವಾರ್ಯತೆಯನ್ನು ಸಾರುವುದರ ಮೂಲಕ ಮಾನವೀಕರಣವನ್ನು ಎತ್ತಿ ಹಿಡಿದಿದ್ದಾರೆ.

## ಸಮಾಜವಾದ ಆಧಾರಿತ ಮಾನವತಾವಾದ

ಸಾಮಾಜಿಕ ನೀತಿ-ನಿಯಮಗಳನ್ನು, ಆದರ್ಶ ಮೌಲ್ಯಗಳನ್ನು ರೂಪಿಸುವ ಉದ್ದೇಶವನ್ನುಳ್ಳ ಸಮಾಜವಾದ ಸಮಾಜದ ಮೂಲಬಿಂದುವಾದ 'ವ್ಯಕ್ತಿ'ಯ ನಡವಳಿಕೆಯನ್ನು ನಿಯಂತ್ರಿಸುವ,

ಸುಧಾರಿಸುವ ಮತ್ತು ಮುನ್ನಡೆಸುವ ಜವಾಬ್ದಾರಿಯನ್ನು ಹೊತ್ತಿದೆ. ವ್ಯಕ್ತಿಯು ಏಕಕಾಲದಲ್ಲಿಯೇ ಅಂತರ್ಮುಖಿಯೂ, ಬರ್ಹಿರ್ಮುಖಿಯೂ ಆದ ಸಾಮಾಜಿಕನೂ ಆಗಿದ್ದಾನೆ. ಅವನ ಮತ್ತು ಅವನಿಗೆ ಅತ್ಯಂತ ಆಪ್ತವಾದವುಗಳೆಲ್ಲದರ ಅಸ್ತಿತ್ವವನ್ನು ರಕ್ಷಿಸಿಕೊಳ್ಳುವುದಕ್ಕೆ ಹೋರಾಡುವಲ್ಲಿ ಅಂತರ್ಮುಖಿಯಾಗಿರುತ್ತಾನೆ. ಇಲ್ಲಿ ತೀರ ವೈಯಕ್ತಿಕ ಆಶಯಗಳನ್ನು ತೃಪ್ತಿಪಡಿಸಿಕೊಳ್ಳುವುದು, ತನ್ನ ಸುಪ್ತ ಸಾಮರ್ಥ್ಯಗಳನ್ನು ಬೆಳಸಿಕೊಳ್ಳುವುದು ಮೊದಲಾದ ಚಟುವಟಿಕೆಗಳು ಸೇರುತ್ತವೆ. ಸಹವಾಸಿಗಳ ಪ್ರೀತಿ ವಿಶ್ವಾಸಗಳನ್ನು ಮೆಚ್ಚುಗೆಯನ್ನು ನಿರೀಕ್ಷಿಸುವಲ್ಲಿ, ಅವರ ಕಷ್ಟ-ಸುಖಗಳನ್ನು ತಾನು ಅನುಭವಿಸುವಲ್ಲಿ, ಇತರರ ಒಳಿತು-ಕೆಡುಕುಗಳನ್ನು ಕಂಡು ಹಿಗ್ಗಿ ಕುಗ್ಗುವುದರಲ್ಲಿ ಮಾತು ಬಹಿರ್ಮುಖಿ ಅಂದರೆ ಸಾಮಾಜಿಕ. ಕೆಲ ಸಂದರ್ಭದಲ್ಲಿ ಪರಸ್ಪರ ವಿರುದ್ಧವೂ ಆಗಬಹುದು. ಹೀಗಾಗುವುದಕ್ಕೆ ವ್ಯಕ್ತಿಯಲ್ಲಿನ ವಿಲಕ್ಷಣವಾದ ಮನಸ್ಸು ಮತ್ತು ವರ್ತನೆಯೇ ಕಾರಣ. ಇದನ್ನು ಅಮಾನವೀಯ ಬದುಕಿನ ಅಥವಾ ಸಮಾಜ ವಿರೋಧಿ ಚೌಕಟ್ಟಿನಲ್ಲಿ ನಿಲ್ಲಿಸಿ ಖಳನಾಯಕನ ಪಟ್ಟಕ್ಕೆ ಅಣಿಗೊಳಿಸಲಾಗುತ್ತದೆ. ಮನುಷ್ಯನ ಪ್ರತಿಯೊಂದು ಅಂಶವನ್ನು ಸಮಾಜದ ಚೌಕಟ್ಟಿನಲ್ಲಿಯೇ ನೋಡಬೇಕಾಗಿರುವುದು ಅನಿವಾರ್ಯ. ಭಾಷೆ, ಶಿಕ್ಷಣ, ನಡತೆ, ಚಿಂತನೆ, ಆಹಾರ, ಆಚಾರ, ಅನ್ನ, ಆಶ್ರಯ ಮೊದಲಾವುಗಳನ್ನೆಲ್ಲ ಒದಗಿಸುವುದು 'ಸಮಾಜ'. ಈ ಸಮಾಜದ ಚೌಕಟ್ಟನ್ನು ಮೀರುವ ಸಾಹಸವನ್ನು ಮಾಡಲಾಗುವುದಿಲ್ಲ. ಏಕೆಂದರೆ ಗತ ಚರಿತ್ರೆ ಮತ್ತು ಭವಿಷ್ಯದ ಸಂಬಂಧಗಳನ್ನು ಕಲ್ಪಿಸುವ ಸಮಕಾಲೀನತೆಯ ಕೊಂಡಿಯಾಗಿ ಕೆಲಸ ಮಾಡುತ್ತದೆ. ವ್ಯಕ್ತಿಯ ಅಭಿವೃದ್ಧಿಯನ್ನು ಬಯಸುವ ಸಮಾಜವು 'ಸಾರ್ವಜನಿಕರೆಲ್ಲರ ಒಳಿತಿಗಾಗಿ, ಸಾರ್ವಜನಿಕರೇ ನಿರ್ವಹಿಸುವ ನಿಜವಾದ ಸಮಾನ ಧೋರಣೆಯನ್ನುಳ್ಳ ಆಶಯವೇ ಸಮಾಜವಾದ'. ಈ ಸಮಾಜವಾದದ ನೆರಳಿನಲ್ಲಿಯೇ ಆಶ್ರಯ ಪಡೆದುಕೊಂಡಿರುವ ಮಾನವನ ಬದುಕು 'ಮಾನವೀಕರಣ'ಗೊಳ್ಳುವುದು ಸಮಾಜವಾದ ಈ ಮೇಲಿನ ತತ್ವದಿಂದಲೇ. "ಇಂದಿನ ಸಮಾಜದಲ್ಲಿ ಬಡತನ, ಹೊಂದಿರುವವರಿಗೂ ಹೊಂದಿಲ್ಲದವರಿಗೂ, ಬಂಡವಾಳಸ್ಥರಿಗೂ ಕೂಲಿಗಾಗಿ ದುಡಿಮೆ ಮಾಡುವವರಿಗೂ ಇರುವ ವರ್ಗವಿರೋಧಗಳನ್ನು ಸ್ಪಷ್ಟಪಡಿಸುವುದೇ ಆಧುನಿಕ ಸಮಾಜವಾದದ ತಿರುಳು"[೩] ವ್ಯಕ್ತಿಗಳ ನಡುವೆ ಅಂತರವನ್ನು ಸೃಷ್ಟಿಸದೆ ಸಮಾನತೆಯ ಕಂಡುಕೊಂಡು ಜೀವಿಸುವ ಪ್ರತಿಮಾನವನು ಸಮಾನನು. ಅವನು ಎಲ್ಲರ ಹಿತಕ್ಕಾಗಿ ಚಿಂತಿಸಬೇಕು ಮತ್ತು ಆ ರೀತಿ ನಡೆದುಕೊಳ್ಳಬೇಕು. ಈ ರೀತಿಯಲ್ಲಿ ಸಮಾಜವಾದದ ಮಾನವತಾವಾದವು ಅರ್ಥೈಸಿಕೊಳ್ಳುತ್ತದೆ. ಕಾರ್ಲ್‌ಮಾರ್ಕ್ಸ್, ಏಂಗೆಲ್ಸ್, ಲೋಹಿಯಾ, ಜಯಪ್ರಕಾಶ್ ನಾರಾಯಣ, ನಾರಾಯಣಗುರು, ಶಾಂತವೇರಿ ಗೋಪಾಲಗೌಡ ಮೊದಲಾದ ಸಮಾಜವಾದಿಗಳೆಲ್ಲ ಚಿಂತಿಸಿದ್ದೇ 'ಸಮಾಜವಾದ ಆಧಾರಿತ ಮಾನವತಾವಾದ'ವನ್ನು. ಸಮಾಜವನ್ನು ಬಿಟ್ಟು ಮಾನವತಾವಾದವಿಲ್ಲ, ಮಾನವತೆಯನ್ನು ದೂರೀಕರಿಸಿದ ಸಮಾಜ ಛಿದ್ರೀಕರಣಗೊಳ್ಳುತ್ತದೆ ಎಂಬುದು ಅವರ ತತ್ವಗಳ ಆಶಯವಾಗಿತ್ತು. ಸಮಾಜಗಳನ್ನು ದೇಶ-ಕಾಲ-ಭಾಷೆ-ಧರ್ಮಗಳ ನೆಲೆಯಲ್ಲಿ ವಿಂಗಡಿಸಿದ್ದರೂ

ಅವುಗಳ ಮೂಲಘಟಕ ವ್ಯಕ್ತಿ, ಅವನ ಪ್ರಗತಿಯ ಚಿಂತನೆಯೇ ದೇಶ-ಕಾಲ-ಭಾಷೆ-ಧರ್ಮಗಳ ಗುರಿಯೂ ಆಗಿತ್ತು. ಮಾನವನ ಪುರೋಭಿವೃದ್ಧಿಗೆ ಕೆಲ ನಿರ್ದಿಷ್ಟ ಹಂತದಲ್ಲಿ ಯಾವೆಲ್ಲ ಸಮಸ್ಯೆಗಳು ಬಗೆಹರಿಯಲು ಸಾಧ್ಯವೋ ಅಂಥವುಗಳನ್ನು ಸಮಾಜವಾದ ಬಗೆಹರಿಸೀತು ಎಂಬ ತೀವ್ರತರದ ನಂಬಿಕೆ ಸಮಾಜವಾದಿಗಳಲ್ಲಿತ್ತು. ತೀರಾ ಹೆಚ್ಚಿನ ಆಸೆಯನ್ನು ಅವರು ಹೊಂದಿರಲಿಲ್ಲ. ಮಾನವೀಯ ಬದುಕಿನ ಒಳಿತನ್ನು ಬಯಸುವ ಸಮಾಜವಾದವು ಮಾನವತಾವಾದವನ್ನು ಆಧರಿಸಿರುವುದು ಅದರ ಇನ್ನೊಂದು ಮುಖವಾಗಿ ಅನಾವರಣಗೊಂಡಿದೆ.

ಮಾರ್ಕ್ಸ್ ಜನತೆಯ ಕಳೆದುಹೋದ ಮಾನವತೆಯನ್ನು ಪುನಃ ಕಂಡುಹಿಡಿಯುವ ಮಾರ್ಗವನ್ನು ಸೂಚಿಸುತ್ತಾನಷ್ಟೇ ಅಲ್ಲ. ಅದನ್ನು ಕೈಗೊಡಿಸಲು ಸಹ ತುಂಬ ಶ್ರಮಿಸಿದ. ಮುಂಚಿನ ದಾರ್ಶನಿಕರು ಸಾಮಾನ್ಯವಾಗಿ ಯಥಾಸ್ಥಿತಿಯನ್ನು ಕಾಯ್ದುಕೊಳ್ಳಲು ಪ್ರಯತ್ನಿಸಿದರು. ಇದಕ್ಕೆ ವಿರುದ್ಧವಾಗಿ ಮಾರ್ಕ್ಸ್‌ನ ಸಿದ್ಧಾಂತವು ಸಮಾಜ ರಚನೆಯನ್ನು ಬದಲಾಯಿಸಬೇಕೆನ್ನುತ್ತದೆ. ಮಾರ್ಕ್ಸ್ ಯಾವಾಗಲೂ ಮಾನವತೆಯ ಪರವಾಗಿಯೇ ಹೋರಾಡಿದ ಮತ್ತು ಅದಕ್ಕಾಗಿ ಅನೇಕ ಕ್ಲೇಶಗಳನ್ನು ಸಹಿಸಿದ. ಮಾನವತೆಯ ಪುನರುಜ್ಜೀವನಕ್ಕಾಗಿ ಮಾಡಿದ ಪ್ರಯತ್ನಗಳಲ್ಲಿ ಎಂದೂ ಬಳಲಿಕೆಯನ್ನು ತೋರಿಸಲಿಲ್ಲ ಮತ್ತು ಬಂಡವಾಳಶಾಹಿಗಳು ತೋರಿಸಿದ ಬೆದರಿಕೆಗಳಿಂದುಂಟಾದ ಅಸಂತೋಷವನ್ನು ಸಹ ತೋರ್ಪಡಿಸಿಕೊಳ್ಳಲಿಲ್ಲ. ಅಗಣಿತ ಸಂಕಷ್ಟಗಳನ್ನು ಎದುರಿಸಬೇಕಾಗಿ ಬಂದರೂ ಮಾರ್ಕ್ಸ್ ತನ್ನ ಮಾರ್ಗದಿಂದ ಅವಿಚಲಿತನಾಗಲಿಲ್ಲ. ಅವರದು ಒಂದು ಜೀವಂತ ಸಿದ್ಧಾಂತ. ಅದು ಮನುಷ್ಯನಿಗೆ ಹೊಸ ಸ್ಫೂರ್ತಿ, ಹೊಸ ಚೈತನ್ಯವನ್ನು ನೀಡುತ್ತದೆ. ನಿಜವಾದ ಮಾರ್ಕ್ಸ್‌ನ ಸಿದ್ಧಾಂತವು ಒಂದು ಶಕ್ತಿ. ಅದು ದೀನ ದಲಿತರಿಗೆ, ಬಹಿಷ್ಕೃತರಿಗೆ, ನಿರಕ್ಷರಿಗಳಿಗೆ ಮತ್ತು ಬಡವರಿಗೊಂದು ಜೀವನದ ಹೊಸ ಅರ್ಥವನ್ನೇ ತಂದುಕೊಟ್ಟಿದೆ. ಅವರ ಭಗ್ನ ಹೃದಯಗಳಲ್ಲಿ ನವಜ್ಯೋತಿಯನ್ನು ಹೊತ್ತಿಸಿದೆ. ಲಕ್ಷಾವಧಿ ಜನರಿಗೆ ಮುಕ್ತಿಯ ಮಾರ್ಗವನ್ನು ತೋರಿಸುವ ಸಿದ್ಧಾಂತ ಇದು. ಈ ಮಾರ್ಗವನ್ನು ತುಳಿದೇ ಜನರು ಒಂದು ಹೊಸ ವ್ಯವಸ್ಥೆಯನ್ನು ಕಟ್ಟುವರು. ಅದರಲ್ಲಿ ಮನುಷ್ಯನನ್ನು ಮನುಷ್ಯನೆಂದೇ ಪರಿಗಣಿಸಲಾಗುವುದು ಮತ್ತು ಜಗತ್ತಿನ ಯಾವುದೇ ಶಕ್ತಿ ಅವನ ಮಾನವತೆಯನ್ನು ಕಸಿಯಲು ಸಮರ್ಥವಾಗಲಾರದು"[೪]

## 'ಮಾನವತಾವಾದಿ ಧರ್ಮ' ಮತ್ತು 'ಧರ್ಮದ ಮಾನವತಾವಾದ'

ಒಂದು ಸಮಾಜವಾದದ ಪರಿಕಲ್ಪನೆ, ಇನ್ನೊಂದು ಧಾರ್ಮಿಕತೆಯ ಪರಿಕಲ್ಪನೆ. ಇಲ್ಲಿ ಎರಡನ್ನೂ ಒಟ್ಟೊಟ್ಟಿಗಿಟ್ಟು ಮತ್ತು ಪ್ರತ್ಯೇಕವಾಗಿಟ್ಟೂ ನೋಡಬಹುದಾಗಿದೆ. 'ಮಾನವತಾವಾದಿ ಧರ್ಮ'ವು ಆಗಸ್ಟ್ ಕೋಂಟ್‌ನ ವಿಚಾರವಾಗಿದೆ. ಸಮಾಜವಾದಿಯ ಪ್ರಣಾಳಿಕೆಯಾಗಿರುವ ಈ ತತ್ತ್ವ-

''ಸಾಂಪ್ರದಾಯಿಕವಾಗಿ ಬೆಳೆದು ಬಂದಿರುವ ಧರ್ಮವು ಮೂಢನಂಬಿಕೆಗಳಿಂದ ಹಾಗೂ ಮತತತ್ವಗಳಿಂದ ತುಂಬಿ ಧರ್ಮಾಂಧತೆ ಯನ್ನುಂಟುಮಾಡುತ್ತದೆ''[೫] ಎಂದು ಆರೋಪಿಸಿದ್ದಾನೆ. ''ದೇವರು ಬೇಡ, ಆದರೆ ಧರ್ಮ ಬೇಕು''[೬] ಎಂಬುದು ಈತನ ಮುಖ್ಯ ವಿಚಾರ. ಧರ್ಮಕ್ಕೆ ಸಮಾಜದಲ್ಲಿ ಉನ್ನತ ಸ್ಥಾನವಿದೆ. ಸುವ್ಯವಸ್ಥಿತವಾದ ಜೀವನ ನಡೆಸಲಿಕ್ಕೆ ಧರ್ಮ ಬಹುಮುಖ್ಯವಾದ ಸಾಧನ. ಸಮಾಜದ ಆರೋಗ್ಯ ಕಾಪಾಡುವುದು ಧರ್ಮದ ಕರ್ತವ್ಯ. ಸಾಮಾಜಿಕರ ಸ್ವಾಸ್ಥ್ಯ, ಸೌಹಾರ್ದ, ಪಾರಸ್ಪರಿಕ ಬಾಂಧವ್ಯಗಳನ್ನು ಉಳಿಸಿ ಬೆಳೆಸಿಕೊಡುವುದು ಧರ್ಮದ ಧರ್ಮವಾಗಿದೆ. ಆದರೆ ದೇವರ ಅಸ್ತಿತ್ವವಿರುವ ಧರ್ಮವು ಸಮಾಜದಲ್ಲಿ ಭಿನ್ನಭಾವಗಳು ಉದಯವಾಗುವಂತೆ ಮಾಡುತ್ತದೆ. 'ದೇವರ ಧರ್ಮ' ಜಾತೀಯತೆಯನ್ನು, ವರ್ಣ ದ್ವೇಷವನ್ನು, ವರ್ಗ ಸಂಘರ್ಷವನ್ನು ಹೆಚ್ಚಿಸುತ್ತದೆ. ದೇವರಿಲ್ಲದ ಧರ್ಮವು ಜನರ ಭಾವುಕತೆಯನ್ನು ಹಾಳುಗೆಡುವುದಿಲ್ಲ. ಆದರೆ ಜಾತಿಯ ಒಗ್ಗಟ್ಟು, ಧರ್ಮದ ಆಚರಣೆಗಳು ಮತ್ತು ಆ ನಿಟ್ಟಿನಲ್ಲಿ ನಡೆಯುವ ಉತ್ಸವಗಳು ಕಡಿಮೆಯಾಗುತ್ತವೆ. ದೇವರಿದ್ದರೆ ಆತನ ಹೆಸರಿನಲ್ಲಿ ನಡೆಯುವ ಅನಾಚಾರಗಳ ಸಂಖ್ಯೆ ಹೆಚ್ಚಾಗುತ್ತವೆ. ವೈಜ್ಞಾನಿಕ ಯುಗದಲ್ಲೂ ದೇವರಿರುವ ಧರ್ಮವನ್ನು ಕಲ್ಪಿಸಿಕೊಂಡಿರುವ ಜನತೆಯನ್ನು ಮೂಢರೆಂದೇ ಕರೆಯಬೇಕಾಗುತ್ತದೆ. ಕೋಂಟ್‌ನು ದೇವರನ್ನು ತೆಗೆದು ಹಾಕಿ ಆ ಸ್ಥಾನದಲ್ಲಿ ಮಾನವೀಯತೆಯನ್ನು ಕೂಡಿಸುವ ಯೋಚನೆ ಮಾಡಿದ್ದಾನೆ. ತನ್ನ ಬೌದ್ಧಿಕತೆಯಿಂದ ಈಗಾಗಲೇ ಏನೆಲ್ಲಾ ಸಾಧನೆ ಮಾಡಿರುವುದರಿಂದ ಮಾನವನು ದೇವತ್ವಕ್ಕೆ ಏರಿದ್ದಾನೆ ಎಂದಿದ್ದಾನೆ. ನಿಸರ್ಗದ ಮೇಲೂ ಹತೋಟಿ ಸಾಧಿಸಿರುವುದರಿಂದ ತನ್ನ ಮನುಷ್ಯತ್ವವನ್ನು ದೇವತ್ವಕ್ಕೇರಿ ಸುವುದರಲ್ಲಿ ತಪ್ಪೇನಿಲ್ಲ. ಮಾನವೀಯತೆಯ ಪೂಜೆ ಮಾನವರಲ್ಲಿ ಏಕತೆಯ ಭಾವವನ್ನು ಬೀರುತ್ತದೆ. ವಿಜ್ಞಾನ ಯುಗದಲ್ಲೂ ಪೂಜೆಯೇ ತಾರಕವಾದ್ದರಿಂದ ಮಾನವರು ತಮ್ಮನ್ನು ತಾವೇ ರೂಪಿಸಿಕೊಳ್ಳಬೇಕಾಗುತ್ತದೆ. ಮಾನವೀಯ ಕರುಣೆ ಅಥವಾ ದಯೆ, ಅನುಕಂಪ ಮೊದಲಾದ ನೈಸರ್ಗಿಕ ಗುಣಗಳು ಮಾನವನ ಉದಾತ್ತತೆಯನ್ನು ಎತ್ತಿ ಹಿಡಿಯುವುದರಿಂದ ಭವಿಷ್ಯದ ಜೀವನವನ್ನು ಹಸನುಗೊಳಿಸುತ್ತವೆ. ಮಾನವೀಯತೆಯ ಧರ್ಮದಿಂದ ಆಗುವ ಪ್ರಯೋಜನವನ್ನು ಆಗಷ್ಟ್ ಕೋಂಟ್ ಅವರು ''ಸಾಂಪ್ರದಾಯಿಕ ಧರ್ಮಗಳು ಜನರಲ್ಲಿ ಏಕಾಂತದ ಹಾಗೂ ಪ್ರತ್ಯೇಕತೆಯ ಭಾವನೆಯನ್ನುಂಟು ಮಾಡುತ್ತವೆ. ಆದರೆ ಮಾನವೀಯತಾ ಧರ್ಮದಲ್ಲಿ ಹೀಗಾಗುವುದಿಲ್ಲ. ಈ ಧರ್ಮವು ವ್ಯಾಪಕವಾಗಿರುವುದರಿಂದ ಸಂಕುಚಿತ ಸಂಘರ್ಷಗಳಿಗೆ ಅವಕಾಶ ಕಲ್ಪಿಸಿಕೊಡಲಾರದು''[೭] ಎಂದು ಹೇಳಿದ್ದಾನೆ. ಇನ್ನೂ ಮುಂದುವರಿದು ಮಾನವತಾವಾದಿಯ ಉದಯದ ಬಗ್ಗೆ ಮಾತನಾಡುತ್ತ 'ಮಾನವತಾವಾದಿಯು ೧೪ನೆಯ ವಯಸ್ಸಿನಲ್ಲಿ ದೀಕ್ಷೆ ಪಡೆದುಕೊಳ್ಳುತ್ತಾನೆ ಹಾಗೂ ೪೨ನೆಯ ವಯಸ್ಸಿನಲ್ಲಿ ಮಾನವೀಯತೆಯ ದಾಸನ ಸ್ಥಿತಿಯನ್ನು ತಲುಪಿ, ೬೩ನೆಯ ವಯಸ್ಸಿಗೆ ನಿವೃತ್ತಿ ಹೊಂದಿ ಮಹಾಜೀವಿ ಪಟ್ಟಕ್ಕೆ ಸೇರುತ್ತಾನೆ' ಎಂದು ಧರ್ಮ ಪುರುಷನ ಕುರಿತು ಹೇಳಿದ್ದಾನೆ. ಕೋಂಟ್‌ನು ಧರ್ಮದ ಪರಿಚಾರಕನ ಬಗ್ಗೆ ಹೇಳುವ ಸಂದರ್ಭದಲ್ಲಿ ಪುರೋಹಿತ ನಾದವನು ಯಾವುದೇ ಒಂದು

ಪುರೋಹಿತ ವರ್ಗಕ್ಕೆ ಸೇರಿರಬಾರದು, ದೇವಶಾಸ್ತ್ರಜ್ಞನಾಗಿರಬಾರದು, ರಾಜಕೀಯ ಅಧಿಕಾರ ಹೊಂದಿರಬಾರದು ಆದರೆ ವಿಜ್ಞಾನಿ ಅಥವಾ ಕಲಾವಿದನಾಗಿರಬೇಕು. ಜಾಗತಿಕ ಮಟ್ಟದಲ್ಲಿ ಸಂಘಟನೆ ಮಾಡುವ ನೈತಿಕ ಅಧಿಕಾರವಿರಬೇಕು. ಜಗತ್ತಿನಲ್ಲಿಯ ಮೂರು ಶ್ರೇಷ್ಠ ಗ್ರಂಥಗಳನ್ನು ಆಯ್ದು (ಅಥವಾ ಎಲ್ಲಾ ಧರ್ಮದ ಮಾನವೀಯ ಅಂಶಗಳನ್ನು ಎತ್ತಿಕೊಂಡು) ಅವುಗಳನ್ನೇ ಹೊಸ ಧರ್ಮದ ಪವಿತ್ರ ಗ್ರಂಥಗಳನ್ನಾಗಿ ಗುರುತಿಸಬೇಕು. ಈ ಸಂಘಟನೆ ಸದಾ ಚಟುವಟಿಕೆಯಿಂದಲೂ, ಸುವ್ಯವಸ್ಥಿತವಾಗಿಯೂ ಇರುವಂತೆ ನೋಡಿಕೊಳ್ಳಲು ಗುಪ್ತಚಾರದ ತಂಡವನ್ನು ನೇಮಕ ಮಾಡಬೇಕು. ಪ್ರಧಾನ ಪುರೋಹಿತನಿಗೆ ಮಾತ್ರ ಹೆಚ್ಚಿನ ಅಧಿಕಾರವನ್ನು ನೀಡಿರಬೇಕು. ಅದೂ ಕೆಲವು ನಿರ್ಬಂಧಗಳನ್ನು ಹೇರಿರಬೇಕಾಗುತ್ತದೆ ಎಂದು ಹೇಳಿದ್ದಾನೆ.

ಕೋಂಟ್‌ನ ಈ ಮಾನವೀಯ ಧರ್ಮವನ್ನು ಥಾಮಸ್ ಹಕ್ಸಲೆ ಎಂಬ ವಿದ್ವಾಂಸನು ಇದು ಕ್ಯಾಥೋಲಿಕ್ ಧರ್ಮದ ಪಡಿಯಚ್ಚಾಗಿದೆ ಎಂದು ದೂರಿದ್ದಾನೆ. ಇನ್ನೂ ಕೆಲವರು 'ದುರಭಿಮಾನದ ಧರ್ಮ'ವೆಂದು ಟೀಕಿಸಿದ್ದಾರೆ.

ಒಟ್ಟಿನಲ್ಲಿ ಕೋಂಟ್‌ನ ಈ 'ಮಾನವತಾಧರ್ಮ'ವು ರೂಪುಗೊಂಡಿದ್ದೇ ಆಗಿದ್ದರೆ ವಿಶ್ವದ ಧಾರ್ಮಿಕ ಪರಿನಿಯಮ ತುಂಬಾ ವಿಶ್ವಾಸನೀಯವೂ, ಸುಭಿಕ್ಷವೂ ಆದ ಏಕ ಸಮಾಜ ಧರ್ಮವಾಗುತ್ತಿತ್ತು. ಮಾನವನಲ್ಲಿನ ವರ್ಣದ್ವೇಷ, (ಮೇಲು-ಕೀಳು, ಬಡವ-ಬಲ್ಲಿದ) ವರ್ಗ ಸಂಘರ್ಷ, ದೇಶ ದೇಶಗಳ ಕಲಹ ಮೊದಲಾದ ಅಪಮೌಲ್ಯಗಳು ಕಣ್ಮರೆಯಾಗುತ್ತಿದ್ದವು. 'ಸಮಾಜವಾದಿ ಧರ್ಮ'ಎಂತಲೂ ಕರೆದಿದ್ದರಿಂದ ಇದು ಯಾವುದೇ ಒಂದು ದೇಶದ ಸಮಾಜಕ್ಕೆ ಸೀಮಿತವಾಗದೆ ಇಡೀ 'ವಿಶ್ವ ಸಮಾಜದ ಧರ್ಮ'ವಾಗುತ್ತಿತ್ತು.

ಜಗತ್ತಿನ ಪ್ರತಿಯೊಂದು ಧರ್ಮವೂ ಮಾನವವಾದವನ್ನು ಸಹಜವಾಗಿ ಅಳವಡಿಸಿಕೊಂಡಿವೆ. ಮಾನವನನ್ನು ಬಿಟ್ಟು ಯಾವ ಧರ್ಮವೂ ಇಲ್ಲವಾದುದರಿಂದ ಅವು ಧರ್ಮಕ್ಕೆ ಅವಶ್ಯನಾಗುತ್ತಾನೆ. ಹಿಂಸೆಯನ್ನು ಮಾಡಬೇಡ -ಅಹಿಂಸೆಯನ್ನು ಆರಾಧಿಸು, ಪ್ರತಿಯೊಬ್ಬರನ್ನು ಪ್ರೀತಿಸು-ಸತ್ಕರ್ಮಿಗಳನ್ನು ಮಾತ್ರ ದೇವರು ಪ್ರೀತಿಸುತ್ತಾನೆ, ಆಸೆ ದುಃಖಕ್ಕೆ ಮೂಲ, ಧರ್ಮವೇ ಮಾನವನ ಏಳಿಗೆಯ ನಿಚ್ಚಣಿಕೆ- ಸಮಾಜದ ಕಾನೂನು, ಧರ್ಮದಿಂದಲೇ ವಿಶ್ವಕ್ಕೆ ಶಾಂತಿ ಎಂಬ ಮೊದಲಾದ ಧೋರಣೆಗಳನ್ನು ಹೊಂದಿರುವ ಧರ್ಮಗಳು ಜಗತ್ತಿನಲ್ಲಿ ಅನೇಕ. ಹಿಂದೂ, ಬೌದ್ಧ, ಜೈನ, ಕ್ರೈಸ್ತ, ಮುಸ್ಲಿಂ - ಈ ಎಲ್ಲಾ ಧರ್ಮಗಳ ಕೇಂದ್ರ ಮಾನವನೇ ಆಗಿದ್ದಾನೆ. ಮಾನವ ತನ್ನನ್ನು ಕೇಂದ್ರ ಮಾಡಿಕೊಳ್ಳುವುದರ ಮೂಲಕ ಮಾನವೀಕರಣವನ್ನು ಸಾಧಿಸಲು ಯತ್ನಿಸುತ್ತಾನೆ. ಮುಸ್ಲಿಂ ಧರ್ಮದ ಕೆಲವೊಂದು ನಿಯಮಗಳು ಮಾನವೀಕರಣಕ್ಕೆ ವಿರೋಧವಾಗಿವೆ. ಶರಿಯತ್, ತಲಾಕ್, ಬಹಿಷ್ಕಾರ, ಪ್ರಾಣಿ ಬಲಿ - ಈ ಕೆಲವು ಆಚರಣೆಗಳು ಮಾನವೀಕರಣಕ್ಕೆ ಸಹಕಾರಿಯಾಗಿಲ್ಲ. ಉಳಿದಂತೆ ಕ್ರೈಸ್ತ ಧರ್ಮದ ಹತ್ತು

ಒಡಂಬಡಿಕೆಗಳು, ಹಿಂದೂ ಧರ್ಮದ ಆಚರಣೆಗಳು.[೮] ಜೈನಧರ್ಮದ ಅಹಿಂಸಾ ತತ್ವಗಳು ಮಾನವೀಯತೆಯನ್ನು ಎತ್ತಿ ಹಿಡಿಯುತ್ತದೆ. ಈ ಮೊದಲಾದ ಅಂಶಗಳನ್ನು ಗಮನಿಸಿದರೆ ಪ್ರತಿ ಧರ್ಮದ್ದೂ ಒಂದು ಮಾನವತಾವಾದವಿದೆ ಎಂದು ತಿಳಿಯುತ್ತದೆ.

## ವೈಚಾರಿಕ ಮಾನವತಾವಾದ - ಮಾನವತಾವಾದದ ವೈಚಾರಿಕತೆ

ಮಾನವನ ಸ್ವಭಾವದಲ್ಲಿ ಸಾರಗೊಂಡಿರುವ ಮುಖ್ಯಾಂಶವೆಂದರೆ ವೈಚಾರಿಕತೆ (Rationality). ವ್ಯಕ್ತಿಗೆ ತನ್ನ ವ್ಯಕ್ತಿತ್ವದ, ತನ್ನ ಕುಟುಂಬದ, ತನ್ನ ಸಮಾಜದ ಹಾಗೂ ತನ್ನ ದೇಶ - ವಿಶ್ವದ ಬಗ್ಗೆ ಮೂಡುವ ಪ್ರಜ್ಞೆಯ ವಿಚಾರಪರತೆಯ ದೃಷ್ಟಿಕೋನ ಅವನ ಬಾಳಿನಲ್ಲಿ ಮಹತ್ವದ್ದಾಗುತ್ತದೆ. ವ್ಯಕ್ತಿಯ ಬೌದ್ಧಿಕ ಬೆಳವಣಿಗೆಯು ಅವನ ನಿತ್ಯದ ವ್ಯಾವಹಾರಿಕ ಕಾರ್ಯಗಳನ್ನು ಅವಲಂಬಿಸಿದೆ. ನಿರಂತರವಾದ ಯಾಂತ್ರಿಕ ಜೀವನದಿಂದ ಏಕತಾನತೆಯ ಕೆಲಸಗಳಲ್ಲಿ ತೊಡಗಿಕೊಂಡಿದ್ದರೆ ಅವನ (I.Q) ಬೌದ್ಧಿಕ ಚಾಣಕ್ಷತೆಯೂ ಜಿಡ್ಡುಗಟ್ಟಿ ಹೋಗುತ್ತದೆ. ಹಳೆಯ ವಿಷಯಗಳಲ್ಲಿಯೇ ಕೊಳೆಯುತ್ತದೆ. ಜಗತ್ತಿನಲ್ಲಿ ದಿನೇ ದಿನೇ ನವೀನ ವಿಷಯಗಳನ್ನು ಆವಿಷ್ಕಾರ ಮಾಡುತ್ತ ಸ್ಪರ್ಧಾತ್ಮಕವಾಗಿ ನಾಗಾಲೋಟದಲ್ಲಿ ಓಡುತ್ತಿರುವ ದಿನಮಾನಗಳು ಪ್ರತಿದಿನವೂ ವೈಶಾಲ್ಯತೆಯನ್ನು ಪಡೆಯುತ್ತದೆ. ಇದಕ್ಕೆ ಮಾನವನ ಮೆದುಳು ಸಕಾರತ್ಮಕವಾಗಿ ಸ್ಪಂದಿಸಿದರೆ ಅದು ಬೌದ್ಧಿಕತೆಯ ಬೆಳವಣಿಗೆ ಮತ್ತು ವೈಚಾರಿಕ ಪ್ರಜ್ಞೆಯ ವಿಕಾಸವಾಗುತ್ತದೆ. ಇದಕ್ಕೆ ತದ್ವಿರುದ್ಧವಾಗಿ ಸಾಗಿದರೆ ಅವೈಜ್ಞಾನಿಕವಾದ ಅಥವಾ ಪರಂಪರೆಯಿಂದ ಪ್ರಣೀತವಾದ ಮೌಢ್ಯತೆಗಳಲ್ಲಿಯೇ ಅವಸಾನ ಹೊಂದಬೇಕಾಗುತ್ತದೆ. ವೈಚಾರಿಕ ಮಾನವತಾವಾದವು ನಿತ್ಯದ ಸೂಕ್ಷ್ಮತೆಗಳಿಗೆ ಮತ್ತು ಇತಿಹಾಸದ ಘಟನೆಗಳಿಗೆ ವೈಚಾರಿಕತೆಯ ಒರೆಗಲ್ಲಿನೊಂದಿಗೆ ತಿಕ್ಕಿ ತನ್ನ ಜೀವನಕ್ಕೆ ಬೆಸೆದುಕೊಳ್ಳಲು ಪ್ರಯತ್ನಿಸುತ್ತದೆ. ವ್ಯಕ್ತಿಯ ಮಾನಸಿಕ ಸ್ಥಿತಿಯು ಸಮಾಜದಲ್ಲಿನ ಚಟುವಟಿಕೆಗಳೊಂದಿಗೆ ಹೊಂದಿಕೊಳ್ಳುವುದರ ಜೊತೆಗೆ, ತನ್ನ ಪಾಲಿನ ಕೆಲಸವನ್ನು ನಿರ್ವಹಿಸಿ ಸಮಾಜಕ್ಕೆ ಮಹತ್ವದ ತೀರ್ಮಾನವನ್ನು ಕೊಡಬೇಕಾಗುತ್ತದೆ. ವ್ಯಕ್ತಿಯಲ್ಲಿನ ವೈಚಾರಿಕತೆಯು ಭವಿಷ್ಯವನ್ನು ಆಶಾದಾಯಕವಾಗಿ ಸ್ವೀಕರಿಸುತ್ತದೆಯೇ ಹೊರತು ಸಮಾಜವನ್ನಲ್ಲ. ವ್ಯಕ್ತಿಯ ವೈಚಾರಿಕತೆ 'ವ್ಯಕ್ತಿಗಳಿಗೆ' ತಲುಪಿ ಸಮಾಜದ ನೆಲೆಗೆ ಸಾಗುತ್ತದೆ. ಸಮಾಜದ ಹಿಂದಿನ ರೂಢಿ ನಿಯಮಗಳನ್ನೆ ತನ್ನ ಹಾಗೂ ತನ್ನ ನಂತರದ ಪೀಳಿಗೆಗೂ ಉರುಳಿಸುತ್ತಾ ಸಾಗಿದರೆ ಅದು ಅವಿಚಾರಿಗಳ ಸಮಾಜವಾಗುತ್ತದೆ. ವೈಚಾರಿಕ ಮಾನವತಾವಾದವು ವಿಚಾರ ಪ್ರಧಾನವಾಗಿರುವುದರಿಂದ ಬದಲಾಗುತ್ತಿರುವ ಸಾಮಾಜಿಕ ಜೀವನಕ್ಕೂ ಭವಿಷ್ಯತ್ತಿನ ಸದಾಶಯಗಳಿಗೂ ಉತ್ತಮ ಸಿದ್ಧಾಂತವಾಗಿದೆ. ಎಂ. ಎನ್. ರಾಯ್ ಅವರು ಮಂಡಿಸಿದ ನವ ಮಾನವತಾವಾದ ವೈಚಾರಿಕತೆಯಲ್ಲಿ ಚಾಚಿಕೊಂಡಿದೆ.

ಮಾನವತಾವಾದಿಯು ತನ್ನ ಸಮಕಾಲೀನ ಪ್ರಶ್ನೆಯನ್ನು ಸಮಾಜದಲ್ಲಿ ತೊಡಗಿಸುವ ಅಥವಾ ಆ ನಿಟ್ಟಿನಲ್ಲಿ ಯೋಚಿಸುವ ಜವಾಬ್ದಾರಿಯನ್ನು ಹೊತ್ತಿರುತ್ತಾನೆ. ಮಾನವತಾವಾದವು ವೈಚಾರಿಕತೆಯನ್ನು ಪ್ರತಿನಿಧಿಸುವುದರಿಂದ ಸಮಾಜದಲ್ಲಿ ಉತ್ತಮವಾದ ವಿಚಾರ ಪದ್ಧತಿಯೂ ಬೆಳೆಯುತ್ತದೆ ಹಾಗೂ ಹಳೆಯ ಅಥವಾ ಅವೈಜ್ಞಾನಿಕ ಎನ್ನಬಹುದಾದ ಮೂಢನಂಬಿಕೆಗಳನ್ನು ವಿನಾಶ ಮಾಡಬಹುದು.

## ಮಾನವತವಾದದ ಲಿಂಗ ಸಮಸ್ಯೆ

ಮಾನವತಾವಾದದ ಒಂದು ಬಹುಮುಖ್ಯವಾದ ಲಕ್ಷಣವೆಂದರೆ ಯಾವುದೇ ವ್ಯಕ್ತಿಯ ನಡುವೆ ಲಿಂಗ ಭೇದವನ್ನು ಅನುಸರಿಸುವಂತಿಲ್ಲ. ಪ್ರತಿಯೊಬ್ಬ ವ್ಯಕ್ತಿಯೂ ಸಮಾನ. ವಾಸ್ತವದಲ್ಲಿ ಸ್ತ್ರೀ-ಪುರುಷ ಎಂಬ ಎರಡು ಲಿಂಗಗಳನ್ನು ಅನುಸರಿಸಲಾಗುತ್ತದೆ. ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ವಲಯಗಳಲ್ಲಿ ಸ್ತ್ರೀ-ಪುರುಷರನ್ನು ಪ್ರತ್ಯೇಕವಾಗಿ ಗುರುತಿಸಿದಂತೆ ಈ ಮಾನವೀಕರಣದ ಸಂದರ್ಭದಲ್ಲಿ ಗುರುತಿಸಲಾಗುವುದು. ಇಬ್ಬರೂ ಒಂದೇ ಎಂದರೆ 'ಮಾನವ' ಆಗುತ್ತಾರೆ. ಸ್ತ್ರೀಯನ್ನು ಸಮಾಜದಲ್ಲಿ ಕಾಣುವ ರೀತಿ ಮತ್ತು ಅವಳನ್ನು ದುಡಿಮೆಯಲ್ಲಿ ಬಳಸಿಕೊಳ್ಳುವಲ್ಲಿ ಅಸಮಾನತೆ ಯನ್ನು ಕಾಣುತ್ತೇವೆ. ಈ ಅಸಮಾನತೆಯನ್ನು ಎಲ್ಲ ಬರಹಗಾರರು ಅರಿತೋ ಅಥವಾ ಅರಿಯದೆಯೋ ಕೃತಿಗಳಲ್ಲಿ ನಿರೂಪಿಸಿದ್ದಾರೆ. ಇದು ಮಾನವತಾವಾದದ ಅಸಹಾಯಕತೆಯೇ ಸರಿ. ಕಾರಂತರ ಕೆಲವು ಕಾದಂಬರಿಗಳಲ್ಲಿ ಈ ಅಸಮಾನತೆ ದೂರವಾಗಿದೆ. ಸ್ತ್ರೀ-ಪುರುಷ ಒಂದೇ ಪಾತಳಿಯಲ್ಲಿ ಬಾಳುತ್ತಾರೆ. ಬದುಕುತ್ತಾರೆ. ಕಾರಂತರು ಸ್ತ್ರೀ-ಪುರುಷ ಎಂಬ ಭೇದ ತೋರದೆ ಹೆಣ್ಣು-ಗಂಡುಗಳ ಕಷ್ಟ ಕೋಟಲೆಯನ್ನು ಮರೆಯಿಸಿ ಕುಸಿಯುತ್ತಿರುವ ಸಮಾಜದ ಆಧಾರ ಸ್ಥಂಭಗಳೆಂಬಂತೆ ಚಿತ್ರಿಸಿದರು. ಆದಿ ಮಾನವನಿಂದ ಹಿಡಿದು ಪ್ರಮುಖ ಬೆಳವಣಿಗೆಯ ಘಟ್ಟಗಳಲ್ಲಿ, ಮಾನವ ಮನೋದೇಹಿಯಾಗುವ ಸಂದರ್ಭಗಳನ್ನು ಗಂಡು-ಹೆಣ್ಣೆಂಬ ಭೇದವಿಲ್ಲದೆ ನಿರೂಪಿಸಿದ್ದಾರೆ. ಜಾಗತಿಕ ಮಟ್ಟದಲ್ಲಿ ಥಾಮಸ್ ಹಾರ್ಡಿಯವರಿಗೆ ಸಮನಾಗಬಲ್ಲ, ಭಾರತೀಯ ಭಾಷೆಯ ಯಾವುದೇ ಸಾಹಿತಿಗಳಿಗಿಂತ ಭಿನ್ನವಾಗಬಲ್ಲ ವಿಚಾರ ಅವರಲ್ಲಿದೆ. "ಮಾನವ" ಎಂಬ ಪದ ಉಂಟಾದುದೇ ಅವನಲ್ಲಿ ದೇಹಕ್ಕಿಂತ ಪ್ರಧಾನವಾದ 'ಮನಸ್ಸು' ಎಂಬ ಮತ್ತೊಂದು ಸಂಪತ್ತಿದೆ ಎಂಬ ಕಾರಣದಿಂದ. ಆ ಮನಸ್ಸಿಗೆ ಯಥೋಚಿತ ಸಂವೇದನೆಗಳಿವೆ, ಸ್ಮರಣೆಗಳಿವೆ. ವಿವಿಧ ಭಾವ ವಿಲಾಸಗಳಿವೆ. ಅವು ಅವನನ್ನು ಅನ್ಯ ಪ್ರಾಣಿಗಳಿಗಿಂತ ಹೆಚ್ಚಿನ ವ್ಯಕ್ತಿಯನ್ನಾಗಿ ನಲಿಯಿಸಬಲ್ಲವು"[೯]

## ಧರ್ಮನಿರಪೇಕ್ಷ ಮಾನವತಾವಾದ (Secular Humanism)

ಬುದ್ಧಿಯ ಅತ್ಯುನ್ನತ ಮಟ್ಟವನ್ನು ಸಾಧಿಸಿ ಮೇಲುಸ್ತರವನ್ನು ಆಕ್ರಮಿಸಿದವರು ಧರ್ಮನಿರಪೇಕ್ಷಿ ಮಾನವತಾವಾದಿಗಳು. ಇವರು ಸಂದೇಹವಾದಿಗಳು, ಐಂದ್ರಿಯಕ ಹಾಗೂ ಪುರಾವೆಗಳನ್ನುಳ್ಳ ತಿಳಿವನ್ನು

ಮಾತ್ರ ನಂಬುವವರು. ಇವರ ಒಳಬಗೆಗಳೇನೇ ಇರಲಿ ಒಟ್ಟಾರೆಯಾಗಿ ಧಾರ್ಮಿಕ ಅನುಭವವನ್ನು ತರ್ಕಬದ್ಧವಾದುದೆಂದಾಗಲೀ, ಅತೀಂದ್ರಿಯ ಅಪೇಕ್ಷೆಗಳನ್ನು ನೈತಿಕವೆಂದಾಗಲಿ ನಂಬುವುದಿಲ್ಲ. ಈ ಅಲ್ಪಸಂಖ್ಯಾತ ಉನ್ನತ ವರ್ಗದವರ ಸುತ್ತ ದೂರದಲ್ಲಿ ಅಸಂಖ್ಯಾತ ಜನಸಮುದಾಯವಿದೆ. ದೈನಿಕಗಳಲ್ಲಿ ಕಲ್ಪಕತೆ, ಪವಾಡ, ಗೂಢತೆ, ಸ್ವತಃ ಮೋಕ್ಷ ಮುಂತಾದವುಗಳಲ್ಲಿ ತಲ್ಲೀನರಾದ ಜನರಿವರು. ಈ ಪರಿಸ್ಥಿತಿಯಲ್ಲಿ ಇತ್ತೀಚಿನ ಬದಲಾವಣೆ ಎಂದರೆ ಅಲ್ಪಸಂಖ್ಯಾತ ಸ್ತರದ ಎಷ್ಟೋ ಚಿಂತಕರು, ಕಲಾವಿದರು, ಬುದ್ಧಿಜೀವಿಗಳು ಪಕ್ಷಾಂತರ ಮಾಡಿ ದಾರ್ಶನಿಕರನ್ನು, ಪವಾಡಿಗರನ್ನು ಹುಡುಕುತ್ತಾ ಹೊರಟಿದ್ದಾರೆ. ಲೌಕಿಕ ಬದುಕಿನ ಲೋಲುಪತೆಗೆ ಎಣೆ ಇಲ್ಲದ ಅವಕಾಶಗಳನ್ನು ತಂದುಕೊಟ್ಟ ಕಾರಣದಿಂದ ಮಾತ್ರ ಇನ್ನೂ ವೈಜ್ಞಾನಿಕ ಪ್ರಗತಿಗೆ ಜೋತು ಬೀಳಲಾಗಿದೆ. ಉಳಿದಂತೆ ಒಲವು ಇನ್ನೊಂದು ಕಡೆಗೆ ಹರಿದಿದೆಯಷ್ಟೇ.

ಧರ್ಮನಿರಪೇಕ್ಷಿ ಮಾನವತಾವಾದದ ಮಠೀಯ ಗುಣ ಮನುಷ್ಯ ಆಧುನಿಕ ಕಾಲದಿಂದಲೂ ತರ್ಕಗಮ್ಯವಲ್ಲದ್ದನ್ನು ನಂಬುವ ಅದರಲ್ಲಿ ಶ್ರದ್ಧೆಯನ್ನು ಬೆಳೆಸಿಕೊಳ್ಳುವ ಪ್ರವೃತ್ತಿಯನ್ನು ಹೊಂದಿದ್ದಾನೆ. ವೈಜ್ಞಾನಿಕ ಪ್ರಗತಿಯೂ ಈ ಪ್ರವೃತ್ತಿಯನ್ನು ಪೂರ್ಣವಾಗಿ ನಿಷ್ಕ್ರಿಯೆಗೊಳಿಸಿಲ್ಲ. ವೈಜ್ಞಾನಿಕ ಚಿಂತನೆಗೆ ತಮ್ಮನ್ನು ಒಪ್ಪಿಸಿಕೊಂಡವರು ಈ ಆದಿಮ ಪ್ರವೃತ್ತಿಗೆ ಮೊರೆ ಹೋಗುತ್ತಿದ್ದಾರೆ. ಜನರಲ್ಲಿ ಈ ಆದಿಮ ಪ್ರವೃತ್ತಿ ಅಡಗದೇ ಇರುವುದಕ್ಕೆ ಮಾನವತಾವಾದದ ಮೌಲ್ಯಗಳೇ ಕಾರಣವೆನ್ನಬಹುದು. ಸಮಕಾಲೀನ ಸಂದರ್ಭದಲ್ಲಿ ಈ ಮಾನವತಾವಾದ ತಂದುಕೊಟ್ಟಿರುವ ಜೀವನ ಘನತೆಯನ್ನು ಮರೆಯದೇ ಅದರಿಂದ ಉಂಟಾಗುವ ಇತರ ಪರಿಣಾಮಗಳನ್ನು ಗಮನಿಸಬೇಕು.

ಮನುಷ್ಯನಲ್ಲಿ ಈ ಅತೀಂದ್ರಿಯ ಹಾಗೂ ತರ್ಕಾತೀತವಾದುದರ ಕಡೆಗೆ ಇರುವ ತುಯ್ತವನ್ನು ಅವನ ಅವಶ್ಯಕತೆಗಳಲ್ಲಿ ಒಂದೆಂದು ಸಾಮಾನ್ಯವಾಗಿ ಭಾವಿಸಲಾಗಿದೆ. ಇದು ಅವನ ಸೃಜನಾತ್ಮಕ ಹಾಗೂ ನೈತಿಕ ಶಕ್ತಿಗಳ ಹಿಂದಿನ ಪ್ರೇರಣೆಗಳಲ್ಲಿ ಒಂದೆಂದೂ ಸಹ ತಿಳಿಯಲಾಗಿದೆ. ಮಾನವತಾ ವಾದವು ಯೂರೋಪಿನ ಜನದೂರ, ಮಠೀಯ ವ್ಯವಸ್ಥೆಯ ವಿರುದ್ಧ ದನಿಯೆತ್ತುವ ಭರದಲ್ಲಿ ಇನ್ನೊಂದು ಅತಿರೇಕಕ್ಕೆ ಹೋಗಿ, ಮನುಷ್ಯನ ಈ ಅವಶ್ಯಕತೆಯನ್ನು ದಮನಗೊಳಿಸಬೇಕೆನ್ನುವ ನಿಲುವನ್ನು ತಳೆದಿದೆ.

ವಾಸ್ತವವನ್ನು ಮೀರಬೇಕೆನ್ನುವ ಮನುಷ್ಯನಲ್ಲಿರುವ ಸಾಮಾನ್ಯ ಬಯಕೆಗೆ ತಕ್ಕ ಮಾರ್ಗದರ್ಶನ ವಿಲ್ಲದಂತಾಗಿದೆ. ದಿಕ್ಕುಗೆಟ್ಟು ತೋಚಿದ ಆದಿಗಳತ್ತ ಅಡ್ಡಾಡುವಂತಾಗಿದೆ. ರೋಚಕವಾದುದೆಲ್ಲವನ್ನೂ ಆಧ್ಯಾತ್ಮವೆಂದು ಭಾವಿಸುವುದು, ಅಸ್ಪಷ್ಟವಾದುದೆಲ್ಲ ಗಹನವಾದುದೆಂದು ತಿಳಿಯುವುದು ನಡೆದಿದೆ. ಚಿತ್ತವೈಕಲ್ಯದ ತಿಪ್ಪರಲಾಗಗಳನ್ನು ಅಂತರ್ ಬೋಧೆಯೆಂದು ವಾದಿಸಲಾಗುತ್ತದೆ. ಮರೆತು ಹೋದ ಧರ್ಮಗಳು ಪುನರುತ್ಥಾನಗೊಳ್ಳುತ್ತಿವೆ. ಅಸಹನೆ ತುಂಬಿದ ಪ್ರತಿಗಾಮಿ ಧೋರಣೆಯ ಕಣ್ಕಟ್ಟಿನ

ಹಾದಿಯತ್ತ ಹೆಜ್ಜೆಯಿಡುವುದು ಇಂದು ಸುಲಭದ ಮಾರ್ಗವಾಗಿದೆ. ಧಮನಗೊಂಡ ಈ ಬಯಕೆಯು ಎಲ್ಲ ಬೌದ್ಧಿಕ ಹಾಗೂ ನೈತಿಕ ವಿವೇಕಗಳನ್ನೂ ಪಡೆದುಕೊಂಡು ಕತ್ತಲಿನ ಕೂಪಕ್ಕೆ ಬಿದ್ದು ವಿನಾಶಕಾರಿಯಾದ ಹಂತವನ್ನು ತಲುಪುತ್ತದೆ.

ಧರ್ಮನಿರಪೇಕ್ಷ ಮಾನವತಾವಾದಿಗಳು, ಹೀಗೆ ತೋಚಿದ ಹಾದಿ ಹಿಡಿದು ಹೊರಟವರನ್ನು ಟೀಕಿಸುವುದನ್ನು ಮುಂದುವರಿಸುವರು. ತೊಟ್ಟಿಯಲ್ಲಿ ಸಿಕ್ಕಿದನ್ನು ತಿನ್ನುವವನಿಗೆ, ಒಳ್ಳೆಯ ಆಹಾರ ಕೊಡುವ ಬದಲು ಹಾಗೇ ತಿನ್ನುವುದನ್ನೂ ಟೀಕಿಸಿದಂತಾಗಿದೆ. ಈ ಟೀಕಿಯಷ್ಟೇ ಸಾಲದು. ಮನುಷ್ಯನ ಈ ಚಿತ್ತದ ಓಟ ಎತ್ತ ಸಾಗುವುದು ಬಲ್ಲವರಾರು? ವಿಲಿಯಂ ಬ್ಲೇಕ್‌ನು ಹೇಳಿದ್ದು ಇದೇ ತಾನೆ. ''ಮನುಷ್ಯನಿಗೆ ಯಾವುದಾದರೊಂದು ಧರ್ಮ ಬೇಕೇ ಬೇಕು. ಅದು ಸೈತಾನನ ಧರ್ಮವಾದರೂ ಸರಿ''.....

....ಧರ್ಮನಿರಪೇಕ್ಷಿ ಮಾನವತಾವಾದವು, ಎಲ್ಲ ಬಗೆಯ ಶ್ರೇಣಿಕರಣಗಳನ್ನು ಪ್ರಶ್ನಿಸಿದೆ. ಈ ಹಂತವನ್ನು ದಾಟಿದ ಸಮಾಜದಲ್ಲಿ ಪ್ರಜಾಪ್ರಭುತ್ವದ ಆಪೇಕ್ಷೆಗಳು ಬೇರು ಬಿಡುತ್ತವೆ. ಇಂಥಲ್ಲಿ ಅನಿವಾರ್ಯವಾಗಿ ಮಧ್ಯವರ್ತಿಗಳನ್ನು ನಿರಾಕರಿಸುವ ಪ್ರವೃತ್ತಿಗಳು ಬಲವಾಗುತ್ತವೆ. ಹೀಗೆ ಬಲವಾಗದೇ ಹೋದರೆ, ಇರುವುದನ್ನೇ ಒಪ್ಪುತ್ತಾ ಹೋದರೆ ಏನಾಗುತ್ತದೆ?. ಹೊಸ ಬಗೆಯ ಪುರೋಹಿತಶಾಹಿ ರೂಪುಗೊಳ್ಳುತ್ತದೆ. ರಾಜ್ಯ, ಪಕ್ಷ, ನಾಯಕ ಇವರು ಅಧಿಕಾರದ ಕೇಂದ್ರಗಳಾಗಿ ಬಿಡುತ್ತಾರೆ. ಸರ್ವಾಧಿಕಾರದ ಆಚರಣೆಗಳು ಧಾರ್ಮಿಕ ಅರ್ಥಗಳನ್ನು ಪಡೆದುಕೊಳ್ಳುತ್ತವೆ. ಕೈಗಾರಿಕೀಕರಣಗೊಂಡ ಸಮಾಜ ತನ್ನ ಒಂದು ಇಕ್ಕಟ್ಟಿನ ವೇಳೆಯಲ್ಲಿ ಯಾವುದಾದರೂ ಒಂದು ಧರ್ಮಕ್ಕೆ, ಅದು ಸೈತಾನನ ಧರ್ಮವೇ ಆಗಿರಲ್ಲೊಲ್ಲದೇಕೆ?, ಜೋತು ಬೀಳುವುದು. ತಮ್ಮನ್ನೇ ಬಲುಪಶುಗಳನ್ನಾಗಿ ಮಾಡಿಕೊಳ್ಳುವ ಮೋಹದಿಂದ ಜನತೆ ಬಿಡುಗಡೆ ಪಡೆಯುವುದು ಕಷ್ಟವಾಗುತ್ತದೆ.''[೧೦]

## ಸಮಗ್ರ ಮಾನವತಾವಾದ (ನವ ಮಾನವತಾವಾದ)

ಭಾರತದ ರಾಜಕೀಯ, ಸಾಮಾಜಿಕ, ಆರ್ಥಿಕತೆಯ ಸಂದರ್ಭದಲ್ಲಿ ಎಂ.ಎನ್. ರಾಯ್ ಅವರು ಮಂಡಿಸಿದ ಮಹತ್ವಪೂರ್ಣ ವಿಚಾರಗಳಲ್ಲೊಂದಾದ 'ಸಮಗ್ರ ಮಾನವತಾವಾದ' ಸಿದ್ಧಾಂತವು ರಾಜಕೀಯದಲ್ಲಿನ ಕುಟಿಲತೆಯನ್ನು, ಸಮಾಜದಲ್ಲಿನ ಅಸಮಾನತೆಯನ್ನು, ಆರ್ಥಿಕತೆಯಲ್ಲಿನ ಏರುಪೇರಿನ ಬಿಕ್ಕಟ್ಟುಗಳನ್ನು ಸಮಾನ ಪರಿಪ್ರೇಕ್ಷದಲ್ಲಿಟ್ಟು ನೋಡಲು ಪ್ರಾರಂಭಿಸಿತು. ರಾಜಕೀಯದಲ್ಲಿ ಜನತೆಯಿಂದ ಆರಿಸಿ ಬಂದ ಜನನಾಯಕರು ಐದು ವರ್ಷಗಳ ಕಾಲ ತಮ್ಮ ಜನತೆಯನ್ನು ಮರೆಯುತ್ತಾರೆ. ಅಂತಹ ಮರೆಗುಳಿ ನಾಯಕರನ್ನು ತಮ್ಮ ಅಮೂಲ್ಯವಾದ ಮತವನ್ನು ಮತ್ತೆ ಚಲಾಯಿಸಿ ಹಿಂದಕ್ಕೆ ಕರೆಸಿಕೊಳ್ಳುವಂತಹ ಪದ್ಧತಿಯನ್ನು, ಜಾರಿಗೊಳಿಸಬೇಕು. ಇದನ್ನು 'Right to Recall' ಎಂಬ

ಹಕ್ಕನ್ನಾಗಿ ಪ್ರತಿಪಾದಿಸಿದರು. 'ಜನತಾ ಸಂವಿಧಾನ'ವನ್ನು ನಿರೂಪಿಸಿ ದರು. ಈ ವ್ಯವಸ್ಥೆ ಜಾರಿ ಬಂದರೆ ಯಾವೊಬ್ಬ ರಾಜಕಾರಣಿಯೂ ತಮ್ಮ ಕ್ಷೇತ್ರದ ಜನತೆ ಹಾಗೂ ಜನತೆಯ ಸಮಸ್ಯೆಗಳನ್ನು ಮರೆಯುವುದಿಲ್ಲ ಎನ್ನುವುದು ಎಂ.ಎನ್.ರಾಯ್ ಅವರ ವಾದ. ಅದೇ ರೀತಿ ಸಮಾಜದಲ್ಲಿ ಕೆಲವೇ ಜನರು ತಮ್ಮ ಮುಷ್ಠಿಯಲ್ಲಿ ಜನತೆಗೆ ಬೇಕು-ಬೇಡಗಳನ್ನು ನಿರ್ಧರಿಸುವುದು ತಪ್ಪು, ಜನತೆಗೆ ಬೇಕಾದದ್ದನ್ನು ಅವರೇ ಕಂಡುಕೊಳ್ಳುವಂತಾಗಬೇಕು ಎನ್ನುತ್ತಾರೆ. ಆರ್ಥಿಕತೆಯ ವಿಷಯದಲ್ಲಿ ಕೂಡ ರಾಯ್ ಅವರು ಜನತೆಯ ಜೀವನ ವೆಚ್ಚ ಏರುಪೇರಿನದಾಗಿದೆ. ಸಮಾನ ನೆಲೆಯಲ್ಲಿರಬೇಕು ಎನ್ನುತ್ತಾರೆ. ಅಂದರೆ ಬಡವ-ಬಲ್ಲಿದರಲ್ಲಿನ ಜೀವನ ಮಟ್ಟದ ಬೇಧ ಇಂದಿನ ಜಗತ್ತಿನಲ್ಲಿ ತೀರಾ ಅಂತರವನ್ನು ಸೃಷ್ಟಿಸಿದೆ. ಅಲ್ಲದೆ ಹೆಣ್ಣು-ಗಂಡುಗಳ ನಡುವಿನ ಜೀವನ ಮಟ್ಟವು ಸಹ ಭಿನ್ನವಾಗಿದೆ. ಈ ಬಿಕ್ಕಟ್ಟು ಇರದೆ ಸಮವಾಗಿರಬೇಕು ಎನ್ನುವುದು ಅವರ ವಾದದ ತಿರುಳು.

''ಮೊದಲಿನ ಮಾನವತಾವಾದಿ ವಿಚಾರ ಒಂದು ಕುರುಡುಗಲ್ಲಿಯನ್ನು ಸೇರಿ ದಾರಿ ಸಾಗದ ಸ್ಥಿತಿಯಲ್ಲಿ ಉಳಿದು ಬಿಟ್ಟಿದೆ. ಯೂರೋಪಿಯನ್ ರಿನೇಸ್ಸಾನ್ಸ್ ದಿನಗಳಿಂದೀಚೆ ನಮಗೆ ಸಿಕ್ಕಿದ ಎಲ್ಲ ಜ್ಞಾನದ ಬೆಂಬಲದಿಂದ ಮಾತ್ರ ನಾವು ಈ ಸ್ಥಿತಿಯಿಂದ ಹೊರಗೆ ಬರುವ ದಾರಿ ಕಂಡುಕೊಳ್ಳುವುದು ಸಾಧ್ಯವಿದೆ''[೧೧] ಎಂದು ಹಿಂದಿನ ಮಾನವತವಾದದ ವಿಚಾರವನ್ನು ಅಸಮಂಜಸ ಎಂದಿದ್ದಾರೆ. ''ಮನುಷ್ಯ-ಸ್ವಭಾವವನ್ನು ಅರಿಯುವ ಪ್ರಯತ್ನದಲ್ಲಿ ಮೊದಲಾದ, ಮಾನವತಾವಾದಿ ಪುನರುಜ್ಜೀವನದಲ್ಲಿ ಆಸ್ಥೆಯಿದ್ದ ಈ ಹೊಸ ಚಳುವಳಿಯನ್ನು 'ವೈಜ್ಞಾನಿಕ ಮಾನವತಾವಾದ ಇಲ್ಲವೆ ಸರಳವಾಗಿ 'ನವ ಮಾನವತಾವಾದ'ವೆಂದು ಕರೆಯಲಾಗಿದೆ'[೧೨] ಇದು ದೇವರು ''ಮಾನವರ ನಡುವೆ ಇಟ್ಟುಕೊಂಡಿದ್ದ ಕುರುಡು ನಂಬಿಕೆಯ ಮಾನವತಾವಾದಕ್ಕಿಂತಲೂ ಭಿನ್ನವಾಗಿದೆ. ಈ ನವ ವೈಜ್ಞಾನಿಕ ಮಾನವತವಾದವನ್ನೇ ಪರಿಷ್ಕರಣೆಗೊಳಿಸುತ್ತಾ ಸದೃಢವಾದ ಮಾನವತಾ ವಾದವೊಂದೇ ಈ ಭ್ರಷ್ಟ ಆರಾಧನಾ ವಿಧಿಗಳನ್ನು ನಿರ್ಮೂಲಗೊಳಿಸಬಲ್ಲದು. ಅಜ್ಞಾನದಲ್ಲಿ, ಅಜ್ಞಾನದ ಉದಾತ್ತೀಕರಣದಲ್ಲಿ ಹುದುಗಿದ ಅವುಗಳ ಬೇರುಗಳಿಗೇ ಕೊಡಲಿಯೇಟು ಹಾಕಬಲ್ಲದು. ಈ ಹೊಸ ಮಾನವತಾವಾದವೇ ಸಮಗ್ರ ಮಾನವತಾವಾದ. ಮನುಷ್ಯನ ಬಗೆಗಿನ, ಮನುಷ್ಯ ಸ್ವಭಾವದ ಬಗೆಗಿನ ವೈಜ್ಞಾನಿಕವಾದ ತಳವನ್ನು ಆಧಾರವಾಗಿಟ್ಟುಕೊಂಡ ಇದು ಈ ಮೊದಲಿನ ಕಾವ್ಯಮಯವಾದ, ರಂಜಕವಾದ ಎಲ್ಲ ಮಾನವತಾವಾದಗಳಿಂದ ತೀರ ಭಿನ್ನವಾದದ್ದು.''[೧೩] ಈ ವಿಷಯದ ಜೊತೆಗೆ ವೈಜ್ಞಾನಿಕ ಜ್ಞಾನವನ್ನು ಅಳವಡಿಸಿ ಸಮಗ್ರ ವೈಜ್ಞಾನಿಕ ಮಾನವತಾವಾದವೆಂದೂ ಕರೆದಿದ್ದಾರೆ. ಇಲ್ಲಿ 'ಸಮಗ್ರ' ಎನ್ನುವುದರಲ್ಲಿ ವೈಜ್ಞಾನಿಕ ತತ್ವವೂ ಅಡಗಿರುವುದರಿಂದ 'ಸಮಗ್ರ ವೈಜ್ಞಾನಿಕ ಮಾನವತಾವಾದ'ಎನ್ನುವುದು ಸಮರ್ಪಕವಾಗಲಾರದು. ''ನವ ಮಾನವತಾ' ವಾದವು ಮನುಷ್ಯನ ಉಗಮ ವನ್ನು ಅರಿಯುವುದಕ್ಕೆ, ನಿಸರ್ಗದಲ್ಲಿ ಘಟಿಸುವ ಅವನ ಅವಿರ್ಭಾವದ ಹಿನ್ನೆಲೆಯನ್ನು ಅಭ್ಯಾಸ ಮಾಡುವುದಕ್ಕೆ

ಪ್ರಯತ್ನಿಸುತ್ತದೆ.”[೧೪] ಮಾನವನ ಸಮಾಜದ ದರ್ಶನ, ರಾಜಕೀಯ ಸಿದ್ಧಾಂತ ಮತ್ತು ಆರ್ಥಿಕ ಚಿಂತನ ಅಥವಾ ವೈಜ್ಞಾನಿಕತೆಯ ಕಸರತ್ತು ಎಂಬಷ್ಟೇ ಅಲ್ಲದ “ಮನುಷ್ಯ ಜೀವನದ ಎಲ್ಲ ಕ್ಷೇತ್ರಗಳಿಗೂ ಅನ್ವಯಿಸುವ, ಅವುಗಳ ಪುನರ್‍ರಚನೆಗೆ ದಾರಿ ತೋರಿಸುವ ನಿರ್ದಿಷ್ಟ ತತ್ವಗಳ ಸಂಕಲನವಾಗಿದೆ.”[೧೫] ಈ ವಾದದ ತಳಹದಿ ಮಾತ್ರ ಅನುಭವ ಮತ್ತು ವಿಜ್ಞಾನವನ್ನು ಅವಲಂಬಿಸಿದೆ. “ನವ ಮಾನವತಾವಾದ ವೈಜ್ಞಾನಿಕವಾದ ಸಮಗ್ರ ಮಾನವತಾವಾದ. ಮನುಷ್ಯನನ್ನು ಸಾಮಾಜಿಕ ಸಂದರ್ಭದಲ್ಲಷ್ಟೇ ಅಲ್ಲದೇ ಇಡೀ ವಿಶ್ವದ ಸಂದರ್ಭದಲ್ಲಿ ಅದು ಪರಿಗಣಿಸುತ್ತದೆ”[೧೬]

‘ನವಮಾನವತಾವಾದ’ ಸ್ವಾತಂತ್ರ್ಯವನ್ನು ಮೂಲಭೂತ ಮೌಲ್ಯವೆಂದು ಪರಿಗಣಿಸಿದೆ. ಈ ಸರ್ವೋನ್ನತ ಮೌಲ್ಯದಿಂದಲೇ ಉಳಿದ ಜೀವನ ಮೌಲ್ಯಗಳು ಲಭ್ಯವಾಗುತ್ತವೆ. ಹಾಗಿದ್ದರೆ ಸ್ವಾತಂತ್ರ್ಯ ಎಂದರೇನು? ಜೀವದ ಕಾರ್ಯ ಜೀವಿಸುವುದು. ಜೀವಿಸುವುದಕ್ಕಾಗಿ ನಡೆಸುವ ಹೋರಾಟದಿಂದಲೇ ಜೀವದ ಅಥವಾ ಜೀವಿಯ ವಿಕಾಸ. ಈ ಪ್ರಯತ್ನ, ಹೋರಾಟ ಜೀವ ವಿಕಾಸದ ಉದ್ದಕ್ಕೂ ನಡೆಯುತ್ತದೆ. ಹೀಗೆ ವಿಕಸಿಸಿದ ಜೀವ ಮನುಷ್ಯನೆನಿಸಿ, ನೆಲದಲ್ಲಿ ಓಡಿಯಾಡುವ ಹೊತ್ತಿಗೆ ಬದುಕಿನ ಹೋರಾಟ ಹೊಸ ಮಜಲಿಗೆ ಬರುತ್ತದೆ. ಒಳಗಿನ ಒತ್ತಡ ಹೊಸ ರೂಪು ತಳೆಯುತ್ತದೆ. ಅದೇ ಮನುಷ್ಯನ ಕೊನೆಯರಿಯದ, ಕೊನೆ ಕಾಣದ ಸ್ವಾತಂತ್ರ್ಯದ ಹೋರಾಟ; ಸರ್ವೋನ್ನತ ಮಾನವ ಮೌಲ್ಯ. ಅದು ಮೂಕ ಪ್ರಾಣಿಗಳು ತಮ್ಮ ಉಳಿವಿಗಾಗಿ ನಡೆಸಿದ ಹೋರಾಟದ ಮುನ್ನಡೆಯೇ ಆಗಿದೆ. ಮನುಷ್ಯನ ಪ್ರತಿಯೊಂದು ಕೃತಿ-ವೈಜ್ಞಾನಿಕ ಸಾಧನೆ, ಸಾಂಸ್ಕೃತಿಕ ಪ್ರಗತಿ, ಕಲಾಸೃಷ್ಟಿ, ಆ ಒತ್ತಡದಿಂದ ಬಂದದ್ದು. ಮನುಷ್ಯನ ಬದುಕು- ಶಕ್ತಿಗಳೆರಡಕ್ಕೂ ಮಿತಿಯಿದೆ. ಆದರೆ ವಿಶ್ವದ್ದು ಹಾಗಲ್ಲ. ಅದರ ಆಯುಷ್ಯ, ಶಕ್ತಿಗಳೆರಡೂ ಅಮಿತ, ಅಪರಿಮಿತ. ಮಿತಿಯುಳ್ಳ ಮನುಷ್ಯನಿಗೆ, ಅಪರಿಮಿತವಾದ ವಿಶ್ವ ಪರಿಸರ. ಅದರಿಂದ ಮನುಷ್ಯನ ಸ್ವತಂತ್ರವಾಗುವ ಬಯಕೆಗೆ, ಹೋರಾಟಕ್ಕೆ ಕೊನೆಯೇ ಇಲ್ಲ. ಏಕೆಂದರೆ ಆತ ವಿಶ್ವವನ್ನು ಪೂರ್ತಿಯಾಗಿ ಗೆಲ್ಲಲಾರ. ಆದ್ದರಿಂದ ಮನುಷ್ಯ ಲೋಕದಲ್ಲಿ ಸ್ವಾತಂತ್ರ್ಯದ ಒತ್ತಡವೆಂಬುದು ಜ್ವಲಂತ ಪ್ರಶ್ನೆ. ಶಾಶ್ವತವಾಗಿ, ಎಂದೆಂದೂ ಅಳಿಯದೆ ಉಳಿಯುವ ವಿಷಯ. ಈ ಅದಮ್ಯ ಒತ್ತಡದಿಂದಾಗಿ ಮನುಷ್ಯ ಜ್ಞಾನ ಸಂಪಾದಿಸುತ್ತಾನೆ. ಸಂಪಾದಿಸಿದ ಜ್ಞಾನದ ಬಲದಿಂದ ಪರಿಸರವನ್ನು ಗೆಲ್ಲುತ್ತಾನೆ. ಗೆಲ್ಲುತ್ತಲೇ ಹೋಗುತ್ತಾನೆ.

'ಮೂಲಗ್ರಾಹಿ ಮಾನವತಾವಾದ-ಒಂದು ಜೀವನ ತತ್ವವಾಗಿ, ವ್ಯಕ್ತಿಯ ಬದುಕಿನ ಎಲ್ಲ ಚಟುವಟಿಕೆಯ ಕ್ಷೇತ್ರಗಳನ್ನು ಒಳಗೊಂಡಿದೆ; ವ್ಯಾಪಿಸಿದೆ. ಕೈಗೆ ಸಿಗದ, ಕಣ್ಣಿಗೆ ಕಾಣಿಸದ ವಿಚಾರಗಳಿಂದ ಹಿಡಿದು, ರಾಜಕೀಯ, ಸಾಮಾಜಿಕ, ಆರ್ಥಿಕ ಪುನರ್‍ನಿರ್ಮಾಣದವರೆಗೂ ಅದು ಹರಡಿಕೊಂಡಿದೆ. ಜ್ಞಾನಗಮ್ಯ ಅಥವಾ ಜ್ಞಾನಾತೀತವಾದಲ್ಲಿ ಅದಕ್ಕೆ ನಂಬಿಕೆಯಿಲ್ಲ. ಆ ಸಿದ್ಧಾಂತದ ಪ್ರಕಾರ ಮನುಷ್ಯ ನಿಸರ್ಗದ ಸೃಷ್ಟಿ; ಪ್ರಕೃತಿಯ ಶಿಶು. ಭೌತ ಪ್ರಪಂಚದ ಒಂದು ಭಾಗ ವಿಶ್ವ.

ಅದು ಶಾಸನಬದ್ಧ ವ್ಯವಸ್ಥೆ. ಅದರಿಂದ ಮನುಷ್ಯ ಹುಟ್ಟು, ವಿಕಾಸ, ಅವನ ಉದ್ವೇಗ ಭಾವನೆಗಳು, ಮನೋನಿರ್ಧಾರಗಳು, ಆಲೋಚನೆಗಳು ಮೊದಲೇ ನಿಶ್ಚೈಸಲ್ಪಟ್ಟಿರುತ್ತವೆ. ಆದ್ದರಿಂದ ಮನುಷ್ಯ ಸ್ವಭಾವತಃ, ಮುಖ್ಯವಾಗಿ ಬುದ್ಧಿ ಹೇತುವಾದಿ. ಮನುಷ್ಯನಲ್ಲಿಯ ಬುದ್ಧಿಶಕ್ತಿ, ತಾರತಮ್ಯ ಜ್ಞಾನ, ವಿಚಾರಶೀಲತೆ, ವಿಶ್ವದಲ್ಲಿ ಕಾಣಬರುವ ಸಾದೃಶ್ಯತೆಯ ಪ್ರತಿಧ್ವನಿ. ಬುದ್ಧಿ ಹೇತುವಾದಿಯಾದ್ದರಿಂದಲೇ ಆತ ನೀತಿವಂತನಾಗುತ್ತಾನೆ. ನೀತಿಮತ್ತೆ, ಬುದ್ಧಿಮತ್ತೆಯ ಜೊತೆ ಬೆಳೆಯುತ್ತದೆ; ಅಭಿವೃದ್ಧಿಗೊಳ್ಳುತ್ತದೆ. ಕಾಡುಮೃಗವಾಗಿದ್ದ ಮನುಷ್ಯ, ಸಭ್ಯ ನಾಗರಿಕನಾಗಿ, ಹೇಗೆ ಬೆಳೆದುಬಂದ ಎಂಬುದನ್ನು ವಿವರಿಸಲು ಜ್ಞಾನಾತೀತ ಸಾಧನವನ್ನೋ, ವಿಶ್ವದ ಆಚೆಗಿನ ಶಕ್ತಿಯ ಆಸರೆಯನ್ನೋ ಪಡೆಯುವ ಅವಶ್ಯಕತೆಯಿಲ್ಲ. ಮನುಷ್ಯ ಸಮಾಜವನ್ನು ಕಟ್ಟಿಕೊಂಡುದು ತನ್ನ ಸ್ವಾರ್ಥಕ್ಕಾಗಿ. ತನ್ನ ಇರುವಿಕೆಯ ಹೋರಾಟವನ್ನು ಯಶಸ್ವಿಯಾಗಿ ನಡೆಸಲು ಮನುಷ್ಯ ಸಮಾಜವನ್ನು ರೂಪಿಸಿದ. ಮಾನವ ಪ್ರಗತಿಗಾಗಿ ನಡೆಯುವ ಹೋರಾಟಗಳೂ ತನ್ನ ಆಸ್ತಿತ್ವಕ್ಕಾಗಿ ಮನುಷ್ಯ ಎತ್ತರದ ಸ್ತರದಲ್ಲಿ ನಡೆಸುವ ಹೋರಾಟವೇ ಹೊರತು ಬೇರೇನೂ ಅಲ್ಲ. ಆದರೆ ಅವುಗಳೊಳಗಿನ ವ್ಯತ್ಯಾಸವಿಷ್ಟೆ. ಆರಂಭದಲ್ಲಿ ಅದು ತೀರ ಸಹಜ ಪ್ರತಿಕ್ರಿಯೆ; ಮಾರ್ಗದರ್ಶನವಿಲ್ಲದೆ ಅಂತಃಸ್ಫೂರ್ತಿಯಿಂದ ನಡೆಯುವುದು. ಆದರೆ ಎರಡನೆಯ ಹಂತದಲ್ಲಿ ಅದು ಬುದ್ಧಿಶಕ್ತಿಯಿಂದ, ಆಯ್ಕೆಯಿಂದ, ವಿವೇಕದಿಂದ.

ಮಾನವತಾವಾದಿಗಳು ಅಗತ್ಯ ಬೀಳುವ ಸ್ಫೂರ್ತಿಯನ್ನು ಆಧುನಿಕ ನಾಗರಿಕತೆಯ ಜನಕರಿಂದಲೇ ಪಡೆದರು. ಅದು ಬಹಿರಂಗವಾಗಿ ಬಂಡಾಯವೇಳುವ ಪರಂಪರೆ. ದೇವರ ಹಾಗೂ ಅವನ ಪ್ರತಿನಿಧಿಗಳ, ಅವರ ಕರಾಳ ಶಾಸನಗಳ ವಿರುದ್ಧ ದಂಗೆಯೇಳುವ ಪರಂಪರೆಯೇ ಆಗಿದೆ. ತಾನು ಪ್ರತಿಪಾದಿಸಿದ ಈ ವಿಚಾರ ಹೊಸತಲ್ಲವೆಂಬುದನ್ನು ರಾಯ್ ವಿನಯದಿಂದ ಒಪ್ಪಿಕೊಳ್ಳುತ್ತಾರೆ. ೧೦ನೆಯ ಶತಮಾನದ ಮಾನವತಾವಾದಿಗಳಿಂದಲೂ, ಅದಕ್ಕೂ ಹಿಂದಿನ ಬೌದ್ಧಿಕ-ತಾತ್ವಿಕ ಕ್ರಾಂತಿಯ ಕಹಳೆಯೂದಿದ ವೈಚಾರಿಕರಿಂದಲೂ ತಾನು ಸ್ಫೂರ್ತಿ ಪಡೆದುದುದಾಗಿ ರಾಯ್ ತಿಳಿಸಿದ್ದಾರೆ. ಆದರೆ ಆ ದಿನಗಳಲ್ಲಿ ಅವರಿಗೆ, ನಿಸರ್ಗಕ್ಕೂ ಮನುಷ್ಯನಿಗೂ ಇದ್ದ ನಂಟನ್ನು ತೋರಿಸುವುದು ಸಾಧ್ಯ ವಿರಲಿಲ್ಲ. ಆಧುನಿಕ ವಿಜ್ಞಾನ ಈ ಅಡಚಣೆಯನ್ನು ತೊಡೆದು ಹಾಕಿದೆ. ಆದ್ದರಿಂದ ಮಾನವತಾವಾದ ಇಂದು ಬೇರುಮುಟ್ಟಿ ಇಳಿಯಬಲ್ಲದು. ಬೇರುಮುಟ್ಟಿ ಇಳಿಯಲು ಶಕ್ತವಾದ ಕಾರಣ ಆ ಸಿದ್ಧಾಂತದ ಬುಡ ಭದ್ರ. ಆದ್ದರಿಂದಲೇ ಅದು ರ್ಯಾಡಿಕಲ್ ರ್ಯಾಡಿಕಲ್ ಎನ್ನುವ ಶಬ್ದ ರಾಡಿಕ್ಸ್ ಎನ್ನುವ ಲ್ಯಾಟಿನ್ ಶಬ್ದದಿಂದ ಹುಟ್ಟಿಕೊಂಡಿತು. ರಾಡಿಕ್ಸ್ ಎಂದರೆ ಇಂಗ್ಲಿಷ್‌ನ ರೂಟ್ ಅಥವಾ ಬೇರು.

ಮಾನವತಾವಾದದತ್ತಣ ಪಯಣ ಸುಲಭವಾದದ್ದಾಗಿರಲಿಲ್ಲ; ಸುಖಕರ ಮೊದಲೇ ಅಲ್ಲ. ಕಟ್ಟಾ ಕಮ್ಯೂನಿಸ್ಟ್ ಆದಾಗ ಒಪ್ಪಿಕೊಂಡ ಅಥವಾ ಪ್ರಿಯವೆಂದು ಎದೆಗಪ್ಪಿಕೊಂಡ ಎಷ್ಟೋ ವಿಚಾರಗಳನ್ನು ಪೂರ್ತಿಯಾಗಿ ತ್ಯಜಿಸಿಬೇಕಾಯಿತು. ಒಂಟಿಯಾಗಿ ಪಯಣ ಹೊರಟ ದಾರಿಯಲ್ಲಿ ಎಲ್ಲಿಯೂ 'ಈ

ದಾರಿ ಎಲ್ಲಿಗೊಯ್ಯುತ್ತಿದೆ' ಎಂದು ಸೂಚಿಸುವ ಕೈ ಮರಗಳಿರಲಿಲ್ಲ. ಮಾರ್ಗದರ್ಶಕರು-ಕೈಹಿಡಿದು ಕರೆದೊಯ್ಯುವ ಜನ-ಮೊದಲೇ ಇರಲಿಲ್ಲ. ಅದು ವಿಚಾರ ಲೋಕದಲ್ಲಿ ರಾಯ್ ಒಂಟಿಯಾಗಿ ನಡೆಸಿದ ಸಾಹಸಮಯ ಜೀವನ. ಮಹತ್ಸಾಧನೆಗಳನ್ನು ನಿರೀಕ್ಷಿಸಿದ್ದ. ಕಮ್ಯೂನಿಷ್ಟರಲ್ಲಿ ಕೆಲವರು ಯಾವುದೂ ಸಾಧಿತವಾಗಿಲ್ಲವೆಂದು ಕಂಡು ಕಂಗಾಲಾದಾಗ, ಭ್ರಮೆಯ ನಿರಸನವಾಗಿ ಧರ್ಮರತರಾದರು. ಇನ್ನು ಕೆಲವರು ರಾಷ್ಟ್ರೀಯವಾದಿಗಳಾದರು. ಹಲವರು ಉದಾರವಾದಿಗಳಾದರು. ಈ ದಾರಿಗಳಲ್ಲಿ ಯಾವುದನ್ನಾದರೂ ರಾಯ್ ಆಯ್ದುಕೊಳ್ಳಬಹುದಾಗಿತ್ತು. ಆದರೆ ಅವರಿಗೆ ಹಿಂದಿರುಗುವುದಕ್ಕೆ, ಹಿಂದಕ್ಕೆ ಹೋಗುವುದಕ್ಕೆ ಇಷ್ಟವಾಗಲಿಲ್ಲ. ಮುನ್ನುಗ್ಗಲು, ಮುಂದಡಿ ಯಿಡಲು ನಿರ್ಧರಿಸಿದರು. ಅವರು ಕಮ್ಯೂನಿಸಂನ ಆಚೆಗೆ ಕಾಲಿಟ್ಟರು. ಮಾನವತೆಯತ್ತ ತಲುಪಿದರು. ಅವರು ಒಂಟಿಯಾಗಿಯೇ ಪಯಣ ಹೊರಟಿದ್ದರೆ ಅಷ್ಟು ಕಾಲ ಹಿಡಿಯುತ್ತಿರಲಿಲ್ಲ. ಎಷ್ಟೋ ವರ್ಷಗಳ ಹಿಂದೆಯೇ ಬೇಕಾದ ಸಿದ್ಧಿಯನ್ನು ಸಂಪಾದಿಸಿದ್ದರು. ಸಾಮಾನ್ಯವಿಜ್ಞಾನ, ಸಾಮಾಜಿಕ ವಿಜ್ಞಾನ, ಭೌತ-ರಾಸಾಯನಿಕ-ಜೀವ ವಿಜ್ಞಾನಗಳ ಜೊತೆಗೆ ತತ್ವಜ್ಞಾನವನ್ನೂ ಕರತಲಾಮಲಕ ಮಾಡಿಕೊಂಡಿದ್ದರು. ಆದರೆ ವಿಚಾರ ಲೋಕದಲ್ಲಿ ಒಂಟಿಯಾಗಿ ವಿಹರಿಸಲು ಇಷ್ಟಪಡಲಿಲ್ಲ. ಅಭಿಮಾನಿಗಳನ್ನು, ಸ್ನೇಹಿತರನ್ನು, ಜೊತೆಗಿದ್ದ ಕಾರ್ಯಕರ್ತರನ್ನು, ಸಹವರ್ತಿಗಳನ್ನು, ತನ್ನ ಜೊತೆ ಹೆಜ್ಜೆ ಹಾಕಲು ಕಲಿಸಿ, ಅವರನ್ನು ತನ್ನೊಡನೆ ಕರೆದೊಯ್ಯುವುದಕ್ಕೆ ಕಾಲ ಹಿಡಿಯಿತು. ಬಹುಭಾಗದ ಅನುಯಾಯಿಗಳನ್ನು ತಮ್ಮ ಜೊತೆ ನಡೆಯುವಂತೆ ಮಾಡಿದರು. ಕಳಚಿಕೊಂಡವರು ಕಡಿಮೆ. ಲಾಭ ಇರುವಲ್ಲಿಗೆ ಕಣ್ಣು ಹಾಯಿಸಿದವರಿಲ್ಲ. ಅದಕ್ಕಾಗಿ ಬಿರುಸಿನ-ತುರುಸಿನ ಚರ್ಚೆ ನಡೆಯಿತು. ಸಹನೆಯ ವಾದವೂ ಅಗತ್ಯವೆನಿಸಿತು. ಅದಕ್ಕಾಗಿ ಡೆಹರಾಡೂನಿನ ತಂಪು ಹವೆಯಲ್ಲಿ ಎರಡು ಶಿಬಿರಗಳು ಏರ್ಪಟ್ಟವು. ಇದರ ಜೊತೆಗೆ ಅಸಂಖ್ಯ ಪತ್ರವ್ಯವಹಾರ. ಸಾರ್ವಜನಿಕ ಸಭೆ-ಸಮಾರಂಭಗಳಲ್ಲಿ ಭಾಷಣ.

'ಹ್ಯುಮ್ಯಾನಿಸಂ' ಅಥವಾ ಮಾನವತಾವಾದ ಎಂ.ಎನ್. ರಾಯ್ ಅವರನ್ನು ಗಾಂಧೀಜಿಯ ತೀರ ಹತ್ತಿರಕ್ಕೆ ತಂದಿತು. ಅನೇಕ ವಿಷಯಗಳಲ್ಲಿ ಅವರಿಬ್ಬರ ವಿಚಾರಧಾರೆಯಲ್ಲಿ ಸಾಮ್ಯ ಇದೆ. ಇಬ್ಬರೂ ವ್ಯಕ್ತಿಯನ್ನೇ ವಿಚಾರದ ಕೇಂದ್ರವನ್ನಾಗಿ ಇರಿಸಿಕೊಂಡರು. ಸಾಮಾಜಿಕ ವಿಚಾರದಲ್ಲೂ ಕ್ರಿಯೆಗಳಲ್ಲೂ ಇಬ್ಬರೂ ಅವನನ್ನೇ ಗಮನದಲ್ಲಿರಿಸಿಕೊಂಡಿದ್ದರು. ಇಬ್ಬರೂ ರಾಜಕೀಯ-ಆರ್ಥಿಕ ಶಕ್ತಿಗಳ ಕೇಂದ್ರೀಕರಣದ ವಿರೋಧಿಗಳು. ಇಬ್ಬರೂ ಅವುಗಳ ವಿಕೇಂದ್ರಿಕರಣಕ್ಕೆ ಆಗ್ರಹ ತೊಟ್ಟವರು. ರಾಜಕೀಯ ಚಟುವಟಿಕೆಯ ಶುದ್ಧೀಕರಣಕ್ಕೆ ಇಬ್ಬರೂ ಪಕ್ಷರಹಿತ ಪ್ರಜಾಪ್ರಭುತ್ವವನ್ನು ಸೂಚಿಸಿದರು. ರಾಯ್ ಸ್ಥಾಪಿಸಿದ ಪಕ್ಷವನ್ನು ವಿಸರ್ಜಿಸಿದರು. ಗಾಂಧೀಜಿ ಪಕ್ಷ ವಿಸರ್ಜನೆಗೆ ಕಾಲಬಂದಿದೆ ಎಂದು ಎಚ್ಚರಿಸಿದರು. ಆದರೆ ಕೆಲವು ವಿಚಾರಗಳಲ್ಲಿ ಅವರಿಬ್ಬರ ವಿಚಾರಧಾರೆಯಲ್ಲಿ ಧ್ರುವಗಳ ಅಂತರವಿತ್ತು. ರಾಯ್ ಭೌತವಾದಿ, ಬುದ್ಧಿಹೇತುವಾದಿ. ಗಾಂಧೀಜಿ ಆಧ್ಯಾತ್ಮವಾದಿ. ಹೆಚ್ಚಾಗಿ ಒಳಗಿನ ತುಡಿತಗಳಿಗೆ

ಒಗೊಡುವವರು. ಆದರೆ ಈ ಮತಭೇದ ಕೂಡಿ ದುಡಿಯುವುದಕ್ಕೆ ಅಡ್ಡಿಯಾಗಿ ನಿಲ್ಲಲಿಲ್ಲ. ಗಾಂಧೀಜಿಯ ಅನುಯಾಯಿಗಳಲ್ಲಿ ಕೆಲವರು ಸರ್ವೋದಯದ ಹಾದಿ ಹಿಡಿದರು. ಅವರಲ್ಲಿ ಕೆಲವರು ರಾಯ್ ಅನುಯಾಯಿಗಳೊಂದಿಗೆ ದುಡಿದ ನಿದರ್ಶನಗಳಿವೆ."[೧೬]

## ಮಾನವೀಯ ಮೌಲ್ಯಗಳು

ಮನುಷ್ಯನ ಯೋಚನೆ ಮತ್ತು ಚಟುವಟಿಕೆಗಳು ಹುಟ್ಟಿನಿಂದಲೇ ಸಹಜವಾಗಿ ಒಳ್ಳೆಯವುಗಳಾಗಿರುತ್ತವೆ. ಜೀವನದಲ್ಲಿನ ಏರುಪೇರಿನ ಘಟನೆಗಳಿಂದ ಅಥವಾ ಸಹವಾಸದಿಂದ ಅವನ ನಿತ್ಯದ ಚಟುವಟಿಕೆಗಳು ಕೆಡುಕಿನ ಸ್ವರೂಪವನ್ನು ತಾಳುತ್ತವೆ. ಕಾರಣವೇ ಅವನಿಗೆ ದುಷ್ಟನನ್ನಾಗಿಸಬಹುದು. 'ಮನುಷ್ಯರು ಕ್ರೂರರಾಗಿರಬಹುದು. ಆದರೆ ಮನುಷ್ಯ ದಯಾಳು'(Men may be cruel but man is kind) ರವೀಂದ್ರನಾಥ ಠ್ಯಾಗೂರ್ ಅವರ ಮಾತು ಸ್ಪಷ್ಟಪಡಿಸುತ್ತದೆ.

ಯಾವುದೇ ಒಂದು ವಿಷಯವನ್ನು ತಿಳಿದುಕೊಳ್ಳಬೇಕಾದರೆ ಅದರ 'ಮೌಲ್ಯ'ವನ್ನು ಅರಿಯುವುದು ಸಹಜ. ಅಂತೆಯೇ ವಸ್ತುವನ್ನು ಕೊಳ್ಳಬೇಕಾದಾಗ ಅದರ ಬೆಲೆ ಮತ್ತು ಅದರಿಂದ ಪಡೆಯಬಹುದಾದ ಅನುಭೋಗದ ಮೌಲ್ಯವನ್ನ ಮನುಷ್ಯ ಸರ್ವೇಸಾಮಾನ್ಯವಾಗಿ ಅಳೆಯುತ್ತಾನೆ. ಈ 'ಮೌಲ್ಯ'ವು ಬೆಲೆ ಹಾಗೂ ಪ್ರಯೋಜನದ ಅರ್ಥದಲ್ಲಿ ಚಲಾವಣೆಯಾಗುತ್ತದೆ. ಪ್ರತಿಯೊಂದು ವಸ್ತುವೂ ತನ್ನದೇ ಆದ ಬೆಲೆ ಹಾಗೂ ಪ್ರಯೋಜನವನ್ನು ಹೊಂದಿರುತ್ತದೆ. ವಸ್ತುವಿನಂತೆ ವಿಷಯ ಅಥವಾ ಘಟನೆಯ ಕಡೆ ಗಮನ ಹರಿಸಿದಾಗ ವಿಷಯ ಅಥವಾ ಘಟನೆಯು ನೈತಿಕತೆಯ ಮೌಲ್ಯವನ್ನು ಪ್ರತಿಬಿಂಬಿಸುತ್ತದೆ. ನೈತಿಕತೆಯು ವಿಷಯ ವಸ್ತುವಿನ ತುತ್ತ ತುದಿ. ಇದನ್ನೇ 'ಮೌಲ್ಯ'ವೆಂದು ಕರೆಯಲಾಗುವುದು. ಮೌಲ್ಯವು ವಸ್ತುವಿನ, ವಿಷಯದ ಅಸಾಧರಣ ಬೆಲೆಯನ್ನು ಗುರುತಿಸುತ್ತದೆ. ವ್ಯಕ್ತಿಯ ಗುರುತಿಸುವಿಕೆಯನ್ನು (Identify) ಕೂಡ ಮೌಲ್ಯದ ಮೂಲಕ ಕಂಡುಕೊಳ್ಳಲಾಗುತ್ತಿದೆ. ಒಳ್ಳೆಯ ಮೌಲ್ಯಗಳು ಆ ವ್ಯಕ್ತಿಯ ದುಷ್ಟ-ಒಳ್ಳೆಯವ ವ್ಯಕ್ತಿತ್ವದ ಘನತೆಯನ್ನು ಎತ್ತಿ ತೋರಿಸುತ್ತವೆ. ಇದರಿಂದಲೇ ಆತನ ಸಾಮಾಜಿಕ ಸ್ಥಾನಮಾನ ನಿರ್ಧಾರವಾಗುತ್ತದೆ. ಅಧಮ-ಉತ್ತಮ, ನೀಚ-ಕುಲೀನ, ಕನಿಷ್ಠ-ಶ್ರೇಷ್ಠ, ನಾಯಕ-ವಿಲನ್, ಎಂದೆಲ್ಲಾ ಕರೆಯುವುದು ಅವರವರು ರೂಪಿಸಿಕೊಂಡುಬಂದಿರುವ ಜೀವನ ಮೌಲ್ಯಗಳಿಂದಲೇ. 'ಮೌಲ್ಯ'ಗಳು ಎಂದರೆ ಉದಾತ್ತವಾದ ವಿಚಾರವನ್ನು ಹೊಂದಿರುವುದು, ಇನ್ನೊಬ್ಬರಿಗೆ ಕೆಟ್ಟದ್ದನ್ನು ಮಾಡದೇ ಇರುವುದು. "ಒಳ್ಳೆಯದನ್ನು ಮಾಡಲಿಕ್ಕೆ ಆಗದಿದ್ದರೂ ಸಹ ಕೆಟ್ಟದ್ದನ್ನು ಮಾತ್ರ ಮಾಡದೇ ಇರುವುದು" ನೈತಿಕ ಮೌಲ್ಯ.

ನೈತಿಕವಾದ ಮೌಲ್ಯಗಳಿಲ್ಲದೆ ಜೀವಿಸುವುದು ಮಾನವನಿಗೆ ಶೋಭೆಯಲ್ಲ, ಈ ಮೌಲ್ಯಗಳಿಲ್ಲದಿದ್ದರೆ ಮನುಷ್ಯ ಗಾಳಿಗೆ ಸಿಕ್ಕಿ ದಿಕ್ಕು ತಪ್ಪಿದ ಹಡಗಿನಂತಾಗುತ್ತಾನೆ. ನಿಶ್ಚಲ ಗುರಿಯಿಲ್ಲದೆ ಬಾಳ್ವೆ ಬಾಳ್ವೆಯಲ್ಲ. ಕಾರಂತರು ಹೇಳುವ 'ಬಾಳ್ವೆಯೇ ಬೆಳಕು' ಎಂಬ ಮಾತು ವ್ಯಕ್ತಿಯಲ್ಲಿನ ಮೌಲ್ಯ ಯುತವಾದ ಬಾಳ್ವೆಯನ್ನು ಸಾದರಪಡಿಸುತ್ತದೆ. ಮೌಲ್ಯಗಳು ಮನುಷ್ಯನಿಗೆ ಹೇಗೆ ಸಹಾಯಕ ಎಂಬುದನ್ನು ಸದಾಶಿವ ಒಡೆಯರ ಅವರು "ಮೌಲ್ಯಗಳು ಜೀವನವೆಂಬ ರೈಲ್ವೆಗಾಡಿಯ ಯಂತ್ರಕ್ಕೆ ಹಳಿಗಳಿದ್ದಂತೆ. ಈ ಹಳಿಗಳಿದ್ದಾಗಲೇ ಮನುಷ್ಯನ ಜೀವನ ನಿರಾಯಾಸವಾಗಿ, ವೇಗವಾಗಿ, ಗುರಿಯತ್ತ ಸಾಗಲೂ ಸಾಧ್ಯವಾಗುತ್ತದೆ. ಆದ್ದರಿಂದ ಮನುಷ್ಯ ಜೀವನದಲ್ಲಿ ಸುಖ-ಶಾಂತಿ ಸಿಗಬೇಕಾದರೆ ಮಾನವೀಯ ಮೌಲ್ಯಗಳು ಅತ್ಯಗತ್ಯ."[೧೮]

ಪ್ರಾಚೀನ ಕಾಲದಿಂದಲೂ ಮನುಷ್ಯ ತನ್ನದೇ ಆದ ನೀತಿ ನಿಯಮಗಳನ್ನು, ಸಾಮಾಜಿಕ ಕಟ್ಟಳೆಗಳನ್ನು, ರೂಪಿಸಿಕೊಂಡು ಮಾಡಬಾರದ ಕೃತ್ಯಗಳು, ಮಾಡಬಹುದಾದ ಕೆಲಸಗಳು ಎಂದು ಚೌಕಟ್ಟು ರೂಪಿಸಿಕೊಂಡು ಬಂದಿದ್ದಾನೆ. ತನ್ನ ಅಗತ್ಯತೆಗೆ ತಕ್ಕಂತೆ ಆಯಾ ಕಾಲದ ಸಾಮಾಜಿಕ ಸ್ಥಿತ್ಯಂತರಗಳನ್ನು ಗಮನಿಸಿ ಅವುಗಳನ್ನು ಮಾರ್ಪಡಿಸುತ್ತಲೇ ಇದ್ದಾನೆ. ಒಂದು ಒಳ್ಳೆಯ ಕೆಲಸ ಮಾಡಬೇಕಾದರೆ ಯಾವುದೇ ರೀತಿಯ ಅಡ್ಡಿ ಮಾಡದೆ ಅದನ್ನು ನೆರವೇರಿಸುವುದು ಅವನ ಜಾಯಮಾನ. ಇಲ್ಲಿ 'ಒಳ್ಳೆಯ' ಕೆಲಸ ಎಂದರೆ ಯಾವುದು? ಹಾಗಾದರೆ ಕೆಟ್ಟ ಕೆಲಸ ಒಂದು ಇರಲೇಬೇಕಲ್ಲವೆ? ಎಂಬ ಸಂಶಯಗಳು ಉದ್ಭವಿಸುತ್ತವೆ. 'ಒಳ್ಳೆಯ'ಎಂದರೆ ಬಹುಪಾಲು ಜನರಿಗೆ ಉಪಯೋಗಕ್ಕೆ ಬರುವಂತಹದು ಅಥವಾ ಮನಸ್ಸಿಗೆ ನೋವಾಗದಂತಹದು. ಒಂದು ವೇಳೆ 'ಒಂದು ಕೆಲಸ ಮಾಡುವಾಗ ಅದು ಇನ್ನೊಬ್ಬ ವ್ಯಕ್ತಿಗೆ ನೋವಾಗುತ್ತದೆ. ಆಗ ಒಳ್ಳೆಯ ಅಥವಾ ಮಾನವೀಯ ಮೌಲ್ಯ ಕುಸಿಯುತ್ತದೆ' ಎನ್ನುವ ವಾದ ಮನದಲ್ಲಿ ಏಳುವುದು ಸಹಜ. ಉದಾ: ಒಬ್ಬ ರೌಡಿಯನ್ನು ಕೊಲ್ಲುವುದು ಸಾಮಾಜಿಕರಿಗೆ ಮಾಡುವ ಒಳ್ಳೆಯ ಕೆಲಸ. ಆದರೆ ಹಾಗೆ ಮಾಡುವುದರಿಂದ ಒಬ್ಬ ಮನುಷ್ಯನನ್ನು ಕೊಲ್ಲು ಎಂದು ಹೇಳಬೇಕಾಗುತ್ತದೆ. 'ಕೊಲ್ಲುವುದು' ಮಾನವೀಯತೆಯೂ ಅಲ್ಲ. ಕೊಲ್ಲದೆ ಇದ್ದು ಸಾಮಾಜಿಕರಿಗೆ ಅವನಿಂದ ಕಿರುಕುಳ ಹೆಚ್ಚಾಗುವಂತೆ ಮಾಡುವುದೂ ಮಾನವೀಯತೆ ಅಲ್ಲ. ಈ ಎರಡನ್ನು ಮಾಡದೆ ಕಿರುಕುಳ ಕೊಡುವ ರೌಡಿಯನ್ನು ಪರಿವರ್ತನೆಗೊಳಿಸುವುದು ಮಾನವೀಕರಣ. ಈ ನಿಟ್ಟಿನಲ್ಲಿ ಪೋಲಿಸ್ ಅಧಿಕಾರಿಗಳು ಖೈದಿಗಳ ಮನಪರಿವರ್ತಿಸಿ ಅವರನ್ನು ಸಮಾಜದಲ್ಲಿ ಸಭ್ಯರನ್ನಾಗಿ ಕಳುಹಿಸಿವುದನ್ನು ಮಾಡುತ್ತಾರೆ. ಈ ರೀತಿಯಾಗಿ ಮೌಲ್ಯವನ್ನು ಬೋಧಿಸುವುದರಿಂದ ಅಧಿಕಾರಿಗಳಿಗೂ ಸಂತೋಷ, ಪಡೆದು ಹೊರ ಬಂದು ಸಮಾಜದಲ್ಲಿ ಗೌರವ ಯುತವಾಗಿ ಬಾಳುವ ವ್ಯಕ್ತಿಗೂ ಸಂತೋಷ. ಮೌಲ್ಯವನ್ನು ಗಳಿಸಿದವನು ನಿಜಕ್ಕೂ ದೇವತಾ ಸ್ವರೂಪಿಯಾಗುತ್ತಾನೆ.

'ಒಳ್ಳೆಯದನ್ನು ಮಾತನಾಡು, ಒಳ್ಳೆಯದನ್ನೆ ನೋಡು, ಒಳ್ಳೆಯದನ್ನೇ ಕೇಳು'-ಎನ್ನುವುದು ನೈತಿಕ ಮೌಲ್ಯದ ಧ್ಯೇಯವಾಕ್ಯವಾಗಿ ಪರಿಣಮಿಸುತ್ತದೆ. ಉದಾತ್ತವಾದ, ಆದರ್ಶನೀಯವಾದ, ಗೌರವ ಯುತವಾದ ಬೆಲೆಯುಳ್ಳ ನೀತಿಯನ್ನು ಹಿರಿಯರು ಮೌಲ್ಯವನ್ನಾಗಿ ಸ್ವೀಕರಿಸಿದ್ದಾರೆ. ಈ ಮೌಲ್ಯವನ್ನು ವ್ಯಕ್ತಿ, ಸಮಾಜ, ಧರ್ಮ, ದೇವರುಗಳ ತತ್ತ್ವಗಳನ್ನಾಗಿ ರೂಪಿಸಲಾಗಿದೆ. ಜಗತ್ತಿನ ಯಾವೊಂದು ಧರ್ಮವೂ ಅನೀತಿಯನ್ನು ಬೋಧಿಸುವುದಿಲ್ಲ. ಹಿಂದೂಧರ್ಮವು ಭಾವನಾತ್ಮಕತೆ-ಬಂಧುತ್ವವನ್ನು, ಕ್ರೈಸ್ತ ಧರ್ಮವು ಪ್ರೀತಿ-ಅನುಕಂಪವನ್ನು, ಇಸ್ಲಾಂ ಧರ್ಮವು ಭ್ರಾತೃತ್ವ-ಸಹನೆಯನ್ನು ಮುಖ್ಯ ತಾತ್ವಿಕ ಮೌಲ್ಯಗಳನ್ನಾಗಿ ಪ್ರಚುರಪಡಿಸಿವೆ. ಈ ಎಲ್ಲ ಧರ್ಮಗಳ ಸಾರವೆಂಬಂತೆಯೋ ಅಥವಾ ಭಿನ್ನವಾದ ಧರ್ಮವೆಂಬಂತೆ ಸರ್ವರೂ ಒಂದೇ (ಹಿಂದೂ, ಮುಸ್ಲಿಂ, ಕ್ರೈಸ್ತ, ಜಹೂದಿ ಇತ್ಯಾದಿ) ಎಂಬ 'ಮಾನವ ಧರ್ಮ'ವು ರೂಪುಗೊಳ್ಳುವುದು ಉದಾತ್ತ ಮಾನವೀಯ ಮೌಲ್ಯಗಳ ತತ್ವಗಳಿಂದ. 'ಮಾನವ ಜಾತಿ ತಾನೊಂದೇ ವಲಂ' ಎಂಬ ವಾಕ್ಯವೇ ಮುಖ್ಯ ತತ್ವ 'ಮಾನವೀಯ ಮೌಲ್ಯಗಳು ದೇಶ, ಕಾಲ ಮತ್ತು ಧರ್ಮಾತೀತವಾದವುಗಳು. ಮಾನವನು ಜೀವಂತವಿರುವವರೆಗೂ ಮೌಲ್ಯಗಳು ಆಧಾರವಾಗಿರುತ್ತವೆ. ಸದಾಶಿವ ಒಡೆಯರ್ ಅವರು 'ಮೌಲ್ಯಗಳ'ನ್ನು ಆರು ರೀತಿಯಾಗಿ ವರ್ಗೀಕರಿಸಿದ್ದಾರೆ.

೧. ಮಾನಸಿಕ ಮೌಲ್ಯಗಳು- ಸತ್ಯ, ನ್ಯಾಯದೃಷ್ಟಿ, ಸಮಾನಭಾವ, ಕುತೂಹಲ ಬುದ್ಧಿ, ಅನ್ವೇಷಣೆಯ ಪ್ರವೃತ್ತಿ, ಸೃಜನಾತ್ಮಕತೆಯ ಸೌಖ್ಯ ಇತ್ಯಾದಿ.

೨. ಭಾವನಾತ್ಮಕ ಮೌಲ್ಯಗಳು- ಕರುಣೆ, ಸಹನೆ, ಧೈರ್ಯ, ಸಹಾನುಭೂತಿ, ದೃಢತೆ, ಆತ್ಮಬಲ, ಸ್ನೇಹ, ಸಾಮರಸ್ಯ ಇತ್ಯಾದಿ.

೩. ಲಲಿತ ಹಾಗೂ ಕಲಾ ದೃಷ್ಟಿಯ ಮೌಲ್ಯಗಳು- ಸೌಂದರ್ಯ, ಸೃಜನಾತ್ಮಕತೆ

೪. ನೈತಿಕ ಹಾಗೂ ಆತ್ಮಿಕ ಮೌಲ್ಯಗಳು - ಪ್ರಾಮಾಣಿಕತೆ, ಪರೋಪಕಾರ ಔದಾರ್ಯ, ನಿಸ್ವಾರ್ಥತೆ, ಕೃತಜ್ಞತೆ, ನಿಷ್ಠೆ, ಉತ್ಸಾಹ, ನಿಷ್ಕಪಟತೆ, ಸ್ವಾವಲಂಬನ, ಜಾತ್ಯಾತೀತತೆ, ಸೌಜನ್ಯಯುತ ನಡವಳಿಕೆ ಇತ್ಯಾದಿ.

೫. ದೈಹಿಕ ಮೌಲ್ಯಗಳು - ಆರೋಗ್ಯ, ಶಕ್ತಿ, ದೈಹಿಕ, ಚಪಲತೆ, ಲಾವಣ್ಯ, ಶುಚಿತ್ವ ಇತ್ಯಾದಿ

೬. ವಿಶ್ವವ್ಯಾಪಿ ಹಾಗೂ ಸಾರ್ವತ್ರಿಕ -ಪ್ರಪಂಚದಲ್ಲಿ ಶಾಂತಿ, ಅಂತರಾಷ್ಟ್ರೀಯ ಸದ್ಭಾವನೆ ಹಾಗೂ ಮಾನವರ ಐಕ್ಯತೆ. ಇವುಗಳಲ್ಲದೆ ಸ್ವಚ್ಛತೆ, ಸಮಯನಿಷ್ಠೆ, ಸಹಕಾರ, ಕರ್ತವ್ಯಪ್ರಜ್ಞೆ, ಸರಳತೆ, ಕಾಯಕ, ಶ್ರದ್ಧೆ, ದಯೆ, ಸ್ನೇಹಪರತೆ, ಸಮಾನತೆ, ಸಾಮಾಜಿಕ ನ್ಯಾಯ, ದೇಶಾಭಿಮಾನ, ವಿಶಾಲದೃಷ್ಟಿ, ವಾತ್ಸಲ, ವಿಧೇಯತೆ, ಕ್ಷಮಾಗುಣ - ಹೀಗೆ ಇನ್ನು

ಅನೇಕ ಗುಣಧರ್ಮಗಳನ್ನು ಮಾನವೀಯ ಮೌಲ್ಯಗಳೆಂದು ಕರೆಯಲಾಗುತ್ತದೆ. ಹೀಗೆ ಒಟ್ಟು ೮೦ಕ್ಕೂ ಹೆಚ್ಚು ಮೌಲ್ಯಗಳನ್ನು ಗುರುತಿಸಲಾಗಿದೆ.[೧೯]

ಈ ರೀತಿಯಾಗಿ ವರ್ಗೀಕರಿಸಿ ನೋಡುವುದು ಕೂದಲನ್ನು ಸೀಳುವ ಕೆಲಸವಾಗುತ್ತದೆ. ಎಲ್ಲವುಗಳನ್ನು ಒಳಗೊಂಡಿರುವುದೇ 'ಮಾನವೀಯತೆ'. ನೀತಿಯುಕ್ತ ನಡವಳಿಕೆ, ಶಾಂತಿ, ಪ್ರೇಮ ಮತ್ತು ಅಹಿಂಸೆಗಳು ಮೂಲಭೂತ ಮೌಲ್ಯಗಳೆಂದು ಗುರುತಿಸಿದ್ದಾರೆ. 'ಸತ್ಯ'ವನ್ನು ಶ್ರೇಷ್ಠ ಮೌಲ್ಯವೆಂದು ಗುರುತಿಸಿ, ಸತ್ಯ ನುಡಿವ ವ್ಯಕ್ತಿ ಜೀವನದಲ್ಲಿ ತಪ್ಪು ಮಾಡದೆ ಯಶಸ್ವಿ ಪುರುಷನಾಗುತ್ತಾನೆ. ಸತ್ಯದ ಸಾಧನೆಗೆ ರಾಜಾ ಹರಿಶ್ಚಂದ್ರನ ಕಥೆ ಮತ್ತು ಮಹಾತ್ಮಗಾಂಧಿಜೀಯ ಜೀವನವೇ ಸಾಕ್ಷಿ ಎಂದಿದ್ದಾರೆ. ಇದು ಎಲ್ಲ ಸದ್ಗುಣಗಳ ಮೂಲ ಚೇತನ ಎಂದು ಹೇಳಿದ್ದಾರೆ. 'ನೀತಿಯುಕ್ತ ನಡವಳಿಕೆ'ಯ ಮೌಲ್ಯದಲ್ಲಿ ಸಮಾನತೆ, ಪ್ರಾಮಾಣಿಕತೆ, ಕರ್ತವ್ಯ ಪ್ರಜ್ಞೆ, ಕಾಯಕ ನಿಷ್ಠೆ ಮತ್ತು ಧೈರ್ಯಗಳೆಂಬ ನಡವಳಿಕೆಯನ್ನು ವಿವರಿಸಿದ್ದಾರೆ.




ಈ ಎಲ್ಲ ಮೌಲ್ಯಗಳು ಮಾನವನಲ್ಲಿ ಇರಬೇಕಾದದ್ದು ಅವಶ್ಯ. ಫ್ರೆಂಚ್ ಕ್ರಾಂತಿಯ ತತ್ವಗಳಾದ ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವಗಳು ಸರ್ವಕಾಲಕ್ಕೂ-ಸರ್ವ ಪ್ರಭುತ್ವಗಳಲ್ಲಿಯೂ ನೆಲೆಯಾಗಿರಬೇಕು. ದುರದೃಷ್ಟವಶಾತ್ ನಿರಂಕುಶ ಪ್ರಭುತ್ವ ಮತ್ತು ಕಮ್ಯುನಿಸ್ಟ್ ಪ್ರಭುತ್ವಗಳಲ್ಲಿ ಈ ತತ್ತ್ವಗಳು ಪಾತಾಳಕ್ಕೆ ತುಳಿಯಲ್ಪಡುತ್ತವೆ. ಪ್ರಜಾಪ್ರಭುತ್ವದಲ್ಲಿ ಈ ಮೂರು ತತ್ತ್ವಗಳು ಉತ್ತಮ ಅರ್ಥ ಪಡೆದುಕೊಂಡಿವೆ. ಮತ್ತು ಅದೇ ಅರ್ಥದಲ್ಲಿ ಬಳಕೆಯಾಗುತ್ತಿವೆ. ಮನುಷ್ಯನಲ್ಲಿ ಅಮೂರ್ತ ಸ್ವರೂಪದಲ್ಲಿ ಯಾವಾಗಲೂ ಇರುತ್ತವೆ. ಸಮಯ-ಸಂದರ್ಭಾನುಸಾರವಾಗಿ ಸತ್ಯದಿಂದ ಹಿಡಿದು ಎಲ್ಲ ತತ್ವಾಂಶಗಳು ಚಲಾವಣೆಗೊಳ್ಳುತ್ತವೆ. ಕೆಲವೊಮ್ಮೆ ಸುಳ್ಳು ಕೂಡ ಮಾನವೀಯ ಮೌಲ್ಯದ ಸ್ಥಾನವನ್ನು ಅಲಂಕರಿಸಬಹುದು. 'ಸುಳ್ಳು ಹೇಳಬಾರದು' ಸುಳ್ಳು ಎನ್ನುವುದು ಮಾನವನನ್ನು ತುಂಬ ಮೋಸ ಮಾಡುತ್ತದೆನ್ನುವುದು ಸತ್ಯ. ಆದರೆ ಒಂದು ಸುಳ್ಳಿನಿಂದ ಹಲವು ಮನುಷ್ಯರಿಗೆ ಒಳಿತಾಗುತ್ತದೆ ಎನ್ನುವುದಾದರೆ, ಯಾರೊಬ್ಬರಿಗೂ ನಷ್ಟ ಅಥವಾ ಮನಸ್ಸಿಗೆ ನೋವಾಗುವುದಿಲ್ಲವಾದರೆ ಸುಳ್ಳನ್ನು ಬೆಂಬಲಿಸಬಹುದು. ವಿಶೇಷ ಸಂದರ್ಭಗಳಲ್ಲಿ ಮಾತ್ರ ಬಳಸಬೇಕೆ ಹೊರತು ಅದನ್ನೇ ಬಂಡವಾಳವನ್ನಾಗಿ ಮಾಡಿಕೊಂಡರೆ ಅದು ಅಮಾನವೀಯವಾದೀತು.

## ಮಾನವ ಹಕ್ಕುಗಳು

ಈ ಮೊದಲಿನ ಮಾನವೀಯ ಮೌಲ್ಯಗಳು ಮತ್ತು ಮಾನವತಾವಾದದ ನೆರಳಿನಲ್ಲಿ ರೂಪುಗೊಂಡ ಹಕ್ಕು ಮತ್ತು ಕರ್ತವ್ಯಗಳೆಂದರೆ 'ಮಾನವ ಹಕ್ಕುಗಳು'. ಮಾನವನು ೨ನೇ ಮಹಾಯುದ್ಧದ ಸಂದರ್ಭದಲ್ಲಿ ಅನುಭವಿಸಿದ ಯಾತನೆಯ ಪರಿಣಾಮವಾಗಿ 'ಮಾನವ ಹಕ್ಕುಗಳ ಘೋಷಣೆ'ಯು ರೂಪುಗೊಂಡಿತು. ಯುದ್ಧದಲ್ಲಿ ಭಾಗವಹಿಸಿದ ಮತ್ತು ಭಾಗವಹಿಸದ ಎಲ್ಲಾ ರಾಷ್ಟ್ರಗಳು ಈ ಶಾಂತಿಯುತವಾದ ಒಪ್ಪಂದಕ್ಕೆ ಧ್ವನಿಗೂಡಿಸಿದವು. ಈ ಘೋಷಣೆಯಿಂದಾಗಿ ಸರ್ವಾಧಿಕಾರತ್ವದ ತಡೆ ಮತ್ತು ಅಮಾನವೀಯವಾಗಿ ಬದುಕುತ್ತಿದ್ದ ಮಾನವನ ಜೀವನವು ಉಚ್ಚತಮವಾಗತೊಡಗಿತು. ಭೂಮಿ ಮೇಲೆ ಹುಟ್ಟಿದ ಪ್ರತಿಯೊಬ್ಬ ವ್ಯಕ್ತಿಗೂ ಸ್ವಾತಂತ್ರ್ಯ ಮತ್ತು ಸಮಾನತೆಯಿಂದ ಜೀವಿಸುವ ಹಕ್ಕನ್ನು ಅಂತರರಾಷ್ಟ್ರೀಯ ಮಟ್ಟದಲ್ಲಿ ಕೊಡ ಮಾಡಲ್ಪಟ್ಟಿತು. 'ತಾನು ಬದುಕಬೇಕು, ಪರರನ್ನೂ, ಬದುಕಗೊಡಬೇಕು'ಎಂಬ ಧೋರಣೆಯ ಆಧಾರ ಮೇಲೆ ಮಾನವಹಕ್ಕುಗಳು ರೂಪಿತಗೊಂಡವು. ವಿಶ್ವಸಂಸ್ಥೆಯ ಯುನೆಸ್ಕೊ (ಸಂಯುಕ್ತ ರಾಷ್ಟ್ರಗಳ ಶೈಕ್ಷಣಿಕ, ವೈಜ್ಞಾನಿಕ ಮತ್ತು ಸಾಂಸ್ಕೃತಿಕ) ಸಂಸ್ಥೆ ಮಾನವ ಹಕ್ಕುಗಳನ್ನು ರೂಪಿಸುವ ಜವಾಬ್ದಾರಿಯನ್ನು ಹೊತ್ತು ಕೊಂಡಿತು. ಡಾ.ಜೂಲಿಯನ್ ಹಕ್ಸ್ಲೇ ಅವರು ನಿರ್ದೇಶಕರಾಗಿದ್ದರು. ಇವರಿಗೆ ಮಹಾತ್ಮ ಗಾಂಧಿ, ಇ.ಎಲ್. ಕಾರ್, ಹೆರಾಲ್ಡ್ ಲಾಸ್ಕಿ, ಮದರಿಯಾಗ, ಪ್ರೊಕ್ರೋಸಿ ಮತ್ತು ಚುಂಗ್-ಶು-ಲುವೋ-ಮೊದಲಾದ ಪ್ರಮುಖರು ಸಲಹೆಗಳನ್ನು ಕೊಟ್ಟರು. ಈ ಪ್ರಮುಖರ ಸಲಹೆ-ಸೂಚನೆಗಳನ್ನು ಸಂಗ್ರಹಿಸಿ ಪರಿಷ್ಕರಿಸಿ 'ಮಾನವ ಹಕ್ಕು'ಗಳನ್ನಾಗಿ ರೂಪಿಸಲಾಯಿತು. ಜಾಗತಿಕ ಮಟ್ಟದಲ್ಲಿ ಕಟ್ಟಲ್ಪಟ್ಟ ಹಕ್ಕು ಮತ್ತು ಕರ್ತವ್ಯಗಳು ಮಾನವನ ಭವಿಷ್ಯಕ್ಕೆ ಭದ್ರ ಬುನಾದಿಯಾದವು. ಮನುಷ್ಯನಿಗೆ ಗೌರವಯುತವಾದ ಜೀವನ ಸಾಗಿಸುವುದಕ್ಕೆ ಹಾಗೂ ಅವನ ವ್ಯಕ್ತಿತ್ವವು ಪರಿಪೂರ್ಣತೆಯನ್ನು ಪಡೆಯಲು ಈ ಹಕ್ಕುಗಳು ಅತ್ಯಗತ್ಯ. ಇವುಗಳ ಕಾಲ-ಸ್ಥಳ-ಕ್ರಿಯೆ; ಜಾತಿ-ಮತ-ಪಂಥ; ಲಿಂಗ-ವಯಸ್ಸು-ಐಶ್ವರ್ಯ ಮೊದಲಾದವುಗಳ ವಿಷಯದಲ್ಲಿ ಪಕ್ಷಪಾತ ತೋರಿಸುವುದು ಸಾಧ್ಯವಿಲ್ಲ. ವ್ಯಕ್ತಿ-ಸಮಾಜ-ರಾಷ್ಟ್ರಗಳ ಸರಳರೇಖೆಯ ಬೆಳವಣಿಗೆಯಲ್ಲಿ ಆರಂಭಿಕ ಸ್ಥಾನವಾದ ವ್ಯಕ್ತಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡುತ್ತವೆ. ವ್ಯಷ್ಟಿ ನೆಲೆಯೆ ಮುಖ್ಯವಾದ್ದರಿಂದ ಅವನ ಯಾವುದೇ ಹಕ್ಕು ಹರಣವಾದರೆ ರಾಷ್ಟ್ರ ಅಥವಾ ರಾಷ್ಟ್ರದ ನ್ಯಾಯಾಂಗವು ಸಹಿಸುವಂತಿಲ್ಲ. ಹಕ್ಕು ಅಥವಾ ಸ್ವಾತಂತ್ರ್ಯಹರಣವಾದ ಪಕ್ಷದಲ್ಲಿ ಎದುರಾಳಿಗೆ ತಕ್ಕ ಶಿಕ್ಷೆ ಮತ್ತು ದಂಡ ವಿಧಿಸುವ ಅಧಿಕಾರ ನ್ಯಾಯಾಂಗಕ್ಕೆ ಕೊಡಲಾಗಿದೆ.

ಮಾನವ ಹಕ್ಕುಗಳು ಮೊದಲಿನಿಂದಲೂ ಒಂದಲ್ಲ ಒಂದು ರೀತಿಯಲ್ಲಿ ಮಾನವ ಸಮಾಜದಲ್ಲಿ ಜಾರಿಯಲ್ಲಿವೆ. ಸಮಾಜದ ಸೂತ್ರವಾಗಿರುವ ಧರ್ಮದೊಂದಿಗೆ ಹುಟ್ಟಿಕೊಂಡಿರುವುದನ್ನು ನಾವು ಗ್ರೀಸ್, ರೋಮ್ ಸಮಾಜಗಳಲ್ಲಿ ಕಾಣುತ್ತೇವೆ. ವ್ಯಕ್ತಿ ಮಾಡಬಹುದಾದ ಕರ್ತವ್ಯಗಳು, ಪಡೆಯ

ಬಹುದಾದ ಅಂತಸ್ತು ಮತ್ತು ಅವನ್ನು ಪಡೆಯಲು ಮಾಡುವ ಹರಸಾಹಸದ ನೈತಿಕ-ಅನೈತಿಕ ಮಾರ್ಗಗಳೇ ಮಾನವೀಯ ಅಥವಾ ಅಮಾನವೀಯ ಎಂದು ಗುರುತಿಸಿಕೊಳ್ಳುತ್ತವೆ. ಧರ್ಮದೊಂದಿಗೆ ಬೆಸೆದುಕೊಂಡಿದ್ದರಿಂದ ಪ್ರಾಚೀನ ಮಾನವ ತುಂಬಾ ಗೌರವದಿಂದ ಬಾಳನ್ನು ಸಾಗಿಸಿದ್ದಾನೆ. ಕಾಲ ಬದಲಾದಂತೆಲ್ಲಾ ಹಕ್ಕುಗಳ ರೂಪು ರೇಷೆಯು ಸಹ ಹಳತನ್ನು ಕಳೆದುಕೊಂಡು ಹೊಸ ರಿವಾಜುಗಳನ್ನು ಅಳವಡಿಸಿಕೊಂಡಿವೆ. ಹೀಗೆ ನೋಡಿದಾಗ ಮಾನವ ಹಕ್ಕುಗಳು ಶಾಶ್ವತವಲ್ಲವೆ? ಸ್ಥಿತಿಸ್ಥಾಪಕತ್ವ ಗುಣವನ್ನು ಹೊಂದಿವೆಯೇ? ಎಂಬ ಪ್ರಶ್ನೆ ಉದ್ಭವಿಸುತ್ತವೆ. ಈ ಪ್ರಶ್ನೆಗಳಿಗೆ ಮೂಲಭೂತವಾಗಿ ಹಕ್ಕುಗಳು ಶಾಶ್ವತವಾದಗಳು. ಆದರೆ ಪರಿಸ್ಥಿತಿಯ ಬೆಳವಣಿಗೆಯನ್ನು ಅನುಸರಿಸಿ ಇವು ಸಹ ಬದಲಾಗುವ ಗುಣ ಹೊಂದಿವೆ. ಸಂಪೂರ್ಣವಾಗಿ ಬದಲಾವಣೆಯಾಗಲಾರವು ಎಂಬುದೇ ಉತ್ತರ.

ಈಗ ರೂಪಿತಗೊಂಡಿರುವ 'ಮಾನವ ಹಕ್ಕುಗಳು' ಘೋಷಣಾ ಪತ್ರದಲ್ಲಿ ೩೦ ಕಲಮುಗಳಿವೆ. ಈ ಎಲ್ಲ ಕಲಮುಗಳು ಮಾನವನ ಹಕ್ಕು-ಬಾಧ್ಯತೆಗಳ ಬಗ್ಗೆ ವಿವರವನ್ನು ತಿಳಿಸುತ್ತವೆ. ಮಾನವನಿಗೆ ಅವಶ್ಯವೆನ್ನಬಹುದಾದ ಪ್ರಾಥಮಿಕ ಸೌಲಭ್ಯಗಳೂ ಇಲ್ಲದ ದೇಶಗಳಲ್ಲಿ ಇವು ಹೆಚ್ಚು ಮಹತ್ವ ಪಡೆದಿವೆ. ಜಾತಿ, ಗುಲಾಮತನ, ವರ್ಣ ಮೊದಲಾದವುಗಳಿಂದ ಶೋಷಿತಗೊಂಡ ಮನುಷ್ಯ ಮಾವನ ಹಕ್ಕುಗಳಿಂದ ಚೇತರಿಕೆ ಪಡೆದುಕೊಂಡ. 'ಗುಲಾಮತನ'ವು ಬಹುದೊಡ್ಡ ಅಮಾನವೀಯ ವ್ಯವಸ್ಥೆ. ಅಂತೆಯೇ ಅಬ್ರಹಾಂ ಲಿಂಕನ್ ಅವರು "ಗುಲಾಮಗಿರಿ ಅನ್ಯಾಯವಲ್ಲದಿದ್ದರೆ, ಜಗತ್ತಿನಲ್ಲಿ ಅನ್ಯಾಯವೆಂಬುದು ಇಲ್ಲವೇ ಇಲ್ಲ" ಎಂದಿದ್ದಾರೆ.

ಮಾನವ ಹಕ್ಕುಗಳ ಆಯೋಗವು ಜಾರಿಗೆ ಬಂದಂದಿನಿಂದ ಸಾಮಾಜಿಕ ಮತ್ತು ವೈಯುಕ್ತಿಕ ನೆಲೆಯಲ್ಲಿ ಹರಣಗೊಂಡ ಹಕ್ಕುಗಳನ್ನು ಪುನರ್ ಸ್ಥಾಪಿಸಿದೆ. ಉಲ್ಲಂಘಿಸಿದವರನ್ನು ಶಿಕ್ಷೆಗೆ ಒಳ ಪಡಿಸಿದೆ. ರಾಷ್ಟ್ರ ಮತ್ತು ರಾಜ್ಯಗಳ ಮಟ್ಟದಲ್ಲಿ ಒಂದೊಂದು 'ಮಾನವ ಹಕ್ಕುಗಳ ಆಯೋಗ'ವನ್ನು ರಚಿಸಲಾಗಿದೆ. ಡಿ. ಆರ್. ಕಾರ್ತೀಕೆಯನ್ ಅವರು ಭಾರತದ ಮಾನವ ಹಕ್ಕುಗಳ ಆಯೋಗದ ಅಧ್ಯಕ್ಷರಾಗಿದ್ದಾರೆ. ಈ ನಿಟ್ಟಿನಲ್ಲಿ ಕರ್ನಾಟಕದಲ್ಲಿಯೂ ಆಯೋಗ ಕೆಲಸ ಮಾಡುತ್ತದೆ.

ಸೂಕ್ಷ್ಮವಾಗಿ ಮಾನವೀಕರಣದ ಎಳೆ ಮಾನವತಾವಾದ, ಮಾನವಹಕ್ಕು, ಮಾನವೀಯ ಮೌಲ್ಯಗಳು ಈ ಮೂರು ಘಟಕಗಳಿಂದ ಹಾದು ಬಂದಿರುವುದನ್ನು ಗಮನಿಸಬಹುದು. ಮಾನವತಾ ವಾದವು ಯುರೋಪಿಯನ್ ರಾಷ್ಟ್ರಗಳಿಂದ ಆರಂಭವಾದರೂ ಸಹ ಜಗತ್ತಿನ ಪ್ರತಿ ಪ್ರಜೆಯ ರಕ್ತದಲ್ಲೂ ಲೀನವಾಗಿದೆ. ಆ ಲೀನತೆಯೇ ಮಾನವೀಯ ಮೌಲ್ಯಗಳು. ಅದರ ಪ್ರಜ್ವಲತೆಯ ಕೀರ್ತಿ ಮಾತ್ರ ಯುರೋಪಿಯನ್‌ರಿಗೆ ಸಲ್ಲುತ್ತದೆ. ಇದೇ ಮುಂದೆ ಎರಡು ಜಾಗತಿಕ ಮಹಾಯುದ್ಧಗಳಾದ ನಂತರ ಮಾನವ ಹಕ್ಕುಗಳಾಗಿ ರೂಪ ತಾಳಿತು. ಮಾನವೀಯ ಮೌಲ್ಯಗಳು, ಮಾನವತಾವಾದ ಮತ್ತು ಮಾನವ ಹಕ್ಕುಗಳೇ ಮಾನವೀಕರಣದ ಬೇರುಗಳಾಗಿವೆ.

## ಜಾಗತಿಕ ನೆಲೆ

ಮಾನವ ವಿಕಾಸದ ಹೆಜ್ಜೆ ಗುರುತುಗಳನ್ನು ಜೀವ ವಿಕಾಸದ ವಿವಿಧ ಅವಸ್ಥಾಂತರಗಳಲ್ಲಿ ಶೋಧಿಸುತ್ತಾ ಸಾಗಿದಾಗ, ಇನ್ನೂ ಹಿಂದಕ್ಕೆ, ಅಜೈವಿಕ ಪದಾರ್ಥದವರೆಗೂ ಹೋಗುವುದು ಸಾಧ್ಯವಿದೆ. ಅಂತಹ ಶೋಧನೆಯ ಸಂದರ್ಭದಲ್ಲಿ ಒಂದು ಕೊಂಡಿ ಕಳಚಿಕೊಂಡಿರುವುದನ್ನು ಗಮನಿಸುತ್ತೇವೆ. ಇತಿಹಾಸ ಎನ್ನುವುದು ಮಾನವೀ ಕ್ರಿಯೆಗಳ, ಮಾನವನ ಸೋಲು ಗೆಲುವುಗಳ ದಾಖಲೆಯಾಗಿದೆ. ಈ ದಾಖಲೆಗಳಲ್ಲಿ ಕ್ರೋಡಿಕರಣಗೊಂಡಿರುವ ಮಾನವನ ಆತ್ಮ ಸಂಬಂಧಿ ಇತಿಹಾಸ ತೀರ ಕಡಿಮೆ. ಗ್ರೀಕ್ ಹಾಗೂ ರೋಮ್ ಚರಿತ್ರೆಯ ಸಂದರ್ಭದಲ್ಲಿ ಅಲ್ಲೊಂದು ಇಲ್ಲೊಂದು ದೊರೆಯುವ ಅಂಶದ ದಾಖಲೆಗಳನ್ನು ಬಿಟ್ಟರೆ ಮಹತ್ವದ ದಾಖಲೆಗಳೇ ಸಿಗುತ್ತಿಲ್ಲ. ಗ್ರೀಕ್ ಚರಿತ್ರೆಯಲ್ಲಿ ಗುಲಾಮಗಿರಿಯ ಸಮಾಜ ಅಸ್ತಿತ್ವದಲ್ಲಿದ್ದುದರಿಂದ ಅಲ್ಲಿ ಮಾನವತಾವಾದವನ್ನು ಹುಡುಕುವುದು ಬಣವೆಯಲ್ಲಿ ಸೂಜಿಯನ್ನು ಹುಡುಕಿದಷ್ಟೆ ಕಷ್ಟ. ಅದೇ ರೀತಿ ರೋಮ್‌ನಲ್ಲಿ ಪ್ರಭುತ್ವದ ನೆರಳಲ್ಲಿ ಮಾನವತಾ ವಾದವು ಬದುಕಿರುವುದು ಅಷ್ಟಕಷ್ಟೆ. ಪೂರ್ವ ಏಶಿಯಾ ಖಂಡದಲ್ಲಿನ ಇತಿಹಾಸದಲ್ಲಿ ಚೀನಾದಲ್ಲಿ ಅದು ಪ್ರಕಟಗೊಂಡಿದ್ದರೆ (ಮಧ್ಯ ಯೂರೋಪ್) ಭಾರತದಲ್ಲಿನ ಮಾನವತಾವಾದವು ಆದಿಮ ಸಮಾಜದಲ್ಲಿ ತೀರ ನಿಕೃಷ್ಟವಾಗಿತ್ತು. ನಾಗರಿಕತೆಗಳು ಬೆಳೆದಂತೆಲ್ಲ ಮಾನವತಾವಾದವು ಸಹ ನಿಧಾನವಾಗಿ ರೂಪು ತಳೆಯಿತು.

ಕ್ರಿ.ಶ. ೧೩, ೧೪ ಮತ್ತು ೧೫ನೇ ಶತಮಾನಗಳ ಸಾಹಿತ್ಯ, ಚಿತ್ರಕಲೆ, ಸಂಗೀತ ಮತ್ತು ಜೀವನ ವಿಧಾನಗಳಲ್ಲೊಂದು ಹೊಸತನ್ನು ಪುನರುಜ್ಜೀವನ ಚಳುವಳಿಯು ಬಿತ್ತಿತು. ಕ್ರಿಶ್ಚಿಯನ್ ಧರ್ಮದಲ್ಲಿದ್ದ ಪ್ರಾಟೊಸ್ಟಂಟ್ ಮತ್ತು ಕ್ಯಾಥೋಲಿಕ್ ಪಂಥಗಳು ಒಂದಕ್ಕೊಂದು ತದ್ವಿರುದ್ಧದ ಅವಸ್ಥೆಯನ್ನು ೧೩, ೧೪ನೇ ಶತಮಾನದಲ್ಲಿ ಹೊಂದಿದ್ದವು. ಸನಾತನ ಕಾಲದ ಮೌಲ್ಯಗಳನ್ನು ಪೋಷಿಸಿಕೊಂಡು ವ್ಯಕ್ತಿಯನ್ನು ಗುಲಾಮನಂತೆ ನಡೆಸಿಕೊಳ್ಳುತ್ತಿದ್ದ ಪ್ರಾಟೋಸ್ಟಂಟ್ ಪಂಥಕ್ಕೆ ವಿರುದ್ಧವಾಗಿ, ಅಂದರೆ ಗುಲಾಮ ವ್ಯವಸ್ಥೆಗೆ ಪ್ರತಿಕ್ರಿಯೆಯಾಗಿ ಮೂಡಿಬಂದಿತು. 'ಧರ್ಮವೇ ಎಲ್ಲ ಚಟುವಟಿಕೆಗಳಿಗೂ ಮೂಲ' ಎನ್ನುವ ಸಂದರ್ಭದಲ್ಲಿ ಮಾನವನಿಗೆ ಅಸ್ತಿತ್ವವಿದ್ದಿಲ್ಲ. ರಾಷ್ಟ್ರಗಳು ಅಭಿವೃದ್ಧಿ ಹೊಂದಬೇಕಾದರೆ ಅವುಗಳ ಧರ್ಮವನ್ನು ಆಶ್ರಯಿಸಬೇಕು ಎಂದು ಹಿಂದೂ, ಬೌದ್ಧ, ಕ್ರಿಶ್ಚಿಯನ್, ಕನ್‌ಫ್ಯೂಶಿಯಸ್, ಇಸ್ಲಾಂ ಮತ್ತು ಯಹೂದ್ಯ ಧರ್ಮಗಳ ರಾಷ್ಟ್ರಗಳ ಪ್ರಗತಿಯನ್ನು ವೇಬರ್ ಅಧ್ಯಯಿಸಿದ್ದಾನೆ. ಈತನ ತತ್ವದಿಂದ ಕ್ರಿಶ್ಚಿಯನ್ ಮತದ ಪ್ರಾಟೋಸ್ಟಂಟ್ ಪಂಥದ ರಾಷ್ಟ್ರಗಳು ಅಭಿವೃದ್ಧಿ ಹೊಂದಿರುವುದು ತಿಳಿಯುತ್ತದೆ. ಹೀಗೆ ಪ್ರಾಟೋಸ್ಟಂಟ್ ಪಂಥವು ಬಂಡವಾಳ ಶಾಹಿಯನ್ನು ಪೋಷಿಸಿತು. ಕಾಲ ಬದಲಾದಂತೆಲ್ಲಾ ಧರ್ಮಕ್ಕಿಂತಲೂ ವ್ಯಕ್ತಿ ಮುಖ್ಯನಾಗುವ ಪ್ರಕ್ರಿಯೆ ಹೆಚ್ಚಾಯಿತು. 'ವ್ಯಕ್ತಿಯೇ ಎಲ್ಲ ವಸ್ತುಗಳ-ಚಟುವಟಿಕೆಗಳ-ಅಳತೆಗೋಲು'(Man is mesurement of all things or activities)

ಎಂಬ ನಿಲುವು ಸಿದ್ಧವಾಯಿತು. ಅಳತೆಗೋಲು ಇಲ್ಲದ ಸಿದ್ಧಾಂತ/ವಿಜ್ಞಾನ/ವಾದ ಸುಳ್ಳು. ಅಳತೆಗೋಲು ಅಥವಾ ಮಾನದಂಡವಿಲ್ಲದಿದ್ದರೆ ಸಿದ್ಧಾಂತಕ್ಕೆ ನಿಖರವಾದ ಬೆಲೆ ಬರುವುದಿಲ್ಲ. ಅಂತೆಯೇ 'ಮಾನವತಾವಾದಕ್ಕೆ ಮನುಷ್ಯನೇ ಮಾನದಂಡ, ಮನುಷ್ಯತ್ವದ ಸಗುಣರೂಪ ಮನುಷ್ಯನೇ' ಎಂಬುದು ಇಲ್ಲಿಯ ತಿರುಳು. ಮಾನವನೇ ಮೊದಲಿಗನಾಗಿ ಸಮಾಜ ಮತ್ತು ಧರ್ಮಗಳು ನಂತರದ ಸ್ಥಾನಗಳನ್ನು ಪಡೆದವು. 'ಮನುಷ್ಯ ಪಾಪ ಮಾಡಿದ್ದರಿಂದ ಅದರ ಫಲದ ಅನುಭವಿಕೆಗಾಗಿ ಭೂಮಿಯ ಮೇಲೆ ಜನ್ಮ ತಾಳುತ್ತಾನೆ' ಎಂಬ ಕ್ರಿಶ್ಚಿಯನ್ ವಾದದ ತಿರಸ್ಕಾರ ಔದ್ಯೋಗಿಕ ಕ್ರಾಂತಿಯ ಸಂದರ್ಭದಲ್ಲಿ ಮೂಡಿಬಂದಿತು. ಔದ್ಯೋಗಿಕ ಕ್ರಾಂತಿ, ತಾಂತ್ರಿಕ ಪರಿಣತಿ ಮತ್ತು ಉತ್ಪಾದನಾ ವ್ಯವಸ್ಥೆಯಲ್ಲಾದ ಬದಲಾವಣೆಯಿಂದ ಊಳಿಗಮಾನ್ಯ ಪದ್ಧತಿಗೆ ಪೆಟ್ಟು ಬಿದ್ದಿದ್ದಲ್ಲದೆ -ಧರ್ಮದ ಭಾವನೆ ಅಳಿಸತೊಡಗಿತು. ಮಧ್ಯಮ ವರ್ಗದ ಜನತೆಯಾಗಿ ಮಾರ್ಪಟ್ಟ ಕಸುಬುದಾರರು ಧರ್ಮ ಮತ್ತು ಸಂಸ್ಕೃತಿಯನ್ನು ಬದಲಾವಣೆಯ ಪ್ರಕ್ರಿಯೆಗೆ ನಾಂದಿ ಹಾಡಿದರು. ಈ ಪ್ರಕ್ರಿಯೆಯ ಜೊತೆಗೆ ಕೆಲಸ ಮಾಡಿ ಬಿಡುವಿದ್ದ ವಿರಾಮ ಕಾಲದಲ್ಲಿ ಸಾಹಿತ್ಯ ರಚಿಸುವ ಕ್ರಿಯೆ ಮತ್ತು ಓದುವ ವರ್ಗ ಸೃಷ್ಟಿಯಾಯಿತು. ಈ ಸಂದರ್ಭದಲ್ಲಿ ಪ್ರಾಟೋಸ್ಟಂಟ್ ಪಂಥವು ಮಾನವನಿಗೆ ಅಗತ್ಯವೆನ್ನಬಹುದಾದ ನೀತಿ, ಮೌಲ್ಯಗಳನ್ನು ಪುನರ್‌ರೂಪಿಸಿಕೊಂಡಿತು. ಇದರಿಂದಾಗಿ ಮಾನವೀಯತೆಯ ಬೆಳವಣಿಗೆಯ ಕ್ರಿಯೆ ಧರ್ಮದೊಳಗೂ ಪ್ರವೇಶ ಪಡೆಯತೆನ್ನಬಹುದು. ಸಮುದಾಯದ ಹಿತಾಸಕ್ತಿಯೇ ಬೇರೆ, ವ್ಯಕ್ತಿಯ ಹಿತಾಸಕ್ತಿಯೇ ಬೇರೆಯಾಗಿರುವುದರಿಂದ 'ಪ್ರತಿಯೊಬ್ಬರಿಗೂ ಹಕ್ಕು ಮತ್ತು ಕರ್ತವ್ಯಗಳಿವೆ' ಎಂಬ ಪುನರುಜ್ಜೀವನ ಕಾಲದ ಯೋಜನೆಯಿಂದಾಗಿ ಕ್ರಿಶ್ಚಿಯನ್ ಧರ್ಮದಲ್ಲಿ ವ್ಯಕ್ತಿಯ ಹಿತಾಸಕ್ತಿಗೆ ಗಮನ ಕೊಡಲಾಯಿತು. ಈ ಸಂಕ್ರಮಣ ಕಾಲದಲ್ಲಿ ಹುಟ್ಟಿದ ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವ ಎಂಬ ಮೂರು ತತ್ವಗಳು ಮುಂದಿನ ಚಳುವಳಿಗೆ ನಾಂದಿ ಹಾಡಿದವು. ಧರ್ಮದ ಮೂಲಕ ಗುರುತಿಸಿಕೊಳ್ಳುತ್ತಿದ್ದ ಮನುಷ್ಯ ಕ್ರಮೇಣ 'ರಾಷ್ಟ್ರ'ದ ಲಾಂಛನದಡಿಯಲ್ಲಿ ಕಾಣಿಸಿಕೊಳ್ಳಲು ತೊಡಗಿದ. ಇದು ಕ್ರಿಶ್ಚಿಯನ್ ಧರ್ಮಕ್ಕೆ ಪರ್ಯಾಯವಾಗಿ ಜನತಾಂತ್ರಿಕ ವ್ಯವಸ್ಥೆಯ ನೆಲೆಗೆ ಕಾರಣವಾಯಿತು. ಈ ವ್ಯವಸ್ಥೆಯನ್ನು ರೂಪಿಸುವಿಕೆಯಲ್ಲಿ ಎರಡು ಶಕ್ತಿಗಳು ಕೆಲಸ ಮಾಡಿವೆ. ೧. ಮಧ್ಯಮ ವರ್ಗವಾಗಿ ರೂಪಾಂತರಗೊಂಡ ಕಸುಬುದಾರ, ೨. ಊಳಿಗಮಾನ್ಯ ಪದ್ಧತಿಯನ್ನು ಪ್ರಶ್ನೆ ಮಾಡಿದ ರೈತ. ಈ ಕ್ರಿಯೆಯಿಂದಾಗಿ 'ಮಿತಿಯಿಲ್ಲದ ಮಾನವ ಶಕ್ತಿಯನ್ನು ಬಳಸಿಕೊಂಡು ಬಂಡವಾಳಶಾಹಿ ಉದ್ಭವವಾದದ್ದು' ಬೇರೆ ಮಾತಾಗುತ್ತದೆ. ಆದರೆ ವ್ಯಕ್ತಿಗೆ ಯಾವ ಸಂಕೋಲೆಗಳೂ ಇರಕೂಡದು-ಧರ್ಮದ ನಿಯಂತ್ರಣ ತಪ್ಪಬೇಕೆಂದು ನಡೆದ ಮಾನವ ಪ್ರಕ್ರಿಯೆ ಬಹುಮುಖ್ಯವಾದುದು.

ಬೂರ್ಷ್ವಾ ಚಳುವಳಿಯು ಧರ್ಮ ಮತ್ತು ಅಮಾನುಷ ಧೋರಣೆಗಳನ್ನು ನಿರಾಕರಿಸಿತು. ಅನುಭವಕ್ಕೆ ದಕ್ಕುವ, ಮಾನವ ಜೀವನಕ್ಕೆ ಅಗತ್ಯವೆನ್ನುವ ವಿಚಾರಗಳನ್ನು ಚರ್ಚಿಸುವ ಪರಂಪರೆ ಯನ್ನು ಹುಟ್ಟು ಹಾಕಿತು. ಸಾಮಾಜಿಕ ಮತ್ತು ನೈಸರ್ಗಿಕ ಕ್ರಿಯೆಗಳನ್ನು ವೈಚಾರಿಕವಾಗಿ ಯೋಚಿಸುವ

ಚಿಂತನೆ ಉದ್ಭವವಾಯಿತು. 'ಮನುಷ್ಯ ತಾನು ಕ್ರಿಯೆಯನ್ನಿಟ್ಟು ಮಾಡಿದರೆ ಏನನ್ನು ಬೇಕಾದರೂ ಸಾಧಿಸಬಹುದು' ಎಂಬ ತಿಳುವಳಿಕೆಯು ಧರ್ಮದ ಮೇಲಿದ್ದ ನಂಬಿಕೆಯನ್ನು ಬೇರ್ಪಡಿಸಿತು. ಇದು ಧರ್ಮದಿಂದ ಏನೆಲ್ಲಾ ಸಾಧಿಸಬಹುದೆಂಬ ಮೊದಲ ಮಾತಿಗೆ ಪ್ರತಿಸ್ಪರ್ಧಿಯಾಯಿತು. ಇದರ ಪ್ರತಿಫಲವೆಂಬಂತೆ ಪುನರುಜ್ಜೀವನ ಕಾಲದಲ್ಲಿ ಬಂದ ಸಾಹಿತ್ಯ, ಶಿಲ್ಪ, ಚಿತ್ರಕಲೆ, ಸಂಗೀತಗಳೆಲ್ಲವೂ ಮನುಷ್ಯಕೇಂದ್ರಿತವೇ ಆದುವು. ಕ್ರಿ.ಶ.೧೪-೧೬ನೇ ಶತಮಾನಗಳಲ್ಲಿ ಮಾನವತಾವಾದವು ತನ್ನ ಭದ್ರತೆಯನ್ನು ಪಡೆದುಕೊಂಡಿತು. ಬೂರ್ಷ್ವಾ ಚಳುವಳಿಯಿಂದಾಗಿ ನೈದರ್ ಲ್ಯಾಂಡ್, ಇಂಗ್ಲೆಂಡ್, ಫ್ರಾನ್ಸ್ ಮತ್ತು ಇತರೆ ಯುರೋಪ್ ರಾಷ್ಟ್ರಗಳಲ್ಲಿ ಬೂರ್ಷ್ವಾ ಸಂಸ್ಕೃತಿ ರೂಪುಗೊಂಡಿತು. ಕ್ರಿ.ಶ.೧೭ನೇ ಶತಮಾನದಲ್ಲಿ ವ್ಯಕ್ತಿಯ ಹಕ್ಕುಗಳು, ಪ್ರಜಾಸತ್ತೆಯ ಸ್ವಾತಂತ್ರ್ಯ ಮತ್ತು ಮಾನವೀಯತೆಗಳು ಪ್ರಭುತ್ವವನ್ನು ಸ್ಥಾಪಿಸಿದವು. ಇವುಗಳ ಉದ್ದೇಶ ನಿರಂಕುಶ ಪ್ರಭುತ್ವ ಮತ್ತು ಊಳಿಗಮಾನ್ಯ ಪದ್ಧತಿಯನ್ನು ನಿರ್ಮೂಲನೆ ಮಾಡುವುದಾಗಿತ್ತು. ಸ್ಪಿನೋಜ (Spinoza), ಲಾಕ್ (Locke) ಮೊದಲಾದ ಪ್ರಗತಿಗಾಮಿಗಳು ಪ್ರತಿಗಾಮಿಗಳ ಹೇರಿಕೆಗಳನ್ನು, ಧರ್ಮಾಂಧತೆಯನ್ನು ವಿರೋಧಿಸಿದರು. ಅಂತೆಯೇ ಥಾಮಸ್ ಹಾಬ್ಸ್ ಎನ್ನುವ ಚಿಂತಕ "ಪ್ರಭುತ್ವ ಕೂಡ ಮನುಷ್ಯನಿಗೆ ಅಗತ್ಯ. ಯಾಕೆಂದರೆ ಅದು ಮನುಷ್ಯನ ಹಿತಾಸಕ್ತಿಗನುಗುಣವಾಗಿ ವರ್ತಿಸುತ್ತದೆ. ಅನಗತ್ಯವಾದುದನ್ನು ಕೈಬಿಡುತ್ತದೆ" ಎಂದಿದ್ದಾನೆ. ಹೀಗಾಗಿ ಕಾನೂನು, ಪ್ರಭುತ್ವ ಬೇಕು ಆದರೆ ಅವು ವ್ಯಕ್ತಿ ಸ್ವಾತಂತ್ರ್ಯಕ್ಕೆ ಕಡಿವಾಣ ಹಾಕುವಂತಿರಬಾರದು. ಸಮಾಜ ಮತ್ತು ವ್ಯಕ್ತಿಯ ನಡುವಿನ ಸಂಬಂಧ ಹೇಗಿರಬೇಕು ಎಂಬುದನ್ನು ಧರ್ಮ ನಿರ್ಧರಿಸುತ್ತಿತ್ತು. ನಂತರ ಆ ಕೆಲಸ ರಾಜಪ್ರಭುತ್ವಕ್ಕೆ ವರ್ಗಗೊಂಡಿತು. ರಾಜಪ್ರಭುತ್ವ ಮತ್ತು ಧರ್ಮ ಪ್ರಭುತ್ವಗಳನ್ನು ನಿರಾಕರಿಸಿ ಅವುಗಳ ಜಾಗದಲ್ಲಿ ಮನುಷ್ಯನ ಹಿತಾಸಕ್ತಿಗಳು, ಕಾಳಜಿಗಳನ್ನು ನಿರ್ಮಿಸುವ ಕಡೆಗೆ ತತ್ವಜ್ಞಾನಿಗಳು ಒಲವು ತೋರಿಸಿದರು. ಇಲ್ಲವೆ 'ಇವುಗಳನ್ನು ಪ್ರಭುತ್ವಗಳು ಪ್ರತಿಬಿಂಬಿಸಬೇಕು' ಎಂಬುದು ಅವರ ವಾದವಾಗಿತ್ತು. ಕಾನೂನು ಸಂಗಾತಿಯ ವಿರುದ್ಧ ಹೋರಾಡುವುದಕ್ಕಲ್ಲ, ಶತ್ರುವಿನ ವಿರುದ್ಧ ಹೋರಾಡುವುದಕ್ಕೆ ಬೇಕು. ಅದಕ್ಕಾಗಿಯೇ (ಕೆಲವರು) ರಾಜ ಪ್ರಭುತ್ವಕ್ಕೆ ಶಕ್ತಿ ಕೊಡಲಾಯಿತು.

'ಮನುಷ್ಯ ಅತ್ಯುನ್ನತ ಮೌಲ್ಯಗಳನ್ನು ಉತ್ಪಾದಿಸಬಲ್ಲ ಮತ್ತು ಪ್ರಪಂಚವನ್ನು ಒಳ್ಳೆಯದಕ್ಕಾಗಿ ಬದಲಾಯಿಸಬಲ್ಲ' ಎಂಬ ಫಲಿತವನ್ನು ಫ್ರೆಂಚ್ ಕ್ರಾಂತಿಯು ಕೊಟ್ಟಿತು. ಎಲ್ಲ ವಿಚಾರಗಳಿಗೂ ಒಂದು ಮೂರ್ತ ಸ್ವರೂಪ ದೊರಕಿದ್ದು ಫ್ರೆಂಚ್ ಕ್ರಾಂತಿಯಿಂದ ಮತ್ತು ತತ್ವಜ್ಞಾನಿಗಳಿಂದ. ಡಿಡಿರೋ (Diderot) ಎಂಬ ತತ್ವಜ್ಞಾನಿ "ಮನುಷ್ಯ ನಮ್ಮ ಎಲ್ಲ ವಿಚಾರಗಳ ಕೇಂದ್ರಬಿಂದು, ಎಲ್ಲಿದ್ದರೂ ಮತ್ತೆ ಅವನಲ್ಲಿಗೆ ಬರಬೇಕು"ಎಂದಿದ್ದಾನೆ. (Man is the only Point from which all must issue and to which all must return) ಮಾನವನಿಗೆ ಸ್ವಪ್ರಜ್ಞೆಯಿದೆ, ನಲಿವು-ನೋವುಗಳ ಅರಿವಿದೆ, ಒಳ್ಳೆಯದು-ಕೆಟ್ಟದು ಎಂಬ ವಿವೇಚನೆ ಇದೆ. ಹುಟ್ಟು-ಸಾವುಗಳ ಸ್ಪಷ್ಟ ಕಲ್ಪನೆಯಿದೆ.

ಮನುಷ್ಯ ಹುಟ್ಟಿರುವುದು ಸಂತೋಷವಾಗಿರಲಿಕ್ಕೆ. ಹೀಗಿದ್ದೂ ಸಮಾಜ ಮತ್ತು ಧರ್ಮಗಳು ಕಟ್ಟಳೆಗಳ ಸಂಕೋಲೆಗಳಿಂದ ಬಂಧಿಸಿವೆ. ಇದರಿಂದ ತನ್ನ ವಿಚಾರ ಶಕ್ತಿಯನ್ನು ಧರ್ಮಕ್ಕೆ ಬಿಟ್ಟುಕೊಟ್ಟಿದ್ದ. ಸಮಾಜದ ಗುಲಾಮನಾದ ಮನುಷ್ಯನನ್ನು ಕುರಿತು ಪಾಲ್ ಹಾಲ್‌ಬಾಕ್‌ನು (Paul Holbach) "ಮನುಷ್ಯ ದುಃಖಿತ ಖೈದಿಯಾಗಿದ್ದಾನೆ. ಅವನಿಂದ ಸ್ಫೂರ್ತಿಯನ್ನ, ವಿವೇಕ ಮತ್ತು ಧೈರ್ಯವನ್ನು, ದಿನ ಬೆಳಕನ್ನು ಹೃದಯಹೀನ ಜೈಲರ್ ತಡೆಹಿಡಿದಿದ್ದಾನೆ". ಇದೇ ಅರ್ಥದಲ್ಲಿ ಜಾನ್ ಜಾಕ್ವೆಸ್ ರೂಸೋ "ಮನುಷ್ಯ ಹುಟ್ಟುವಾಗಲೇ ಸ್ವತಂತ್ರನಾಗಿದ್ದಾನೆ ಮತ್ತು ಎಲ್ಲ ಕಡೆಗಳಿಂದಲೂ ಬಂಧಿತನಾಗಿದ್ದಾನೆ. "(Man is born free; and every where he is in chains) ಎಂದು ಹೇಳಿರುವನು. ಈ ತತ್ವಜ್ಞಾನಿಗಳ ಮುಖ್ಯ ಆಶಯವೆಂದರೆ ರಾಜಪ್ರಭುತ್ವ ಮತ್ತು ಧರ್ಮದ ನಿಯಂತ್ರಣದಿಂದ ಮನುಷ್ಯನನ್ನು ಹೊರತರುವುದಾಗಿದೆ. ಮಾನವೀಯತೆ ಅಥವಾ ಹೃದಯವಿಲ್ಲದ ಈ ಪ್ರಭುತ್ವಗಳು ಮನುಷ್ಯನ ಅಂತಃಸತ್ವವನ್ನು ನೆಲದಲ್ಲಿ ಹಾಕಿ ತುಳಿಯುತ್ತವೆ ಎನ್ನುವುದಾಗಿದೆ.

ಫ್ರೆಂಚ್ ಕ್ರಾಂತಿಯ ಬೆನ್ನ ಹಿಂದೆಯೇ ಹುಟ್ಟಿದ ಸೈದ್ಧಾಂತಿಕ ಪ್ರತಿಕ್ರಿಯೆಗಳ ಪರಿಣಾಮವಾಗಿ ಬೆಳೆದ ಅನೇಕ ಸಂಗತಿಗಳಲ್ಲಿ ಮಾನವತಾವಾದವೂ ಒಂದು. ಕ್ರಾಂತಿಕಾರಿ ರಾಜಕೀಯ ಸಿದ್ಧಾಂತಗಳು ವಿಕಾಸಗೊಂಡ ಹಾಗೆ, 'ಮಾನವ ಜಗತ್ತಿನ ರೂವಾರಿ ಮಾನವನೇ' ಎಂದು ಅವರು ಎಬ್ಬಿಸಿದ ಘೋಷಣೆಯಿಂದಲೇ ಉದಯಗೊಂಡದ್ದು 'ಮಾನವತಾವಾದ'. ಈ ಘೋಷಣೆಯನ್ನು ತಿರಸ್ಕರಿಸಿದ ಸಂಪ್ರದಾಯವಾದಿಗಳು ದೇವರಿಗೆ ಅಥವಾ ಅತಿಮಾನುಷತೆಗೆ ಮಾನ್ಯತೆ ಕೊಡತೊಡಗಿದರು. ಕಾಲಾನಂತರ ವಿಚಾರವಾದಿಗಳ ಚಿಂತನಾತ್ಮಕ ವಿಚಾರಗಳಿಂದ ಮಾನವನಿಗೆ ಆದ್ಯತೆ ಕೊಡತೊಡಗಿದರು.

೧೮ನೇ ಶತಮಾನದಲ್ಲಿ ಹೆಲ್ವೆಟಿಸ್ (Helvetins), ಡಿಡಿರೋ, ಹಾಲ್‌ಬಾಕ್ ಮೊದಲಾದವರು ರಾಜಕೀಯ ಸ್ವಾತಂತ್ರ್ಯ, ಆಸ್ತಿಯ ಸಮಾನತೆ, ಖಾಸಗಿ ಒಡೆತನದ ನಿರ್ಮೂಲನೆಯನ್ನು ಬಯಸಿದರು. ಭೌತಿಕ ಸುಖವನ್ನು ತ್ಯಾಗ ಮಾಡಬೇಕು ಎಂದು ಧರ್ಮಬೋಧನೆಯನ್ನು ಮಾಡಿ ಈ ಹಕ್ಕುಗಳನ್ನು ಹರಣ ಮಾಡಿತು. ಇವು ಮಾವನ ಜೀವನಕ್ಕೆ ಅಗತ್ಯವೆಂದು ಹೇಳಿ ಅವುಗಳ ದೊರಕುವಿಕೆಗೆ ಶ್ರಮಿಸಿದರು. ಇವರು ಊಳಿಗಮಾನ್ಯ ಪದ್ಧತಿಯನ್ನು ವಿರೋಧಿಸುತ್ತಿದ್ದರು. ಅದು ಬಂಡವಾಳಶಾಹಿಯನ್ನು ಹಿಂಬಾಲಿಸುತ್ತಿದ್ದರಿಂದ ಯಾವುದೇ ಹೊಸ ಬೆಳವಣಿಗೆಗಳು ಸಾಧ್ಯವಾಗುತ್ತಿರಲಿಲ್ಲ. ಇದು ಬೂರ್ಷ್ವಾ ಮಾನವತಾವಾದಿಗಳ ಧೋರಣೆಯಾದರೆ ನಂತರದ ಮಾರ್ಕ್ಸಿಸ್ಟ್ ಮಾನವತಾವಾದಿಗಳು ತಮ್ಮದೇ ಆದ ವಿಶಿಷ್ಟ ಮಾನವತಾವಾದವನ್ನು ಬೆಳೆಸಿದ್ದನ್ನು ಕಾಣಬಹುದಾಗಿದೆ.

ಮಾರ್ಕ್ಸಿಸ್ಟ್ ಮಾನವತಾವಾದದ ತತ್ವಜ್ಞಾನಿಗಳು ಬೂರ್ಷ್ವಾದ ಇತಿಮಿತಿಗಳ ಬಗ್ಗೆ ಹೇಳುವಾಗ ಬೂರ್ಷ್ವಾವು ಖಾಸಗಿ ಆಸ್ತಿಯ ತತ್ವವನ್ನು ಒಪ್ಪಿಕೊಳ್ಳುತ್ತದೆ. ಹೀಗೆ ಒಪ್ಪಿದರೆ ಅದು ನಿಜವಾದ ಸ್ವಾತಂತ್ರ್ಯವಾಗಿರಲು ಸಾಧ್ಯವೇ ಇಲ್ಲ. 'ಖಾಸಗಿ ಆಸ್ತಿ ತತ್ವ'ವನ್ನು ಒಪ್ಪಿಕೊಂಡವರು ಆಡಳಿತ

ವರ್ಗದವರು ಮತ್ತು ಆಡಳಿತದವರ ಪರವಾಗಿರುತ್ತಾರೆ. ಆದರೆ ಉಳಿದವರು ತುಳಿತಕ್ಕೆ ಒಳಗಾಗುತ್ತಾರೆ. ಇದರಿಂದಾಗಿ ಸಮಾನತೆ ಬೇಕು ಎನ್ನುವಾಗ ಕಾನೂನಿನ ಈ ಅಸಮಾನತೆಯ ಬಗ್ಗೆ ಗಮನಿಸುವುದಿಲ್ಲ ಎಂದು ವಾದಿಸಿದ್ದಾರೆ. ಹೀಗಾಗಿ 'ವಾಕ್ ಸ್ವಾತಂತ್ರ್ಯ, ಪತ್ರಿಕಾ ಸ್ವಾತಂತ್ರ್ಯ ಮತ್ತು ಸ್ವಪ್ರಜ್ಞೆಗಳ ಬಗ್ಗೆ ಮಾತನಾಡುವ ಅವರ ಮಾತುಗಳಿಗೆ ಬಲ ಬರುವುದಿಲ್ಲ' ಎನ್ನುವುದು ಮಾರ್ಕ್ಸಿಸ್ಟ್‌ರ ಅಭಿಮತ. ಬೂರ್ಷ್ವಾವಾದಿಗಳ 'ಸ್ವಹಿತಾಸಕ್ತಿ, ಸಮಾಜದ ಹಿತಾಸಕ್ತಿ ಒಂದೇ' ಎನ್ನುವ ತತ್ವವನ್ನು ಮಾರ್ಕಿಸ್ಟರು ವಿರೋಧಿಸಿದ್ದಾರೆ. ವ್ಯಕ್ತಿ, ಸಮಾನತೆಗಿಂತಲೂ ರಾಷ್ಟ್ರ-ಧರ್ಮಗಳ ಸಮಾನತೆ ಬೇಕು ಎನ್ನುತ್ತಿದ್ದರು. ಹೀಗಾಗಿ ಕಾಂಟ್ ಮತ್ತು ಹೆಗಲ್ ತತ್ವಜ್ಞಾನಿಗಳು ಧಾರ್ಮಿಕವಾದವನ್ನು ಬಿಡದೆ ಆದರ್ಶವಾದವನ್ನು ಬೆಂಬಲಿಸಿದರು. ಊಳಿಗಮಾನ್ಯ ಪದ್ಧತಿಯನ್ನು ಪ್ರತಿನಿಧಿಸುವ ಧರ್ಮ ಮತ್ತು ಮೌಲ್ಯ ಉಳಿಸಿಕೊಂಡು ಜೊತೆಗೆ ನಿಧಾನದಲ್ಲಿ ವ್ಯಕ್ತಿಯ ಮೌಲ್ಯಗಳನ್ನು ತಂದಿರಿಸುವುದು ಇವರ ನಂಬಿಕೆಯಾಗಿದೆ. ಕಾಂಟ್ ತನ್ನ 'ಪ್ರಾಯೋಗಿಕ ಚಿಂತನೆ' ಮೂಲ ತತ್ತ್ವದಲ್ಲಿ "ಮನುಷ್ಯ ತಾನು ನೋವನ್ನು ಸಹಿಸುವುದಿಲ್ಲವಾದ್ದರಿಂದ ಅವನು ಇತರರಿಗೂ ನೋವನ್ನು ಕೊಡಬಾರದು" ಎನ್ನುವ ನೈತಿಕ ಕಾನೂನನ್ನು ಹೇಳಿದ್ದಾನೆ. ಅವನ ಸಾಮಾನ್ಯ ನೀತಿಯೆಂದರೆ 'ಮನುಷ್ಯ ಮನುಷ್ಯನನ್ನು ಮೇಲೆತ್ತಿ, ಎಲ್ಲ ರೀತಿಯ ದೌರ್ಜನ್ಯಗಳನ್ನು ಇಲ್ಲದಾಗಿಸಬೇಕು ಮತ್ತು ತನ್ನನ್ನು ತಾನು ಅರಿತುಕೊಳ್ಳುವುದರ ಜೊತೆಗೆ ಬೆಳೆಯಬೇಕು. ಅಂತೆಯೇ ಹೇಗಲ್‌ನು 'ಪ್ರಾಯೋಗಿಕ ಚಟುವಟಿಕೆಗಳ ಮೂಲಕ ಮನುಷ್ಯ ತನ್ನ ಸತ್ವವನ್ನು ಕಂಡುಕೊಳ್ಳುತ್ತಾನೆ. ಇವು ಹುಟ್ಟಿನಿಂದ ಬರುವುದಿಲ್ಲ. ಮನದಲ್ಲಿ ಒಳ್ಳೆಯವನಾಗಿದ್ದು ಚಟುವಟಿಕೆ ಗಳಲ್ಲಿ ಭಿನ್ನನಾಗಿದ್ದರೆ ವ್ಯರ್ಥ ಕ್ರಿಯೆ ಮತ್ತು ಮನಸ್ಸು ಒಂದೇ ಆಗಿರಬೇಕು' ಎನ್ನುತ್ತಾನೆ. ಹೇಗಲ್‌ನು 'ಮಾರ್ಕ್ಸಿಸ್ಟರು ಪ್ರಭುತ್ವಕ್ಕೆ ಮಿತಿಯಿಲ್ಲದ ಅಧಿಕಾರ ಕೊಟ್ಟಿದ್ದು ತಪ್ಪು. ಇದರಿಂದ ಬಡವರು ಬಡವರಾಗಿಯೇ ಉಳಿಯುವ ಸ್ಥಿತಿ ಉದ್ಭವವಾಗಿದೆ. ಇದು ಅಸಮಾನತೆಗೆ ದಾರಿ ಮಾಡುತ್ತದೆ' ಎನ್ನುವುದು ಅವನ ವಾದ. 'ಸಮರ್ಥನೀಯ ಯುದ್ಧಗಳ' ಬಗ್ಗೆ ಹೇಳುವಾಗ 'ಬಾಹ್ಯಯುದ್ಧಗಳಿಂದ ಆಂತರಿಕ ಶಾಂತಿಯನ್ನು ಸಾಧಿಸ ಬಹುದು ಎಂದು ಹೇಳಿದ್ದ. ದ್ವಂದ್ವ ನೀತಿಯನ್ನು ಮಾರ್ಕ್ಸಿಸ್ಟ್‌ರು ಖಂಡಿಸಿದ್ದಾರೆ. ಇದರಿಂದ ಮನೋ ವೃತ್ತಿಗಳು ದ್ವಂದ್ವತೆಯನ್ನು ಅನುಭವಿಸುತ್ತವೆಯಾದ್ದರಿಂದ ತಾನು ಸಮರ್ಥಿಸುವ ಸಮಾನತೆಯ ನೀತಿ ಆಡಳಿತಗಾರರ ದಾರಿ ತಪ್ಪಿಸುತ್ತದೆ ಎಂಬುದು ಮಾರ್ಕ್ಸಿಸ್ಟ್‌ರ ವಾದ.

ಪುನರುಜ್ಜೀವನ ಕಾಲದ ಇನ್ನೊಬ್ಬ ಮಾನವತಾ ಬರಹಗಾರನಾದ ಥಾಮಸ್ ಮೂರ್ (Thomas More) "ಪ್ರಪಂಚದಲ್ಲಿನ ಯಾವ ವಸ್ತುವಿಗೂ ಮನುಷ್ಯನಷ್ಟು ಬೆಲೆ ಇಲ್ಲ. ಆದ್ದರಿಂದ ಮನುಷ್ಯನಿಗೆ ಬೆಲೆ ಕೊಡಬೇಕು"[೨೦] ಎಂದಿದ್ದಾನೆ. ಪ್ರತಿಯೊಬ್ಬ ಮನುಷ್ಯನಿಗೂ ಸಮಾನವಾದ ಖಾಸಗಿ ಆಸ್ತಿ ಇರಬೇಕು. ಎಲ್ಲಿಯವರೆಗೂ ಈ ರೀತಿ ಆಸ್ತಿ ಹಂಚಿಕೆ ಇರುವುದಿಲ್ಲವೋ ಅಲ್ಲಿಯವರೆಗೆ

ಜನತೆ ಸಂತೋಷವಾಗಿರುವುದಿಲ್ಲ ಎನ್ನುವ ಈ ವಾದವು ಕಾಲ್ಪನಿಕ ಸಮತಾವಾದದ ನೆರಳನ್ನು ಆಶ್ರಯಿಸುತ್ತದೆ. ಇದು ಕೇವಲ ಕಲ್ಪನೆಗೆ ಸಾಧ್ಯವಾದದ್ದು. ವಾಸ್ತವ ಜೀವನದಲ್ಲಿ ಜಾರಿಗೆ ಬರಲಾರದು. (ಚೋಮನ ದುಡಿ ಕಾದಂಬರಿಯು ಇದೇ ಆಶಯ ಹೊತ್ತಿದೆ. ಮುಂದೆ ಚರ್ಚಿಸಬಹುದು.) ಆದರೆ ಈ ವಾದವನ್ನು ಜೆನ್ ಮೆಸ್ಲಿಯರ್‌ನು "ಖಾಸಗಿ ಆಸ್ತಿ, ಆಸ್ತಿ ಅಸಮಾನತೆ ಹೋಗದೆ ಹೊರತು ಸಮಾನತೆ ಇಲ್ಲ ಎನ್ನುವುದು ನಿರರ್ಥಕ"ಎಂದಿರುವಲ್ಲಿ ಸ್ಪಷ್ಟತೆಯಿದೆ.

ಮಾನವತೆಯು ಬೂರ್ಷ್ವದವರಲ್ಲಾಗಲಿ, ಮಾರ್ಕ್ಸಿಸ್ಟ್‌ರಲ್ಲಾಗಲಿ ಒಂದೇ ಆಗಿಲ್ಲ. ಅವರವರ ತತ್ವಕ್ಕೆ ಅವರವರು ಮಾನವೀಯತೆ ಎಂದುಕೊಂಡಿದ್ದಾರೆ. ಆದರೆ ಅದು ಬೂರ್ಷ್ವಾದವರ ಮಾನವತಾವಾದವು ಮಾರ್ಕ್ಸಿಸ್ಟ್ ರಿಗೆ ಅಮಾನವೀಯವಾಗಿ ಕಂಡರೆ ಮಾರ್ಕ್ಸಿಸ್ಟ್‌ರ ವಾದವು ಪುನರುಜ್ಜೀವನ ಕಾಲದ ನಂತರದ ಬುದ್ಧಿಜೀವಿಗಳಿಗೆ ಅಮಾನವೀಯವಾಗಿ ಕಾಣಿಸಿಕೊಂಡಿದೆ. ಮಾನವತಾವಾದದ ಪಿತಾಮಹ ಎಂದು ಗುರುತಿಸಿರುವ ಪೆಟ್ರಾರ್ಕ್‌ನು (Petrach) ಹೇಳುವ ರೀತಿಯೇ ಬೇರೆಯಾಗುತ್ತದೆ. "ರಕ್ತ ಯಾವಾಗಲೂ ಒಂದೇ ಬಣ್ಣದ್ದಾಗಿರುತ್ತದೆ. ಆದರೆ ರಕ್ತ ಸ್ವಲ್ಪಮಟ್ಟಿಗೆ ಹೊಳೆಯಬೇಕೆನ್ನುವ ಮನುಷ್ಯ ಉದಾರತ್ವವನ್ನು ಪಡೆಯಬೇಕಾಗಿಲ್ಲ. ಆರೋಗ್ಯವಂತ ದೇಹವಿದ್ದರೆ ಸಾಕು. ಪಾವಿತ್ರ್ಯವನ್ನುಳ್ಳ ವ್ಯಕ್ತಿ ಹುಟ್ಟುತ್ತಲೇ ಮಹಾನ್ ಆತ್ಮಹೊಂದಿರುವುದಿಲ್ಲ. ಅವನು ತನ್ನ ಸ್ವಂತದ ಉಜ್ವಲ ಕೆಲಸಗಳಿಂದ ರೂಪಿಸಿಕೊಳ್ಳಬೇಕಾಗುತ್ತದೆ. ಮನುಷ್ಯನ ಪ್ರತಿಷ್ಠೆ ದೀನತೆಯ ಮೂಲದಿಂದ ಹೋಗುವುದಿಲ್ಲ. ಅದು ಅವನ ಯೋಗ್ಯತೆಯನ್ನಾಧರಿಸಿದೆ."[೨೦] ಇಲ್ಲಿ ಪೆಟ್ರಾರ್ಕ್‌ನು ಮಾನವ, ಮಾನವತ್ವದ ಬಗ್ಗೆ ಸ್ಪಷ್ಟವಾಗಿ ಹೇಳುತ್ತಾನೆ. ಹುಟ್ಟಿದ ವ್ಯಕ್ತಿ ಪರಿಸರ ಪ್ರಭಾವದಿಂದ ಮನುಷ್ಯನಾಗಿ ರೂಪುಗೊಳ್ಳುತ್ತಾನೆ ಎಂಬುದನ್ನು ದೃಢವಾಗಿ ಸಮರ್ಥಿಸುತ್ತಾನೆ.

'ಮಾನವತಾವಾದ'ವು ಇತ್ತೀಚಿಗೆ ಹೆಚ್ಚು ಚಲಾವಣೆಗೊಂಡ ಒಂದು ಅಮೂಲ್ಯ ಸಿದ್ಧಾಂತವಾದರೂ 'ಪುನರುಜ್ಜೀವನ'ಕಾಲದಲ್ಲಿ ವಿಷಯ ಸಮೀಚನಗೊಂಡು ೧೫ನೇ ಶತಮಾನದಲ್ಲಿ ಯುರೋಪ್ ರಾಷ್ಟ್ರಗಳಲ್ಲಿ ರಾಜಕೀಯ, ಸಾಂಸ್ಕೃತಿಕ ಮತ್ತು ಬೌದ್ಧಿಕ ಬೆಳವಣಿಗೆಗಳಲ್ಲಿ ಸಂಕೀರ್ಣತೆಯನ್ನು ಪಡೆದುಕೊಂಡಿತು. ೨೦ನೇ ಶತಮಾನದ ಚರಿತ್ರೆಕಾರರು ಹಿಂದೆ ಮೂರ್ತಗೊಂಡದ್ದನ್ನು ಪರಿಶೋಧಿಸಿ ಮತ್ತೆ ಹೆಚ್ಚು ಬಳಕೆಗೆ ತಂದರು. ಈ ಸಂದರ್ಭದಲ್ಲಿ ತುಂಬಾ ವಿವಾದಾತ್ಮಕವಾದ ಅನೇಕ ವಿಚಾರಗಳ ನಡುವೆ ಮಾನವೀಯತೆ ಅರ್ಥ ಸುಲಭವಾಗಿ ಸಮೀಚನಗೊಳ್ಳತೊಡಗಿತ್ತು. ಮತ್ತೊಂದು ಕಡೆಗೆ ಮಾನವತಾವಾದ ತಾತ್ವಿಕ ಸಮರ್ಥನೆಯ ತತ್ವಶಾಸ್ತ್ರದ ಅಂಕಿತವನ್ನು ಪಡೆದುಕೊಂಡಿತು. ಜರ್ಮನ್‌ರು ಹುಟ್ಟು ಹಾಕಿದ ಈ ವಾದವನ್ನು ಗ್ರೀಕ್‌ರು ಮಾನವ ಸಮಾಜದಲ್ಲಿ ಸ್ಥಿರೀಕರಣಗೊಳಿಸಿದರು. ೧೯ನೇ ಶತಮಾನದ ಪೂರ್ವ ಭಾಗದಲ್ಲಿ ಫ್ಯಾಟ್ರಿಕ್ ಹ್ಯೂಮನಿಯಲ್ ಎಂಬ ಶಿಕ್ಷಣ ತಜ್ಞನು ಪರಿಷ್ಕರಿಸಿ ಪ್ರೌಢಶಾಲೆ ಮತ್ತು ವಿ.ವಿ.ಗಳ ಪಠ್ಯಗಳಲ್ಲಿ ಮಾನವಿಕ ವಿಷಯವನ್ನಾಗಿ ನಿಯೋಜಿಸಿದ. ನಂತರ

ಸಿ.ಡಬ್ಲ್ಯು. ಎಫ್. ಹೆಗೆಲ್ ಮತ್ತು ವಿಲ್ ಹೆಮ್ ಎಂಬ ತತ್ವಶಾಸ್ತ್ರಜ್ಞರು ಬರ್ಲಿನ್ ವಿಶ್ವವಿದ್ಯಾಲಯದಲ್ಲಿ ಅಧ್ಯಯನ ಶಿಸ್ತನ್ನಾಗಿ ರೂಪಿಸಿ ಒಂದು ವಿಭಾಗವನ್ನೆ ತೆರೆದರು.

ಆಧುನಿಕ ಮತ್ತು ಆಧುನಿಕೋತ್ತರದ ಸಂದರ್ಭದಲ್ಲಿ ರಾಜಕೀಯ, ಸಾಮಾಜಿಕ, ಆರ್ಥಿಕ ಅಲ್ಲದೆ ಸಾಂಸ್ಕೃತಿಕ ವಲಯಗಳಲ್ಲಿ ತನ್ನ ಪ್ರಭಾವವನ್ನು ಹೆಚ್ಚುಗೊಳಿಸಿತು. ಅಂತೆಯೇ ಮ್ಯಾಥ್ಯೂ ಅರ್ನಾಲ್ಡ್ ಅವರು ರಾಜಕೀಯ, ವಿಜ್ಞಾನ, ಸೌಂದರ್ಯ ಮೀಮಾಂಸೆ, ತತ್ತ್ವಜ್ಞಾನ, ಧರ್ಮ ಮತ್ತು ಶಿಕ್ಷಣ ಈ ಮೊದಲಾದ ರಂಗಗಳಲ್ಲಿ ಜ್ಞಾನವನ್ನು ಗಳಿಸಿ ಬದಲಾವಣೆಯಾಗುವಂತಹ ಮಾನವ ಚಟುವಟಿಕೆಗಳ ಮೊತ್ತವೇ ಮಾನವೀಯತೆ' ಎಂದು ಹೇಳಿದ್ದಾರೆ. ದಿನಗಳು ಗತಿಸಿದಂತೆಲ್ಲಾ ಮಾನವತಾವಾದದ ವ್ಯಾಪ್ತಿ ತುಂಬಾ ವೈಶಾಲ್ಯವನ್ನು ಗಳಿಸಿಕೊಂಡಿತು.

ಯುದ್ಧ, ನಗರೀಕರಣ ಮತ್ತು ಕೈಗಾರಿಕೀರಣ-ಮೂರು ಅಂಶಗಳು ಮನುಷ್ಯನ ಜೀವನ ಪದ್ಧತಿಯನ್ನು ಮತ್ತು ಚಿಂತನಾ ಕ್ರಮವನ್ನು ಬದಲಾಯಿಸಿದವು. ಮೊದಲ ಮತ್ತು ಎರಡನೆಯ ಮಹಾಯುದ್ಧಗಳಲ್ಲಿನ ಹಾನಿಯು ಮಾನವನ ಪೀಳಿಗೆಯ ಮೇಲೆ ಎಂದೂ ಮಾಸಲಾರದಂತಹ ಗಾಯವನ್ನುಂಟು ಮಾಡಿತು.

## ಮಾನವೀಕರಣ

'ಮಾನವೀಕರಣ' (Humanization)[೨೨] ಎನ್ನುವ ಪದಪುಂಜವು ಮಾನವ/ಮನುಷ್ಯ>ಮಾನವತ್ವ/ ಮನುಷ್ಯತ್ವ> ಮಾನವತಾವಾದ>ಮಾನವೀಯತೆ>ಮಾನವೀಕರಣ (Human>Humanise> humanity> humanism> humanitarian> humanization) ಎಂದು ಬೆಳವಣಿಗೆ ಹೊಂದಿದೆ. ಮಾನವ ಮತ್ತು ಮಾನವತೆಯ ನಡುವಿನ ಅರ್ಥದ ಅಗತ್ಯತೆ ೧೩-೧೪ನೇ ಶತಮಾನದಲ್ಲಿಯೇ ರೂಪುಗೊಂಡಿತು. ಮಾನವತೆಯು ಮನುಷ್ಯ ಸ್ವಭಾವ, ಮನುಷ್ಯ ಭಾಷೆ, ಮನುಷ್ಯನ ಬುದ್ಧಿಮತ್ತೆ ಯಂತಹ ಲಕ್ಷಣಗಳನ್ನು ಪ್ರತಿಬಿಂಬಿಸುತ್ತದೆ. ಆದರೆ ೧೨ನೇ ಶತಮಾನದ ಆದಿಭಾಗದಲ್ಲಿ ಮಾನವತೆಯನ್ನು ದಯಾಳು, ಉದಾರ(Gentle), ವಿನಯಶೀಲ(Courteous), ಸಹಾನುಭೂತಿ (Sympathy) ಎಂಬ ಅರ್ಥಗಳಲ್ಲಿ ವಿವರಿಸುತ್ತಿದ್ದರು.

ಮಾನವೀಯತೆ(Humanity)ಯನ್ನು ೧೪ನೇ ಶತಮಾನದ ಕೊನೆಯ ಭಾಗದಲ್ಲಿ ಬಳಸಲಾಗಿದೆ. 'Humanite' ಎನ್ನುವ ಫ್ರೆಂಚ್ ಪದ ಇದರ ಮೂಲ. 'Umanita' ಎಂಬ ಪದದಿಂದ ಬೆಳವಣಿಗೆ ಹೊಂದಿದೆ. humanite ಎಂಬ ಫ್ರೆಂಚ್ ಪದವು ಲ್ಯಾಟಿನ್‌ನ 'Humanitus' ಪದದಿಂದ ಹುಟ್ಟಿಕೊಂಡಿದೆ. Humanitas ಕೂಡ ಬೌದ್ಧಿಕ ಪ್ರಜ್ಞೆಯ ಅರ್ಥವನ್ನು ಸ್ಫುರಿಸುತ್ತದೆ. ಸಂಸ್ಕೃತಿ, ಸಂಸ್ಕರಣ ಮತ್ತು ನಾಗರಿಕತೆಗಳನ್ನೊಳಗೊಂಡ ಸಂಕೀರ್ಣ ಪದವಾಗಿದೆ. ಮಾನವತೆಯನ್ನು ಮಾನವನ

'ಸ್ವಭಾವ'ವೆಂದೇ ಬಳಸಲಾಗುತ್ತಿತ್ತು. ಆದರೆ ೧೫ನೇ ಶತಮಾನದ ಕೊನೆಯಿಂದ ಇದನ್ನು ದೈವಿಕತೆಯೆಂದು ಗುರುತಿಸಿದರು. ನಂತರ ಕ್ರೂರತ್ವ ಅಥವಾ ದುಷ್ಟತ್ವ ವಿರುದ್ಧವಾಗಿ ಬಳಸ ತೊಡಗಿದರು.

೧೫ ಮತ್ತು ೧೬ನೇ ಶಮಾನಗಳಲ್ಲಿ humanityಯನ್ನು ದೈವಿಕತೆಯ ಒಂದು ಬಗೆಯಾಗಿ ಕಲಿಸುತ್ತಿದ್ದರು. ಬೇಕನ್ ಹೇಳುವಂತೆ 'ಮೂರು ಜ್ಞಾನಗಳನ್ನು ಒಳಗೊಂಡಿತ್ತು- ದೈವತತ್ವ, ಸ್ವಾಭಾವಿಕ ತತ್ವ ಮತ್ತು ಮಾನವ ತತ್ವ. ಈ ಮೂರರ ಒಟ್ಟು ರೂಪವೇ 'ಮಾನವೀಯತೆ' ಎನ್ನಲಾಗಿದೆ. ೧೮ನೇ ಶತಮಾನದಿಂದ humanities ಎಂಬ ಫ್ರೆಂಚ್ ರೂಪವೊಂದು ಆಧುನಿಕ ಸಾಹಿತ್ಯ ಮತ್ತು ತತ್ವಶಾಸ್ತ್ರಗಳಲ್ಲಿ ಸೇರಿಕೊಂಡಿತು.

'Umanista' ಪದದಿಂದ ನೇರವಾಗಿ 'Humanist' ಎಂಬುದನ್ನು ತೆಗೆದುಕೊಳ್ಳಲಾಗಿದೆ. ಇದು ಪುನರುಜ್ಜೀವನದ ಹೆಗ್ಗುರುತು. ಅಂದು ದೈವೀ ಮತ್ತು ಮಾನವೀಯ ಚಟುವಟಿಕೆಗಳ ಅಧ್ಯಯನದ ಶಾಸ್ತ್ರಜ್ಞ ಮತ್ತು ವಿದ್ಯಾರ್ಥಿಗಳಿಗೆ ಈ ಹೆಸರಿನಿಂದ ಕರೆಯುತ್ತಿದ್ದರು. ಮಾನವನಲ್ಲಿನ ಸ್ವಭಾವವನ್ನು, ಮಾನವೀಯ ಚಟುವಟಿಕೆಗಳನ್ನು ಅಧ್ಯಯನ ಮಾಡುವವರಷ್ಟೆ ಮಾನವತಾವಾದಿಗಳಲ್ಲ, ಜತೆಗೆ ಮಾನವೀಯ ಅಂತಕರಣ, ಹೃದಯವಂತಿಕೆಯನ್ನು ಹೊಂದಿರುವ ಪ್ರತಿ ಮನುಷ್ಯನು ಮಾನವತಾವಾದಿಯಾಗಿರುತ್ತಾನೆ.

'Humaniesmus' ಎಂಬ ಜರ್ಮನ್ ಪದದಿಂದ 'Humanism' ಪರಿಭಾಷೆಯನ್ನು ತೆಗೆದುಕೊಂಡಿದ್ದಾರೆ. ಇದು Humanityಯ ಅರ್ಥವನ್ನೇ ಅವಲಂಬಿಸಿದೆ. ಸಾಮಾನ್ಯವಾಗಿ ಹೇಳುವುದಾದರೆ ಸಂಸ್ಕೃತಿ ಮತ್ತು ನಾಗರಿಕತೆಗಳು ಸಮಕಾಲೀನ ಪದವಾಗಿದೆ. ಇದು ಪುನರುತ್ಥಾನೋತ್ತರ ಕಾಲದ(Post-Enlightment) ಚಿಂತನೆಗಳ ಇತಿಹಾಸದ ಜೊತೆಗೆ ಸಂಬಂಧವಿರಿಸಿಕೊಂಡಿದೆ. ೧೯ನೇ ಶತಮಾನದಲ್ಲಿ ಮಾನವನ ಸ್ವಂತ ನಂಬಿಕೆ ಮತ್ತು ಸ್ವ ಬೆಳವಣಿಗೆಗಳ ಜೊತೆಗೆ ಸ್ಥಾಪಿತಗೊಂಡ ಮೌಲ್ಯವಾಗಿದೆ.

'Humanitarian' ಮಾನವೋಪಕಾರಿ (ಮಾನವ ಕುಲ ಹಿತಕಾರಿ)ಪದವು ಧರ್ಮದೊಂದಿಗೆ ೧೯ನೇ ಶತಮಾನದಲ್ಲಿ ಸೇರಿಕೊಂಡಿತು. ಕ್ರೈಸ್ತ ಧರ್ಮದ ವ್ಯಕ್ತಿಯನ್ನು ಗುರುತಿಸಲು ಈ ಪದವನ್ನು ಬಳಸಿದರು. (ಆದರೆ ದೇವರಿಗಲ್ಲ) ಏಕತ್ವ ಮತ್ತು ಬಹುತ್ವಗಳೊಂದಿಗೆ ಸ್ಪಷ್ಟವಾಗಿ ಗುರುತಿಸಿ ಕೊಂಡಿದೆ. ಮನುಷ್ಯ ತಾನು ಬದುಕುವುದರೊಂದಿಗೆ ಇತರರನ್ನು ಬದುಕಿಸಬೇಕು. ಆಗದಿದ್ದರೆ ಸಾಯುವಂತೆ ಮಾಡಬಾರದು. ಅವನು ಪಶುವಿಗಿಂತ ಕೀಳಾಗಿ, ಕ್ರೂರವಾಗಿ, ಬಾಳಿದರೆ ಸಿಗುವ ಸುಖ, ನೆಮ್ಮದಿ ಕೀರ್ತಿ ಅಷ್ಟಕ್ಕೆ ಇದೆ. ಪರೋಪ ಕಾರಿಯಾಗಿ ತನ್ನ ಪರಿಸರದ ಜೀವಿಗಳನ್ನು ಅಂತಃಕರಣ ಪೂರ್ವಕವಾಗಿ ಸಂತೈಸಿ ಕೈಲಾದ ಸಹಾಯ ಮಾಡಿದರೆ ಸಾಕು ಎನ್ನುವ ನೈತಿಕತೆಯನ್ನು ಆಧರಿಸಿ ಹುಟ್ಟಿದ ಈ ಸಿದ್ಧಾಂತ ಮಾನವೀಕರಣದ ಬುನಾದಿಯಾಯಿತು.

Humanization- ಮಾನವೀಕರಣ ಪ್ರಕ್ರಿಯೆಯು ಇತ್ತೀಚಿನ ಬೆಳವಣಿಗೆ ಎಂದರೆ ತಪ್ಪಾಗಲಿಕ್ಕಿಲ್ಲ. ಮಾನವತಾವಾದ, ಮಾನವೀಯತೆ ಮತ್ತು ಮಾನವಕುಲ ಹಿತಕಾರಿಯ ಒಟ್ಟು ರೂಪವಾಗಿ ಮಾನವೀಕರಣವು ನಿರ್ವಚನಗೊಂಡಿದೆ '.....Ization' ಪ್ರಕ್ರಿಯೆ ಜಾಗತೀಕರಣ, ವಸಹಾತೀಕರಣ ಎಂದು ಗುರುತಿಸದಂತೆಯೇ ನಿಷ್ಪನ್ನಗೊಂಡಿದೆ. ಇದನ್ನು ಒಟ್ಟಾರೆಯಾಗಿ Human>humane> humanity> humanism > humanitrian > humanization' ಎಂದು ಹೇಳಬಹುದು. ಇದು ಈಗ ಹುಟ್ಟು ಹಾಕುತ್ತಿರುವ ಸಿದ್ಧಾಂತವೇನಲ್ಲ. ಮೊದಲಿನ ಮಾನವತಾವಾದವೇ ಪರಿಷ್ಕೃತಗೊಳ್ಳುತ್ತಾ ಮಾನವೀಕರಣವಾಗಿದೆ.

ವ್ಯಕ್ತಿ ಸಮಾಜದಲ್ಲಿ ತನ್ನ ಸ್ಥಾನವನ್ನು ನಿಧಾನವಾಗಿ ಪಡೆದುಕೊಳ್ಳುವುದರಿಂದ ತಾನೇ 'ಸಮಾಜ'ವೆನ್ನುವ ಮಟ್ಟಕ್ಕೆ ತಲುಪುತ್ತಾನೆ. ಈ ವ್ಯಕ್ತಿ ಮಾನವನಾಗುವ(ಶಂ.ಬಾ.ಜೋಶಿಯವರು ವ್ಯಕ್ತಿ-ಮಾನವ ಬೇರೆ ಬೇರೆ ಎಂದು ಪ್ರತಿಪಾದಿಸಿರುವುದನ್ನು ಮುಂದೆ ಚರ್ಚಿಸಲಾಗಿದೆ.) ಕ್ರಿಯೆ ಮತ್ತು ಸಮಾಜ ಮಾನವೀಕರಣಗೊಳ್ಳುವ ಪ್ರಕ್ರಿಯೆ ಎರಡೂ ಒಂದೇ ದಾರಿಯಲ್ಲಿ ಸಾಗುತ್ತವೆ. ನವಜಾತ ಶಿಶು ಕಾಲಾನುಕ್ರಮವಾಗಿ ಹೇಗೆ ಸಮಾಜ ಜೀವಿಯಾಗಿ ಬಾಳುತ್ತದೆ ಎಂಬುದನ್ನು ಅಧ್ಯಯಿನಿಸುವುದು ಕುತೂಹಲದ ಅಂಶ. ಅಂತೆಯೇ ಆ ಮಗುವನ್ನು ಸಮಾಜ ಜೀವಿಯಾಗಿ ರೂಪಿಸುವುದು ಸಮಾಜಶಾಸ್ತ್ರದ ಗುರಿಯಾದರೆ, ಮಾನವನನ್ನಾಗಿ ರೂಪಿಸುವುದು ಮಾನವೀಕರಣದ ಉದ್ದೇಶವಾಗಿದೆ. ಈ ಪ್ರಕ್ರಿಯೆಯ ಕೊಂಡಿ ತಪ್ಪಿದರೆ ಸಮಾಜದ ವ್ಯವಸ್ಥೆ ಹದಗೆಡುತ್ತದೆ. ಮಾನವ ಸಂಸ್ಕೃತಿಯ ವಾಹಿನಿ ಬತ್ತುವ ಹಂತ ತಲುಪುತ್ತದೆ. ಮಾನವೀಕರಣ ಪ್ರಕ್ರಿಯೆಯ ಸರಿಯಾದ ಅರ್ಥವನ್ನು ಯಾರೂ ಗ್ರಹಿಸಲು ಸಾಧ್ಯವಾಗಿಲ್ಲ. ಅದೊಂದು ದ್ಯುತಿಸಂಶ್ಲೇಷಣಾ ಕ್ರಿಯೆಯಂತೆ ಕೆಲಸ ಮಾಡುತ್ತದೆ. ಇದು ಸಾಮಾಜಕರು ಪರಸ್ಪರ ಬಾಂಧವ್ಯದಿಂದ, ನಿಕಟ ಸಂಪರ್ಕದಿಂದ ಜೀವಿಸುವಂತೆ, ವ್ಯಕ್ತಿಯ ಸಂಕೀರ್ಣ ವ್ಯಕ್ತಿತ್ವವನ್ನು ರೂಪಿಸುತ್ತದೆ. ಮಾನವೀಕರಣದ ಕ್ರಮದಿಂದ ವ್ಯಕ್ತಿ ಸಮುದಾಯದ ನಿಬಂಧನೆಗಳನ್ನು ಅನುಪಾಲಿಸುವ, ಬದಲಾಯಿಸುವಂತಹ ಇತ್ಯಾತ್ಮಕ ಚರ್ಚೆಗಳನ್ನು ಮಾಡುತ್ತಾನೆ. ಆದರೆ ಈ ಪ್ರಕ್ರಿಯೆ ಅಂತರ್ಗತದಲ್ಲಿಯೇ ಸಾಗುವಂತಹದು. ವ್ಯಕ್ತಿಯು ಅಭ್ಯಾಸ, ಕೌಶಲ್ಯ, ನಂಬಿಕೆ, ಪ್ರಾಮಾಣಿಕತೆ ಮೊದಲಾದ ವ್ಯಕ್ತಿತ್ವ ವಿಕಸನದ ತತ್ವಗಳನ್ನು ಇದರಿಂದ ಕಲಿಯುತ್ತಾನೆ. ಇದೊಂದು ಸಾರ್ವತ್ರಿಕ ಕ್ರಮವಾದ್ದರಿಂದ ಹಾಗೂ ಮಾನವನಿಗೆ ಮಾತ್ರ ಸೀಮಿತವಾಗಿರುವುದರಿಂದ (ಪ್ರಾಣಿಗಳಿಂದ ಮಾನವನ್ನು ಬೇರ್ಪಡಿಸುವ ಕ್ರಮವೂ ಆಗಿರುವುದರಿಂದ) ತುಂಬ ಮಹತ್ವವನ್ನು ಪಡೆದುಕೊಳ್ಳುತ್ತದೆ. ಇತರೆ ಪ್ರಾಣಿಗಳು ಹುಟ್ಟದಾರಭ್ಯ ಪಡೆದುಕೊಂಡು ಬಂದ ಕೆಲವು ಜೈವಿಕ ಅಂಶಗಳನ್ನು, ಪ್ರವೃತ್ತಿಗಳನ್ನು ಮಾತ್ರ ಯಾಂತ್ರಿಕವಾಗಿ ವೃದ್ಧಿಸಿಕೊಂಡು ಹೋಗುತ್ತವೆಯೇ ಹೊರತು ಹೆಚ್ಚಿನದೇನನ್ನೂ ಸಾಧಿಸಲಾರವು. ಈ ಪ್ರಕ್ರಿಯೆಯ ಬೆಳವಣಿಗೆಗೆ ಅವುಗಳ ಮೆದುಳಿನ ರಚನಾವ್ಯವಸ್ಥೆಯ ದೌರ್ಬಲ್ಯವೂ ಆಗಿರಬಹುದು.

ವ್ಯಕ್ತಿ ತನ್ನ ಸುತ್ತಣ ಸಮಾಜ-ಸಂಸ್ಕೃತಿಯಿಂದ, ಸಾಹಿತ್ಯ-ಸಂವೇದನೆಯಿಂದ, ಭಾಷೆ-ಭಾವನೆಗಳಿಂದ ಮಾನವೀಕರಣದತ್ತ ಸಾಗುತ್ತಾನೆ. ಬಾಲ್ಯಾವಸ್ಥೆಯಿಂದಲೇ ಆರಂಭಗೊಳ್ಳುವ ಮಾನವೀಕರಣವು ಪ್ರೌಢಾವಸ್ಥೆ, ಯೌವನಾವಸ್ಥೆಗಳನ್ನು ದಾಟಿದಂತೆಲ್ಲ ಪಕ್ವಗೊಳ್ಳುತ್ತಾ ಸಾಗುತ್ತದೆ. ಮುಪ್ಪಿನಾವಸ್ಥೆಯುಲ್ಲಿ ವ್ಯಕ್ತಿ ತೀರಾ ಅನುಭವಿಕನಾದಂತೆಲ್ಲ ಮಾನವೀಕರಣವು ಸಮರ್ಥತೆಯನ್ನು ಪಡೆಯುತ್ತದೆ.

ಸಹಕಾರ, ಸಹಬಾಳ್ವೆ, ಕರುಣೆ, ದಯೆ, ಅನನ್ಯತೆ, ಧರ್ಮ ನಿರಪೇಕ್ಷತೆ, ಸಾರ್ವತ್ರಿಕ, ವೈಯಕ್ತಿಕ ನೈತಿಕ ಗುಣಗಳು ಮತ್ತು ಪ್ರಾಮಾಣಿಕತೆಗಳೊಂದಿಗೆ ಜಗತ್ತಿನ ಪ್ರಕೃತಿಯ ಎಲ್ಲಾ ಜೀವಿಗಳನ್ನೂ ಹಸಿರನ್ನೂ ಗಮನದಲ್ಲಿಟ್ಟುಕೊಂಡು ಹಿಂಸೆಯ ಲೇಪವಿಲ್ಲದೆ ಬದುಕಿನಲ್ಲಿ ಮಾಡುವ ಗುಣಗಳಿಗೆ 'ಮಾನವೀಯ ಮೌಲ್ಯ', 'ಮಾನವೀಯತೆ' ಎಂಬ ಗುಣವಿಶೇಷತೆಯನ್ನು ಪ್ರತಿಪಾದಿಸಬಹುದಾಗಿದೆ. ವ್ಯಕ್ತಿಯ ವ್ಯಕ್ತಿತ್ವದ ಬೆಳವಣಿಗೆಯಲ್ಲಿ ಮತ್ತು ಆತನು ವಹಿಸುವ ಪಾತ್ರವನ್ನು ಮತ್ತು ಈ ಪಾತ್ರ ನಿರ್ವಹಣೆಯ ಪ್ರಕ್ರಿಯೆಯನ್ನು 'ಮಾನವೀಕರಣ' ಎಂದು ಕರೆಯುಬಹುದು. ಹುಟ್ಟಿದ ಮನುಷ್ಯ (ಶಿಶು) ಬೆಳೆದು ಕ್ರಮೇಣ ಸಾಮಾಜಿಕನಾಗಿ ಪರಿವರ್ತನೆ ಹೊಂದಿ ಅವನು ತನ್ನ ಮತ್ತು ನೆರೆಹೊರೆಯವರ ಬಗ್ಗೆ ತೋರುವ ಜವಾಬುದಾರಿಕೆ ಭಾವನೆಯ ನಡವಳಿಕೆಯೇ ಮಾನವೀಕರಣವಾಗಿದೆ. ಇದನ್ನು 'ಮಾನವ ಜೀವನದ ಸಂಚರಣಾ ಪ್ರಕ್ರಿಯೆ' ಎಂದೂ ಕರೆಯಬಹುದು. ಪ್ರತಿಯೊಬ್ಬ ಮನುಷ್ಯನೂ ಇನ್ನೊಬ್ಬನ ಪಾಲಿಗೆ ಸ್ಪರ್ಶಮಣಿಯಾಗಬೇಕು. ಇದುವೇ ಮಾನವನ ಸಾರ್ಥಕ ಜೀವನ. ಪ್ರತಿ ಮನುಷ್ಯನು ಮಾನವ ಲೋಕದ ನಿಯಮಗಳಿಗೆ ಅನುಸಾರವಾಗಿ ತನ್ನ ನಡತೆಯನ್ನು ರೂಢಿಸಿಕೊಳ್ಳುವ ಪ್ರಕ್ರಿಯೆಯೇ ಮಾನವೀಕರಣವಾಗಿದೆ. ಇದೊಂದು ನಿರಂತರವಾಗಿ ಸಾಗುವ ದೇಶ ಕಾಲಾತೀತವಾದ ಪ್ರಕ್ರಿಯೆ ಮತ್ತು ಜಾತಿ-ಮತ, ಮೇಲು-ಕೀಳು, ಹಿರಿಯ-ಕಿರಿಯ- ಎಂಬ ಭೇದ ಭಾವವನ್ನರಿಯದ ಕ್ರಿಯೆ.

ಮಾನವೀಕರಣವು ಪ್ರಜ್ಞಾಪೂರ್ವಕವಾಗಿಯೋ ಅಥವಾ ಅಪ್ರಜ್ಞಾಪೂರ್ವಕವಾಗಿಯೋ ಮಾನವ ಸಮಾಜದಲ್ಲಿ ಜರುಗುತ್ತದೆ. ಇದನ್ನು ಗೆರೆಕೊರೆದು ಚೌಕಟ್ಟನ್ನು ನಿರ್ಮಿಸಿ ನೋಡುವುದು ತುಂಬಾ ಕಷ್ಟ. ಸಾಮಾಜಿಕರು ಸಂದರ್ಭವರಿತು 'ಮಾನವೀಯತೆ ತೋರು' 'ಮಾನವೀಯತೆಯಿಂದ ವರ್ತಿಸು', 'ಮಾನವೀಯತೆ ಇರುವ ಮನುಷ್ಯ' ಎಂದೆಲ್ಲ ಬಳಸುತ್ತಾರೆ. ಇದೊಂದು ರೀತಿಯಿಂದ ಗುಪ್ತವಾಗಿ ಒಪ್ಪಲ್ಪಟ್ಟ ಕಾನೂನು ಆಗಿಬಿಟ್ಟಿದೆ. ಮಾನವೀಕರಣವನ್ನು ಕುರಿತು ಇದುವರೆಗೆ ಎಲ್ಲೂ ವ್ಯಾಖ್ಯಾನ ಗಳು, ಲಕ್ಷಣಗಳು ಹೊರಬಿದ್ದಿಲ್ಲ.

ಮಾನವೀಕರಣವೆಂಬುದು ನಮ್ಮ ವ್ಯಕ್ತಿತ್ವದಲ್ಲಿ ಹಾಸುಹೊಕ್ಕಾಗಿರುವಂತದ್ದು ಮತ್ತು ವ್ಯಕ್ತಿತ್ವದ ಬೆಳವಣಿಗೆಯ ಸಂದರ್ಭದಲ್ಲಿ ಒಂದು ಬೌದ್ಧಿಕ ಚಿಂತನೆಯೂ ಆಗಿದೆ. ಮಾನವೀಕರಣದ ನೆಲೆಗಳು ಮಾನವೀ ಬದುಕಿನಲ್ಲಿ ಅನೇಕ ರೂಪಗಳಲ್ಲಿ ಕ್ರಿಯಾಶೀಲವಾಗಿವೆ. ಆ ರೂಪಗಳನ್ನು ಗುರುತಿಸುವುದು

ಒಂದು ಹಂತದ ಕೆಲಸ. ಇದಕ್ಕಾಗಿ ಮಾನವನ ನಿತ್ಯದ ಚಟುವಟಿಕೆಗಳನ್ನು ಮತ್ತು ಸಾಹಿತ್ಯ ವಲಯದಲ್ಲಿ ನಿರ್ಮಿತಗೊಂಡ ಪರಿಕಲ್ಪನೆಯನ್ನು ಆಧರಿಸಿ ಕಟ್ಟಬೇಕಾಗುತ್ತದೆ. ಮಾನವೀಕರಣವೆಂಬುದು ಪೂರ್ವಜರು ಹೇಳಿಕೊಟ್ಟ ಆದರ್ಶ ನುಡಿಯಷ್ಟೆ ಎಂದು ಭಾವಿಸಿದರೆ ಅದು ಹಿಮ್ಮುಖಿ ಕ್ರಿಯೆಯಾಗಬಹುದು. ಹಾಗೆಂದು ಬರೀ ವರ್ತಮಾನದಲ್ಲಿ ಈ ಪ್ರಕ್ರಿಯೆಯನ್ನ ಚಲನೆಗೊಳಿಸಿದರೆ ಬೇರಿಲ್ಲದಿರುವ ಉಡಾಫೆಯ ಮಾತಾಗಬಹುದು. ಇದು ಭೂತ ಮತ್ತು ಭವಿಷ್ಯಗಳ ನಡುವಿನ ಆದರ್ಶ ಮತ್ತು ವಾಸ್ತವಗಳ ನಡುವೆ ನಿರಂತರವಾಗಿ ಸಂಚರಣೆಗೊಳ್ಳುವ ಪ್ರಕ್ರಿಯೆಯಾಗಿರುತ್ತದೆ. ಪೂರ್ವಿಕರ ಆದರ್ಶ ಜೀವನದಲ್ಲಿ ಬೇರಿಳಿಸಿದ ಆಧುನಿಕ ಜನ ಸಮುದಾಯದಲ್ಲಿ ಹಸಿರಾಗಿ ಚಿಗುರುವ ಸುಂದರ ಗಿಡ. ಪನ್ನಾಲಾಲ್ ಪಟೇಲ್ ಅವರು ಹೇಳುವ ಮಾತೊಂದು ನೆನಪಿಗೆ ಬರುತ್ತದೆ. "ಎತ್ತುಗಳಿಗೆ ಬೆಲೆ ಬರುವುದು ಅದರ ಕೊಂಬುಗಳಿಂದ, ಕುದುರೆಗಳಿಗೆ ಬೆಲೆ ಬರುವುದು. ಕಿವಿಗಳಿಂದ ಅಂತೆಯೇ ಮನುಷ್ಯರಿಗೆ ಬೆಲೆ ಬರುವುದು ಅವರ ಅಂತಃಕರಣದಿಂದ". ಇಲ್ಲಿ ಮನುಷ್ಯನ ಬೆಲೆ ತುಂಬ ಸ್ಪಷ್ಟವಾಗುತ್ತದೆ. ಅಂತಃಕರಣವು ಹಿಂದಿನ ಮತ್ತು ಮುಂದಿನ ಆಗುಹೋಗುಗಳಿಗೆ ಸೇತುವೆಯಾಗುತ್ತದೆ. ಹೀಗಾಗಿ ಮನುಷ್ಯನ ಮಾನವೀಯ ಗುಣವೇ ಅವನ ಅಳತೆಗೋಲು ಹಾಗೂ ಸರ್ವಶ್ರೇಷ್ಠ.

ಮನುಷ್ಯ ಕೃಷಿಯ ಕಡೆ ಹೆಚ್ಚು ಮಹತ್ವಕೊಡುತ್ತಾ ಶ್ರಮ ಕಡಿಮೆ ಮಾಡಿಕೊಂಡ. ವೈಜ್ಞಾನಿಕ ಪ್ರಗತಿ ಹೆಚ್ಚುತ್ತಾ ಹೋಯಿತು. ಇಂತಹ ಸಂದರ್ಭದಲ್ಲಿ ಮಾನವೀಯತೆಯ ಪ್ರಶ್ನೆ ಉದ್ಭವಿಸತೊಡಗಿತು. ಈ ಪ್ರಶ್ನೆಗೆ ಟಿ.ಎಸ್. ಎಲಿಯಟ್, ಡಬ್ಲು.ಬಿ.ಏಟ್ಸ್, ಮತ್ತು ಡಬ್ಲು, ಹೆಚ್. ಆಡನ್ ಮೊದಲಾದವರು ತಮ್ಮ ಕೃತಿಗಳ ಮೂಲಕ ಮಾನವೀಯತೆ ಬಗ್ಗೆ ಚಿಂತನೆಗೆ ತೊಡಗಿದರು.

ಸರ್ವಾಂಟೆಸ್ ಬರೆದ 'ಡಾನ್ ಕ್ವಿಕ್ಸೋಟ್'(೧೬೦೫) ಕಾದಂಬರಿಯಲ್ಲಿ ಮಾನವತಾವಾದದ ಸ್ಪಷ್ಟ ಚಿತ್ರಣವನ್ನು ಕಾಣಬಹುದು. ಇದಕ್ಕೂ ಮೊದಲು ಬಂದ ಕಾದಂಬರಿಗಳಲ್ಲಿ ಆಂಶಿಕವಾಗಿ ಮಾನವತಾವಾದ ನೆಲೆಗೊಳ್ಳತೊಡಗಿತ್ತು. 'ಡಾನ್ ಕ್ವಿಕ್ಸೋಟ್' ಕೃತಿಯು ಅತಿರಂಜಕತೆಯಿಲ್ಲದೆ ವೀರನ ಕಥೆಯನ್ನು ವಿಡಂಬನಾತ್ಮಕವಾಗಿ ವಿಶಾಲಾರ್ಥದಲ್ಲಿ ಮಾನವೀಯತೆಯನ್ನು ಬೋಧಿಸುತ್ತದೆ. ನಾಯಕ ಕ್ವಿಕ್ಸೋಟ್‌ನು ಒಂದು ಸಂದರ್ಭದಲ್ಲಿ ತನ್ನ ಸಂಗಡಿಗನಾದ ಡ್ಯೂಕ್‌ಗೆ ಹೀಗೆ ಹೇಳುತ್ತಾನೆ. "ನನಗೆ ಆಸ್ತಿ, ಅಂತಸ್ತುಗಳಲ್ಲಿ ವಿಶ್ವಾಸವಿಲ್ಲ. ನನಗೆ ಘನತೆ ಮುಖ್ಯ. ನ್ಯಾಯವಾದಲ್ಲಿ ನ್ಯಾಯ ಮಾಡುವುದು, ದರ್ಪವನ್ನು ಅಡಗಿಸುವುದು, ದೈತ್ಯರನ್ನು ಗೆಲ್ಲುವುದು, ಲೈಂಗಿಕ ಭಾವನೆಗಳಲ್ಲದೆ ನನ್ನ ಪ್ರೇಯಸಿಯಲ್ಲಿ ನಿರ್ಮಲ ಪ್ರೇಮವನ್ನಿಡುವುದು, ಎಲ್ಲರಿಗೂ ಒಳ್ಳೆಯದನ್ನು ಮಾಡುವುದು, ಯಾರಿಗೂ ಕೆಡುಕುಂಟು ಮಾಡದಿರುವುದು".[೨೪] ಇಲ್ಲಿ ತನ್ನ ನೈತಿಕ ನಿಯಮದಲ್ಲಿ ಬದಲಾವಣೆಯನ್ನು ಬಯಸದೆ ಸದಾ ತಾನು ಮಾನವ ಪಾತಳಿಯಲ್ಲಿಯೇ ಜೀವಿಸುವ ಸದಾಶಯ ಹೊಂದಿರುವುದನ್ನು ಕಾಣುತ್ತೇವೆ. ಕಾದಂಬರಿ ಯುದ್ಧಕ್ಕೂ 'ಕ್ವಿಕ್ಸೋಟ್'ನು ಮಾನವತಾವಾದದ ಪ್ರತಿಪಾದಕನಾಗಿಯೇ ಸಾಗುತ್ತಾನೆ. ವಾಲ್ಟೇರ್

ಎಂಬ ಲೇಖಕನು 'ಕ್ಯಾಂಡೀಡ್' ಕಾದಂಬರಿಯ ಮೂಲಕ ಮಾನವತಾವಾದವನ್ನು ಪ್ರತಿಪಾದಿಸಿದ್ದಾನೆ. ಅವನು ಒಂದು ಕಡೆ "ನಿನ್ನ ವಾದ ನನಗೆ ಸುತಾರಂ ಒಪ್ಪಿಗೆ ಇಲ್ಲ. ಆದರೆ ಅಂಥ ವಾದವನ್ನು ಮಂಡಿಸಲು ನಿನಗೆ ನೈತಿಕವಾದ ಹಕ್ಕು ಇದೆ. ಅದನ್ನು ರಕ್ಷಿಸಲು ನನ್ನ ಪ್ರಾಣವನ್ನು ಒತ್ತೆಯಿಟ್ಟು ಹೋರಾಡುತ್ತೇನೆ"[೨೫] ಎಂದಿದ್ದಾನೆ. ತುಂಬ ಮಹತ್ವವಾದ ಹೇಳಿಕೆಯದು. ಮಾನವನು ತನ್ನ ಅಭಿಪ್ರಾಯವನ್ನು ಮಂಡಿಸುವ ಹಕ್ಕನ್ನು ಪಡೆದುಕೊಂಡಿದ್ದಾನೆ. ಮಾನವನ ವ್ಯಕ್ತಿ ಸ್ವಾತಂತ್ರ್ಯಕ್ಕೆ ಧಕ್ಕೆ ಬಂದರೆ ಅದು ಅಮಾನವೀಯವಾಗುತ್ತದೆ.

ಜೇನ್ ಆಸ್ಟಿನ್‌ಳು ಬರೆದ 'ಪ್ರೈಡ್ ಅಂಡ್ ಪ್ರೆಜುಡಿಸ್ '(೧೮೧೩) (Pride and Prejudice) ಕಾದಂಬರಿಯು ಸಹ ಮಾನವತಾವಾದವನ್ನು ಸಾದರಪಡಿಸುತ್ತದೆ. ಬಾಲ್ಜಾಕ್ ಎಂಬ ಕಾದಂಬರಿಕಾರ ತನ್ನ 'ಪೇರ್ ಗೋರಿಯೋ'(Per Goriot, ೧೮೩೪) ಕಾದಂಬರಿಯಲ್ಲಿ ಫ್ರೆಂಚ್ ಕ್ರಾಂತಿಯ ತರುವಾಯ ಅಸ್ತಿತ್ವಕ್ಕೆ ಬಂದಿದ್ದ ಬಂಡವಾಳಶಾಹಿ ಸಮಾಜವನ್ನು ವ್ಯಕ್ತಿ-ವ್ಯಕ್ತಿಗಳ ನಡುವಣ ಜಟಿಲಗೊಂಡ ಆರ್ಥಿಕ ಸಂಬಂಧಗಳನ್ನು ಆಯ್ದುಕೊಂಡು ಅಪಮೌಲ್ಯಗೊಳ್ಳುತ್ತಿದ್ದ ಮಾನವತ್ವವನ್ನು, ಪತನಗೊಳ್ಳುತ್ತಿದ್ದ ನೈತಿಕತೆಯನ್ನು ತಾತ್ವಿಕವಾದ ಚಿಂತನೆಗೆ ತೊಡಗಿಸಿದ್ದಾನೆ. ಕಾರ್ಲ್‌ಮಾರ್ಕ್ಸ್ ಮತ್ತು ಏಂಗೆಲ್ಸ್ ಮೊದಲಾದವರ ವಿಚಾರಧಾರೆಗಳು ಇವರ ಕೃತಿಯಲ್ಲಿ ಪ್ರಭಾವ ಬೀರಿವೆ. ವ್ಯಕ್ತಿಯ ಸ್ವಾರ್ಥವನ್ನು ಖಂಡಿಸುವ ಮತ್ತು ಅವನ ಹರಣಗೊಳ್ಳುತ್ತಿದ್ದ ಸ್ವಾತಂತ್ರ್ಯವನ್ನು ಎತ್ತಿ ಹಿಡಿಯುವ ಮಾನವೀಯ ನೆಲೆಗಟ್ಟು ಕಾದಂಬರಿಯ ಬುನಾದಿಯಾಗಿದೆ.

ವಿಕ್ಟರ್ ಹ್ಯೂಗೋನ 'ಲೇ ಮಿಸೆರಬ್ಲೆ'(Lee Miserables) ದಸ್ತೊಯೆವ್‌ಸ್ಕಿಯ 'ದಿ ಬ್ರದರ್ಸ್ ಕರಮ ಜೊವ್', ಟಾಲ್‌ಸ್ಟಾಯ್ ಅವರ 'ಅನ್ನಾ ಕರೆನೀನಾ', ಥಾಮಸ್ ಹಾರ್ಡಿ ಅವರ 'ದಿ ರಿಟರ್ನ್ ಆಫ್ ದಿ ನೇಟಿವ್' ಸಾಮರ್ಸೆಟ್ ಮಾಮ್‌ನ 'ಆಫ್ ಹ್ಯೂಮನ್ ಬಾಂಡೇಜ್', ಮಾಕ್ಸಿಂ ಗಾರ್ಕಿ ಅವರ 'ತಾಯಿ' ಮೊದಲಾದ ಕೃತಿಗಳು ಜಾಗತಿಕ ಮಟ್ಟದಲ್ಲಿ ಮಾನವೀಯತೆಯನ್ನು ಪ್ರಚುರಪಡಿಸಿವೆ (ಅವುಗಳ ಸಮಗ್ರ ವಿಮರ್ಶೆ ಇಲ್ಲಿ ಸಾಧ್ಯವಾಗಿಲ್ಲ. ಕೃತಿಗಳನ್ನು ಚುಟುಕಾಗಿ ಮಾತ್ರ ಅವಲೋಕಿಸಿರುವೆ)

## ಮಾನವೀಕರಣದ ನಿಯೋಗಗಳು (Agents of Humanization)

ಮಾನವೀಕರಣದ ಪ್ರಕ್ರಿಯೆ ವ್ಯಕ್ತಿಯ ಜೀವನದಲ್ಲಿ ನಿರಂತರವಾಗಿ ಸಂಚರಿಸುತ್ತಿರುತ್ತದೆ. ಮಾನವನ ಜೀವನದ ಆರಂಭದ ಹಂತವಾದ ತೊಟ್ಟಿಲಿನಿಂದಲೇ ಇದು ಆರಂಭವಾಗಿ ಸಮಾಧಿ ಯವರೆಗೂ ಸಾಗುತ್ತದೆ. ವ್ಯಕ್ತಿಯು ಸಮಾಧಿಯಾದರೂ ಅವನ 'ಮನುಷ್ಯತ್ವ' ಅಜರಾಮರ ವಾಗಿರುತ್ತದೆ. ಬಾಲ್ಯಾವಸ್ಥೆಯ ಹಂತದಲ್ಲಿ ಅನ್ವಯಿಸಲಾರದು ಎಂದರೂ ಸಹ ಆ ಹಂತದ ಮನಸ್ಸುಗಳಿಂದಲೇ ಇದು ಭದ್ರ ಬುನಾದಿ ಹಾಕಿಕೊಳ್ಳುತ್ತದೆ. ಮಗು ತನ್ನ ಮಾನವತ್ವವನ್ನು ಎರಡು

ಮೂಲಗಳಿಂದ ಗಳಿಸಿಕೊಳ್ಳುತ್ತದೆ. ಮೊದಲ ಪ್ರಕಾರದಲ್ಲಿ ತನ್ನ ವಯಸ್ಸಿಗಿಂತಲೂ ಹಿರಿಯರಿಂದ ಜ್ಞಾನ, ಮೌಲ್ಯ, ರೀತಿ-ರೀವಾಜು ಮತ್ತು ನೈತಿಕತೆಯನ್ನು ಗಳಿಸಿಕೊಳ್ಳುತ್ತದೆ. ಎರಡನೆಯ ಮೂಲದಲ್ಲಿ ತನಗೆ ಸರಿಸಮಾನರಿಂದ ಗಳಿಸಿಕೊಳ್ಳುವ ವಿಶ್ವಾಸ, ನಂಬಿಕೆ ಮತ್ತು ಯೋಗ್ಯ ತಿರಸ್ಕಾರವನ್ನು ಪಡೆಯುತ್ತದೆ. ಮೊದಲನೆಯವರು ಮಗುವನ್ನು ನಿಯಂತ್ರಣದಲ್ಲಿಟ್ಟುಕೊಳ್ಳುವುದರ ಮೂಲಕ ಭಾವನಾತ್ಮಕ ಸಂಬಂಧದೊಂದಿಗೆ ಮಾನವೀಕರಣವನ್ನು ಬೋಧಿಸಿದರೆ ಎರಡನೆ ವರ್ಗದವರು ಸಮಾನತೆ, ಸ್ವಾತಂತ್ರ್ಯ, ವಿಶ್ವಾಸದ ಮೂಲಕ ಗೆಳೆತನದ ಮಾನವೀಯ ಸಂಬಂಧದೊಂದಿಗೆ ಮಾನವೀಕರಣವನ್ನು ಕಲಿಯುತ್ತಾರೆ ಮತ್ತು ಕಲಿಸುತ್ತಾರೆ. ನಿರ್ಬಂಧಿತ ಸಂಬಂಧಗಳು ಏಕಪಕ್ಷೀಯ ಸಂಬಂಧಗಳಾಗಿವೆ. ಮಗು ಹಿರಿಯರ ಅಧಿಕಾರ ಸ್ಥಾನಮಾನಕ್ಕೆ ಮನ್ನಿಸಿ ಅವರ ನಿರ್ಬಂಧಗಳನ್ನು ಅನುಪಾಲಿಸುತ್ತದೆ. ಮಗು ಮತ್ತು ಹಿರಿಯರ ನಡುವೆ ಒಮ್ಮುಖದ ಸಂಬಂಧ ಏರ್ಪಡುತ್ತದೆ. ಇಂತಹ ಒಮ್ಮುಖತೆ ಆ ಮಗುವಿಗೆ ಸ್ವಾತಂತ್ರ್ಯ ಕೊಡದಿದ್ದಾಗ ಉದ್ಭವಾಗುತ್ತದೆ. ಈ ಎರಡು ಮೂಲಗಳಿಂದ ಮಗುವಿಗೆ ಮಾನವೀಕರಣದ ಅನೌಪಚಾರಿಕವಾದ ಶಿಕ್ಷಣ ದೊರೆಯುತ್ತದೆ. ಸಾಮಾಜಿಕನು ಮಾನವೀಕರಣವನ್ನು ಹೊಂದುವಲ್ಲಿ ಕೆಲವೊಂದು ನಿಯೋಗ(ಕಾರಕ)ಗಳನ್ನು ಅವಲಂಬಿಸಿದ್ದಾನೆ.

೧. ಹಿರಿಯ ಅನುಭವಿಗಳು-(Parents)

೨. ಧರ್ಮ-ನೈತಿಕತೆ (Religio-Morality)

೩. ರಾಜ್ಯ ಅಧಿಕಾರ(State Power)

೪. ಸಂಸ್ಕೃತಿ (Culture)

೫. ಮನುಷ್ಯ ಭಾವನೆಗಳು (Emotions)

ಈ ಐದು ಅಂಶಗಳು ಮಾನವೀಕರಣವನ್ನು ಪಸರಿಸುವಲ್ಲಿ ನಿಯೋಗ (ಕಾರಕ-Agents)ಗಳಾಗಿ ಕಾರ್ಯ ನಿರ್ವಹಿಸುತ್ತವೆ. ಮಾನವೀಕರಣವು ಜನ್ಮದತ್ತವಾಗಿರುವಂತಹದು ಇದನ್ನು ಬೆಳೆಸುವುದು ಮತ್ತು ಅದಕ್ಕಾಗಿ ನಿಯೋಗಗಳನ್ನು ನೇಮಿಸುವುದರ ಅಗತ್ಯವೇನಿದೆ? ಎಂಬ ಪ್ರಶ್ನೆ ಸಹಜವಾಗಿ ಉದ್ಭವವಾಗುತ್ತದೆ. ನಿಯೋಗ ಗಳನ್ನು ನೇಮಕ ಮಾಡುವ ಅಗತ್ಯವೇನೂ ಇಲ್ಲದಿರಬಹುದು. ಆದರೆ ಈ ಅಂಶಗಳು ಮಾನವೀಕರಣವನ್ನು ಬೆಳೆಸುವಲ್ಲಿ ಸಮರ್ಥವಾಗಿ ಕೆಲಸ ಮಾಡಿವೆಯಾದ್ದರಿಂದ ಹಾಗೆ ಗುರುತಿಸಲಾಗಿದೆ.

**೧. ಹಿರಿಯ ಅನುಭವಿಗಳು :** ತಂದೆ-ತಾಯಿ, ಗುರು-ಹಿರಿಯರು ಮೊದಲಾದವರು ಸಮಾಜದಲ್ಲಿ ವ್ಯಕ್ತಿ (ಅಥವಾ ಮಗು) ಮಾಡಬೇಕಾದ ಮತ್ತು ಮಾಡಬಾರದ ಅಥವಾ ನೈತಿಕ ಮತ್ತು ಅನೈತಿಕ

ಕಾರ್ಯಗಳನ್ನು ಸೂಕ್ಷ್ಮವಾಗಿ ನಿತ್ಯದ ವ್ಯವಹಾರಗಳಲ್ಲಿ ಪ್ರಕಟಿಸುತ್ತಾರೆ. ಇಂತಹ ಕಾರ್ಯಗಳನ್ನು ಅರಿಯುವುದರ ಜೊತೆಗೆ ಮಗು ತನ್ನ ಭವಿಷ್ಯದಲ್ಲಿ ಮಾನವೀಯವಾಗಿ ವರ್ತಿಸುವ ಪ್ರಯತ್ನ ಮಾಡುತ್ತದೆ. ಕಳ್ಳತನ, ಸುಳ್ಳು, ಇನ್ನೊಬ್ಬ ಹುಡುಗನಿಗೆ ನೋವು ಮಾಡುವುದು ಈ ಮೊದಲಾದ ಕಾರ್ಯಗಳು ಬಹಿಷ್ಕೃತವಾಗಿರುವ ಕಾರಣ ಮಗು ಕೂಡ ಇವುಗಳಿಂದ ದೂರ ಉಳಿಯುತ್ತದೆ.

೨. **ಧರ್ಮ-ನೈತಿಕತೆ :** ಧರ್ಮ ಒಂದೆಡೆ ಕೂಡಿಸುವ ಸಂಗತಿಯೂ ಹೌದು ಮತ್ತು ಬಿಡಿಸುವ ಸಂಗತಿಯೂ ಹೌದು. 'ಮಾನವ ಧರ್ಮಕ್ಕೆ ಜಯವಾಗಲಿ' ಎನ್ನುವ ವೀರಶೈವ ಧರ್ಮ ಮಾನವ ಧರ್ಮವನ್ನು ಎತ್ತಿ ಹಿಡಿಯುತ್ತದೆ. 'ಕಳಬೇಡ ಕೊಲಬೇಡ ಹುಸಿಯ ನುಡಿಯ ಬೇಡ....'ಈ ಮೊದಲಾದ ವಚನಗಳು ಮಾನವೀಕರಣದ ಹಾದಿಯನ್ನು ನಿರ್ಮಿಸುತ್ತವೆ.

ಮಾನವೀಕರಣದ ನೆಲೆ ಆರಂಭವಾಗಿದ್ದೇ ಕ್ರಿಶ್ಚಿಯನ್ ಧರ್ಮದ ತಳಹದಿಯ ಮೇಲೆ ನಂತರದ ಬೌದ್ಧ ಧರ್ಮ, ಜೈನಧರ್ಮ, ಇಸ್ಲಾಂ ಧರ್ಮ ಮತ್ತು ಹಿಂದೂ ಧರ್ಮಗಳೆಲ್ಲವೂ ಮಾನವೀಯತೆಗೆ ಇಂಬುಕೊಟ್ಟವು. 'ಮಾನವತಾ ಧರ್ಮ'('ಇದೇ ಪ್ರಬಂಧದ ಮಾನವತಾವಾದೀ ಧರ್ಮ ಮತ್ತು ಧರ್ಮದ ಮಾನವತಾವಾದ' ಎಂಬಲ್ಲಿ ಚರ್ಚಿಸಲಾಗಿದೆ.)ವನ್ನು ಪರಿಚಯಿಸಿದ ಆಗಸ್ಟ್ ಕೋಂಟ್‌ನು ಉತ್ತಮ ತಳಹದಿಯನ್ನು ಹಾಕಿದ್ದನು. ಆದರೆ ವಿಮರ್ಶಕರ ಟೀಕೆಯಿಂದ ಮತ್ತು ವಿವಿಧ ಧರ್ಮಗಳ ವಿವಿಧ ಆಚರಣೆಗಳಿಂದ 'ಮಾನವತಾವಾದೀ ಧರ್ಮ' ಊರ್ಜಿತಗೊಳ್ಳಲಿಲ್ಲ. ಧರ್ಮ ಮತ್ತು ನೈತಿಕ ಮೌಲ್ಯಗಳು ಮಾನವನಲ್ಲಿರುವ ವಿಷಮ ಗುಣಗಳನ್ನು ದೂರೀಕರಿಸುತ್ತವೆ. 'ಸಕಲ ಜೀವಿಗಳಿಗೂ ಲೇಸನ್ನು ಬಯಸುವುದೇ ಧರ್ಮದ ನೈತಿಕ ಪ್ರಜ್ಞೆ. ಈ ಪ್ರಜ್ಞೆಯ ತಳಹದಿಯೇ ಮಾನವೀಯತೆ.

೩. **ರಾಜ್ಯ-ಅಧಿಕಾರ :** ಮಾನವೀಕರಣದ ಪರಿಚಲನೆಯ ಕೇವಲ ಹಿರಿಕರಿಂದ, ಧರ್ಮಗಳಿಂದ ಚಲಾವಣೆಗೊಳ್ಳುವುದಿಲ್ಲ. ಕೆಲವೊಮ್ಮೆ ಅಧಿಕಾರಿಗಳು, ಕಾನೂನುಗಳು ಬೇಕಾಗುತ್ತವೆ. ರಾಜ್ಯಾಧಿಕಾರವು ಮಾಡುವ ಕಾನೂನು ಮಾನವನ ಒಳಿತನ್ನೇ ಅವಲಂಬಿಸಿದೆ. ಅಮಾನುಷ ಎನ್ನುವ ಸಂಪ್ರದಾಯಗಳನ್ನು ನಿಷೇಧಿಸುವ, ಅಂತಹ ಆಚರಣೆಗಳನ್ನು ಆಚರಿಸುವವರಿಗೆ ತಿಳಿ ಹೇಳುವ ಅಥವಾ ಅಗತ್ಯಬಿದ್ದರೆ ಶಿಕ್ಷಿಸುವ ಕಾರ್ಯಗಳನ್ನು ಕಾನೂನು ಮಾಡುತ್ತವೆ. ಉದಾಹರಣೆಗೆ ಸತಿಪದ್ಧತಿ, ದೇವದಾಸಿ ಪದ್ಧತಿ, ಪ್ರಾಣಿಬಲಿ, ಬಾಲ್ಯವಿವಾಹ ಪದ್ದತಿ ಮತ್ತು ಚಂದ್ರಗುತ್ತಿಯ ಅರೆಬೆತ್ತಲೆ ಪದ್ಧತಿಗಳಂತಹ ಅಮಾನವೀಯ ಆಚರಣೆಗಳನ್ನು ಜನತೆಯ ಮನಸ್ಸಿನಿಂದ ಸುಲಭವಾಗಿ ಕಿತ್ತುಹಾಕಲು ಸಾಧ್ಯವಿಲ್ಲ. ಅಂತಹ ಸಂದರ್ಭಗಳಲ್ಲಿ ಕಾನೂನುಗಳ ರಚನೆ ಮತ್ತು ಜಾರಿ ಅಗತ್ಯವೆನಿಸುತ್ತದೆ. ಈ ನಿಟ್ಟಿನಲ್ಲಿ ಮಾನವೀಕರಣದ ರೂಪಿಸುವಿಕೆಯು ಅಧಿಕಾರದ ಪಾಲಿಗಿರುತ್ತದೆ.

೪. **ಸಂಸ್ಕೃತಿ :** ಸಂಸ್ಕೃತಿಯನ್ನು ಇಲ್ಲಿ ಕಲೆಗಳ ಮಟ್ಟದಲ್ಲಿ ಅರ್ಥೈಸಿಕೊಳ್ಳಲಾಗಿದೆ. ಸಂಗೀತ, ಚಿತ್ರಕಲೆ, ಸಾಹಿತ್ಯ, ಶಿಲ್ಪ ಮೊದಲಾದ ಸಾಂಸ್ಕೃತಿಕ ಆಧಾರಗಳು ಮಾನವೀಕರಣವನ್ನು ಬೋಧಿಸಬೇಕಾಗುತ್ತವೆ. ಇವುಗಳ ಮಾನವೀಕರಣವು ಮಾತ್ರ ಶಾಶ್ವತವಾಗಿ ನಿಲ್ಲಬಲ್ಲದು. ಯಾವ ಕಾಲಕ್ಕೂ ಇವು ತಮ್ಮ ನೀತಿಯನ್ನು ಸಾರುತ್ತವೆ. ಇತಿಹಾಸದಲ್ಲಿಯ ಸಂಸ್ಕೃತಿ ಮತ್ತು ಘಟನೆಗಳೇ ಈ ಮಾತನ್ನು ನಿರೂಪಿಸುತ್ತವೆ.

೫. **ಮನುಷ್ಯನ ಭಾವನೆಗಳು :** ಈ ಮೇಲಿನ ನಾಲ್ಕು ನಿಯೋಗಗಳಿಗಿಂತಲೂ ಮುಖ್ಯವಾದ ನಿಯೋಗ ಇದಾಗಿದೆ. ಮನುಷ್ಯನಲ್ಲಿ ಮಾನವೀಕರಣವು ತಂತಾನೆ ಉದ್ಭವವಾಗಬೇಕು. ಆಗ ಮಾತ್ರ ಅದಕ್ಕೆ ಸ್ಪಷ್ಟ ಅರ್ಥ ದೊರೆಯುತ್ತದೆ. ಇನ್ನೊಬ್ಬರಿಂದ ಹೇಳಿಸಿಕೊಂಡೋ, ಪ್ರಭಾವ ಪಡೆದೋ ಮಾಡುವುದಕ್ಕಿಂತಲೂ ಶ್ರೇಷ್ಠ. ಹೀಗೆಂತಲೇ ಕುವೆಂಪು ಅವರು 'ನಿನ್ನದೆಯ ದನಿಯ ನಿನಗೆ ಮನು ನೀನು' ಎಂದಿರುವುದು. ಪ್ರತಿ ಮನುಷ್ಯನ ಅಂತರಾಳದಲ್ಲಿ 'ತಪ್ಪು' ಎನ್ನುವ ಭಾವನೆ ಇದ್ದೇ ಇರುತ್ತದೆ. ಯಾವುದೇ ವ್ಯಕ್ತಿ 'ಆತ್ಮ ದ್ರೋಹ' ಮಾಡಿಕೊಳ್ಳಲು ಒಪ್ಪಲಾರ. ಒಪ್ಪಿದರೆ ಅದು ಅವನ ಅವಸಾನವೇ ಹೊರತು ಏಳಿಗೆಯಲ್ಲ. ತಪ್ಪು ಸಹಜ ಎಂದು ಪ್ರತಿ ಬಾರಿ ಅದನ್ನು ಮಾಡುವುದು ಸಭ್ಯತೆಯಲ್ಲ. ಈ ಸಂದರ್ಭದಲ್ಲಿ ಬೈಬಲ್‌ನ ಮುಗ್ದಲದ ಮರಿಯಳ ಪ್ರಸಂಗ ನೆನಪಿಗೆ ಬರುತ್ತಿದೆ. 'ನಿಮ್ಮಲ್ಲಿ ಯಾರು ತಪ್ಪು ಮಾಡಿಲ್ಲವೋ ಅವರು ಕಲ್ಲಿನಿಂದ ಹೊಡೆಯಿರಿ' ಎಂಬುದು. ಇಂತಹ ಸಂದರ್ಭದಲ್ಲಿ ಯಾರೂ ಮುಂದುವರಿಯುವುದಿಲ್ಲ. ಏಕೆಂದರೆ ಎಲ್ಲರೂ ತಪ್ಪು ಮಾಡಿದವರೇ ಆಗಿರುತ್ತಾರೆ.

'ಮಾನವೀಕರಣ ಎನ್ನುವುದು ಸಾಧ್ಯತೆಯೇ ಹೊರತು ಸಿದ್ಧಿಯಾಗಲಾರದು'. ಈ ದಾರಿಯಲ್ಲಿ ಎಲ್ಲರೂ ಹೋಗುವಂತೆ ಮಾಡುವ ಪ್ರಯತ್ನವಷ್ಟೆ. ಇದನ್ನು ಒಮ್ಮೆ ನಿರ್ಮಿಸಿಬಿಟ್ಟರೆ ಸಾಲದು, ದೇಹವನ್ನು ಮತ್ತೆ ಮತ್ತೆ ಶುಚಿಗೊಳಿಸುವಂತೆ ಮಾನವೀಕರಣವನ್ನು ಮತ್ತೆ ಮತ್ತೆ ರೂಪಿಸಬೇಕಾಗುತ್ತದೆ. ಮನುಷ್ಯನನ್ನ ಮನುಷ್ಯನನ್ನಾಗಿ ಇರಿಸುವ, ಮುಂದುವರಿಸುವ ದಾರಿ ಮಾತ್ರವಷ್ಟೆ. ಅವನು ಮತ್ತೆ ವಾನರ ಪಾತಳಿಗೆ ಸಾಗದಂತೆ ನೋಡಿಕೊಳ್ಳುವ ಪ್ರಯತ್ನವನ್ನು ಧರ್ಮ-ನೈತಿಕತೆ, ಹಿರಿಯರು, ಅಧಿಕಾರಿಗಳು, ಸಂಸ್ಕೃತಿ ಹಾಗೂ ಮನುಷ್ಯನ ಮನೋಭಾವನೆಗಳು ಮಾಡುತ್ತವೆ. 'ಕಾರಣವಿಲ್ಲದ ಪ್ರೀತಿ, ಕಾರಣ ಇರುವ ದ್ವೇಷ'(ಜಯಂತ ಕಾಯ್ಕಿಣಿ, ೧೯) ಮಾನವೀಕರಣವನ್ನು ಬೋಧಿಸುತ್ತದೆ. 'ಕಾರಣವಿಲ್ಲದ ದ್ವೇಷ ಕಾರಣ ಇರುವ ಪ್ರೀತಿ' ಲಾಭವನ್ನು ಕೇಳುತ್ತದೆ. ಇಂತಹ ಪ್ರೀತಿ - ದ್ವೇಷ ಮಾನವನಿಗೆ ಅಗತ್ಯವಿಲ್ಲ. ಮನುಷ್ಯನಾದವನು ಕ್ರಿಶ್ಚಿಯನ್ ಧರ್ಮವು ಹೇಳುವಂತೆ 'ಪಾಪವನ್ನು ದ್ವೇಷಿಸು. ಆದರೆ ಪಾಪಿಯನ್ನ ಬೇಡ' (Hate the sin but not the sinner) ಎನ್ನುವುದು ಮಾನವೀಕರಣವನ್ನು ಮುನ್ನಡೆಸುವವನಿಗೆ ಆಸರೆಯಾಗುತ್ತದೆ.

ಈ ಕಾರಕಗಳು ಮಾನವೀಕರಣವನ್ನು ಮುನ್ನಡೆಸುವಲ್ಲಿ ಸಹಕಾರಿಯಾದರೆ, ಇವುಗಳಿಗೆ ಕೆಲವೊಂದು ಅಂಶಗಳು ಅಡ್ಡಿಯನ್ನುಂಟುಮಾಡುತ್ತವೆ. ಯಾಂತ್ರೀಕರಣ, ನಗರೀಕರಣ, ಸಂಪರ್ಕ ಮಾಧ್ಯಮಗಳು ಮಾನವತೆಗೆ ಬಾಧೆಯನ್ನುಂಟುಮಾಡಲು ಯತ್ನಿಸುತ್ತವೆ. ಮಾನವ ಯಾಂತ್ರಿಕ ಜಗತ್ತಿನಲ್ಲಿ ತನ್ನ ಸಹವಾಸಿಗಳನ್ನಷ್ಟೆ ಅಲ್ಲ ಬಾಂಧವರನ್ನು ದೂರ ಮಾಡುತ್ತಿದ್ದಾನೆ. ಇದೇ ಮಾತು ನಗರೀಕರಣಕ್ಕೂ ಅನ್ವಯಿಸುತ್ತದೆ. ಈ ಎರಡೂ ಸಂಗತಿಗಳು ಮಾನವನನ್ನು ಶಂಬಾ ಜೋಶಿ ಅವರ ಹೇಳುವಂತೆ 'ಹಿಮ್ಮುಖ ಚಲನೆಗೆ ಕೊಂಡೊಯ್ದಿವೆ. ಸಂಪರ್ಕ ಮಾಧ್ಯಮಗಳಾದ ದೂರವಾಣಿ ಮತ್ತು ಈ-ಮೇಲ್‌ಗಳು ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಂತೆಲ್ಲ ಮಾನವೀಯ ಜಗತ್ತನ್ನು ಕಿರಿದುಗೊಳಿಸುತ್ತಿವೆ. ಮನುಷ್ಯ ಸಂಬಂಧಗಳನ್ನು ಸೀಮಿತಗೊಳಿಸುತ್ತಿವೆ, ಒಂಟಿತನವನ್ನು ಪ್ರೋತ್ಸಾಹಿಸುತ್ತಿವೆ.

## ಅಮಾನವೀಕರಣ

ಮಾನವೀ ಬದುಕಿನ ನಿಯಮಗಳಿಗೆ ಅನುಗುಣವಾಗಿ ನಡೆದುಕೊಳ್ಳದ ನೀತಿಯನ್ನ ಅಮಾನವೀಕರಣ ಎನ್ನಬಹುದು. ಇದು ಮಾನವೀಕರಣದ ತದ್ವಿರುದ್ಧವಾದ ಪ್ರಕ್ರಿಯೆ. ಒಬ್ಬ ವ್ಯಕ್ತಿಯ ಅಥವಾ ಸಮೂಹದ ಅಥವಾ ರಾಜ್ಯ-ರಾಷ್ಟ್ರದ ನಿರೀಕ್ಷೆಗಳಿಗೆ ಅಥವಾ ನಡತೆಯ ನಿಯಮ-ನೀತಿಗಳಿಗೆ ವಿರುದ್ಧವಾಗಿ ನಡೆದುಕೊಳ್ಳುವ ಪ್ರಕ್ರಿಯೆ ಇದಾಗಿದೆ. ಈ ಪ್ರಕ್ರಿಯೆಯು ಉದ್ದೇಶ ಪೂರಿತವಲ್ಲ. ಆದರೂ ಕೆಲವರಿಗೆ ಮುಖ್ಯ ತತ್ತ್ವವಾಗಿರುತ್ತದೆ. ಕೆಲವೊಮ್ಮೆ ಮಾನವೀಕರಣವು ಅಮಾನವೀಕರಣವಾಗುವ ಸಾಧ್ಯತೆಗಳೂ ಇವೆ. ಇದರಿಂದಾಗಿ ಸಮಯ ಸಂದರ್ಭಗಳ ಜೊತೆಗೆ ಅವನ ಜೀವನದ ಮೂಲದ್ರವ್ಯವನ್ನ ಮಾನವೀಕರಣವು ಅವಲಂಬಿಸಿರುತ್ತದೆ. ಅಂದರೆ ಕಳ್ಳತನ ಮಾಡುವವನು ಹಸಿದದ್ದರಿಂದ ಅಥವಾ ಅವನಿಗೆ ಕೊರತೆಯಿರುವ ವಸ್ತುವನ್ನು ಕಳ್ಳತನ ಮಾಡಿದರೆ ಅದು ಅವನ ಬದುಕಿನಲ್ಲಿ ಮಾನವೀನೀತಿಯಾಗಿರುತ್ತದೆ. ಆದರೆ ಅದು ಸಮಾಜಕ್ಕೆ ಅಮಾನವೀಕರಣವಾಗಿರುತ್ತದೆ. ಸಮಾಜದಲ್ಲಿ ಪ್ರತಿಯೊಬ್ಬನು ನೈತಿಕತೆಯಿಂದ ಬಾಳಬೇಕು ನಿಜ. ಆದರೆ ಅವನ ವ್ಯಕ್ತಿತ್ವದಲ್ಲಿ ಅಂತರ್ಗತವಾಗಿರುವ ಅವನ ಮಾನವೀಯ ಅಂಶಗಳು ಅನೈತಿಕತೆಗೆ ದಾರಿಮಾಡುತ್ತದೆ. (ಹೀಗೆ ವ್ಯಕ್ತಿಯಿಂದ ವ್ಯಕ್ತಿಗೆ ನೀತಿಗಳು ಬದಲಾಗುತ್ತವೆ ಎಂತಲೆ ವಿಶ್ವಸಂಸ್ಥೆಯು ಮಾನವೀಯ ಹಕ್ಕುಗಳನ್ನು ಜಾರಿಗೆ ತಂದಿರುವುದನ್ನು ಹಿಂದೆ ಗಮನಿಸಲಾಯಿತು.) ಕೆಲವೆಡೆ ಸಾಮಾಜಿಕನ ದ್ವಿರೂಪತೆಯಿಂದ ಅಮಾನವೀಕರಣವುಂಟಾಗುತ್ತದೆ. ಉದಾ: ವೈದ್ಯ ತಪಾಸಣೆ ಮಾಡುತ್ತಾ ಸುಂದರ ಸ್ತ್ರೀಯನ್ನು ಲೈಂಗಿಕತೆಗೆ ಬಳಸುವುದು, ಪೋಲಿಸರು ವೇಶ್ಯಾವಾಟಿಕೆ ನಿಯಂತ್ರಿಸುವುದಾಗಿ ಹೇಳಿ ತಾವೂ ಭಾಗೀದಾರರಾಗುವುದು. ಇಲ್ಲಿ ವೈದ್ಯನ ಮಾನವೀ ನೀತಿಯು ರೋಗಿಯನ್ನು ತಪಾಸಣೆ ಮಾಡುವುದು. ಆದರೆ ಅವನು ಮುಂದುವರಿದು ರೋಗಿಯನ್ನು ದುರುಪಯೋಗಪಡಿಸಿಕೊಳ್ಳುವುದು. ಅದೇ ರೀತಿ ಪೋಲಿಸರೂ ಕೂಡ. ಕಾನೂನಿನಲ್ಲಿನ ಉಲ್ಲಂಘನೆಗಳ ರಹಸ್ಯತೆ ಕೂಡ ಅಮಾನವೀಕರಣಕ್ಕೆ ದಾರಿಮಾಡಿಕೊಡುತ್ತದೆ. ಉದಾ:ವರದಕ್ಷಿಣೆ, ಬಾಲ್ಯವಿವಾಹ,

ಗರ್ಭಪಾತ, ಲೈಂಗಿಕ ಅಪರಾಧ(ಅತ್ಯಾಚಾರ). ಇಲ್ಲಿ ಸಂಭವಿಸುವ ಅಮಾನವೀಕರಣವು ತೀರಾ ಅನುಚಿತ. ಬಾಲ್ಯವಿವಾಹ ಹೆಣ್ಣು ಹೆತ್ತ ತಂದೆ ತಾಯಿಗಳಿಗೆ ಮಾನವೀಯವಾದರೆ ಬಾಲಿಕೆಗೆ ಅಮಾನವೀಯ. ಹೀಗಾಗಿ ಅಮಾನವೀಕರಣ ಕ್ರಿಯೆ ಇನ್ನೊಂದು ಮುಖದಲ್ಲಿ ಮಾನವೀಕರಣದ ಪ್ರಕ್ರಿಯೆಯಾಗಿ ಹೊರಹೊಮ್ಮುತ್ತಿದೆ.

ಅಮಾನವೀಕರಣವು ಮಾನವೀಯತೆಯ ಪಲ್ಲಟತೆಯಿಂದಲೂ ಜರುಗಬಹುದು. 'ಮಾನವೀಕರಣದ ಪಲ್ಲಟತೆ' ಎಂದರೆ ಸಹಜವಾಗಿರುವ ನೈತಿಕ ಮೌಲ್ಯಗಳು ಅನಿವಾರ್ಯತೆಗಳಿಂದಲೂ ಅಥವಾ ವ್ಯಕ್ತಿಯ ಹಠವಾದದಿಂದಲೂ ಬದಲಾಗುವುದು. ಒಂದು ನಡೆಯುವುದರ ಹೊರತಾಗಿ ಇನ್ನೊಂದಾಗಿ ಮಾರ್ಪಡುವುದು. ಈ ಪಲ್ಲಟತೆ ಅಥವಾ ಅಮಾನವೀಕರಣವು ಮಾನವೀಕರಣದ ಬಿಕ್ಕಟ್ಟುಗಳಾಗಿ, ಮಾನವತಾವಾದದಿಂದ ನಿವಾರಿಸಲು ಕಷ್ಟಸಾಧ್ಯವಾಗುವಂತಹ ಸಂದರ್ಭಗಳನ್ನು ಸೃಷ್ಟಿಸುತ್ತದೆ. ಇದಕ್ಕೆ ಉದಾಹರಣೆಯನ್ನು ಕೊಡುವುದಾದರೆ, ಹಿರಿಯ ಅಧಿಕಾರಿಯೊಬ್ಬ ಕಾನೂನಿನ ಪರಿಪಾಲಕನಾಗಿರುತ್ತಾನೆ. ಅದರ ಜೊತೆಗೆಯೇ ಅವನು ಮನುಷ್ಯನೂ ಆಗಿರುತ್ತಾನೆ. ಈ ಎರಡು ಪಾತ್ರಗಳನ್ನು ಏಕಕಾಲದಲ್ಲಿ ನಿರ್ವಹಿಸುವ ವಿಪರ್‍ಯಾಸದ ಸಂದರ್ಭ ಎದುರಾಗಿರುತ್ತದೆ. ಅಧಿಕಾರಿಯ ಬಳಿ ನಿರಪರಾಧಿಗೆ ಶಿಕ್ಷೆ ವಿಧಿಸುವ ಸಾಕ್ಷಿಗಳು ದೊರೆತಿರುತ್ತವೆ. ಅಷ್ಟೆ ಮುಖ್ಯವಾಗಿ ಅವನು ನಿರಪರಾಧಿಯೆಂದು ಅವನ ಮಾನವೀಯ ಮನಸ್ಸು ತರ್ಕಿಸುತ್ತದೆ. ಇಂತಹ ಸಂದರ್ಭಗಳು ಮಾನವೀಯತೆಗೆ ಬಿಕ್ಕಟ್ಟನ್ನುಂಟು ಮಾಡುತ್ತದೆ.

ಮಾನವತಾವಾದ ಮತ್ತು ಮಾನವೀಕರಣವನ್ನು ಕುರಿತ ಆಲೋಚನೆಗಳ ಮಂಡನೆಗೂ ಅವು ಸಾಹಿತ್ಯ ಕೃತಿಗಳಲ್ಲಿ ಮೂಡಿ ಬಂದಿರುವ ರೀತಿಗೂ ವ್ಯತ್ಯಾಸವಿದೆ. ಒಂದು ಪರಿಕಲ್ಪನೆಯಾಗಿ ಕನ್ನಡ ಮತ್ತು ಇತರ ಭಾರತೀಯ ಭಾಷೆಗಳ ಸಂದರ್ಭದಲ್ಲಿ ಮಾನವತಾವಾದವು ಹೆಚ್ಚಾಗಿ ಚರ್ಚಿತವಾಗದಿರಬಹುದು. ಆದರೆ ಕಾಲಸೃಷ್ಟಿಯ ಮೊದಲ ದಿನಗಳಿಂದಲೂ ಸಾಹಿತ್ಯವೂ ಸೇರಿದಂತೆ ಎಲ್ಲ ಕಲೆಗಳು ಮಾನವೀಕರಣದ ಸಾಧ್ಯತೆಗಳನ್ನು ಆಗುಗೊಳಿಸುತ್ತಾ ಬಂದಿವೆ. ಸಾಹಿತಿಗಳೂ ಕೂಡ ಬೇರೆ ಬೇರೆ ಸಾಮಾಜಿಕ ಹಿನ್ನೆಲೆಗಳಿಂದ ಬಂದಿರುತ್ತಾರೆ. ಕೆಲವು ಬಾರಿ ಆಯಾ ವರ್ಗಗಳನ್ನು ಸಮರ್ಥಿಸುತ್ತಾರೆ ಎನ್ನುವ ಮಾತು ನಿಜವಿರಬಹುದು. ಆದರೆ ಶ್ರೇಷ್ಠ ಸಾಹಿತಿಗಳೆಲ್ಲರೂ ಈ ಗೋಡೆಗಳನ್ನು ದಾಟಿ ತಮಗಿಂತ ಭಿನ್ನವಾದ ಲೋಕಗಳನ್ನು ಅರ್ಥಮಾಡಿಕೊಳ್ಳುವ, ಅರ್ಥ ಮಾಡಿಸುವ ಪ್ರಕ್ರಿಯೆಯಲ್ಲಿ ತೊಡಗಿರುತ್ತಾರೆ. ಹಾಗಾಗಿ ನಿಜವಾದ ಸಾಹಿತ್ಯವು ಸದಾ ಜನಪರವಾದುದೇ. ಎಲ್ಲ ಮಿತಿಗಳ ಒಳಗೂ ಈ ಮಾತು ನಿಜ. ಹಾಗಾಗಿ ಕಾರಂತರೂ ಸೇರಿದಂತೆ ಭಾರತೀಯ ಸಾಹಿತ್ಯಿಕ ಸಂದರ್ಭದಲ್ಲಿ ಮೂಡಿರುವ ಮಾನವೀಕರಣದ ಪ್ರಯತ್ನಗಳು ನಮಗೆ ಮುಖ್ಯವಾಗುತ್ತವೆ. ತಿರಸ್ಕಾರಕ್ಕೆ ನಿರ್ಲಕ್ಷ್ಯಗೆ ಗುರಿಯಾದ ವ್ಯಕ್ತಿಗಳನ್ನು ಒಟ್ಟು ಸಮುದಾಯಕ್ಕೆ ಪರಿಚಯ ಮಾಡಿಕೊಟ್ಟು ಇವರೂ

ನಮ್ಮ ಹಾಗೆ ನಿಮ್ಮ ಹಾಗೆ ಮನುಷ್ಯರೇ ಎಂದು ತೋರಿಸಿಕೊಡುವುದು ಕೂಡ ಮಾನವೀಕರಣದ ಮೊದಲ ಹೆಜ್ಜೆಯೆ. ಇದರಿಂದ ಓದುಗರ ಮಾನವೀಕರಣ ಆಗುತ್ತದೆ.

## ಭಾರತೀಯ ನೆಲೆ

ಭಾರತದ ಸಂದರ್ಭದಲ್ಲಿ ಮಾನವತಾವಾದವು ಒಂದು ಪ್ರತ್ಯೇಕ ಸಿದ್ಧಾಂತವಾಗಿ ಹುಟ್ಟಲಿಲ್ಲ. ನಮ್ಮ ಎಲ್ಲ ಧರ್ಮಗಳು ಮಾನವೀಯತೆಯನ್ನ ಸದಾ ಪ್ರೋತ್ಸಾಹಿಸುತ್ತ ನಡೆದಿವೆ. ಹಿಂದೂ ಧರ್ಮದ 'ಮನುಸ್ಮೃತಿ'ಯು ಮಾನವ ಸಂಸ್ಕೃತಿಯನ್ನು, ಮಾನವನ ನೀತಿ-ನಿಯಮಗಳನ್ನು ಬೋಧಿಸಿತು. ನಂತರದಲ್ಲಿ ಬೌದ್ಧ ಧರ್ಮವು ಹಿಂಸೆಯನ್ನು ಖಂಡಿಸುವುದರ ಮೂಲಕ ಮಾನವತೆಗೆ ಭದ್ರ ಬುನಾದಿ ಹಾಕಿತು. ಜೈನಧರ್ಮದ ತತ್ವಗಳೂ ಸಹ ಮಾನವೀಯತೆಯನ್ನು ಸ್ಪಷ್ಟವಾಗಿ ಎತ್ತಿ ಹಿಡಿಯುತ್ತವೆ. ಹಿಂದೂ ಧರ್ಮದ ಇನ್ನೊಂದು ವಿಭಾಗವಾದ ವೀರಶೈವ ಧರ್ಮವು 'ಮಾನವ ಧರ್ಮಕ್ಕೆ ಜಯವಾಗಲಿ', 'ಮಾನವ ಧರ್ಮದಿಂದಲೇ ವಿಶ್ವಕ್ಕೆ ಶಾಂತಿ' ಎಂಬ ಘೋಷವಾಕ್ಯದಡಿಯಲ್ಲಿ ಮಾನವತಾವಾದ ಅಥವಾ ಮಾನವತಾ ಧರ್ಮವನ್ನು ನಿಖರವಾಗಿ ಪ್ರಚುರಪಡಿಸಿತು. ಈ ಧರ್ಮಗಳಿಂದಲೇ ಭಾರತದಲ್ಲಿ ಮಾನವತಾವಾದವು ನೆಲೆಗೊಳ್ಳುವಂತಾಯಿತು. ಧರ್ಮಗಳ ಸದಾಶಯ ಗಳನ್ನು ತಿಳಿದ ಭಾರತೀಯ ಸಾಹಿತಿಗಳು ತಮ್ಮ ಕೃತಿಗಳ ಮೂಲಕ ಮಾನವತೆಯನ್ನು ಬೋಧಿಸತೊಡಗಿದರು.

ಭಾರತದ ಪುರಾತನ ಸಾಹಿತ್ಯದಲ್ಲಿ ಮಾನವೀಯ ಮೌಲ್ಯಗಳ ಸ್ಪಷ್ಟ ಉಲ್ಲೇಖವಿಲ್ಲ. ಆದರೆ ಈ ವಿಚಾರದ ಅಂಕುರವನ್ನು ಶ್ರುತಿ ಗ್ರಂಥಗಳಲ್ಲಿ ಹಿರಣ್ಮಯ ಬ್ಯಾನರ್ಜಿ ಅವರು ಗುರುತಿಸಿದ್ದಾರೆ. - 'ಈಶೋಪನಿಷತ್ತಿ'ನಲ್ಲಿ ಹೇಳಿರುವ-ಈ ವಿಶ್ವದಲ್ಲಿ ದೃಷ್ಟಿಗೋಚರವಾದುದೆಲ್ಲವೂ ಪರಬ್ರಹ್ಮನ ಸ್ವರೂಪವಾಗಿರು ವುದರಿಂದ ನಾವು ಬದುಕನ್ನು ಸಂಯಮದಿಂದ ಭೋಗಿಸಬೇಕು.[೨೬](ಈಶಾವಾಸ್ಯಮಿದಂ ಸರ್ವ ಯತ್ಕಿಂಚ ಜಗತ್ಯಾಮ್ ಜಗತ್ ತೇನತ್ಯಕ್ತೇನ ಭುಂಜೀಥಾ)

ಇಲ್ಲಿ ಪರಹಿತದ ಚಟುವಟಿಕೆಗಳನ್ನು ಉತ್ತೇಜಿಸಲಾಗಿದೆ. ಅನಂತರದ 'ಮನುಸಂಹಿತೆ'ಯಲ್ಲಿ ಪ್ರತಿಗೃಹಸ್ಥನು ಆಚರಿಸಬೇಕಾದ ನಾಲ್ಕು ಧಾರ್ಮಿಕ ಕ್ರಿಯೆಗಳಲ್ಲಿ ನೃತಯಜ್ಞ ಅಥವಾ ಮಾನವ ಸೇವೆಯೂ ಒಂದಾಗಿದೆ. ಇದು ಮಾನವತಾ ಸಿದ್ಧಾಂತಿಯ ಆದರ್ಶಕ್ಕೆ ಪೂರ್ವಸೂಚಿಯಂತಿದೆ.[೨೭] 'ನಮ್ಮವರ ಮಾನವತಾ ಸಿದ್ಧಾಂತವು ಆಸ್ತಿಕತೆಯ ತಳಹದಿಯ ಮೇಲೆಯೇ ನಿಂತಿದ್ದು. ಮನುಷ್ಯನು ದೇವ ಸಮಾನವೆಂಬ ತತ್ವಕ್ಕನುಸಾರವಾಗಿ ಲೋಕಹಿತ ಚಿಂತನಾ ಕಾರ್ಯಗಳು ಕಾರ್ಯಗತವಾಗಬೇಕೆಂದು ನಮ್ಮವರು ವಾದಿಸಿದುರು.'[೨೮] ಹೀಗಾಗಿ ಭಾರತೀಯ ಮಾನವತಾ ಸಿದ್ಧಾಂತವು ಭಿನ್ನ ನೆಲೆಯಲ್ಲಿ ನಿಲ್ಲುತ್ತದೆ.

ಜಾಗತಿಕ ಮಟ್ಟದಲ್ಲಿ ಕಾರ್ಲ್‌ಮಾರ್ಕ್ಸ್, ಪೆಟ್ರಾರ್ಕ್, ಬೋಕ್ಕಾಶಿಯೋ, ಲೊರೆಂಜೊ ವಾಲಾ ಮೊದಲಾದ ತತ್ವಜ್ಞಾನಿಗಳಿಂದ ಬೆಳೆದ ಮಾನವತಾವಾದವು ಭಾರತದಲ್ಲಿ ಮಾನವೇಂದ್ರನಾಥ ರಾಯ್, ರವೀಂದ್ರನಾಥ ಠಾಕೂರ್ ಮತ್ತು ಗಾಂಧೀಜಿಯವರಿಂದ ಬೆಳೆಯಿತು. ಭಾರತದಲ್ಲಿ ಮಾನವೇಂದ್ರನಾಥ ರಾಯ್ ಅವರು 'ನವ ಮಾನವತಾವಾದ' ಎಂಬ ಸಿದ್ಧಾಂತವನ್ನು ಮಾರ್ಕ್ಸ್‌ಸಿದ್ಧಾಂತಕ್ಕೆ ಪರ್ಯಾಯವಾಗಿ ಹುಟ್ಟು ಹಾಕಿದರು. ಮಾನವತಾವಾದವು ಸುಮಾರು ಹತ್ತು ವಿಧದಲ್ಲಿ ಬೆಳೆದು ಬಂದಿರುವುದು ಗಮನಾರ್ಹ'. ಮಾರ್ಕ್ಸಿಸ್ಟ್ ಮಾನವತಾವಾದ, ಉದಾರ ಮಾನವತಾವಾದ, ವೈಜ್ಞಾನಿಕ ಮಾನವತಾವಾದ, ಅಸಂಗತ ಮಾನವತಾವಾದ, ನೈತಿಕ ಮಾನವತಾವಾದ, ಮೌಲಿಕ ಮಾನವತಾವಾದ, ನವಮಾನವತಾವಾದ, ಧಾರ್ಮಿಕ ಮಾನವತಾವಾದ, ಸೌಂದರ್ಯ ಮಾನವತಾವಾದ ಮತ್ತು ಅಸ್ತಿತ್ವ ಮಾನವತಾವಾದ'[೨೯] ಈ ಹತ್ತು ವಿಧಗಳಲ್ಲಿ 'ನವ ಮಾನವತಾವಾದ'ವು ಒಂದು. ಹನ್ನೊಂದನೆಯದಾಗಿ ಮತ್ತು ಹೊಸ ರೂಪದ ವಾದವಾಗಿ ವೈಚಾರಿಕ ಮಾನವತಾವಾದವೆಂದು ಮಾನವೀಕರಣ ಸಿದ್ಧಾಂತ ವನ್ನು ಗುರುತಿಸಬಹುದಾಗಿದೆ. ಮಾನವತಾವದಕ್ಕೂ 'ನವ'ಮಾನವತವಾದಕ್ಕೂ ಇರುವ ಭಿನ್ನತೆಗಳಲ್ಲಿ ಇದು ಭಾರತೀಯ ಪರಿಸರಕ್ಕೆ ಹೊಂದಿಕೆಯಾಗುವಂತೆ ಬೆಳೆದದ್ದು. ಮಾನವೇಂದ್ರನಾಥರಾಯರು ಮಾರ್ಕ್‌ವಾದವನ್ನು ಕುರಿತು "ನಾನು ಅಂಧಾನುಯಾಯಿ ಮಾರ್ಕ್ಸ್‌ವಾದಿ ಅಲ್ಲ. ಸದಾನುವರ್ತಿ ಮಾರ್ಕ್ಸ್ ನಿಷ್ಠನಲ್ಲ. ಮಾರ್ಕ್ಸ್‌ನ ಸಿದ್ಧಾಂತವನ್ನು ವಾಸ್ತವ ಘಟನೆಗಳಿಗೆ ಅನ್ವಯಿಸಿ ನೋಡಬೇಕು. ಆದರೆ ವಿವೇಕದಿಂದ, ಆದಾಗ್ಯೂ ಮಾರ್ಕ್ಸ್‌ವಾದವು ಒಂದು ಉತ್ತಮ ಬೌದ್ಧಿಕ ತಾತ್ವಿಕ ಉಪಕರಣ. ಅದನ್ನು ನಾವು ಮಾನವನ ಇತಿಹಾಸವನ್ನೂ ಅದರ ದಿಶೆಯನ್ನು ಅರಿತುಕೊಳ್ಳಲು ಉಪಯೋಗಿಸತಕ್ಕದ್ದು. ಏಕೆಂದರೆ ಮಾರ್ಕ್ಸ್‌ವಾದವು ಉಪಲಬ್ಧವಿರುವ ಭೌತ ಸಂಗತಿಗಳ ಹಾಗೂ ಮಾನವನ ಕುರಿತ ಎಲ್ಲ ವೈಜ್ಞಾನಿಕ ಪರಿಜ್ಞಾನವನ್ನು ಅರಗಿಸಿಕೊಂಡಿದೆ. ಇತಿಹಾಸದ ಕ್ರಮವಿಪಾಕವನ್ನು ಅರಿತುಕೊಂಡಿದೆ. ಮತ್ತೆ ಮಾನವನ ಬದುಕಿನ ಮೇಲೆ ಅತ್ಯಂತ ಪ್ರಗತಿಪರ ಮುನ್ನೋಟವನ್ನು ತಾಳುತ್ತದೆ. ಈವರೆಗೆ ಮಾನವನು ಅನುಭವದಿಂದ ವಿಚಾರದಿಂದ ಸಂಗ್ರಹಿಸಿದ ಎಲ್ಲ ತಥ್ಯ ಸತ್ಯಗಳನ್ನು ಮಾರ್ಕ್ಸ್‌ವಾದವು ಸಂಗ್ರಹಿಸಿ ಒಂದು ಪದ್ಧತಿಯಲ್ಲಿ ಒಂದಾಗಿಸಿದೆ-ಎಂದು ಹೇಳಬಹುದು. ಇದರೊಂದಿಗೇ ನಾನು ಒಪ್ಪುವುದೇನೆಂದರೆ, ಅದನ್ನು ನಾವು ವಿಮರ್ಶಣಕ್ಕೆ, ಪರೀಕ್ಷಣಕ್ಕೆ ಗುರಿಮಾಡುತ್ತಲೇ ಇರಬೇಕು.[೩೦] ಎಂದು ಮಾರ್ಕ್ಸ್‌ವಾದವನ್ನು ಪುನರ್ ರೂಪಿಸುವಂತಹ ಸಾಹಸಮಾಡಿ ನವ ಮಾನವತಾವಾದ ಹುಟ್ಟುಹಾಕಿದರು.

ಸಮಾಜದಲ್ಲಿ ಪ್ರತಿಯೊಂದು ಕಣ್ಣಿನ ಪ್ರತಿಯೊಂದು ಕಂಬನಿಯನ್ನು ಒರೆಸುವುದು-ಇದು ಮಾನವನ ಅನುಕಂಪೆ, ಮಮತೆಯ ಭಾವನೆಯನ್ನು ಸಾಬೀತುಪಡಿಸುತ್ತದೆ. ಆದರೆ ಕಣ್ಣೀರಿಗೆ ಕಾರಣವಾದ ಸಂದರ್ಭವನ್ನು ನಿವಾರಿಸುವುದಕ್ಕೆ ಪ್ರಯತ್ನಿಸಬೇಕು. ಕಷ್ಟದಲ್ಲಿ ಸಂತೈಸುವುದು, ನೋವನ್ನು ಹಂಚಿ

ಕೊಳ್ಳುವುದು ಸಾಂಪ್ರದಾಯಿಕ ಮಾನವತಾವಾದದ ಲಕ್ಷಣ. ಇದರಿಂದ ಭಿನ್ನವಿರಬೇಕು ಎನ್ನುವುದು ನವ ಮಾನವತಾವಾದದ ಆಶಯ.



ರವೀಂದ್ರನಾಥ ಠಾಕೂರರು ಭಾರತೀಯ ಮಾನವತಾವಾದದ ನಿರ್ಮಾತೃಗಳಲ್ಲೊಬ್ಬರು. ಇವರು ಧರ್ಮದರ್ಶನಗಳ ಆಧಾರಗಳಿಂದ ತಮ್ಮ ವಾದವನ್ನು ವಿಕಾಸಗೊಳಿಸಿದ್ದಾರೆ. ದೈವ ಭಕ್ತಿಯ ಪ್ರಭಾವಕ್ಕೆ ಒಳಗಾದ ಇವರು ಯುರೋಪ್ ರಾಷ್ಟ್ರಗಳಲ್ಲಿನ ಮಾನವತಾವಾದಕ್ಕೆ ಭಿನ್ನವಾಗಿದ್ದಾರೆ. ಠಾಕೂರರು ಮನುಷ್ಯನ ಪ್ರವೃತ್ತಿ ಕುರಿತು ''ಮನುಷ್ಯನೆಂಬ ವಸ್ತು ಬಹು ಸಂಕೀರ್ಣವಾದುದು. ಅದಕ್ಕೆ ಸಹಜವಾದ ಹಲವು ಪ್ರವೃತ್ತಿಗಳೂ, ಪ್ರೇರಣೆಗಳೂ ಇವೆ. ಮೊದಲನೆಯದಾಗಿ ಮನುಷ್ಯನಿಗೆ ತನ್ನ ಜೀವನಕ್ಕೆ ಬೇಕಾದ 'ಅರ್ಥ'ಗಳ ಬಗ್ಗೆ ಎಷ್ಟು ಕುತೂಹಲವಿದೆಯೋ ಪರತತ್ವವನ್ನು ಕುರಿತು ಅಷ್ಟೇ ಕುತೂಹಲವಿದೆ. ಎರಡನೆಯದಾಗಿ, ಅವನ ಸಂವೇದನಾಶಕ್ತಿಯು ಸಂಪೂರ್ಣವಾಗಿ ವಿಕಾಸವಾಗಿರುವುದರಿಂದ ಅವನು ತನ್ನ ಸಹ ಜೀವಿಗಳಿಂದ ಪ್ರೀತಿ ವಿಶ್ವಾಸ ಬಯಸುತ್ತಾನೆ. ತಾನೂ ಸಹ ಇತರರನ್ನು ಅಂತಃಕರಣ ಪೂರ್ವಕವಾಗಿ ಕಾಣಬೇಕೆಂದು ಹಂಬಲಿಸುತ್ತಾನೆ. ಮೂರನೆಯದಾಗಿ, ಕಾಯಕದಲ್ಲಿ ತೊಡಗಿರಬೇಕೆಂದು ಅವನ ಉತ್ಕಟೇಚ್ಛೆ. ಅವನ ಈ ಮೂರು ಪ್ರವೃತ್ತಿಗಳಿಂದಾಗಿ 'ಅವನಲ್ಲಿ ಮೂರು ವಿಧವಾದ ಪ್ರೇರಣೆಗಳುಂಟಾಗುತ್ತವೆ. ಜ್ಞಾನ, ಪ್ರೇಮ ಹಾಗೂ ದುಡಿಮೆ ಇವು ಮನುಷ್ಯ ಜೀವನದಲ್ಲಿ ನಿರಂತರ ಪ್ರಭಾವ ಬೀರುವ ಆ ಮೂರು ಪ್ರೇರಣೆಗಳು.[೩೧] ಇವುಗಳಲ್ಲಿನ ಎರಡನೆಯದಾದ 'ಪ್ರೇಮ'ವು ಮಾನವ ಪ್ರೇಮವನ್ನು ಹೇಳುತ್ತದೆಯಾದ್ದರಿಂದ ಠಾಕೂರರು ಮಾನವ ಪ್ರೇಮವನ್ನು ಮನುಷ್ಯನ ಮೂಲ ಮೂರು ಪ್ರವೃತ್ತಿಗಳ ಸಾಲಿಗೆ ಸೇರಿಸಿದ್ದಾರೆ. ಮಾನವೀಯತೆಯನ್ನು ತನ್ನ ಸಹವರ್ತಿಗಳಿಗೆ ಮತ್ತು ಸಾಕುಪ್ರಾಣಿಗಳ ಮೇಲೆ ತುಂಬಾ ಆದರದಿಂದ ತನ್ನ ವೃತ್ತಿ ಎಂಬಂತೆ ಮಾಡಬೇಕು ಎಂಬುದು ಠಾಕೂರರ ವಾದವಾಗಿತ್ತು.



ಇನ್ನೊಬ್ಬ ದಾರ್ಶನಿಕ ವಿವೇಕಾನಂದರು ''ಭಗವಂತನು ಸರ್ವಾಂತರ್ಯಾಮಿ, ಅವನು ಎಲ್ಲಾ ಜೀವಿಗಳಲ್ಲೂ ಮೈದೋರುತ್ತಾನೆ. ಆದರೆ ಮನುಷ್ಯನ ಪಾಲಿಗೆ ಮಾತ್ರ ಭಗವಂತನು ಮನುಷ್ಯನಾಗಿಯೇ ಕಾಣಿಸಿಕೊಳ್ಳುತ್ತಾನೆ'' [೩೨] ಎಂದು ಹೇಳಿದ್ದಾರೆ. ''ಇಂದ್ರಿಯಗಮ್ಯವಾದ ಲೋಕವು ಅಸತ್ಯವಾದ ಮಾಯೆಯಾಗಿದ್ದ ಪಕ್ಷದಲ್ಲಿ ಸಹಜೀವಿಗಳ ಬಗ್ಗೆ ಅನುಕಂಪಪಡುವುದರಲ್ಲಿ ಅರ್ಥವಿಲ್ಲ''[೩೩] ಎಂದು ಹೇಳಿದ. ಇವರು ಒಂದು ರೀತಿಯ ವಿವೇಚನೆ ಮತ್ತು ಭಾವುಕತೆಗಳ ಸಂಘರ್ಷದಲ್ಲಿ ಮಾನವತಾವಾದಕ್ಕೆ ವ್ಯಾಖ್ಯಾನ ನೀಡುತ್ತಾರೆ. ಭಗವಂತನ ಸೃಷ್ಟಿಯ ವಸ್ತುಗಳಲ್ಲಿ ಮನುಷ್ಯನೂ ಒಬ್ಬ. ಆದ್ದರಿಂದ ಭಗವಂತನ ಸೇವೆ ಎಂದರೆ ಮನುಷ್ಯನ ಸೇವೆಯೂ ಹೌದು. ಅಂತೆಯೇ ಅವರು 'ಜನಸೇವೆಯೇ ಜನಾರ್ದನನ ಸೇವೆ' ಎಂದು ಹೇಳಿರುವರು. ಮನುಷ್ಯರಲ್ಲಿ ದೇವರನ್ನು ಕಾಣುವಂತಹ ತತ್ತ್ವ ಒಂದು ಕಡೆ, ಅಸತ್ಯ-ಮತ್ಸರ ತುಂಬಿರುವಾಗ ಸಹಜ ಜೀವಿಗಳು ತೋರುವ ಅನುಕಂಪ ಮಾನವೀಯತೆ ಬರೀ

ನಾಟಕವಾಗುವ ನಗ್ನಸತ್ಯವನ್ನು ಇನ್ನೊಂದೆಡೆ ತೆರೆದಿಡುತ್ತಾರೆ. ವಿವೇಕಾನಂದರು ಮತ್ತು ರವೀಂದ್ರನಾಥ ಠಾಕೂರರು ಪ್ರತಿಪಾದಿಸಿದ ಮಾನವತಾ ಸಿದ್ಧಾಂತಗಳು ಒಂದೇ ಪಾತಳಿಯ ಮೇಲೆ ನಿಲುತ್ತವೆ.

ಮಹಾತ್ಮ ಗಾಂಧೀಜಿಯವರು ಎರಡನೇ ಮಹಾಯುದ್ಧದಲ್ಲಿ ಪಾಲ್ಗೊಳ್ಳಲು ಭಾರತದ ಸೈನ್ಯವನ್ನು ಬ್ರಿಟಿಷರ ಪರವಾಗಿ ಹೋರಾಡಲು ಕಳುಹಿಸಿದರು. ನಾಜಿಗಳ ವಿರುದ್ಧ ಹೋರಾಡಲು ಮೊದಲು ಒಪ್ಪಿದರು. ಕಾರಣ ಬ್ರಿಟೀಷರಿಗಿಂತಲೂ ಅಪಾಯಕಾರಿಯಾಗಿದ್ದ, ಮಾನವಕುಲಕ್ಕೆ ಮುಂದೊಂದು ದಿನ ಶತ್ರುವಾಗಬಲ್ಲ ನಾಜಿಗಳನ್ನು ಸೋಲಿಸುವ ಉದ್ದೇಶವಿತ್ತು. ಬ್ರಿಟಿಷರನ್ನು ನಾವು ವಿರೋಧಿಸುತ್ತೇವೆ. ಅದಕ್ಕಿಂತಲೂ ಮುಖ್ಯವಾಗಿ ಈ ಮಾನವ ವಿರೋಧಿಗಳನ್ನು ವಿರೋಧಿಸುತ್ತೇವೆ ಎಂದಿದ್ದರು. ಯುದ್ಧ ಮುಗಿದ ನಂತರ ಬ್ರಿಟಿಷರ ವಿರುದ್ಧ ಮತ್ತೆ ಹೋರಾಟ ಮುಂದುವರಿಯಿತು. ಗಾಂಧೀಜಿಯವರಿಗೆ ವಿಶ್ವದ ಮನುಕುಲಕ್ಕೆ ಸವಾಲು ಒಡ್ಡಬಹುದಾದ ನಾಜಿಗಳನ್ನು ತಡೆಯುವುದು ಮುಖ್ಯವಾಗಿತ್ತು. ಅಂತೆಯೇ ಭಾರತದಲ್ಲಿ ಅಸ್ಪೃಶ್ಯರ ಉನ್ನತಿಯ ಬಗ್ಗೆ ತುಂಬಾ ಕಾಳಜಿ ಹೊಂದಿದ್ದರು. ಅಸ್ಪೃಶ್ಯತೆಯ ನಿವಾರಣೆಗೆ ರಾಷ್ಟ್ರವ್ಯಾಪಿ ಹೋರಾಟದಲ್ಲಿ ಹಣ, ಶಕ್ತಿ ಮತ್ತು ಕಾಲವನ್ನು ನಿರರ್ಗಳವಾಗಿ ವ್ಯಯ ಮಾಡಿದರು. ಅಸ್ಪೃಶ್ಯತೆಯನ್ನು ಪ್ರೋತ್ಸಾಹಿಸುವುದು ಅಪರಾಧವೆಂಬ ಕಾಯಿದೆಯನ್ನು ಸಂವಿಧಾನದಲ್ಲಿ ಸೇರಿಸಲು ಅಪೇಕ್ಷೆಪಟ್ಟರು. "ಈ ಕಾರ್ಯಕ್ರಮದಲ್ಲಿ ಅಸ್ಪೃಶ್ಯತೆಗೆ ಗೌಣ ಸ್ಥಾನವನ್ನು ಕೊಡಲಾಗುವುದಿಲ್ಲ. ಈ ಕಳಂಕವನ್ನು ಹೋಗಲಾಡಿ ಸದಿದ್ದರೆ ಸ್ವರಾಜ್ಯದ ಸಾಧನೆಯಲ್ಲಿ ಅಸ್ಪಶ್ಯತೆಯ ನಿವಾರಣೆ ಅತ್ಯಂತ ಬಲಿಷ್ಠ ಅಂಶವೆಂದು ನಾನು ಭಾವಿಸುತ್ತೇನೆ"[೩೪] ಎಂದು 'ಯಂಗ್ ಇಂಡಿಯಾ' ಪತ್ರಿಕೆಯಲ್ಲಿ ಹೇಳಿದ್ದಾರೆ.

ಗಾಂಧೀಜಿಯವರು ಭಾರತದಲ್ಲಿನ ಅಸ್ಪೃಶ್ಯರ ಬಗ್ಗೆ ಮತ್ತು ಜಾಗತಿಕ ಮಟ್ಟದಲ್ಲಿ ಎದುರಾಗಬಹುದಾಗಿದ್ದ ನಾಜಿಗಳ ಬಗ್ಗೆ ತುಂಬಾ ಎಚ್ಚರದಿಂದಲೇ ಆಸಕ್ತಿ ವಹಿಸಿದರು. ಈ ನಿಟ್ಟಿನಲ್ಲಿ "ಶಾಶ್ವತ ಶಾಂತಿಯನ್ನು ಸಂಸ್ಥಾಪಿಸುವುದು ಅಸಾಧ್ಯವೆಂದು ಬಗೆಯುವುದು ಮನುಷ್ಯನಲ್ಲಿರುವ ದೈವಾಂಶವನ್ನು ಅಲಕ್ಷಿಸಿದಂತೆಯೇ. ಈವರೆವಿಗೂ ಶಾಂತಿಯ ಸ್ಥಾಪನೆಯಲ್ಲಿ ವಿಫಲವಾಗಿರುವುದಕ್ಕೆ ಈ ಕಾರ್ಯದಲ್ಲಿ ನಿರತರಾಗಿ ಸೆಣಸಿದವರಲ್ಲಿ ಅತುಳವಾದ ನಿಷ್ಠೆ ಮತ್ತು ಪ್ರಾಮಾಣಿಕತೆಗಳ ಅಭಾವವೇ ಕಾರಣ..." [೩೫] ಎನ್ನುವ ಗಾಂಧೀಜಿಯವರ ಮಾತಿನಲ್ಲಿ ವಿಶ್ವದಲ್ಲಿ ಸ್ಥಾಪಿಸಬಹುದಾದ ಮಾನವೀಯ ಸ್ವಾತಂತ್ರ್ಯವನ್ನು ಸ್ಪಷ್ಟವಾಗಿ ಗುರುತಿಸಬಹುದು. ಗಾಂಧಿಯವರ ಅಹಿಂಸಾ ಸಿದ್ಧಾಂತವು ಇನ್ನೊಂದು ರೀತಿಯ ಮಾನವೀಕರಣದ ಸಿದ್ಧಾಂತವೇ ಆಗಿದೆ. ಹಿಂಸೆಯನ್ನು ಮಾಡದಿರುವುದು ಮಾನವೀಕರಣದ ಪ್ರಮುಖ ಲಕ್ಷಣವಾಗಿದೆ. ಅವರು ಇಡುತ್ತಿದ್ದ ಪ್ರತಿಹೆಜ್ಜೆಯೂ ಮಾನವೀಯ ಮುಖವನ್ನು ಹೊಂದಿತ್ತು.

ಮಾನವೇಂದ್ರನಾಥರಾಯ್, ರವೀಂದ್ರನಾಥ ಠಾಕೂರ, ಮಹಾತ್ಮಾ ಗಾಂಧೀಜಿ ಮತ್ತು ವಿವೇಕಾನಂದರ ಮಾನವತಾ ಸಿದ್ಧಾಂತಗಳು ಭಾರತದಲ್ಲಿ ಬೆಳೆದು ಬಂದವು. ಈ ದಾರ್ಶನಿಕರ ನಂತರ ಸಮಾಜವಾದದ ಜೊತೆಗೆ ಮಾನವತಾವಾದವನ್ನು ಬೆಳಸಿದವರಲ್ಲಿ ಜಯಪ್ರಕಾಶ ನಾರಾಯಣ, ರಾಮಮನೋಹರ ಲೋಹಿಯಾ, ಬಿ.ಆರ್.ಅಂಬೇಡ್ಕರ್ ಮೊದಲಾದವರು ಮೊದಲಿಗರಾಗಿದ್ದಾರೆ. ಮಹಾಭಾರತದ ಕಾಲದಿಂದಲೂ ಮಾನವೀಯತೆಯ ಅಂಶಗಳಿವೆ. ಆದರೆ ಅದೇ ಒಂದು ಸಿದ್ಧಾಂತವಾಗಿ ರೂಪುಗೊಂಡಿಲ್ಲ. 'ಮನುಷ್ಯರಲ್ಲಿ ಭೇದ ಬೇಡ' ಎಂದು ಉಪನಿಷತ್ ಸಾರಿದೆ. ಬುದ್ಧ, ಮಹಾವೀರ ಮೊದಲಾದ ಮಹಾನ್ ಪುರುಷರೂ ಸಹ ಮಾನವತೆಗೆ ಒತ್ತು ಕೊಟ್ಟಿದ್ದಾರೆ.

ಸಾಂಸ್ಕೃತಿಕ ಲೋಕದಲ್ಲಿ ಮಾನವನು ಬದುಕುವ ರೀತಿ ವಿಶಿಷ್ಟವಾದುದು. ಜೀವಿತದ ಸಂದರ್ಭದಲ್ಲಿ ಅವನ ಯಾವುದೇ ಒಂದು ಗುಣ ಕೊರತೆಯಾದರೂ ಏನೋ ಕಳೆದುಕೊಂಡವನಂತೆ ವರ್ತಿಸುತ್ತಾನೆ. ಅವನ ಗುಣ ಲಕ್ಷಣಗಳಲ್ಲಿ ಮಾನವೀಯ ಮೌಲ್ಯಗಳು ತುಂಬಾ ಪ್ರಭಾವ ಬೀರುತ್ತವೆ. ಹುಟ್ಟಿನಿಂದಲೇ ಪಡೆದಿರುವ ಈ ಗುಣಗಳನ್ನು ಸದಾ ಉಳಿಸಿಕೊಂಡು ಹೋಗುವುದು ಸಾಹಸದ ಕೆಲಸವೇ ಸರಿ. ತಾಳ್ಮೆಯಿದ್ದ ಮನುಷ್ಯ ಮಾತ್ರ ಈ ಗುಣ ಮೌಲ್ಯಗಳನ್ನು ನಿಯಂತ್ರಣದಲ್ಲಿಟ್ಟುಕೊಳ್ಳಬಲ್ಲ. ಭಾರತೀಯನು ಎಂದೆಂದೂ ಮಾನವೀಯ ಗುಣಗಳನ್ನು ಎತ್ತಿ ಹಿಡಿದಿದ್ದಾನೆ. ಇತಿಹಾಸದುದ್ದಕ್ಕೂ ಅನೇಕ ಮಾನವೀಯವೆನ್ನಬಹುದಾದ ಘಟನೆಗಳನ್ನು ಕಾಣುತ್ತೇವೆ. ಆಶೋಕ ಕಳಿಂಗ ಯುದ್ಧದಲ್ಲಾದ ಮಾನವ ಹಾನಿಯನ್ನು ಮನಗಂಡು ಮುಂದೆಂದೂ ಯುದ್ಧ ಮಾಡುವುದಿಲ್ಲ ಎಂದು ಶಪಥಗೈದ. ಅಹಿಂಸೆ, ಹಿರಿಯರಿಗೆ ಗೌರವ, ಆರೋಗ್ಯ ಪಾಲನೆ, ಧಾರ್ಮಿಕ ಆಚರಣೆಗಳು ಮತ್ತು ಎಲ್ಲ ಮತದವರಿಗೂ ಸಮಾನತೆ ಕೊಟ್ಟು, ಮಾನವೀಯತೆಯನ್ನು ಎತ್ತಿ ಹಿಡಿದ. ಇಂತಹ ಅನೇಕ ಮಹಾನ್ ಪುರುಷರನ್ನು ಭಾರತದ ಚರಿತ್ರೆಯಲ್ಲಿ ಗುರುತಿಸಬಹುದು.

ಬಂಕಿಮಚಂದ್ರರು ತಮ್ಮ ಕಾದಂಬರಿಗಳ ಮೂಲಕ ಅರವಿಂದರು ಕಾವ್ಯಗಳ ಮೂಲಕ, ರವೀಂದ್ರನಾಥ ಟಾಗೋರ್ ಅವರು ಕಾವ್ಯ ಮತ್ತು ಜೀವನದಲ್ಲಿ ಮಾನವತಾವಾದವನ್ನ ಪ್ರಚುರಗೊಳಿಸಿದರು. ರವೀಂದ್ರ ನಾಥರಿಂದ ಭಾರತೀಯವೆನ್ನಬಹುದಾದ ವಿಶಿಷ್ಟವಾದ ಮಾನವತಾವಾದವೇ ನಿರ್ಮಾಣವಾಯಿತು. ಯೂರೋಪ್ ದೇಶಗಳಲ್ಲಿ ಉದಯವಾಗುವುದಕ್ಕಿಂತಲೂ ಮೊದಲು ಭಾರತದಲ್ಲಿ ಮಾನವತಾವಾದವು ಉದಯವಾಗಿತ್ತು. ಪ್ರೇಮ್‌ಚಂದ್, ಮೈಥಿಲಿ ಶರಣಗುಪ್ತಾ, ಮೊದಲಾದ ಬರಹಗಾರರ ಕೃತಿಗಳು ಮಾನವತಾವಾದನನ್ನು ಸಾರುತ್ತವೆ.

## ಕನ್ನಡದ ನೆಲೆ

ಕನ್ನಡದ ಸಂದರ್ಭದಲ್ಲಿ ಮಾನವೀಕರಣದ ಮೂಲ ಉದ್ದೇಶವನ್ನಿಟ್ಟುಕೊಂಡು ಯಾವುದೇ ಚಳುವಳಿಯಾಗಲಿ, ಸಾಹಿತ್ಯಿಕ ಪಂಥವಾಗಲಿ ಇದುವರೆಗೆ ಹುಟ್ಟಿಬಂದಿಲ್ಲ. ಅಂತಹ ಅನಿವಾರ್ಯದ

ಅಗತ್ಯತೆಯ ಸಂದರ್ಭ ಒದಗಿ ಬರದೇ ಇರುವುದೇ ಮುಖ್ಯವಾಗಿರಬಹುದು. ಸಹಜ ಮಾನವಾಭಿವ್ಯಕ್ತಿಯಾದ ಮಾನವೀಯತೆ ಸಾಹಿತ್ಯ ಕೃತಿಗಳಲ್ಲಿ ಸಹಜವಾಗಿಯೇ ಅಥವಾ ಅಸಹಜ ವಾಗಿಯೋ ಮನೆ ಮಾಡಿಕೊಂಡಿದೆ. ಇದು ಪಂಪನಿಂದ ಹಿಡಿದು ಇಂದಿನ ಎಲ್ಲಾ ಕವಿ-ಲೇಖಕರಲ್ಲೂ ಇದೆ. ೧೨ನೇ ಶ.ಮಾ.ದ ವಚನ ಚಳುವಳಿ ಮಾತ್ರ ಈ ವಿಷಯದಲ್ಲಿ ವಿಶಿಷ್ಟವಾಗಿ ಕಾಣುತ್ತದೆ. ಮಾನವತಾವಾದಿಯಾಗಿಯೇ ರೂಪುಗೊಂಡು ಸಮಾಜದ ಬಗ್ಗೆ, ಮೂಲ ನೆಲೆಯಾದ ವ್ಯಕ್ತಿಯ ಬಗ್ಗೆ ತೀರಾ ಸ್ಪಂದನಾತ್ಮಕವಾದ ಕಾಳಜಿ ಹೊಂದಿದ ಬಸವಣ್ಣ ಮಾನವೀಕರಣಕ್ಕೆ ಹತ್ತಿರವಾಗುತ್ತಾರೆ.

ದಾಸ ಸಾಹಿತ್ಯದ ಪುರಂದರದಾಸರು, ಕನಕದಾಸರು ಮಾನವೀ ಬದುಕಿಗೆ ಮಹತ್ವಕೊಟ್ಟವರು. ಪುರಂದರದಾಸರು ಮಾನವಜನ್ಮದ ಹಿತ ಅಹಿತಗಳ ಸತ್ಯಗಳನ್ನು ಕಂಡು ದುರುಪಯೋಗ ಪಡಿಸಿಕೊಳ್ಳುತ್ತಿದ್ದ ಮನುಷ್ಯನನ್ನು ಕುರಿತಾಗಿಯೇ 'ಮಾನವ ಜನ್ಮ ದೊಡ್ಡದು ಇದನ್ನು ಹಾಳು ಮಾಡಿಕೊಳ್ಳಲು ಬೇಡಿ ಹುಚ್ಚಪ್ಪಗಳಿರಾ' ಎಂದು ಹಲುಬಿದ್ದಾರೆ.

ಕನ್ನಡಿಗನ ಮಾನವೀಯತೆಯನ್ನು ಗುರುತಿಸುವುದಾದರೆ ಕನ್ನಡ ಸಾಹಿತ್ಯ ಮತ್ತು ಇತಿಹಾಸವನ್ನು ಅವಲೋಕಿಸಬೇಕಾಗುತ್ತದೆ. ಕನ್ನಡ ನಾಡನ್ನು ಆಳಿದ ಮಯೂರವರ್ಮ, ದುರ್ವಿನೀತ, ಪುಲಕೇಶಿ, ವಿಕ್ರಮಾದಿತ್ಯ, ವಿಷ್ಣುವರ್ಧನ, ಕೃಷ್ಣದೇವರಾಯ, ಮುಮ್ಮಡಿ ಕೃಷ್ಣರಾಜ ಒಡೆಯರು ಈ ಮೊದಲಾದ ಪ್ರಸಿದ್ಧ ಅರಸರೆಲ್ಲರೂ ಮಾನವೀಕರಣವನ್ನು ರೂಪಿಸಿದವರೇ ಆಗಿದ್ದಾರೆ. ತಮ್ಮ ರಾಜ್ಯದ ಸುಭಿಕ್ಷತೆಗಾಗಿ ತಮ್ಮ ಹೆಬ್ಬೆರಳನ್ನೇ ಕೊಟ್ಟ ಅರಸರೂ ಇದ್ದಾರೆ. ಕೆರೆ-ಕಾಲುವೆಗಳನ್ನು ಕಟ್ಟಿಸಿದ ಅರಸರೂ ಇದ್ದಾರೆ. ಟಿಪ್ಪುಸುಲ್ತಾನನು ಎಂತಹ ಆರ್ಭಟಿಗ, ಆಕ್ರಮಣಶೀಲನಾಗಿದ್ದನೋ ಅಷ್ಟೇ ಮಾನವೀಯ ಸತ್ಪುರುಷನೂ ಆಗಿದ್ದ ಎನ್ನುವುದಕ್ಕೆ ಅವನ ಜನಪರ ಧೋರಣೆಗಳೇ ಸಾಕ್ಷಿ.

ಕನ್ನಡ ಸಾಹಿತ್ಯದ ನಿಲುವಿನಲ್ಲಿ ಮಾನವೀಕರಣವನ್ನು ಅವಲೋಕಿಸುವುದು ಇಲ್ಲಿನ ಮುಖ್ಯ ಉದ್ದೇಶವಾಗಿರುವುದರಿಂದ ಶಾಸನ ಮತ್ತು ಸಾಹಿತ್ಯ ಕೃತಿಗಳನ್ನು ಆಧರಿಸಿ ಗಮನಿಸಲಾಗುತ್ತದೆ. ಕನ್ನಡ ಮೊದಲ ಶಾಸನವಾದ ಕಪ್ಪೆ ಅರೆಭಟ್ಟನ ಶಾಸನದಲ್ಲಿನ 'ಸಾಧುಗೆ ಸಾಧು ಮಾಧುರ್ಯಂಗೆ ಮಾಧುರ್ಯಂ, ಬಾಧಿಪ್ಪ ಕಲಿಗೆ ವಿಪರೀತನ್' ಎಂಬಲ್ಲಿ ವೀರನೂ ಮತ್ತು ಮಾನವೀಯ ಪ್ರೀತಿ ತೋರುವಂತಹ ಸಾಧು ಸ್ವಾಭಾವದವನೂ ಆದ ಅರೆಭಟ್ಟನ ಗುಣವ್ಯಕ್ತವಾಗುತ್ತದೆ. ಈ ವ್ಯಕ್ತಿತ್ವವೇ ಕನ್ನಡ ಅರಸರ ವ್ಯಕ್ತಿತ್ವವಾಗಿತ್ತು. ಆದಿಕವಿ ಪಂಪನಲ್ಲಿ ಮಾನವೀಕರಣದ ಪರಿಕಲ್ಪನೆ ತುಂಬಾ ವಿಶಾಲತೆಯನ್ನು ಪಡೆದುಕೊಂಡಿದೆ. ಅವನು ಹೇಳುವಂತೆ ''ಮನುಷ್ಯ ಜಾತಿ ತಾನೊಂದೆ ವಲಂ'' ನುಡಿಯಲ್ಲಿ ವಿಶ್ವದ ಮನುಕುಲವೆಲ್ಲ ಒಂದೇ ಲಿಂಗತಾರತಮ್ಯ, ಜಾತಿ ತಾರತಮ್ಯ, ಭಾಷಾ ತಾರತಮ್ಯ, ಪ್ರಾದೇಶಿಕ ತಾರತಮ್ಯ ಯಾವುವು ಅವನ ಕಣ್ಮುಂದೆ ಸುಳಿದಿಲ್ಲವೆಂಬುದು ಸ್ಪಷ್ಟವಾಗುತ್ತದೆ. ''....ಬಂದು ಮರೆವೊಕ್ಕಡೆ ಕಾಯದೆ ಚಾಗದೊಳ್ಪಿನಚ್ಚೊತ್ತದೆ'' ಎಂಬಲ್ಲಿ ಬೆನ್ನಲ್ಲಿ ಬಿದ್ದ ಅಸಹಾಯ

ಕರಿಗೆ ಸಹಾಯವನ್ನು ಮಾಡುವ ಗುಣ ಕನ್ನಡಿಗರದಾಗಿತ್ತು ಎಂದು ಹೇಳುತ್ತದೆ. ಗದಾಯುದ್ಧದಲ್ಲಿ ರನ್ನ ಹೇಳುವ 'ಈಯಲ್ ಇರಿಯಲ್ ಶರಣ್ಬುಗೆ ಕಾಯಲ್' ಎನ್ನುವ ಮಾತು ಕೂಡ ಸಹಾಯವನ್ನು ವ್ಯಕ್ತಪಡಿಸುತ್ತದೆ. ರನ್ನನು ತನ್ನ ಕೃತಿಯ ಉದ್ದಕ್ಕೂ ಮಾನವೀಯತೆಯನ್ನು ಬೋಧಿಸುತ್ತಾನೆ. ದುರ್ಯೋಧನನು ಮಾನವೀಯ ಮೌಲ್ಯಗಳ ಪ್ರತಿಮೂರ್ತಿಯಾಗುತ್ತಾನೆ. ನಾಗಚಂದ್ರನು 'ರಾಮಚಂದ್ರ ಚರಿತ ಪುರಾಣ'ದಲ್ಲಿ ಅಮಾನವೀಯ ಚಟುವಟಿಕೆಗಳಿಗೆ ಹೆಸರಾದ ರಾವಣ ಮಾನವೀಯ ಗುಣಗಳ ನಾಯಕನಾಗುತ್ತಾನೆ. ಇದು ಜೈನಧರ್ಮದ ಸಿದ್ಧಾಂತಗಳ ನೆರಳೂ ಇರಬಹುದು. ಪಂಪನ ಆದಿಪುರಾಣದಲ್ಲಿ ಭರತನು ಚಕ್ರರತ್ನವನ್ನು ಮುಂದಿಟ್ಟು ದಿಗ್ವಿಜಯ ನಡೆಸಿದಾಗ ಬಾಹುಬಲಿ ಅಣ್ಣನಿಗೆ ಕಪ್ಪ ಕೊಡದೆ - ಅವನಿಗೆ ಶರಣಾಗಲು ಒಪ್ಪದೆ- ಯುದ್ಧಕ್ಕೆ ಸಿದ್ಧನಾಗುತ್ತಾನೆ. ಇಬ್ಬರ ಸೈನಿಕರು ಯುದ್ಧಕ್ಕೆ ತೊಡಗಿದರೆ ಉಂಟಾಗುವ ಅಪಾರ ಮಾನವ ಸಂಪತ್ತಿನ ಹಾನಿಯನ್ನು ಮನಗಂಡ ಭರತನ ಮಂತ್ರಿ, ಸೈನಿಕರು ಯುದ್ಧ ಮಾಡುವುದು ಬೇಡ, ಬಲಾಢ್ಯರಾದ ನೀವಿಬ್ಬರೇ ಯುದ್ಧ ಮಾಡಿರಿ ಎನ್ನುತ್ತಾನೆ. ಇಬ್ಬರು ಜಲಯುದ್ಧ, ಮಲ್ಲಯುದ್ಧ ಮತ್ತು ದೃಷ್ಟಿಯುದ್ಧಗಳನ್ನು ಕೈಗೊಳ್ಳಲು ಸೂಚಿಸುತ್ತಾನೆ. ಅಂತೆಯೇ ಈ ಮೂರು ಯುದ್ಧಗಳು ನಡೆಯುತ್ತವೆ. ಮಂತ್ರಿಯಲ್ಲಿರುವ ಮಾನವೀಯ ಆಲೋಚನೆ ಮಹತ್ವವನ್ನು ಪಡೆಯುತ್ತವೆ.

ಕನ್ನಡ ಸಾಹಿತ್ಯ ಆರಂಭದಲ್ಲಿ ಪ್ರಭುನಿಷ್ಠೆಯನ್ನು ಪ್ರಕಟಿಸುವುದರ ಜೊತೆಗೆ ಧರ್ಮ ನಿಷ್ಠೆಯನ್ನು ಪ್ರಕಟಿಸಿತು. ಈ ಎರಡರ ಪ್ರಕಟಣೆಯಿಂದಾಗಿ ಮಾನವೀಯ ನಿಷ್ಠೆ ಮಾತ್ರ ದೂರ ಉಳಿಯಿತು. ಸಹಜಗುಣವಾಗಿ ಅಲ್ಲಲ್ಲಿ ಪಾತ್ರಗಳಲ್ಲಿ ಮಾತ್ರ ವ್ಯಕ್ತವಾಗಿದೆ. ಇದುವೇ ಮುಖ್ಯ ಧೋರಣೆಯಾಗಿ ಬಂದ ನಿದರ್ಶನಗಳಲ್ಲಿ ಮಧ್ಯಕಾಲಕ್ಕೆ ಬಂದಾಗ ಚಿತ್ರಣ ಬದಲಾಗಿ ಮಾನವಮುಖಿ ಸಾಹಿತ್ಯ ಬೆಳೆದು ಬಂದದ್ದನ್ನು ಕಾಣುತ್ತೇವೆ. ವಚನ ಸಾಹಿತ್ಯವು ಈ ಮಾತನ್ನು ಪುಷ್ಟೀಕರಿಸುತ್ತದೆ. "ಮನುಷ್ಯನು ಮನುಷ್ಯನಾಗಿ ಮತ್ತು ಮನುಷ್ಯನನ್ನು ಮನುಷ್ಯನಂತೆ ಕಾಣುವ ವಿಧಾನವನ್ನು ಮೊದಲಿಗೆ ವಚನ ಸಾಹಿತ್ಯದಲ್ಲಿ ಕಾಣುತ್ತೇವೆ".[೩೬] ಬಸವಾದಿ ಪ್ರಮಥರು ಯಜ್ಞಯಾಗಾದಿಗಳನ್ನು, ವರ್ಣಾಶ್ರಮ ಪದ್ಧತಿಗಳನ್ನು ವಿರೋಧಿಸಿ "ಕಾಸಿ ಕಮ್ಮಾರನಾದ ಬೀಸಿ ಮಡಿವಾಳನಾದ ವೇದವನೋದಿ ಹಾರುವನಾದ....." ಎಂದು ಮಾನವ ಸಮಾಜದಲ್ಲಿ ಜಾತಿ ಪದ್ಧತಿಯಲ್ಲಿ ಅಳವಟ್ಟುಕೊಂಡದ್ದನ್ನು ನಿರೂಪಿಸಿದ್ದಾರೆ. "ಮನುಷ್ಯ ಮನುಷ್ಯನಿಗೆ 'ಜೀಯ-ಹಸಾದ' ಎಂದು ಹೇಳುವ ದೈನ್ಯತೆಯನ್ನು ಹೋಗಲಾಡಿಸಿ 'ಏನು ಬಂದಿರಿ ಹದುಳುವಿದ್ದಿರೆ' ಎಂದು ಕೇಳುವ ಮಾನವ ಮರ್ಯಾದೆಯನ್ನು ವಚನಕಾರರು ಹೇಳಿಕೊಟ್ಟರು. ಸಮಾನ ಕಾಯಕ, ಸಮಾನ ಗೌರವದ ಆಧಾರದ ಮೇರೆಗೆ ಎಲ್ಲರೂ ಮಾನವಂತರಾಗಿ, ಸಾಮೂಹಿಕವಾಗಿ ಬದುಕಲು ಸಾಧ್ಯವಾಯಿತು. ಹೀಗೆ ೧೨ನೇ ಶತಮಾನದಲ್ಲಿ ಸಾಮಾಜಿಕವಾಗಿ ಮನುಷ್ಯ ಬದಲಾದ"[೩೭] ಅಲ್ಲದೆ ಮನುಷ್ಯನ ಬದಲಾವಣೆಯನ್ನು ಎರಡು ವಿಧದಲ್ಲಿ

ಗುರುತಿಸಿದ್ದರೆ. ೧. ಧನಾತ್ಮಕ, ೨.ಋಣಾತ್ಮಕ ಎಂದು. ವಚನಕಾರರಲ್ಲಿನ ಬದಲಾವಣೆಯನ್ನು 'ಧನಾತ್ಮಕ' ಎಂದಿದ್ದಾರೆ. ಮನುಷ್ಯನ ಬಾಹ್ಯ ಮತ್ತು ಅಂತರಂಗದ ಶುದ್ಧಿಯಿಂದ ಈ ಧನಾತ್ಮಕತೆಯು ರೂಪುಗೊಂಡಿದೆ. 'ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೋ ಹೊಸ್ತಿಲಲ್ಲಿ ಹುಲ್ಲು ಹುಟ್ಟಿ ಮನೆಯೊಳಗೆ ರಜ ತುಂಬಿ...' ಎಂಬುದು ಮನುಷ್ಯನ(ಮನದ) ಅಂತರಂಗವನ್ನು ಕುರಿತಾಗಿ ಹೇಳಿದ ವಚನವಾಗಿದೆ. 'ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರೆಲ್ಲರನು ಒಂದೇ ಎಂಬೆ' ಎನ್ನುವ ಬಸವಣ್ಣನ ಸಾರ್ವತ್ರಿಕ ದೃಷ್ಟಿಕೋನ ಮಾನವೀಕರಣದ್ದಾಗಿದೆ. ಆದರೆ ಇನ್ನೂ ಸೂಕ್ಷ್ಮವಾಗಿ ಗಮನಿಸಿದಾಗ ಬಸವಣ್ಣನ 'ದ್ವೈತ' ತತ್ತ್ವ ಕಾಣುತ್ತದೆ. 'ವಿಪ್ರ', 'ಅಂತ್ಯಜ' ಎಂಬ ವರ್ಣಾಶ್ರಮದ ಎರಡು ಬಿಂದುಗಳನ್ನು ಗುರುತಿಸುವುದು ಮತ್ತು 'ಶಿವಭಕ್ತರಲ್ಲದ'ವರನ್ನು ಭಿನ್ನ ದೃಷ್ಟಿಯಲ್ಲಿ ನೋಡುವ ಪ್ರಕ್ರಿಯೆ 'ಅದ್ವೈತ'ವೆ ಕಾಣುವುದಿಲ್ಲ.

-ತನ್ನಿಚ್ಚೆಯ ನುಡಿದಡೆ ಮೆಚ್ಚದೀ ಮನವು,
ಇದಿರಿಚ್ಚೆಯ ನುಡಿದಡೆ ಮೆಚ್ಚದೀ ಮನವು.
ಕೂಡಲ ಸಂಗನ ಶರಣರ
ನಚ್ಚದ ಮೆಚ್ಚದ ಮನವ ಕಿಚ್ಚಿನೊಳಗಿಕ್ಕು.

-ಮಾಡಿದೆನೆಂದು ಮನದಲ್ಲಿ ಹೊಳೆದಡೆ, ಏಡಿಸಿ ಕಾಡಿತ್ತು ಶಿವನ ಡಂಗುರ,
ಮಾಡಿದೆನೆನ್ನದಿರಾ ಲಿಂಗಕ್ಕೆ, ಮಾಡಿದೆನೆಗ್ನದಿರಾ ಜಂಗಮಕ್ಕೆ
ಮಾಡಿದೆನೆಂಬುದು ಮನದಲ್ಲಿದಿದ್ದಡೆ
ಬೇಡಿದ್ತನೀವನು ಕೂಡಲ ಸಂಗಮದೇವ.

-ಇವನಾರವ, ಇವನಾರವ, ಇವನಾರವನೆಂದನಿಸದಿರಯ್ಯ
ಇವನಮ್ಮವ, ಇವನಮ್ಮವ, ಇವನಮ್ಮವನೆಂದೆನೆಸಯ್ಯ
ಕೂಡಲಸಂಗಮದೇವಾ
ನಿಮ್ಮ ಮನೆಯ ಮಗನೆಂದೆನಿಸಯ್ಯಾ.

ಬಸವಣ್ಣನ ನಂತರದಲ್ಲಿ ದಾಸರು ಮಾನವೀಯತೆಗೆ ತುಂಬಾ ಸೂಕ್ಷ್ಮವಾಗಿ ಸಾವಧಾನದಿಂದ ಧ್ವನಿಗೂಡಿಸಿದರು. ''ಘಾತಕವನು ಬಿಡದೆ ನಿರಂತರ ಗೀತೆಯನೋದಿದರೇನು ಫಲ? ಹೀನಕೃತ್ಯಗಳ ಮಾಡುತ ನದಿಯಲಿ ಸ್ನಾನವ ಮಾಡಿದರೇನು ಫಲ?''ಎಂದು ಮುಂತಾಗಿ ಪುರಂದರದಾಸರು ಮನುಷ್ಯನ ಡಾಂಭಿಕತನ ವನ್ನು ಪ್ರಶ್ನಿಸಿದ್ದಾರೆ. ಇದರ ಬದಲು 'ಮನಶುದ್ಧವಿದ್ದರೆ ಸಾಕು' ಎನ್ನುವ ನಿಲುವು ಅವರದು. ಆತ್ಮ ಯಾವ ಕುಲ ಜೀವ ಯಾವ ಕುಲ! ತತ್ವೇಂದ್ರಿಯಗಳ ಕುಲ ಪೇಳಿರಯ್ಯ' ಎಂದು ಕೇಳಿದ ಕನಕದಾಸರು ಜಾತಿ-ಮತಗಳೆಲ್ಲ ಮಾನವ ನಿರ್ಮಿತ, ಅವನ ಒಳ್ಳೆಯ-ಕೆಟ್ಟಗುಣಗಳೇ ಕುಲಗಳೆಂದು ಹೇಳಿದ್ದಾರೆ. ಕನಕದಾಸರು 'ನಳಚರಿತ್ರೆ'ಯಲ್ಲಿ ನಳ-ದಮಂತಿಯರಲ್ಲಿ ಮಾನವೀಯ ಧೋರಣೆಗಳನ್ನು ಅಚ್ಚುಕಟ್ಟಾಗಿ ಕಂಡರಿಸಿದ್ದಾರೆ. ನಳನಿಗೆ ದಮಯಂತಿಯ ಬಗೆಗೆ ಅಪಾರ ಪ್ರೀತಿ ಇರುತ್ತದೆ. ಸ್ವಯಂವರದ ಸಂದರ್ಭದಲ್ಲಿ ಕುರೂಪಿಯಾದ ಬಾಹುಕನ ವೇಷದಲ್ಲಿರುವ ತನ್ನನ್ನು

ಬಿಟ್ಟು ಅನ್ಯರನ್ನು ಆರಿಸಲಿ ಎಂದು ಸಾರಥ್ಯ ವಹಿಸಿ ದಮಯಂತಿ ಸ್ವಯಂವರಕ್ಕೆ ಋತುಪರ್ಣ ರಾಜನನ್ನು ಕರೆದುಕೊಂಡು ಹೋಗುತ್ತಾನೆ. ಇನ್ನೊಮ್ಮೆ ಜೂಜಿನಲ್ಲಿ ಸೋತು ರಾಜ್ಯಭ್ರಷ್ಟವಾಗಿ ಅರಣ್ಯವಾಸಿಯಾಗಿರುವಾಗ ತನ್ನೊಂದಿಗೆ ದಮಯಂತಿ ಕಷ್ಟ ಪಡುವುದು ಬೇಡವೆಂದು ತವರು ಮನೆಗಾದರೂ ಹೋಗಿ ಸುಖವಾಗಿರಲೆಂದು ಆಕೆಯನ್ನು ಕಾಡಿನ ಮಧ್ಯೆ ಬಿಟ್ಟು ಹೋಗುತ್ತಾನೆ. ಇಂಥ ಪ್ರಸಂಗಗಳಲ್ಲೇ ನಳ ತ್ಯಾಗ ಜೀವಿಯಾಗಿ ಕಂಡುಬರುತ್ತಾನೆ. ಈ ಸಂದರ್ಭಗಳ ಹಿಂದಿರುವ ಮಾನವೀಯ ಸಂವೇದನೆ ಕವಿಯ ಮಾನವೀಯ ಮಿಡಿತವಾಗಿದೆ. ಕಥೆಯ ಹಿನ್ನಲೆ ಪೌರಾಣಿಕವಾಗಿದೆ, ಪಾತ್ರಗಳು ಮಾನವೀಯವಾಗಿವೆ. ಮೋಹನ ತರಂಗಿಣಿಯ ಪಾತ್ರಗಳು ಪೌರಾಣಿಕವಾಗಿದ್ದು ಹಿನ್ನೆಲೆ ಸಮಕಾಲೀನವಾಗಿದೆ. ಮೊದಲನೆಯದರಲ್ಲಿ ಮಾನವರು ಪ್ರೇಮದಿಂದ ದೈವತ್ವಕ್ಕೇರುತ್ತಾರೆ, ಎರಡನೆಯದರಲ್ಲಿ ದೇವತೆಗಳು ಭೋಗದಿಂದ ಮಾನವರಾಗುತ್ತಾರೆ. ಈ ಹಿಂದಿನ ವಚನ ಸಾಹಿತ್ಯದ ಮನುಷ್ಯ ಸಾಮಾಜಿಕ ತಲ್ಲಣವನ್ನುಂಟು ಮಾಡುತ್ತ ರೂಪುಗೊಂಡರೆ ದಾಸ ಸಾಹಿತ್ಯದ ಮನುಷ್ಯ ಸುಧಾರಣಾ ನೆಲೆಯಲ್ಲಿ ಸಮಾಧಾನದ ಸ್ಥಿತಿಯಲ್ಲಿ ರೂಪುಗೊಳ್ಳುತ್ತಾನೆ.

ಆಧುನಿಕ ಕಾಲಕ್ಕೆ ಬಂದಾಗ ರಷ್ಯಾದ ಪುನರುಜ್ಜೀವನದ ಕಾಲದ ನೆರಳು, ಆಂಗ್ಲರ ಆಡಳಿತ ಕ್ರಮ ಮತ್ತು ಅವರೊಂದಿಗೆ ಬಂದ ಚಿಂತನ, ಶಿಕ್ಷಣ ಪದ್ಧತಿಗಳು ಭಾರತೀಯ ಮತ್ತು ಕನ್ನಡಿಗರ ಮನಸ್ಸನ್ನು ಬದಲಾವಣೆಯತ್ತ ಸಾಗಿಸುವುದರೊಂದಿಗೆ ಅವರ ಮಾನವೀಕರಣದ ಚಿಂತನೆಯನ್ನು ಸಮಗ್ರವಾಗಿ ಅಲ್ಲದಿದ್ದರೂ ಆಂಶಿಕವಾಗಿ ಮತ್ತು ಸ್ಪಷ್ಟವಾಗಿ ಅಲ್ಲದಿದ್ದರೂ ಅಸ್ಪಷ್ಟವಾಗಿ ದಾಖಲಿಸ ತೊಡಗಿದವು. ಅಂತಹ ಬದಲಾವಣೆಯು ಕಥೆ, ಕಾದಂಬರಿ, ಕಾವ್ಯ, ನಾಟಕಗಳಲ್ಲಿ ಮಾರ್ಕ್ಸ್‌ಸಿದ್ಧಾಂತ, ಮನೋವೈಜ್ಞಾನಿಕ ಸಿದ್ಧಾಂತ, ಸಮಾಜಶಾಸ್ತ್ರದ ಹೊಸ ಅಧ್ಯಯನಗಳು, ರಾಷ್ಟ್ರೀಯ ವಾದಗಳು ನೆಲೆಗೊಳ್ಳುವುದರೊಂದಿಗೆ ಪ್ರಜಾಪ್ರಭುತ್ವದ ಮನಸ್ಸುಗಳನ್ನು ಪರಿವರ್ತಿಸಿತು. ಮೊದಮೊದಲು ವೈಯಕ್ತಿಕ ಮತ್ತು ಕೌಟುಂಬಿಕ ನೆಲೆಯಲ್ಲಿ ಕಾಣಿಸಿಕೊಳ್ಳುತ್ತಿದ್ದ ಮಾನವೀಕರಣವು ಬರುಬರುತ್ತಾ ಸಮಾಜ ಮುಖಿಯಾಗಿ ವಿಸ್ತಾರಗೊಳ್ಳತೊಡಗಿತ್ತು. ಸ್ತ್ರೀ ಶಿಕ್ಷಣ, ವಿಧವಾ ವಿವಾಹ, ಅಂತರ್ಜಾತೀಯ ವಿವಾಹ ಮತ್ತು ಜಾತೀಯತೆಯ ಕಟ್ಟುಪಾಡುಗಳನ್ನು ಕಿತ್ತು ಹಾಕುವದರ ಕಡೆಗೆ ವಿಸ್ತೃತಗೊಂಡಿತು. ಕನ್ನಡ ಸಾಹಿತ್ಯದಲ್ಲಿ ಮಾನವೀಕರಣದ ತತ್ತ್ವ ಮತ್ತು ಅದು ನಿರೂಪಗೊಂಡ ಬಗೆಗಳನ್ನು ಅವಲೋಕಿಸಲಾಗುವುದು.

ಕನ್ನಡದ ಸಂದರ್ಭದಲ್ಲಿ 'ಮಾನವೀಕರಣ'ವನ್ನು 'ಮಾನವ ಧರ್ಮ'ವೆಂದು ರೂಪಿಸಿದ ಕೀರ್ತಿ ಶಂಬಾ ಜೋಶಿಯವರಿಗೆ ಸಲ್ಲುತ್ತದೆ. ಮಾನವನದೂ ಒಂದು ಪ್ರತ್ಯೇಕ ಧರ್ಮವಿದೆ. ಪ್ರಾಣಿಗಳದೇ ಆದ ಇನ್ನೊಂದು ಪಾತಳಿಯಿದೆಯೆಂದು ಸ್ಪಷ್ಟವಾಗಿ ತಿಳಿಸಿದ್ದಾರೆ. "....ಭಾರತದಲ್ಲಿ ಮೈವೆತ್ತಿದ್ದ ವಿವಸ್ವನ್ ದೈವತದ ಪ್ರೇರಣೆಯ ಮನುಪ್ರಣೀತ ಮಾನವ ಧರ್ಮವು, ಪ್ರಪಂಚಕ್ಕೆ ಆದರ್ಶ ಕಂನಡಿ

ಸ್ವರೂಪದ ಜೀವನವನ್ನು ರೂಪಿಸಿದ.... ‘ವಿವಾಹಕ್ಕಾಗಿ ವಿವಾಹ’ ಇದು ವಿನಾಶದ ದಾರಿ. ವಿವಾಹ ಕುಟುಂಬ ಸಂಸ್ಥೆ, ಸಮಾಜ: ಸಮಷ್ಟಿಯ ಸಾತತ್ಯಕ್ಕಾಗಿ’. ಅದರ ನೆಮ್ಮದಿಗಾಗಿ ಇರುವ ಸಾಧನ ಎಂಬುದು ಮಾನವ ಧರ್ಮದ ಶ್ರದ್ಧೆ”[೩೮] ಇಲ್ಲಿ ‘ವಿವಸ್ವನ್’ ಎಂದು ಕರೆಯುವುದು ಕೂಡ ಯಾವುದೋ ದೇವರಾಗಿರದೆ, ಇಡೀ ವಿಶ್ವದ ಎಲ್ಲ ಮನುಷ್ಯರನ್ನೂ ಒಂದಾಗಿ ಕಾಣುವ “ವಿಶಾಲ, ಭವ್ಯ, ಉದಾತ್ತ, ಪ್ರಜ್ಞೆಯೇ ಆಗಿದೆಯೆಂಬುದು ಗಮನೀಯ ಸಂಗತಿ. ಹೀಗೆ ಒಟ್ಟು ಸಮುದಾಯದ ಹಿತಚಿಂತನೆ ಹಾಗೂ ಸಂಕುಚಿತವಾದ ಎಲ್ಲ ಲೆಕ್ಕಾಚಾರಗಳನ್ನೂ ಮೀರಿದ ವಿಶ್ವ ಭ್ರಾತೃತ್ವದ ಪರಿಕಲ್ಪನೆಯು.”[೩೯] ‘ವೈವಸ್ವತ.....ಮಾನವಧರ್ಮದ ಆಕೃತಿ’ ಪುಸ್ತಕದ ಮುಖ್ಯ ವೈಚಾರಿಕ ನೆಲೆಗಳಲ್ಲಿ ಒಂದು. ಇಂತಹ ಮಹತ್ತರವಾದ ಸದಾಶಯವನ್ನು ಹೊಂದಿದ ಶಂಬಾ ಅವರ ವಿಚಾರ ಮಾನವ ಸಂಸ್ಕೃತಿಯನ್ನು ಸಂಸ್ಥಾಪಿಸುವ ಹೊಣೆ ಹೊತ್ತಿತು. ‘ಮಾನವ ಪ್ರಾದುರ್ಭಾವ’ದ ಪಾತಳಿಯನ್ನು ಡಾರ್ವಿನ್ ಮತ್ತು ವ್ಯಾಲಾಸ್‌ರ ವಿಚಾರವನ್ನು ಚರ್ಚಿಸಿ, ಡಾರ್ವಿನ್‌ನ ವಿಕಾಸವಾದ ‘ಮಂಗನಿಂದ ಮಾನವ’ ಎಂಬುದಾದರೆ, ವ್ಯಾಲಾಸ್‌ನು ಮಂಗನಿಂದ ನೇರವಾಗಿ ಮಾನವನಾಗಿಲ್ಲ’ ನಡುವೆ ಒಂದು ಕೊಂಡಿ ತಪ್ಪಿದೆ. ಅದುವೇ ‘Missing Link’ ಎಂದು ಹೇಳಲಾಗುತ್ತಿದೆ ಎಂದಿದ್ದಾನೆ. ಈ ಎರಡನ್ನೂ ಗಮನಿಸಿದ ಶಂಬಾ ಅವರು ವಾನರ-ಮಾನವರ ನಡುವೆ ‘ನರ’ ಪಾತಳಿ ಇದೆ. ಈ ‘ನರ’ವೇ Miss ಆಗಿದೆ ಎಂದಿದ್ದಾರೆ. ‘ನಿನ್ನೆ. ಮತ್ತು ‘ನಾಳೆ’ ಎಂಬ ನಿಸರ್ಗದ ಕ್ರಮದಲ್ಲಿ ‘ಇಂದು’ ಮಾತ್ರ ತುಂಬ ಮಹತ್ವನ್ನು ಕೊಡುತ್ತದೆ. ‘ನಿನ್ನೆಯ ವಾನರ’, ‘ನಾಳಿನ ಮಾನವ’ ಇವೆರಡರ ನಡುವಿನ ಪಾತಳಿಯೇ ‘ನರ’ ಎನ್ನುತ್ತಾರೆ. ‘ನರ’ ಧರ್ಮದ ದೃಷ್ಟಿಯಲ್ಲಿ ಜೀವಕ್ಕೆ, ಜೀವಿತಕ್ಕೆ ಮಾತ್ರ ಪ್ರಾಧಾನ್ಯವಿದೆ. ಜೀವನಕ್ಕೆ ಅಲ್ಲ. ಜೀವನ ಎಂದರೆ, ಸಾಮಾಜಿಕ ಪಾತಳಿಯ ಬಾಳು ಬಾಳಿನಲ್ಲಿ ಅನಿವಾರ್ಯ ಮತ್ತು ಯುಕ್ತ ಇವೆರಡೂ ಒಮ್ಮೆಲೆ ಎದುರು ನಿಂತಾಗ ಅನಿವಾರ್ಯವನ್ನು ಆಯ್ದುಕೊಳ್ಳುವ ಚಟ ‘ನರ’ ಪಾತಳಿಯದು. ಬಾಳಿನಲ್ಲಿ ಆಪತ್ತು ಅಪವಾದವನ್ನೇ ‘ಸ್ಥಾಯಿ’ ಎಂದು ಬಗೆವ ಪ್ರವೃತ್ತಿ ‘ನರ’ರ ಲಕ್ಷಣ. ಇದು ವಿವೇಕ ಮತ್ತು ಅಭಾವದ ಕುರುಹು. ಬಾಳಿನಲ್ಲಿ ಅರ್ಥ, ನಿಯಮ, ವ್ಯವಸ್ಥೆಯೇ ಇಲ್ಲ ಅಥವಾ ಅದು ಎಲ್ಲಿದೆ ಎಂಬ ಸಂದೇಹವಾದೀ ದೃಷ್ಟಿಕೋನವು ‘ನರ’ ಧರ್ಮದ ಭೂಮಿಕೆಯ ಲಕ್ಷಣ.”[೪೦] ಇಂತಹ ನರನು ಈ ಪಾತಳಿಯನ್ನು ದಾಟಿ ಮುಂದುವರೆದರೆ ‘ಮಾನವ’ ಪಾತಳಿಗೆ ಸೇರಿದ್ದಾನೆ. ‘ಬುದ್ಧಿ’ ಪಾತಳಿಯಿಂದ ಪ್ರಜ್ಞಾ ಪಾತಳಿಗೆ ಸಾಗುವುದು. ‘ಪ್ರಜ್ಞಾ’ ಪಾತಳಿಯೇ ಮಾನವನದು. “ಪ್ರಜ್ಞಾ ಶಕ್ತಿಯೊಡನೆ ಬದ್ಧ ಮನಸ್ಸಿನ ಪ್ರೇರಣೆಯಿಂದ ಆಚರಿಸಲ್ಪಡುವ ಧರ್ಮವೇ ಮನುಜ >ಮಾನವ ಧರ್ಮ. ಪ್ರಜ್ಞಾ ಪ್ರಚೋದಿತ ಜೀವನ ರೀತಿಯು ಸಮಾಜ: ಸಮಷ್ಟಿಯ ಪಾತಳಿಯನ್ನು ಪ್ರಧಾನವಾಗಿ ಉಳ್ಳದ್ದು. ‘ಪ್ರಜ್ಞಾ ನೇತ್ರೋಲೋಕ’- ಈ ಮನು ಲೋಕವು ಪ್ರಜ್ಞಾ ನೇತ್ರದಿಂದಾಗಿ ಅವಲೋಕನ, ಆಲೋಚನವು ಹುಟ್ಟುಗುಣವಾಗಿ ಉಳ್ಳವರ್ಗ. ಒಳತಿಳಿ(ಬೆಳ)ವಿನ ಆಲೋಕನ ಬೆಳಕಿಗೆ, ವಿವೇಕ ಚಿಂತಾಮಣಿಗೆ (Conscience and awareness) ಬದ್ಧ

ಮನೋಭಾವದಲ್ಲಿ ನಿಷ್ಠೆಯುಳ್ಳವರು ಮಾನವರು ಮಾತ್ರ.”[೪೧] ಈ ಮಾನವ ಮತ್ತು ವಾನರ ಪಾತಳಿಗಳ ನಡುವಿನ Link ‘ನರ’. “ನರ-ವಾನರ ಬಂಧು. ಪ್ರಾಣ ದೇವರ ಹೆಸರಿನಲ್ಲಿ ವಾನರ ಪ್ರತಿಮೆಯನ್ನು ಪೂಜಿಸುವ ವಾಡಿಕೆಯನ್ನು ಭಾರತದ ಪರಂಪರೆಯಲ್ಲಿ ನಾವೆಲ್ಲ ಕಾಣಬಹುದು. ನರ: ವಾನರ ವರ್ಗಕ್ಕೆ ಹತ್ತಿರವಾಗಿರುವಂತೆ ಮಾನವರ ಆಪ್ತನೂ ಆಗಿದ್ದಾನೆ. ನರನೇ ಪ್ರಜ್ಞೋದಯದ ಬಳಿಕ ಮನುಜ: ಮಾನವನಾಗುತ್ತಾನೆ.”[೪೨] ‘ಮನುಜ’ ಎಂಬುದು ಎರಡನೆಯ ಜನ್ಮವಾಗಿಯೂ, ‘ತನುಜ’ ಎಂಬುದು ಅದರ ಮೊದಲನೆಯ ಜನ್ಮ ವಾಗಿದೆ. ತನು ಎಂದರೆ ಶರೀರ, ದೇಹ-ಲಿಂಗಕ್ಕೂ ಹೆಸರು ಇದೆ ಎಂದಿದ್ದಾರೆ. ವಾನರನು ‘ನರ’ನಾಗಿ ಮತ್ತೆ ಮಾನವ: ಮನುಜನಾಗಿ ಬಾಳುತ್ತಿದ್ದಾನೆ. ಮನುಜನಿಗೆ ‘ಮನುಜತ್ವ’ ಬರುವುದು. ‘ಪ್ರಜ್ಞಾ ಪ್ರಕಾಶ.(Nous) ಮತ್ತು ‘Mind’ಗಳು ಆವಿರ್ಭಾವ ಆದಾಗ. “ಮಾನವರು ಈ ಮನು (ವಿವಸ್ವನ್)ವಿನಿಂದ ಆದವರು. ಇವರು ಮನುಜರು ಎಂಬಲ್ಲಿ ಲೈಂಗಿಕ ಸ್ತ್ರೀ ಪುರುಷ ಸಂಬಂಧದ ಜನ್ಮವು ಅಭಿಪ್ರೇತವಿಲ್ಲ.”[೪೩] ಲಿಂಗ ತಾರತಮ್ಯವು ಮಾನವತ್ವದಲ್ಲಿ ಕಾಣುವುದಿಲ್ಲ. ಪ್ರಜ್ಞೆ ಮತ್ತು ಬುದ್ಧಿ ಪಾತಳಿಯಲ್ಲಿ ಮಾತ್ರ ಭೇದ ಕಾಣುತ್ತದೆ. “ಪ್ರಜ್ಞೆಯ ಅಂಗವಾದ ಸ್ವ-ಉಪಜ್ಞೆ ಅಥವಾ ಮನಃಶಕ್ತಿಯ ಪ್ರೇರಣೆ, ಪ್ರಚೋದನೆಯಿಂದ ಬಾಳದಾರಿಯನ್ನು ಕ್ರಮಿಸುವ ಸ್ವಭಾವದವನು, ಇದು ಹುಟ್ಟುಗುಣ. ಯಾರ ಹೇಳಿಕೆಯಿಂದ ಉಂಟಾಗಬಲ್ಲ ಸ್ವಭಾವವೂ ಅಲ್ಲ. ಈ ಮನುಜ ಮಾನವನ ಧರ್ಮ ಸಂಸ್ಕೃತಿಯನ್ನು ಜಾಗತಿಕ ವಿಶ್ವನಿಯಮದ ಅನುಸಂಧಾನದಲ್ಲಿ ಕಂಡುಹಿಡಿದು ಹೇಳುವ ಮೂಲ ಪ್ರಯತ್ನ ವೈವಸ್ವತ ಸಂಪ್ರದಾಯದ್ದು.”[೪೪] ಈ ವೈವಸ್ವತ ಪ್ರಣಿತ ‘ಮಾನವ ಧರ್ಮ’ವು ಜಾಗತಿಕ ಮಟ್ಟದಲ್ಲಿ ನೆಲೆ ನಿಲ್ಲುವ ತತ್ತ್ವಗಳಲ್ಲೊಂದು. ವ್ಯಕ್ತಿಯ ಹಂತಾನುಹಂತದ ಬೆಳವಣಿಗೆಯು ಮಾನವತ್ವಕ್ಕೆ ಏರುತ್ತದೆ.

‘ವ್ಯಕ್ತಿ’ ಮತ್ತು ‘ಮಾನವ’ ಬೇರೆ ಬೇರೆಯಾದ ರೂಪಗಳು. ಮಾನವತ್ವವನ್ನು ಎತ್ತಿ ಹಿಡಿಯಲೋಸುಗ ಎರಡು ಸಂಸ್ಥೆಗಳು ಆರಂಭವಾಗಿದ್ದವು ೧. ಕರ್ನಾಟಕ ಬಹಾಯಿ ಪಂಥೀಯರ ಪತ್ರಿಕೆ ಮತ್ತು ೨. ಡಾ.ಶಿವರಾಮಕಾರಂತರು ಅಧ್ಯಕ್ಷರಿರುವ ಡಾ.ಹಿರೇಮಠರ (ಮಡ್ಲೇರಿ) ಸಂಸ್ಥೆಯ ಪ್ರಯತ್ನ[೪೫]ಗಳಲ್ಲಿ ‘ವ್ಯಕ್ತಿ’ ಮತ್ತು ‘ಮಾನವ’ ಇವೆರಡರಲ್ಲಿ ಇರುವ ಮೂಲಭೂತ ಅಂತರವನ್ನು ಸಂಪೂರ್ಣ ಕಡೆಗಣಿಸಲಾಗುತ್ತಿದೆ.’[೪೬] ಆದ್ದರಿಂದ ಅವರ ಪ್ರಯತ್ನಗಳು ಸಫಲವಾಗಿಲ್ಲ ಎಂಬುದು ಶಂಬಾ ಅವರ ವಾದ. ‘ವ್ಯಕ್ತಿ’ ಮತ್ತು ‘ಮಾನವ’ ಹಾಗೂ ‘ಸಮಾಜ’ ಮತ್ತು ‘ಸಮಷ್ಟಿ’ಗಳಲ್ಲಿ ವ್ಯತ್ಯಾಸವನ್ನು ಶಂಬಾ ಅವರು ತಿಳಿಸುವುದು ಈ ರೀತಿ. “ವ್ಯಕ್ತಿ ಮತ್ತು ಸಮಾಜ:ಸಮಷ್ಟಿ’ ಇವೆರಡಲ್ಲಿ ಇರುವ ಅಂತರವೇ ‘ವ್ಯಕ್ತಿ’ ಮತ್ತು ‘ಮಾಸವ’ ಇವೆರಡಲ್ಲಿ ಉಂಟು. ವ್ಯಕ್ತಿಯೇ ಸಮಾಜವಾಗುವಾಗ ಈ ಸಮಾಜ ‘ಸಮುದಾಯ’ ವ್ರತ, ಗುಂಪು ಆಗುತ್ತದೆ. ಇಂದು ‘ಸಮಾಜ’ ಪರಿಭಾಷೆ ಕಾಣೆಯಾಗಿ ‘ಸಮುದಾಯ’ ಸಂಕೇತವು ವಾಡಿಕೆಗೆ ಬಂದಿದೆ.[೪೭] ‘ಮಾತು’ ಮತ್ತು ‘ಭಾಷೆ’ಗೆ ಇರುವ ಅಂತರವೇ

ಮನೋಭಾವದಲ್ಲಿ ನಿಷ್ಠೆಯುಳ್ಳವರು ಮಾನವರು ಮಾತ್ರ.''[೪೧] ಈ ಮಾನವ ಮತ್ತು ವಾನರ ಪಾತಳಿಗಳ ನಡುವಿನ Link 'ನರ'. ''ನರ-ವಾನರ ಬಂಧು. ಪ್ರಾಣ ದೇವರ ಹೆಸರಿನಲ್ಲಿ ವಾನರ ಪ್ರತಿಮೆಯನ್ನು ಪೂಜಿಸುವ ವಾಡಿಕೆಯನ್ನು ಭಾರತದ ಪರಂಪರೆಯಲ್ಲಿ ನಾವೆಲ್ಲ ಕಾಣಬಹುದು. ನರ: ವಾನರ ವರ್ಗಕ್ಕೆ ಹತ್ತಿರವಾಗಿರುವಂತೆ ಮಾನವರ ಆಪ್ತನೂ ಆಗಿದ್ದಾನೆ. ನರನೇ ಪ್ರಜ್ಞೋದಯದ ಬಳಿಕ ಮನುಜ: ಮಾನವನಾಗುತ್ತಾನೆ.''[೪೨] 'ಮನುಜ' ಎಂಬುದು ಎರಡನೆಯ ಜನ್ಮವಾಗಿಯೂ, 'ತನುಜ' ಎಂಬುದು ಅದರ ಮೊದಲನೆಯ ಜನ್ಮ ವಾಗಿದೆ. ತನು ಎಂದರೆ ಶರೀರ, ದೇಹ-ಲಿಂಗಕ್ಕೂ ಹೆಸರು ಇದೆ ಎಂದಿದ್ದಾರೆ. ವಾನರನು 'ನರ'ನಾಗಿ ಮತ್ತೆ ಮಾನವ: ಮನುಜನಾಗಿ ಬಾಳುತ್ತಿದ್ದಾನೆ. ಮನುಜನಿಗೆ 'ಮನುಜತ್ವ' ಬರುವುದು. 'ಪ್ರಜ್ಞಾ ಪ್ರಕಾಶ.(Nous) ಮತ್ತು 'Mind'ಗಳು ಆವಿರ್ಭಾವ ಆದಾಗ. ''ಮಾನವರು ಈ ಮನು (ವಿವಸ್ವನ್)ವಿನಿಂದ ಆದವರು. ಇವರು ಮನುಜರು ಎಂಬಲ್ಲಿ ಲೈಂಗಿಕ ಸ್ತ್ರೀ ಪುರುಷ ಸಂಬಂಧದ ಜನ್ಮವು ಅಭಿಪ್ರೇತವಿಲ್ಲ.''[೪೩] ಲಿಂಗ ತಾರತಮ್ಯವು ಮಾನವತ್ವದಲ್ಲಿ ಕಾಣುವುದಿಲ್ಲ. ಪ್ರಜ್ಞೆ ಮತ್ತು ಬುದ್ಧಿ ಪಾತಳಿಯಲ್ಲಿ ಮಾತ್ರ ಭೇದ ಕಾಣುತ್ತದೆ. ''ಪ್ರಜ್ಞೆಯ ಅಂಗವಾದ ಸ್ವ-ಉಪಜ್ಞೆ ಅಥವಾ ಮನಃಶಕ್ತಿಯ ಪ್ರೇರಣೆ, ಪ್ರಚೋದನೆಯಿಂದ ಬಾಳದಾರಿಯನ್ನು ಕ್ರಮಿಸುವ ಸ್ವಭಾವದವನು, ಇದು ಹುಟ್ಟುಗುಣ. ಯಾರ ಹೇಳಿಕೆಯಿಂದ ಉಂಟಾಗಬಲ್ಲ ಸ್ವಭಾವವೂ ಅಲ್ಲ. ಈ ಮನುಜ ಮಾನವನ ಧರ್ಮ ಸಂಸ್ಕೃತಿಯನ್ನು ಜಾಗತಿಕ ವಿಶ್ವನಿಯಮದ ಅನುಸಂಧಾನದಲ್ಲಿ ಕಂಡುಹಿಡಿದು ಹೇಳುವ ಮೂಲ ಪ್ರಯತ್ನ ವೈವಸ್ವತ ಸಂಪ್ರದಾಯದ್ದು.''[೪೪] ಈ ವೈವಸ್ವತ ಪ್ರಣೀತ 'ಮಾನವ ಧರ್ಮ'ವು ಜಾಗತಿಕ ಮಟ್ಟದಲ್ಲಿ ನೆಲೆ ನಿಲ್ಲುವ ತತ್ತ್ವಗಳಲ್ಲೊಂದು. ವ್ಯಕ್ತಿಯ ಹಂತಾನುಹಂತದ ಬೆಳವಣಿಗೆಯು ಮಾನವತ್ವಕ್ಕೆ ಏರುತ್ತದೆ.

'ವ್ಯಕ್ತಿ' ಮತ್ತು 'ಮಾನವ' ಬೇರೆ ಬೇರೆಯಾದ ರೂಪಗಳು. ಮಾನವತ್ವವನ್ನು ಎತ್ತಿ ಹಿಡಿಯಲೋಸುಗ ಎರಡು ಸಂಸ್ಥೆಗಳು ಆರಂಭವಾಗಿದ್ದವು ೧. ಕರ್ನಾಟಕ ಬಹಾಯಿ ಪಂಥೀಯರ ಪತ್ರಿಕೆ ಮತ್ತು ೨. ಡಾ.ಶಿವರಾಮಕಾರಂತರು ಅಧ್ಯಕ್ಷರಿರುವ ಡಾ.ಹಿರೇಮಠರ (ಮಡ್ಲೇರಿ) ಸಂಸ್ಥೆಯ ಪ್ರಯತ್ನ[೪೫]ಗಳಲ್ಲಿ 'ವ್ಯಕ್ತಿ' ಮತ್ತು 'ಮಾನವ' ಇವೆರಡರಲ್ಲಿ ಇರುವ ಮೂಲಭೂತ ಅಂತರವನ್ನು ಸಂಪೂರ್ಣ ಕಡೆಗಣಿಸಲಾಗುತ್ತಿದೆ.'[೪೬] ಆದ್ದರಿಂದ ಅವರ ಪ್ರಯತ್ನಗಳು ಸಫಲವಾಗಿಲ್ಲ ಎಂಬುದು ಶಂಬಾ ಅವರ ವಾದ. 'ವ್ಯಕ್ತಿ' ಮತ್ತು 'ಮಾನವ' ಹಾಗೂ 'ಸಮಾಜ' ಮತ್ತು 'ಸಮಷ್ಟಿ'ಗಳಲ್ಲಿ ವ್ಯತ್ಯಾಸವನ್ನು ಶಂಬಾ ಅವರು ತಿಳಿಸುವುದು ಈ ರೀತಿ. ''ವ್ಯಕ್ತಿ ಮತ್ತು ಸಮಾಜ:ಸಮಷ್ಟಿ' ಇವೆರಡಲ್ಲಿ ಇರುವ ಅಂತರವೇ 'ವ್ಯಕ್ತಿ' ಮತ್ತು 'ಮಾನವ' ಇವೆರಡಲ್ಲಿ ಉಂಟು. ವ್ಯಕ್ತಿಯೇ ಸಮಾಜವಾಗುವಾಗ ಈ ಸಮಾಜ 'ಸಮುದಾಯ' ವ್ರತ, ಗುಂಪು ಆಗುತ್ತದೆ. ಇಂದು 'ಸಮಾಜ' ಪರಿಭಾಷೆ ಕಾಣೆಯಾಗಿ 'ಸಮುದಾಯ' ಸಂಕೇತವು ವಾಡಿಕೆಗೆ ಬಂದಿದೆ.[೪೭] 'ಮಾತು' ಮತ್ತು 'ಭಾಷೆ'ಗೆ ಇರುವ ಅಂತರವೇ

'ವ್ಯಕ್ತಿ' ಮತ್ತು 'ಮಾನವ'ನಿಗೆ ಇರುವ ವ್ಯತ್ಯಾಸವೆಂದು ಮುಂದುವರಿದು ಹೇಳಿದ್ದಾರೆ. "ವ್ಯಕ್ತಿ: ನರನು ತುರ್ಚು=Functional ಪಾತಳಿಯವನೇ ಇರುತ್ತಾನೆ. ಆದರೆ ಮನುಜ: ಮಾನವತ್ವವು ನಿಯಮ: ವ್ಯವಸ್ಥೆಯ ಕಟ್ಟಡದ (Structure) ಆಧಾರದ ಮೇಲೆ ಇರುತ್ತಾನೆ. ಈ Functional ನರನು Structral ಹಂತದವನು ಆಗಲಾರನು."[೪೮] ಈ ಮಾನವನಲ್ಲಿ ಪ್ರಜ್ಞೆ ಮತ್ತು ಅನುಭವದ ಸೋಪಜ್ಞತೆ ಗಳು ಮೂಡಿರುತ್ತವೆ. ಪ್ರಜ್ಞೆಯಿಲ್ಲದ ಹಾಗೂ ಅನುಭವವನ್ನು ಗಣಿಸಲಾಗದವನು ವ್ಯಕ್ತಿಯಾಗಿರುತ್ತಾನೆ. ಮಾನವ ಇಂದು 'ಮನುಜತ್ವ'ವನ್ನು ಗಳಿಸುವುದು ಅನಿವಾರ್ಯದ ಅತ್ಯಗತ್ಯವಾಗಿದೆ. ಅಣುಬಾಂಬುಗಳ ಯುದ್ಧದಲ್ಲಿ 'ಮಾನವತ್ವ' ಅಥವಾ 'ಮಾನವ ಸಂಸ್ಕೃತಿ' ಹೇಳ ಹೆಸರಿಲ್ಲದಂತಾಗಿದೆ. ಅಮೆರಿಕಾ, ಇರಾನ್‌ಗಳ ಯುದ್ಧ, ಪಾಕಿಸ್ತಾನದಂತಹ ದೇಶಗಳ ನಯ ವಂಚಕ ಮಾತುಗಳಲ್ಲಿ ಮತ್ತು ಫಿಜಿಯಲ್ಲಿ ನಡೆಯುತ್ತಿರುವ ಅಮಾನವೀಯ ರಾಜಕೀಯ ಬೆಳವಣಿಗೆಗಳ ನಡುವೆ 'ಮಾನವತ್ವ' ನಲುಗುತ್ತಿದೆ. ಡೆಕಾರ್ಟ್‌ನ 'I think Therefore I am' ಎನ್ನುವ ಮಾತಿನಲ್ಲಿ ಮನುಷ್ಯನ ಯೋಚನೆಯಿಂದ ಅವನಿಗೆ ಬೆಲೆ ಬರುತ್ತದೆ ಎಂಬುದು ವೇದ್ಯವಾಗುತ್ತದೆ. ಆದರೆ ಭೌಮಾಸುರ-ನರ ಸಂಪ್ರದಾಯಗಳಲ್ಲಿ 'I am, therefore I think' ಎನ್ನುವ (ನಾನಿದ್ದೇನೆ- ಆದಕಾರಣ ವಿಚಾರ ಮಾಡುತ್ತೇನೆ) ಮಾತು ವ್ಯಕ್ತವಾಗುತ್ತದೆ. ಇದು ನರ ಪಾತಳಿಯ ವ್ಯಾಖ್ಯಾನವಾಗಿ ಬಿಡುತ್ತದೆ. ಈ ಪಾತಳಿಯಲ್ಲಿನ ವ್ಯಕ್ತಿ 'ಮಾನವತ್ವ'ಗಳಿಸುವುದರ ಬದಲು ಹಿಮ್ಮುಖ ಚಲನೆಯಲ್ಲಿ ಹೊರಟಿದ್ದಾನೆ. ಮನುಷ್ಯನು ಯಾಂತ್ರೀಕರಣಗೊಳ್ಳುವುದರಿಂದ ಅವನ 'ಬುದ್ಧಿ' ನರಪಾತಳಿಗೆ ಸಂಚರಣೆಗೊಳ್ಳುತ್ತಿದೆ. ಹೀಗಾಗುವುದರಿಂದ ಮನುಜತ್ವದ ಮೂಲಕ ಸಂಸ್ಕೃತಿಯನ್ನು ಬೆಳೆಸಬೇಕಾದದ್ದು ಹಿನ್ನಡೆಗೆ ಕಾರಣವಾಗುತ್ತದೆ. ಶಂಬಾ ಅವರು ತಮ್ಮ 'ಮಾನವ ಧರ್ಮ'ದ ನೆಲೆಗಳನ್ನು ತತ್ವಶಾಸ್ತ್ರಜ್ಞ ಬರ್ಗ್‌ಸನ್ ಅವರ 'Interrational Instution' ಮತ್ತು 'Supra rational Instution'ಗಳ ನಡುವಿನ ಹೋಲಿಕೆಯನ್ನು ಗುರುತಿಸಿದ್ದಾರೆ. "ತರ್ಕದ ನೆಲೆಗಿಂತ ಕೆಳಗಿರುವ, ಪ್ರಾಣಿ ಸಹಜವಾದ Interrational ನೆಲೆಯು ನಮ್ಮ ಪುರಾತನರ ಪ್ರಾಣಿಚೇತನ (ನರ) ನೆಲೆ ಸಮಾನವಾದುದು. ಚಾಂದ್ರ, ಅಗ್ನಿ, ಗೌತಮಾಗ್ನಿಗಳೂ ಇದನ್ನೇ ಹೇಳುತ್ತವೆ. ಆದರೆ Supra rational Insitution ಎನ್ನುವುದು ಪ್ರಾಣಿನೆಲೆಯನ್ನು ಮಾತ್ರವಲ್ಲ, ವ್ಯಕ್ತಿಯಲ್ಲಿ ಹುಟ್ಟಿದ ತರ್ಕದ ನೆಲೆಯನ್ನು ಮೀರಿರುತ್ತದೆ."[೪೯] ಈ ಎರಡೂ ವಾದಗಳು ಪ್ರಾಣಿ ಮತ್ತು ಮಾನವನ ನಡುವಿರುವ ಅಂತರವನ್ನು ಸ್ಪಷ್ಟಪಡಿಸುತ್ತವೆ. ಬುದ್ಧಿ, ನೆನಪು ಮತ್ತು ಯೋಚನೆಗಳನ್ನು ಪಡೆದಿರುವ ಮನುಷ್ಯ ಪ್ರಾಣಿನೆಲೆಯಿಂದ ಭಿನ್ನವಾಗುವುದು ಈ ಮೂರರಿಂದಲೇ. ಉಳಿದಂತೆ ಹಸಿವೆ, ನಿದ್ರೆ, ಮೈಥುನ ಇತ್ಯಾದಿಗಳಿಂದ ಪ್ರಾಣಿ ನೆಲೆಯು ಮನುಷ್ಯ ನೆಲೆಯಿಂದ ಭಿನ್ನವಾಗಿಲ್ಲ.

ಶಂಬಾ ಅವರ ನಿರೂಪಿಸಿದ 'ಮಾನವ ಧರ್ಮ'ವು ಇನ್ನುಳಿದ 'ಧರ್ಮ'ಗಳ ನೆಲೆಗೆ ಸೇರುವುದಿಲ್ಲ. 'ಧರ್ಮ' ಎನ್ನುವುದು ನಿಯಮ, ಪದ್ಧತಿ ಎಂದು ಅರ್ಥ ತಿಳಿಸುತ್ತದೆ. ಬೌದ್ಧ ಧರ್ಮ, ಹಿಂದೂ

ಧರ್ಮ, ಎನ್ನುವ ಧರ್ಮಗಳಲ್ಲಿ ಸಂಪ್ರದಾಯ ಪದ್ಧತಿಗಳನ್ನು ಆಚರಿಸಲಾಗುತ್ತಿದೆ. ಒಂದು ಬದ್ಧವಾದ ನಿಯಮಗಳಿಗೆ ಅಂಟಿಕೊಂಡಿವೆ. ಮಾನವ ಧರ್ಮ ಮಾತ್ರ ಇವುಗಳಿಗೆ ಭಿನ್ನವಾಗಿದೆ. ನಿತ್ಯವೂ ಹೊಸತನವನ್ನು ಪಡೆಯಬಹುದಾದ ಮತ್ತು ಸದಾ ಮುನ್ನಡೆಯಲ್ಲಿ ಸಾಗುವ ಚಲಾವಣೆಯ ನಾಣ್ಯವಾಗಿದೆ. ಶಂಬಾ ಅವರು ಪ್ರತಿಪಾದಿಸಿದ್ದು ಮಾನವ ಸಂಸ್ಕೃತಿ ಮುನ್ನಡೆಯುವಂತಹದ್ದು. ಆದರೆ ಜಗತ್ತಿನಲ್ಲಿ ವಾಸ್ತವವಾಗಿ ಅದು ಹಿಮ್ಮುಖತೆಯನ್ನು ಪಡೆದಿದೆ ಎಂದು ಅವರೇ ಹೇಳಿದ್ದಾರೆ.

ನವೋದಯದ ಸಂದರ್ಭದಲ್ಲಿ ಬಿ.ಎಂ.ಶ್ರೀ ಅವರು 'ಅವಳ ತೊಡಗೆ ಇವಳ ಉಡುಗೆ'ಯನ್ನಷ್ಟೆ ಬದಲಾಯಿಸಿದರು. ಆಂತರ್ಯದಲ್ಲಿ ಮಾನವತಾವಾದವನ್ನು ತುಂಬುವ ಸಾಹಸ ಗಂಭೀರ ನಾಟಕ ಗಳಲ್ಲಿ ಈ ಮಾತು ಬದಲಾಯಿತು. ಕುವೆಂಪು ಅವರು ತಮ್ಮ ನಾಟಕ, ಕಾವ್ಯದಲ್ಲಿ ಮಾನವೀಯತೆ ಯನ್ನು ಸ್ಪಷ್ಟವಾಗಿ ನಿರೂಪಿಸಿದ್ದಾರೆ. ಶೂದ್ರ ತಪಸ್ವಿ, ಏಕಲವ್ಯ, ಜಲಗಾರ ಮೊದಲಾದ ನಾಟಕಗಳಲ್ಲಿ ಉದಾತ್ತವಾದ ಬಂಡಾಯದ ಮಾನವೀಯ ಮೌಲ್ಯವನ್ನು ಹೇಳಲು ಹೊರಟಿದ್ದಾರೆ. ರಾಮಕೃಷ್ಣ ಪರಮಹಂಸ ಮತ್ತು ಅರವಿಂದರ ನಿಲುವುಗಳನ್ನು ಮತ್ತು ವೇದ ಉಪನಿಷತ್ತುಗಳ ನೀತಿ ನಿರೂಪಣೆಗಳನ್ನು ಇವರ ಕಾವ್ಯದಲ್ಲಿ ಕಾಣುತ್ತೇವೆ. 'ಮನುಜ ಮತ ವಿಶ್ವಪಥ'ವನ್ನು ನಿರ್ಮಿಸಿದರು. ವಿಶ್ವಮಾನವನಾಗಲು ಸೂತ್ರಗಳನ್ನು ಬೋಧಿಸಿದರು.

'ಮನುಜ ಮತ ವಿಶ್ವಪಥ'ದ ಸಪ್ತ ಸೂತ್ರದ ಮೊದಲ ತತ್ವವೇ 'ಮನುಷ್ಯ ಜಾತಿ ತಾನೊಂದೆ ವಲಂ' ಎಂಬ ಆದಿಕವಿ ಪಂಪನ ನುಡಿಯನ್ನು ಕುವೆಂಪು ಅವರು ನಿರುಪಾಧಿಕವಾಗಿ ಸ್ವೀಕರಿಸಬೇಕೆನ್ನು ತ್ತಾರೆ. ವಿಶ್ವಮಾನವತೆಯ ಆದರ್ಶಕ್ಕೆ ಅನುಗುಣವಾಗಿ ಸಮಸ್ತಲೋಕಕ್ಕೆ ಒಂದೇ ತತ್ವ ಅಳವಡಬೇಕು. ಅದು ಜಾತಿ-ಮತ-ದೇಶ-ಜನಾಂಗ-ಲಿಂಗ ಇತ್ಯಾದಿ ಮಾನವ ನಿರ್ಮಿತ ತೆರೆಗಳನ್ನು ಧಿಕ್ಕರಿಸುತ್ತದೆ. ಮನು ಹುಟ್ಟಿದಾಗ ಮುಗ್ಧವಾಗಿರುತ್ತದೆ. ಕಾಲಾನಂತರ ಅದು ತಂದೆ-ತಾಯಿ-ಸಮಾಜ-ಜಾತಿ-ಮತ - ದೇಶಗಳೆಂಬ ಸಂಕುಚಿತ ಶೃಂಖಲೆಗಳಿಗೆ ಬಂಧನೆಯಾಗುತ್ತದೆ. ಈ ಬಂಧನದಿಂದ ಮುಕ್ತಗೊಳಿಸುವಂತಹ ಶಿಕ್ಷಣವನ್ನು ನೀಡಬೇಕೆ ಹೊರತು ಮತ್ತೂ ಅದೇ ಕೃತಕ ಪಂಜರದಲ್ಲಿ ಬಂಧಿಸಬಾರದು. ಕಾನೂರು ಹೆಗ್ಗಡಿತಿಯ ಒಂದು ಉದಾಹರಣೆ ನೋಡುವುದಾದರೆ, ಲಕ್ಷ್ಮಿ-ಸೀತೆಯ ಪ್ರೀತಿಯ ತಂಗಿ-ಮುಗ್ಧ ಹುಡುಗಿ. ಹಗಲಲ್ಲಿ ಕೋಲು ಬಿಸಿಲಿನೊಡನೆ ಚಿನ್ನಾಟವಾಡುತ್ತಾ, ಕಾನೂರಿನಿಂದ ಬರುವ ಹೂವಯ್ಯ ಬಾವನ ಗಾಡಿಯನ್ನು ನಿರೀಕ್ಷಿಸುತ್ತಿರುತ್ತಾಳೆ. ಕುಂಬಾರ ನಂಜ ತನ್ನ ಒಂದು ವರ್ಷದ ಮಗುವನ್ನು ಕರೆದುಕೊಂಡು ಅಲ್ಲಿಗೆ ಬಂದ. ಆ ಮಗು ಚೆಲುವಿನ ಮಗುವಲ್ಲ. 'ಕೈಕಾಲು ಸಣ್ಣಗಿತ್ತು, ಹೊಟ್ಟೆ ಡುಬ್ಬಣವಾಗಿತ್ತು. ಮೂಗಿನಿಂದ ಸಿಂಬಳ ಸುರಿದು ಮೇಲ್ತುಟಿಯ ಮೇಲೆ ಕೋರೆಯಾಗಿತ್ತು. ಕೈಯಲ್ಲಿಯೂ ಹೊಟ್ಟೆಯ ಮೇಲೂ ಕಜ್ಜಿಗಳು ಕಾಣುತ್ತಿದ್ದವು. ಎದೆಯ ಎಲುಬಿನ ಗೂಡಿನ ಆಕೃತಿ ಹಬ್ಬಿದ ಚರ್ಮದ ಮೇಲೆ ಚೆನ್ನಾಗಿ ಕಾಣುತ್ತಿತ್ತು. ನಿರ್ಮಲವಾಗಿರುವವರು ಯಾರೂ ಅದನ್ನು

ಮುಟ್ಟಲು ಹೇಸುತ್ತಿದ್ದರು. ಆದರೆ ಅದೊಂದೂ ಲಕ್ಷ್ಮಿಯ ಮನಸ್ಸಿಗೆ ಬರಲಿಲ್ಲ.''[೫೦] ಆ ಮಗುವಿಗೆ ಯಾವುದೇ ಶೃಂಖಲೆಗಳ ಪರಿಚಯವಿಲ್ಲ. ತಕ್ಷಣವೇ ''ರಂಗೀ ಬಾರೆ ಬಾರೆ! ಬೆಲ್ಲ ಕೊಡ್ತಿನೀ ಬಾರೇ!'' ಎಂದು ಕೈಚಾಚುತ್ತಾಳೆ. ಆದರೆ ಸಮಾಜದ ನಿರ್ಬಂಧಗಳನ್ನು ಅನುಭವಿಸಿದ ನಂಜನ ಮನಸ್ಸು ಸಮಾಜದ ನಿಯಮಗಳಿಗೆ ಮೊರೆಹೋಗುತ್ತದೆ. ''ಬೇಡ ಕಣ್ರೋ ನಿಮ್ಮಪ್ಪ ಬಯ್ತಾರೆ ಥೂ ಬಿಡೀ ಅಂದ್ರೆ, ನಿಮಗೆ ಗೊತ್ತಿಲ್ಲ''[೫೧] ಎಂದು ಮಗುವನ್ನು ಕೊಡದೆ ಸಾಗುತ್ತಾನೆ. ಇಲ್ಲಿನ ಚಿತ್ರ ವಿಶ್ವ ಪಥ - ಸಮಾಜದ ನಿರ್ಬಂಧಗಳ ನೆರಳೂ ಸ್ಪಷ್ಟಪಡಿಸುತ್ತದೆ.

ನಂತರದ ತತ್ವಗಳೆಂದರೆ (೨) ವರ್ಣಾಶ್ರಮವನ್ನು ತಿದ್ದುವುದಲ್ಲ. ಅವನ್ನು ಸಂಪೂರ್ಣವಾಗಿ ತೊಲಗಿಸಬೇಕು. (೩) ಜಾತಿ ಪದ್ಧತಿಯನ್ನು ಸಂಪೂರ್ಣವಾಗಿ ನಿರಾಕರಿಸಿ ವಿನಾಶಗೊಳಿಸಬೇಕು.... ''..ನಾನು ಯಾವ ಜಾತಿಯ ವಿರುದ್ಧವಾಗಿ ಅಥವಾ ದ್ವೇಷದಿಂದ ಯಾವ ಮಾತನ್ನೂ ಆಡಲಾರೆ. ಏಕೆಂದರೆ ನನಗೆ ಯಾವ ಜಾತಿಯೂ ಇಲ್ಲ. ಆದ್ದರಿಂದ ಜಾತಿದ್ವೇಷವೂ ಇಲ್ಲ...... ನನ್ನ ಜೀವನ ದೃಷ್ಟಿ ಒಂದು ರೀತಿಯಲ್ಲಿ ಸಮಾನತಾವಾದಿಯ ದೃಷ್ಟಿ. ನೀವು ಸಮಾಜವಾದಿ, ಸಮತಾವಾದಿ ಎಂದೆಲ್ಲ ವ್ಯಾಖ್ಯಾನ ಮಾಡಬಹುದು. ಆದರೆ ನಾನು ಸಮಾನತಾವಾದಿ.''[೫೨] (೪) 'ಮತ' ತೊಲಗಿ 'ಆಧ್ಯಾತ್ಮ' ಮಾತ್ರ ವೈಜ್ಞಾನಿಕ ತತ್ವವಾಗಿ ಮಾನ್ಯತೆ ಪಡೆಯಬೇಕು. (೫) ಮತ ಮನುಜಮತವಾಗಬೇಕು. ಪಥ ವಿಶ್ವಪಥವಾಗಬೇಕು. ಮನುಷ್ಯ ವಿಶ್ವ ಮಾನವನಾಗಬೇಕು. ಈ ತತ್ವ ಕುವೆಂಪು ಅವರ ವಿಚಾರಧಾರೆಗಳಲ್ಲಿಯೇ ಮಹತ್ವದ್ದಾಗಿದೆ. (೬) ಮತ ಗುಂಪು ಕಟ್ಟುವ ವಿಷಯವಾಗಬಾರದು. ಯಾರು ಯಾವ ಒಂದು ಮತಕ್ಕೂ ಸೇರದೆ, ಪ್ರತಿಯೊಬ್ಬನೂ ತಾನು ಕಂಡುಕೊಳ್ಳುವ ತನ್ನ ಮತಕ್ಕೆ ಮಾತ್ರ ಸೇರಬೇಕು. ಅಂದರೆ ಜಗತ್ತಿನಲ್ಲಿ ಎಷ್ಟು ವ್ಯಕ್ತಿಗಳಿದ್ದಾರೋ ಅಷ್ಟೇ ಸಂಖ್ಯೆಯ ಮತಗಳಿರುವಂತಾಗುತ್ತದೆ. ಯಾರೊಬ್ಬರೂ ಇನ್ನೊಬ್ಬರ ಮತಕ್ಕೆ ಸೇರಿ ಗುಂಪು ಕಟ್ಟಿ ಜಗಳ ಹಚ್ಚುವಂತಾಗಬಾರದು. (೭) ಯಾವ ಗ್ರಂಥವೂ ಏಕೈಕ ಪರಮ ಪೂಜ್ಯ ಧರ್ಮಗ್ರಂಥವಾಗಬಾರದು. ಪ್ರತಿಯೊಬ್ಬ ವ್ಯಕ್ತಿಯು ತನಗೆ ಸಾಧ್ಯವಾದವುಗಳನ್ನೆಲ್ಲ ಓದಿ ತಿಳಿದು ತನ್ನ 'ದರ್ಶನ'ವನ್ನು ತಾನೆ ನಿರ್ಣಯಿಸಿ ಕಟ್ಟಿಕೊಳ್ಳಬೇಕು.

ಕುವೆಂಪು ಅವರ ಈ ಸಪ್ತ ಸೂತ್ರಗಳು ಆಗಸ್ಟ್ ಕೋಂಟ್‌ನ 'ಮಾನವತಾ ಧರ್ಮ'ವನ್ನು ವಿವೇಕಾನಂದರ 'ಮಾನವ ಧರ್ಮ'ವನ್ನು ಮಹಾತ್ಮಾ ಗಾಂಧೀಜಿಯ ಅವರ 'ಸರ್ವೋದಯ' ಸಿದ್ಧಾಂತ ವನ್ನು ಶ್ರೀ ರಾಮಕೃಷ್ಣ ಪರಮ ಹಂಸರ 'ಸಮನ್ವಯ' (ಸರ್ವಧರ್ಮ ಸಮನವಯಾ ಚಾರ್ಯ') ತತ್ವವನ್ನು ಮಹರ್ಷಿ ಅರವಿಂದರ 'ಪೂರ್ಣದೃಷ್ಟಿ' ಪರಿಕಲ್ಪನೆಯನ್ನು ಸಮ್ಮಿಲನಗೊಳಿಸಿಕೊಳ್ಳುತ್ತವೆ.

ನವ್ಯ ಸಾಹಿತ್ಯದಲ್ಲಿ ಮನುಷ್ಯನ ವೈಯಕ್ತಿಕ ನೆಲೆಯ ಸಮಸ್ಯೆಗಳಿಗೆ ಮಹತ್ವ ಒದಗಿತು. ಅವನಿಂದ ಆಗಬೇಕಾದ ಉಪಕಾರಕ್ಕಿಂತಲೂ ತನ್ನ ಸಂಕಷ್ಟಗಳನ್ನು ಅದೂ ಲೈಂಗಿಕ, ವೇಶ್ಯಾ ವಿಷಯಗಳಂತಹ ಸಂಕಷ್ಟಗಳನ್ನು ನಿವಾರಿಸಿಕೊಳ್ಳುವಲ್ಲಿ ಹೆಣಗಾಡಿದ ವಿನಾಯಕ ಕೃಷ್ಣ ಗೋಕಾಕರು ಸಂಪ್ರದಾಯದ

ಪರವಾಗಿ ಬರೆಯುವುದರ ಜೊತೆಗೆ ಮಾನವೀಯ ನೆಲೆಗಟ್ಟನ್ನು ರೂಪಿಸಿಕೊಂಡರು. ಅದೇ ರೀತಿ ಗೋಪಾಲ ಕೃಷ್ಣ ಅಡಿಗರು ಆಧುನಿಕ ಸಂವೇದನೆಯುಳ್ಳ ಮಾನವನ ಪರವಾಗಿ ಬರೆದರು.

“ನಾವೆಲ್ಲರು ಒಂದೇ ಜಾತಿ, ಒಂದೇ ಮತ, ಒಂದೇ ಕುಲ
ನಾವು ಮನುಜರು
ನರರ ನಡುವಿನಡ್ಡ ಗೋಡೆಗಳನು ಕುಟ್ಟಿ ಕೆಡುಹುವೆವು
ನಾವು ವಿಲಯ ರುದ್ರರು
ಹೊಸ ಬಾಳಿನ ಹೊಸ ಸಮತೆಯ ಸಮರಸವನು ಸಮವೆವು

(ನಾವೆಲ್ಲರೂ ಒಂದೇ ಜಾತಿ)

ಎನ್ನುವಲ್ಲಿ ಅಡಿಗರು ಮಾನವತಾವಾದವನ್ನು ಪ್ರತಿಪಾದಿಸಿದ್ದಾರೆ. “ಇಬ್ಬರೂ ಮಾನವನು ಎಲ್ಲದರ ಕೇಂದ್ರವೆಂದು ನೋಡುವ Humanist ದೃಷ್ಟಿಯವರೆ. ಅವರಲ್ಲಿ ಪ್ರಗತಿಪರ ಧೋರಣೆ ಯಲ್ಲಿ ಸೇರಿಕೊಂಡಿದೆ. ಇದು ನವೋದಯದ ಧೋರಣೆಗೆ ಸಮನಾದದ್ದು. ಗೋಕಾಕರು ಮತ್ತು ಅಡಿಗರು ಇಬ್ಬರೂ ನವೋದಯ-ಪ್ರಗತಿಶೀಲದ ಮೂಲಕವೇ ಹಾದು ಬಂದವರು. ಜೀವನದ ಗುರಿಯ ವಿಚಾರದಲ್ಲಿ ಇಬ್ಬರಿಗೂ ಸಮಾನ ಅಂಶಗಳಿವೆ. ಅವು ‘ನವೋದಯ’ದೊಂದಿಗೂ ಸಮಾನ ಅಂಶಗಳನ್ನು ಹಂಚಿಕೊಳ್ಳುತ್ತ ಇಬ್ಬರ ಕಾವ್ಯ ಪ್ರಣಾಲಿಗಳೂ ಮಾನವ ಕೇಂದ್ರವುಳ್ಳ Humanism ಅನ್ನೇ ಎತ್ತಿ ಹಿಡಿಯುವಂತಹವು.”[೫೩] “ಏನಾದರೂ ಆಗು ಮೊದಲು ಮಾನವನಾಗು....” ಎಂಬ ಸಿದ್ಧಯ್ಯ ಪುರಾಣಿಕ ವಚನ ಮಾನವತಾವಾದಕ್ಕೆ ಶಾಸನವಾಗುತ್ತದೆ.

ಒಳಿತನ್ನು ಮಾಡಿದವರಿಗೆ ಒಳಿತನ್ನು ಮಾಡುವವ ಮಾನವ,
ಒಳಿತನ್ನು ಮಾಡದವರಿಗೂ ಒಳಿತನ್ನು ಮಾಡುವವ ಮಹಾ ಮಾನವ,
ಕೆಡುಕನ್ನು ಮಾಡಿದವರಿಗೂ ಒಳಿತನ್ನು ಮಾಡುವವ ದೇವ ಮಾನವ ನೋಡಯ್ಯಾ!
...ಪ್ರೀತಿಸಿದವರನ್ನು ಪ್ರೀತಿಸುವವ ಮಾನವ
ಪ್ರೀತಿಸದವರನ್ನೂ ಪ್ರೀತಿಸುವವ ಮಹಾ ಮಾನವ
ದ್ವೇಷಿಸುವವರನ್ನೂ ಪ್ರೀತಿಸುವವ ದೇವ ಮಾನವ ನೋಡಯ್ಯಾ[೫೪]

ಬಾನವರನ್ನಾಗಿ ಮಾಡಿ ಬಾನಿಗೇರಿಸದಿರು
ಧಾನವರನ್ನಾಗಿ ಮಾಡಿ ರಸತಳಕ್ಕೆ ಕಳುಹಿಸದಿರು,
ಮಾನವರನ್ನಾಗಿ ಮಾಡಿ ಇದೇ ಸುಂದರ ಜಗತ್ತಿನಲ್ಲಿಯೇ
ಉಳಿಸಿ ಬೆಳಸಿ ಬೆಳಗಿಸಯ್ಯ ಸ್ವತಂತ್ರ್ಯಧೀರ ಸಿದ್ಧೇಶ್ವರ[೫೫]

‘ನವೀಕರಣ, ನವೀಕರಣ’ ವೆಂದು
ನಲುಗುತ್ತಲಿಹರಯ್ಯ ನವಯುವಕರು
‘ಮಾ ನವೀಕರಣ, ಮಾ ನವೀಕರಣ’ ವೆಂದು
ಯಾರೆನ್ನುವರು

ನಾನಂತೂ ಎನ್ನಲಾರೆ!
ಆದರೆ, 'ಮಾನವೀಕರಣ, ಮಾನವೀಕರಣ' ವೆಂದು
ಎನ್ನದಿರಲಾರೆ[೫೬]

ಆಗ,
ಅಹಿಂಸಾ ಪರಮೋಧರ್ಮಃ,
ಸತ್ಯನ್ನಾಸ್ತಿ ಪರೋಧರ್ಮಃ, ಇತ್ಯಾದಿ
ಈಗ,
ನ, ಮಾನುಷತ್ ಪರೋಧರ್ಮಃ,
ನಿಜ, ಮನುಷರೇ ಇಲ್ಲವಾದರೆ
ಧರ್ಮ ಯಾರಿಗಾಗಿ
ಮನುಷ್ಯತ್ವವೇ ಧರ್ಮ,
ಮನುಷ್ಯರಿಗಾಗಿ ಧರ್ಮ!
ಮಾನವರಿಂದ ಮಾನವರಿಗಾಗಿ
ಮಾನವ ಧರ್ಮ ಮೂಡಿ
ಮೇಲೆತ್ತಲಯ್ಯ ಮಾನವರನ್ನು
ಸ್ವತಂತ್ರ್ಯ ಧೀರ ಸಿದ್ಧೇಶ್ವರಾ![೫೭]

ಶಾಂತಿನಾಥ ದೇಸಾಯಿ ಅವರ ಕಥೆಗಳ ನಾಯಕರು ಕಾಮದ ಬಗ್ಗೆ ಚಿಂತಿಸಿದಷ್ಟು ಮಾನವೀಕರಣದ ಬಗಗೆ ಆಗಲಿ ಜೀವನದ ಬಗೆಗೆ ಆಗಲಿ ಚಿಂತಿಸಿದವರಲ್ಲ. ಆಧುನಿಕತೆಯ ಮನುಷ್ಯ ತನ್ನ ತೆವಲುಗಳಿಗಾಗಿ ಹೋರಾಟ ನಡೆಸಿದಂತೆ ಸಮಾಜಿಕ ಸಮಸ್ಯೆಗಳಿಗೆ, ಸಾಂಸ್ಕೃತಿಕ ನೆಲೆಗಟ್ಟಿಗೆ ಹೋರಾಡಿದ್ದು ಕಡಿಮೆ. ಪಿ.ಲಂಕೇಶರ ಕಥೆಗಳಲ್ಲಿ ಮಾನವ ಹೆಚ್ಚು ಸ್ವಾರ್ಥಿಯಾಗಿದ್ದಾನೆ. 'ಹೇಳದ ಕಥೆಯಲ್ಲಿ ಸಾವಿನ ಅಂಚಿನಲ್ಲಿದ್ದ ತಂದೆಯನ್ನು ನೋಡಲು ಆಸ್ಪತ್ರೆಗೆ ಹೋಗುತ್ತಾನೆ. ಡಾಕ್ಟರರು ತಂದೆಯ ಶುಶ್ರೂಷೆಗೆ ಲಂಚ ಕೇಳಿದಾಗ ತಂದೆಯನ್ನು ಉಳಿಸಿಕೊಳ್ಳುವ ಕರ್ತವ್ಯ ಮರೆತು, ಮಾನವೀಯತೆ ತೋರದೆ 'ಕ್ಷಮಿಸಿ ಸಾರ್ 'ಎನ್ನುತ್ತಾನೆ. ಇಲ್ಲಿ ಅನೈತಿಕ ಮಾರ್ಗ ಅವನಿಗೆ ಬೇಕಾಗಿಲ್ಲದಿರಬಹುದು. ಆದರೆ ತಂದೆ ಅಂತಿಮಕ್ಷಣಗಳಲ್ಲಿ ಅದು ನಗಣ್ಯ. ತಂದೆಗಾಗಿ ಏನನ್ನೂ ಮಾಡದವನು ಸಮಾಜಕ್ಕಾಗಿ ಇನ್ನೇನು ಮಾಡಿಯಾನು?. ಅದೇ ರೀತಿ 'ಕುರುಡ ಕಾಂಚಾಣ' ಕಥೆಯಲ್ಲಿ ವ್ಯಕ್ತಿಯ ಆಂತರ್ಯವನ್ನು ಮತ್ತು ಅವನ ಬಹಿರಂಗದ ಅಸಹಾಯಕತೆಯನ್ನು ಕಾಣಬಹುದು. 'ಸೆಪ್ಟೆಂಬರ್‌ನಲ್ಲಿ ಒಂದು ರಾತ್ರಿ' ಕಥೆಯಲ್ಲಿ ನಾಯಕ ಶಾಂತಾಳ ಜೊತೆಗೂಡುತ್ತಾನೆ. ನಂತರ ಆಕೆಯ ಪರಿಸ್ಥಿತಿ ತಿಳಿದು ಅವರು ಮರಳಿ ಬಂದಾಗ ಔದಾರ್ಯ ತೋರದೆ ಮುಖ ಮುಚ್ಚಿಕೊಂಡು ಗೋಡೆಯ ಕಡೆ ತಿರುಗಿ ಸಣ್ಣತನವನ್ನು ಪ್ರದರ್ಶಿಸುತ್ತಾನೆ. ಹೀಗೆ ಲಂಕೇಶರ ಸಾಹಿತ್ಯದಲ್ಲಿ ಮಾನವ ಸಣ್ಣತನದ ಜೊತೆಗೆ ಬೇಸರ, ಕ್ರೌರ್ಯ, ಅಸ್ವಸ್ಥತೆಯ ಪಾತಳಿಯ ಮೇಲೆ ಜೀವಿಸುತ್ತಾನೆ. ತಾತ್ಕಾಲಿಕವಾದ ವೈಯಕ್ತಿಕ ಮೌಲ್ಯಗಳು ಮುಖ್ಯವೆನಿಸುತ್ತವೆ. ಯಶವಂತ ಚಿತ್ತಾಲರ 'ಅಪರಿಚಿತರು', 'ಖಾಲಿ ಕೋಣೆ', ಸಂದರ್ಶನ,

'ಆಟ' ಮೊದಲಾದ ಕಥೆಗಳಲ್ಲಿನ ನಾಯಕರು ದೌರ್ಬಲ್ಯವನ್ನು ಮಡಿಲಲ್ಲಿ ಕಟ್ಟಿಕೊಂಡು ಬಂದವರು. 'ಅಪರಿಚಿತರು' ಮನೆಗೆ ಬಂದಾಗ ಅವರನ್ನು ಆದರಿಸುವ ರೀತಿ ನೀತಿ ತಿಳಿಯದೆ ಅವರ ಕೈಗೊಂಬೆಗಳಾಗಿ ವರ್ತಿಸಿ ತಮ್ಮ ದೌರ್ಬಲ್ಯವನ್ನು ಮೆರೆಯುತ್ತಾರೆ. 'ಖಾಲಿ ಕೋಣೆ'ಯಲ್ಲಿ ಪಕ್ಕದ ಕೋಣೆ ನವ ಯುವಕ ಬಾಡಿಗೆಗೆ ಬರುತ್ತಾನೆ ಎಂಬ ಸುದ್ದಿ ತಿಳಿದು ಅನೇಕ ಕನಸುಗಳನ್ನು ಕಟ್ಟಿದ ನಿರ್ಮಲೆ, ಅವನಿಗೆ ಪಾರ್ಶ್ವವಾಯು ಬಡಿದಿದೆ ಎಂಬ ಸುದ್ದಿ ತಿಳಿದ ತಕ್ಷಣ ಕಳಾಹೀನಳಾಗುತ್ತಾಳೆ. ಬದುಕನ್ನು ಸ್ವೀಕರಿಸುವ ಬಗೆ ಮತ್ತು ಕನಸು ಕಟ್ಟಿದ್ದನ್ನು ಅನುಭವಿಸುವ ಪರಿಯು ಏನೋ ತೊಂದರೆ ಇದೆ ಎಂದ ತಕ್ಷಣ ಹಿಂದೆ ಸರಿಯುವ ದೌರ್ಬಲ್ಯದ ಸ್ಥಿತಿಯು ಚಿತ್ತಾಲರ ಕಥೆಗಳ ಪಾತ್ರಗಳಲ್ಲಿದೆ. ಈ ದೌರ್ಬಲ್ಯಗಳ, ಅಸ್ಪಸ್ಪತೆಗಳ ಜೊತೆಗೆ ಲೈಂಗಿಕ ಅತೃಪ್ತಿ, ವಿಕಾರ ಭಾವನೆಗಳು ಎದ್ದು ನಿಲ್ಲುತ್ತವೆ.

ಅನಂತಮೂರ್ತಿ ಅವರ 'ನವಿಲುಗಳು', 'ಕ್ಲಿಪ್ ಜಾಯಿಂಟ್' ಕಥೆಗಳಲ್ಲಿನ ನಾಯಕರು ಸಹ ಸಂವೇದನಾ ಶೀಲ ಅಂತರ್ಮುಖಿ ಮನುಷ್ಯರಾಗಿ ದುರ್ಬಲತೆ, ನೈರಾಶ್ಯ ಮತ್ತು ಕೀಳುಭಾವನೆಯನ್ನು ಪ್ರದರ್ಶಿಸುತ್ತಾರೆ. 'ನವಿಲುಗಳು' ಕಥೆಯ ನಾಯಕನು ಯಾವ ಕೊರತೆಯಿರದಿದ್ದರೂ ನಿರ್ಗತಿಕನಾಗಿದ್ದಾನೆ. ಅಂತಹ ನೆಮ್ಮದಿಗೆ ನಗರಬಿಟ್ಟು ಹಳ್ಳಿಗೆ ಹೋಗಿ ನವಿಲುಗಳ ಜೊತೆ ಇರಲು ಪ್ರಯತ್ನಿಸುತ್ತಾನೆ. ಅಲ್ಲಿ ಅವನ ಸಹಜ ಮಾನಸಿಕ ಒತ್ತಡಗಳೇ ಕಾಡುತ್ತವೆ. 'ಕ್ಲಿಪ್ ಜಾಯಿಂಟ್' ಕಥೆಯ ಕೇಶವನು ತನ್ನ ಅಸ್ತಿತ್ವದ ಬಗ್ಗೆ ನಂಬಿಕೆ ಇರದೆ ಒಬ್ಬ ಮಾನವ ಎಂಬ ವಿವೇಕವಿದ್ದರೂ ಸ್ಟೂಲರ್ಟ್‌ನೊಂದಿಗೆ ಸೇರಿ ನಿರಾಶೆಯ ಪ್ರತಿಮೂರ್ತಿಯಾಗುತ್ತಾನೆ. ಹೊಸಬಾಳಿನ ಅನ್ವೇಷಣೆಯೇ ಅವನ ಗುರಿಯಾಗಿದ್ದರೂ ಅದನ್ನು ಪತ್ತೆ ಹಚ್ಚುವಲ್ಲಿ ತನ್ನ ಮಾನವೀಯ ಜವಾಬ್ದಾರಿಯನ್ನು ಮರೆತು ವರ್ತಿಸುತ್ತಾನೆ. ಅದೇ ರೀತಿಯಲ್ಲಿ 'ಸೂರ್ಯನ ಕುದುರೆ', 'ಆಕಾಶ ಮತ್ತು ಬೆಕ್ಕು' ಕಥೆಗಳಲ್ಲಿನ ನಾಯಕರು ತೀರಾ ಅಸಹಾಯಕರಂತೆ ಕಾಣುತ್ತಾರೆ. ಪೂರ್ಣಚಂದ್ರ ತೇಜಸ್ವಿ, ಚಂದ್ರಶೇಖರ ಕಂಬಾರ, ಶಾಂತಿನಾಥ ದೇಸಾಯಿ, ಆಲನಹಳ್ಳಿ ಕೃಷ್ಣ, ಗಿರೀಶ್ ಕಾರ್ನಾಡ್, ಮೊದಲಾದ ನವ್ಯ ಬರಹಗಾರರೆಲ್ಲ ಮಾನವೀಕರಣದ ಪ್ರಕ್ರಿಯೆಗಳನ್ನು ಬದಿಗೊತ್ತಿ ಮನುಷ್ಯನ ದೌರ್ಬಲ್ಯತೆಗಳನ್ನು ಎತ್ತಿ ಹಿಡಿದಿದ್ದಾರೆ.

ಪ್ರಗತಿಶೀಲ ಸಾಹಿತ್ಯದ ಸಂದರ್ಭದಲ್ಲಿ ಮಾನವೀಕರಣದ ಪರಿಕಲ್ಪನೆಯು ಒಂದು ಸ್ಪಷ್ಟ ರೂಪವನ್ನು ಪಡೆದುಕೊಳ್ಳತೊಡಗಿತು. ಪ್ರಗತಿಶೀಲರ ಧೋರಣೆಯೇ ಹೆಚ್ಚು ಕಮ್ಮಿ ಮಾನವೀಯ ಮೌಲ್ಯವನ್ನು ಸಂಕಥಿಸುವುದಾಗಿದೆ. ಈ ಸಂಕಥನವು ಮಾರ್ಕ್ಸ್ ಸಿದ್ಧಾಂತದ ಜೊತೆಗೆ ಬೆಸದು ಕೊಂಡಿದ್ದರಿಂದ ತುಂಬಾ ಮಹತ್ವದ ಪ್ರಗತಿಯನ್ನು ಸಾಧಿಸಲು ಅನುವಾಗಿದೆ. ಮುಲ್ಕ್‌ರಾಜ್ ಆನಂದ್, ಕೆ.ವಿ.ಅಬ್ಬಾಸ್ ಅವರಂತಹವರ ಮೂಲಕ ಕನ್ನಡದ ಅನಕೃ, ಬಸವರಾಜ ಕಟ್ಟೀಮನಿ, ನಿರಂಜನ, ಅರ್ಚಕ ವೆಂಕಟೇಶ ಅವರ ಕಥೆ, ಕಾದಂಬರಿಗಳಲ್ಲಿ ಮಾನವೀಕರಣವು ಅನುಸಂಧಾನ ಹೊಂದಿತು.

ನಿರಂಜನ ಅವರ 'ಒಂದು ನಮೂನೆಯ ಹುಡುಗ' ಮತ್ತು 'ಉತ್ಸವ ಭೋಜನ'ಗಳಂತಹ ಕಥೆಗಳು ಈ ಪ್ರಕಾರದ ನಿಲುವಿನ ಪರಿಧಿಗೆ ಸೇರುತ್ತವೆ. ಮಾನಸಿಕ ಘರ್ಷಣೆಯೊಂದಿಗೆ ಸಮಾಜದ ಸಮಸ್ಯೆಗಳನ್ನು ಅರ್ಥಮಾಡಿಕೊಂಡು ಮಾನವೀಯವಾಗಿ ಸ್ಪಂದಿಸುವ ಗುಣ ಇವರ ಕಥೆಗಳಲ್ಲಿ ಅನಾವರಣಗೊಳ್ಳುತ್ತದೆ. ಸಾಮಾಜಿಕ ವಿನ್ಯಾಸದೊಳಗಿನಿಂದಲೇ ವ್ಯವಸ್ಥೆಯ ವಿರುದ್ಧ ಮತ್ತು ಸಾಂಪ್ರದಾಯಿಕ ಅಂಗೀಕೃತ ಮೌಲ್ಯಗಳ ವಿರುದ್ಧ ಧ್ವನಿ ಎತ್ತುವ ಶಾಂತ ಪ್ರತಿಭಟನೆಯು ಮಾನವೀಯ ಹೋರಾಟದ ಮತ್ತೊಂದು ಶಿಸ್ತಾಗಿ ಕಾಣುತ್ತದೆ. ಈ ಶಿಸ್ತಿನ ಸಾಲಿನಲ್ಲಿ 'ಕೊನೆಗಿರಾಕಿ', 'ತಿರುಕಣ್ಣನ ಮತದಾನ' ಕಥೆಗಳು ಪ್ರದರ್ಶನಗೊಳ್ಳುತ್ತವೆ.

ಬಸವರಾಜ ಕಟ್ಟಿಮನಿಯವರ 'ಗಿರಿಜಾ ಕಂಡ ಸಿನಿಮಾ' ಕಥೆಯು ಬಡತನದ ಭೀಕರತೆಯ ಚಿತ್ರವನ್ನು ತೋರಿಸುವುದರ ಜೊತೆಗೆ ರಾಜಶೇಖರನು ಗಿರಿಜಾಳಿಗೆ ತೋರಿಸುವ ಘಟನೆಗಳ ಹಿಂದಿರುವ ಅಮಾನವೀಯ ವರ್ತನೆ ಮತ್ತು ಸ್ಪಂದಿಸಬಹುದಾದ ಮಾನವೀಯ ಕಾಳಜಿಗಳನ್ನು ತೋರಿಸುತ್ತದೆ. ಕೋ.ಚೆ. ಅವರ ಕಥೆಗಳಲ್ಲಿ ಗ್ರಾಮೀಣ ಬದುಕಿನ ಮಾನವೀಯ ಮೌಲ್ಯಗಳು ಸ್ಪಷ್ಟವಾಗಿ ಗೋಚರಿಸುತ್ತವೆ. ಹಳ್ಳಿಗಾಡಿನ ಮಾನವರ ಜೀವನವು ಪಾರಸ್ಪರಿಕ ಹೊಂದಾಣಿಕೆಯಿಂದ ಕಷ್ಟದ ಸಂದರ್ಭದಲ್ಲಿ ಇಡೀ ಹಳ್ಳಿಯವರೆಲ್ಲ ಒಂದೇ ಮನೆಯವರಾಗಿ ನಡೆಯುವ ರಕ್ತಗತ ಗುಣವು ಕೋ.ಚೆ. ಅವರ ಅನೇಕ ಕಥೆಗಳ ಪಾತ್ರಗಳ ನರನಾಡಿಗಳಲ್ಲಿ ಸೇರಿಕೊಂಡಿದೆ. ಮೂಲತಃ ನ್ಯಾಯವಾದಿಗಳಾದ ಇವರು ಗ್ರಾಮೀಣ ಜನತೆಯ ಕಷ್ಟಗಳಿಗೆ ಮಾನವೀಯವಾಗಿ ಸ್ಪಂದಿಸಿದವರು. ಅಂತಲೇ ಅವರ ಕಥೆಗಳಿಗೂ-ಅವರ ಜೀವನಕ್ಕೂ ಅವಿನಾಭಾವ ಸಂಬಂಧ ಏರ್ಪಟ್ಟಿದೆ. 'ಗಡಿವಾರು' ಸಂಕಲನದಲ್ಲಿ ಅನೇಕ ಕಥೆಗಳು ಜನ್ಮಜಾತವಾಗಿ ಮಾನವೀಯ ಅಂಶಗಳನ್ನು ಒಳಗೊಂಡಿವೆ. 'ಮುಕ್ಕಣ್ಣನ ಮುಕ್ತಿ' ಹಾಗೂ 'ದಾಸರಯ್ಯನ ಪಟ್ಟಿ' ಕಥೆಗಳಂತೂ ಗ್ರಾಮೀಣ ಬದುಕಿನೊಂದಿಗೆ ಬೆಸೆದುಕೊಂಡು ಬಿಟ್ಟಿವೆ.

ಬಸವರಾಜ ಕಟ್ಟೀಮನಿಯವರ 'ತಾರನಾಳದ ಸಾವಿತ್ರಿ', 'ಜಟ್ಟಿಯ ಪ್ರೀತಿ', 'ಕುಂಭಕರ್ಣ' ಮೊದಲಾದ ಕಥೆಗಳು ನೊಂದವರ ಜೊತೆಗೆ ಮಾನವೀಯ ಸಂವಾದವನ್ನು ಮಿಡಿಯುತ್ತವೆ. ಇವರ ಕಥೆಗಳಲ್ಲಿ ಸಾಮಾಜೀಕರಣ ಮತ್ತು ಮಾನವೀಕರಣದ ಪ್ರಕ್ರಿಯೆಗಳೇ ಸಿಂಹಪಾಲನ್ನು ಪಡೆದಿವೆ. ಕಾದಂಬರಿಯಲ್ಲಿ ಸಿದ್ಧಹಸ್ತರಾದ ಇವರು ಕಥೆಗಳಲ್ಲೂ ಮನೋಜ್ಞ ನಿರೂಪಣೆಯನ್ನು ಸಾಧಿಸಿದ್ದಾರೆ. ಊಳಿಗಮಾನ್ಯ ಪದ್ಧತಿ ಯಲ್ಲಿರುವ ಅಮಾನವೀಯತೆಯನ್ನು ಪ್ರಶ್ನೆ ಮಾಡಿ-ಅವರ ವಿರುದ್ಧ ನೈತಿಕತೆಯನ್ನು ಎತ್ತಿ ಕಟ್ಟುವುದು ಇವರ ಕಥೆಗಳ ಮುಖ್ಯ ಕಾರ್ಯವಾಗಿದೆ. ''ಕಾಂಪೋಜಿಟರ್ ಸಂಕಲನದಲ್ಲಿಯ ಕವನಗಳಲ್ಲಿ ಸಾಮಾಜಿಕ ಕಾಳಜಿ, ಬಡತನ, ಹಸಿವು, ದಾರಿದ್ರ್ಯದ ಬಗ್ಗೆ ಕವಿಯ ಪ್ರತಿಭಟನಾತ್ಮಕ ಧ್ವನಿಯ ಜೊತೆಗೆ, ಮಾನವೀಯ ಎಳೆಗಳು ಹುರಿಗೊಂಡು ಹೊಸೆಯಲ್ಪಟ್ಟವೆ''[೫೮]

ದಲಿತ ಮತ್ತು ಬಂಡಾಯ ಸಾಹಿತ್ಯದಲ್ಲಿ ಮಾನವೀಕರಣದ ಪ್ರಕ್ರಿಯೆಗಳ ಬೆಳವಣಿಗೆಗಿಂತಲೂ ಅಮಾನವೀಕರಣದ ತಾಂಡವ ನೃತ್ಯದ ವಿರುದ್ಧ ಪ್ರತಿಭಟನೆಯೇ ಹೆಚ್ಚಾಯಿತು. ಪ್ರತಿಭಟನೆಯೂ ಸಹ ಮನುಷ್ಯತ್ವದ ಮುಖ್ಯ ಲಕ್ಷಣ. ಪ್ರತಿಭಟಿಸದಿದ್ದರೆ ಅಮಾನವೀಕರಣ-ದಬ್ಬಾಳಿಕೆ-ಶೋಷಣೆಯೇ ಮುಂದುವರಿಯುತ್ತದೆ. ಈ ಸಾಹಿತ್ಯದ ಕೃತಿಗಳಲ್ಲಿ ಹಸಿದ ಮನುಷ್ಯರು-ನೊಂದ ಜೀವಗಳು ಅನ್ನ ಆಶ್ರಯವನ್ನು ಪಡೆಯುವುದರಲ್ಲೇ ಸಾವಿನ ಗುರಿ ತಲುಪಿ ಬಿಡುತ್ತಾರೆ. ಸ್ವಲ್ಪ ಅರಿತ ತಿಳುವಳಿಕೆಯ ಪಾತ್ರ ಮಾತ್ರ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸುವ ಅಮಾನವೀಯತೆಯನ್ನು ಪ್ರಶ್ನಿಸುವ ಸಾಹಸ ಮಾಡಬಲ್ಲದು. ದೇವನೂರು ಮಹಾದೇವ, ಕುಂ.ವೀ., ಚನ್ನಣ್ಣ ವಾಲೀಕಾರ, ಕರೀಗೌಡ ಬೀಚನಹಳ್ಳಿ, ಬರಗೂರು ರಾಮ ಚಂದ್ರಪ್ಪ, ಅಮರೇಶ ನುಗಡೋಣಿ ಅವರ ಕಥೆಗಳಲ್ಲಿ ಅಮಾನವೀಯತೆಯ ಯಾತನೆಯನ್ನು ಕ್ರೂರವಾಗಿ ಅನುಭವಿಸುವ, ಕೊನೆಗೊಮ್ಮೆ ಅದರ ವಿರುದ್ಧ ಸೆಟೆದು ನಿಲ್ಲುವ, ತೀರ ಬದಲಾವಣೆಯಾಗುತ್ತಿವೆ ಎಂದು ಎಲ್ಲೋ ದಿಗಂತದಚಿನಲಿ ಕಾಣುವ ಆಶಯದತ್ತ ಹಣೆ ಮುಂದೆ ಕೈ ಮರೆ ಮಾಡಿ ನೋಡುವ ಚಿತ್ರಗಳೇ ತುಂಬಿವೆ.

ಕುಂ.ವೀ ಅವರ 'ಕತ್ತಲನು ತ್ರಿಶೂಲ ಹಿಡಿದ ಕಥೆ'ಯಲ್ಲಿ ಜೀವಿತಾವಧಿಯಲ್ಲಿ ಹೆಚ್ಚು ಕಾಲವನ್ನು ಗೌಡರ ಸೇವೆಗೆ ಮುಡುಪಾಗಿಟ್ಟಿದ್ದ ಕತ್ತಲನು ಗೌಡರ ಬಲಾತ್ಕಾರಕ್ಕೆ ಬಲಿಯಾಗಿದ್ದನು. ತನ್ನ ಮಕ್ಕಳನ್ನೆ ತನಗೆ ಸೇರಿಲ್ಲವೆಂದು ಹುಟ್ಟುತ್ತಲೇ ಕೊಲ್ಲುತ್ತಿದ್ದ ಅಮಾನವೀಯ ಹೆಂಡತಿಯನ್ನ ಮಾನವೀಯವಾಗಿಯೇ ಕತ್ತಲನು ಪ್ರೀತಿಸುತ್ತಿದ್ದ. ಹಸಿವು ನೀಗಿಸಿಕೊಳ್ಳಲು ನಾಲ್ಕು ಜೋಳದ ತೆನೆಗಳನ್ನು ಕದಿಯುತ್ತಾನೆ. ಈ ಕಾರಣಕ್ಕಾಗಿ ಹಸಿ ದಂಟಿನಿಂದ ಹೊಡೆತ ತಿನ್ನುತ್ತಾನೆ. ಹಸಿದ ಮನುಷ್ಯನನ್ನು ಎದುರಿಗಿಟ್ಟುಕೊಂಡೇ ಹಳಸಿದ ಅನ್ನವನ್ನ ತಿಪ್ಪೆಗೆ ಹಾಕುವ ಗೌಡತಿ, ಬಿಸಿ ಅನ್ನವನ್ನ ನಾಯಿಗೆ ಹಾಕುವ ಗೌಡರ ಮಗ ಇವರಿಗೆ ಮಾನವೀಯ ಮನಸ್ಸೇ ಇಲ್ಲವಾಗಿರುತ್ತದೆ. ಕೊನೆಗೆ ಗುಡಿಗೆ ನುಗ್ಗಿ ಹೊಟ್ಟೆತುಂಬ ತಿಂದ ಕತ್ತಲನನ್ನು ಹಿಡಿದು ದಂಡನೆಗೆ ಒಳಗಾಗಿ- ತಕ್ಷಣ ದೇವರ ತ್ರಿಶೂಲ ಹಿಡಿದು ರೌದ್ರಾವತಾರ ತಾಳಿ ನಿಲ್ಲುತ್ತಾನೆ. ಅವನ ನೊಂದ ಮನಸ್ಸಿನ ಪ್ರತಿಭಟನೆಯು ತೀರಾ ಉಗ್ರವಾಗಿರುತ್ತದೆ. ಅಸ್ಪೃಶ್ಯತೆ, ಧಾರ್ಮಿಕ ಅಸಮಾನತೆ, ಅಮಾನವೀಕರಣದ ವಿರುದ್ಧ ಎದ್ದು ನಿಲ್ಲುವ ಉಗ್ರ ಸ್ವರೂಪಿ ಮಾನವನಾಗಿದ್ದಾನೆ.

ಅಂತೆಯೇ ದೇವನೂರು ಮಹದೇವ ಅವರ 'ಒಡಲಾಳ' ಕಥೆಯಲ್ಲಿನ ಸಾಕವ್ವನ ಹಸಿವು ಕೂಡ ಅಸಹನೀಯವಾಗಿ ಗೋಚರವಾಗುತ್ತದೆ. ತನ್ನ ಹಸಿವನ್ನು ಹಿಂಗಿಸಿಕೊಳ್ಳಲು ಹಟ್ಟಿಯವರು ಕಡಲೇಕಾಯಿ ಮೂಟೆಯನ್ನ ಖಾಲಿ ಮಾಡುವ ರೀತಿ ತೀರಾ ವ್ಯಥನದಾಯಕವಾಗಿದೆ. ಕಳೆದ ಮೂಟೆಯನ್ನು ಕಂಡುಹಿಡಿಯಲಾಗದ ಪೋಲೀಸರ ಸೋಲು ಒಪ್ಪಿಕೊಳ್ಳದ ದೌರ್ಜನ್ಯದ ಮುಖ ಮತ್ತು ಸಾಕವ್ವನ ಹುಂಜವನ್ನೇ ಹಾರಿಸುವ ಪೋಲಿಸರ ಮಾನವೀಯ(ಅಮಾನವೀಯವಾದರೂ) ವರ್ತನೆಯು

ವ್ಯವಸ್ಥೆಯಲ್ಲಿನ ಬಿರುಕುಗಳಾಗಿ ಕಾಣುತ್ತವೆ. ಪೋಲಿಸರ ದೌರ್ಜನ್ಯವು ಮತ್ತು ಅದನ್ನು ಸಹಿಸುವ ಪುಟಗೌರಿಯ ಮನಸ್ಸು ಮತ್ತು ಗಲ್ಲಗಳು ಅಮಾನವೀಕರಣವನ್ನು ಪ್ರಚೋದಿಸುತ್ತವೆಯೇ? ಅಥವಾ ಮಾನವೀಕರಣದ ನೋವನ್ನು ಹೇಳಲು ತೊಡಗುತ್ತವೆಯೇ? ಎಂಬುದು ಒಗಟಾಗಿ ಉಳಿಯುತ್ತದೆ.

ಅಸ್ಪೃಶ್ಯತೆಯಂತಹ ಪಿಡುಗು ಉತ್ಪಾದನೆಯಾದದ್ದೇ ಜಾತಿ ವ್ಯವಸ್ಥೆಯಿಂದ. ಮಾನವನ ಸಮಾಜದಲ್ಲಿ ಇದೊಂದು ಭೀಕರವಾದ ಸಮಸ್ಯೆಯನ್ನು ಹುಟ್ಟುಹಾಕಿದೆ. ಮನುಷ್ಯನ ಪ್ರತಿಭೆ, ಗುಣ ಸಂಪನ್ನತೆಗಳನ್ನು ಗುರುತಿಸಿ ಅಳೆಯಬೇಕಾದ ಪರಿಸ್ಥಿತಿ ಬರದೆ ಜಾತಿಯಿಂದ ಗುರುತಿಸುವುದು ತೀರಾ ಹೇಯವಾದ ಕೆಲಸ. ಈ ವ್ಯವಸ್ಥೆಯನ್ನು ದಲಿತ ಬಂಡಾಯ ಸಾಹಿತ್ಯವು ಒಂದು ಕಡೆ ತೊಲಗಿಸಲು ಪ್ರಯತ್ನಿಸಿತು ನಿಜ. ಆದರೆ ಅದರ ಬೆನ್ನಲ್ಲೆ ವೈಭವೀಕರಣದಿಂದಾಗಿ ಆ ವ್ಯವಸ್ಥೆಯನ್ನ ಉಳಿಸಿ ಬಿಟ್ಟಿತು. ಮೇಲ್ವರ್ಗದ ಜನತೆ ತೀರಾ ಹತ್ತಿರದಿಂದ ನೋಡುವ ಬದಲು ಮನದಲ್ಲೆ ಮರುಗಿ ಯಥಾವತ್ತಾಗಿ ದೂರೀಕರಿಸಲು ಪ್ರಯತ್ನಿಸಿದರು. ಹೀಗಾಗಿ ದಲಿತರು ಎಂಬ ಪದವೇ ನಾಶವಾಗ ಬೇಕಿದ್ದ ಸಂದರ್ಭ ಹೋಗಿ 'ದಲಿತರು'ಎಂಬ ಹಣೆ ಪಟ್ಟ ಕಟ್ಟಿ ಮೆರೆಯುವ ಹುಚ್ಚು ಸಾಹಸಗಳು ನಿರ್ಮಾಣವಾದವು.

ಈ ರೀತಿಯ ಬೆಳವಣಿಗೆಯಿಂದ ಮಾನವೀಕರಣವು ದಲಿತ-ಬಂಡಾಯ ಸಾಹಿತ್ಯದಲ್ಲಿ ವಿಶೇಷವಾದ ರೂಪವನ್ನು ಪಡೆಯತೊಡಗಿತು. ಅಲ್ಲದೆ "ದಲಿತರನ್ನು ಹೀನವಾಗಿ ಕಂಡು ಸಂಕುಚಿತಗೊಳಿಸುತ್ತ ಇನ್ನೊಂದು ಕಡೆ ಮುಸ್ಲಿಮರನ್ನು ಅನುಮಾನದಿಂದ ಕಂಡು ಸಂಕುಚಿತಗೊಳಿಸುತ್ತ ಬಂದಿರುವುದು ಇಲ್ಲಿನ ಪರಂಪರೆಯಾಗಿದೆ"[೫೯] 'ಬಂದೂಕಿನ ನಳಿಗೆಯಲ್ಲಿ ಗುಬ್ಬಿಗಳು ಗೂಡು ಕಟ್ಟುವ ಮಾನವೀಯ ಆಶಯಗಳನ್ನು ಹೊತ್ತ ಬಂಡಾಯ ಸಾಹಿತ್ಯವು ದೇವನೂರು ಮಹಾದೇವ, ಕಾಳೇಗೌಡ ನಾಗವಾರ ಮತ್ತು ರಂಜನ್ ದರ್ಗಾ ಅವರ ಸಾಹಿತ್ಯದಲ್ಲಿ ಸಾರ್ಥಕವನ್ನು ಪಡೆಯುತ್ತದೆ. ಈ ಆಶಯವನ್ನು ಜಾಗತಿಕ ಮಟ್ಟದಲ್ಲಿ ಬೆಂಜಾಮನ್ ಮತ್ತು ನೆಲ್ಸನ್ ಮಂಡೇಲಾರಂಥ ಹೋರಾಟಗಾರರು ಪೋಷಿಸಿದರು. ಬಂಡಾಯದ ಕವಿಗಳಲ್ಲಿ "ರಾಜಾಶ್ರಯವನ್ನು 'ಮಾನವೀಕರಣ'ಗೊಳಿಸುವಿಕೆಯು ಮುಖ್ಯ ಕವಿಗಳಲ್ಲಿ ಇತ್ತಾದರೂ ಪುಡಾರಿ ರಾಜಕಾರಣವನ್ನು ನಿಂದಿಸುವುದೇ ಬಹಳ ಕವಿಗಳಲ್ಲಿ ಕಂಡಿತು. ಇದು ರಾಜಾಶ್ರಯದ ಬಗೆಗಿನ ಸಿಕಕತನವನ್ನೂ ಜುಗುಪ್ಸೆಯನ್ನು ಕೂಡ ತೋರಿಸಿತು."[೬೦]

ಅಕ್ಷರ ಸಂಸ್ಕೃತಿಯುಳ್ಳ ಸಮುದಾಯ ಮತ್ತು ಅನಕ್ಷರಸ್ಥ ಸಮುದಾಯಗಳಲ್ಲಿ ಕಂಡುಬರುವ ಮಾನವೀಕರಣ-ಇದರಿಂದ ಆಳ ಅಗಲಗಳ ನಿರ್ಧಾರ. ಪ್ರತಿನಿತ್ಯ ನಾವು ವ್ಯವಹರಿಸುವ ಸಂದರ್ಭದಲ್ಲಿ 'ನನ್ನದಲ್ಲದ-ನಾವಲ್ಲದ', 'ನಮ್ಮದಲ್ಲದ-ನಮ್ಮವರಲ್ಲದ', ನೋವುಗಳು ಇತರರ ನೋವುಗಳಾಗಿ ಅವಜ್ಞೆಗೆ ಗುರಿ ಮಾಡುತ್ತವೆ. ಅಕಸ್ಮಾತ್ 'ನನಗೆ' ಸಂಬಂಧಿಸಿದ Relationshipನ Ego ಬಂದಿತೆಂದರೆ ಉಂಟಾಗುವ ಮಾನವೀಕರಣವೇ ಬೇರೆ. ಮೊದಲಿನ ಇತರರ ನೋವುಗಳು ಅನುಭವಿಸಿ

ದ್ದರೆ ಮಾತ್ರ ಅರ್ಥವಾಗಬಲ್ಲವು-ಅರ್ಥಕ್ಕೆ ತಕ್ಕಂತೆ ಸ್ಪಂದಿಸಬಲ್ಲರು. ಅಂತೆಯೇ 'ನೊಂದವರ ನೋವ ನೋಯದವರೆತ್ತ ಬಲ್ಲರು'ಎಂದಿರುವುದು.

ಉದಾರತಾವಾದ ಮತ್ತು ಮಾನವತಾವಾದಗಳನ್ನು ಇಂದಿನ ಸೈದ್ಧಾಂತಿಕ ಸನ್ನಿವೇಶದಲ್ಲಿ ಅಷ್ಟೊಂದು ಸಹಾನುಭೂತಿಯಿಂದ ಪರಿಶೀಲಿಸುತ್ತಿಲ್ಲ. ಎಲ್ಲೋ ಒಂದು ಕಡೆ ಅವು ಸಾಮಾಜಿಕ ಅಸಮಾನತೆಗಳನ್ನು ಶಾಶ್ವತವಾಗಿ ಉಳಿಸಲೆಂದು ಹಮ್ಮಿಕೊಳ್ಳುವ ಕೇವಲ ತೇಲು ಮೇಲು ನೆಲೆಯ ಪರಿಹಾರೋಪಾಯಗಳೆಂಬ ವಾದವನ್ನು ಮಂಡಿಸಲಾಗಿದೆ. ಏಕೆಂದರೆ ಇವು ಸಮಾಜದ ವರ್ಣ, ವರ್ಗ, ಲಿಂಗ ಆಧಾರಿತ ವಿಭಜನೆಯನ್ನ ಒಪ್ಪಿಕೊಳ್ಳುವ ಅಥವಾ ಅವನ್ನು ನಿರ್ಮೂಲನ ಮಾಡಬೇಕೆನ್ನುವ ಧೋರಣೆಯನ್ನು ಎಂದಿಗೂ ವ್ಯಕ್ತಪಡಿಸಲಿಲ್ಲ. ನವೋದಯ ಸಂದರ್ಭದ ಅನೇಕ ಸಾಹಿತಿಗಳು ಜಾತಿ ವ್ಯವಸ್ಥೆ ಮತ್ತು ಚೌಕಟ್ಟಿನೊಳಗೆಯೇ ಮಾನವತೆಯನ್ನು ತರುವ ಪ್ರಯತ್ನ ಮಾಡಿದರು. ನವ್ಯದವರು ವ್ಯಕ್ತಿಯ ಮೂಲಕ ಸಾಧಿಸ ಹೊರಟರು. ಪ್ರಗತಿಶೀಲರು ಸಾಮಾಜಿಕ ವ್ಯವಸ್ಥೆಯ ವರ್ಗಗಳನ್ನು ವಿರೋಧಿಸಿ ಮಾನವತೆಯನ್ನು ಕಂಡುಕೊಳ್ಳಲು ಪ್ರಯತ್ನಿಸಿದರು. ದಲಿತ ಬಂಡಾಯದ ಬರಹಗಾರರು ವರ್ಣ-ಜಾತಿ-ಮತಗಳ ಧೋರಣೆಗಳನ್ನು ಖಂಡಿಸಿ ಮಾನವತೆಯನ್ನು ತರಲು ಪ್ರಯತ್ನಿಸಿದರು.

## ಮಾನವತಾವಾದ ಮತ್ತು ಇತರೆ ವಾದಗಳು

ಮನುಷ್ಯನ ಸ್ವಭಾವವನ್ನು ಅವಲಂಬಿಸಿ ಪಾಶ್ಚಾತ್ಯ ಚಿಂತಕರು ಅನೇಕ ಸಿದ್ಧಾಂತಗಳನ್ನು ಹುಟ್ಟಿಹಾಕಿದ್ದಾರೆ. ಅಲ್ಲದೆ ಸಹಜ ಗುಣ ಅಥವಾ ಹೆಚ್ಚುವರಿಯ ವಿಶೇಷ ಗುಣಗಳನ್ನು ಆಧರಿಸಿಯೂ ಸಿದ್ಧಾಂತಗಳು ಬೆಳೆದಿವೆ. ಈ ಎರಡೂ ನಿಟ್ಟಿನಲ್ಲಿ ಅಭಿಜಾತವಾದ, ರಮ್ಯವಾದ, ಆದರ್ಶವಾದ, ಸೌಂದರ್ಯವಾದ, ವಾಸ್ತವವಾದ, ನೈಜವಾದ, ಮುದ್ರಾವಾದ(ಅಂತರ್ಭಾವವಾದ), ಅಭಿವ್ಯಕ್ತಿವಾದ, ಅಸ್ತಿತ್ವವಾದ, ನವ್ಯವಾದ, ಪ್ರಜ್ಞಾಪ್ರವಾಹ ತಂತ್ರ ಈ ಮೊದಲಾದ ವಾದಗಳು ಆವಿಷ್ಕಾರಗೊಂಡಿವೆ. ಈ ಎಲ್ಲವಾದಗಳು ಮಾನವತಾವಾದದೊಂದಿಗೆ ಅಂತರ್ಗತದಲ್ಲಿ ಸೂಕ್ಷ್ಮ ಸಂಬಂಧ ಹೊಂದಿವೆ.

'ಅಭಿಜಾತವಾದ'ದ ಮುಖ್ಯ ಲಕ್ಷಣಗಳಾದ ವಸ್ತುನಿಷ್ಠ ದೃಷ್ಟಿ, ರೂಪ, ಔಚಿತ್ಯ, ಕ್ರಮಬದ್ಧತೆ-ವೈಚಾರಿಕತೆ, ಸ್ಪಷ್ಟತೆ-ಸರಳತೆ ಹಾಗೂ ಸಂಯಮಗಳು ಮಾನವತಾವಾದದ ಸಾಮಾನ್ಯ ಅಂಶಗಳಾಗಿವೆ. ಹೀಗಾಗಿ ಮಾನವೀಕರಣದ ಬೇರುಗಳು ಅಭಿಜಾತವಾದದಲ್ಲಿಯೂ ಚಾಚಿಕೊಂಡಿವೆ. ಸಾಹಿತ್ಯದ ಹೊಸ ದೃಷ್ಟಿಕೋನವಾಗಿರುವ 'ರಮ್ಯವಾದ'ದ ಗುಣಗಳಾದ ಸೂಕ್ಷ್ಮಜ್ಞತೆ, ಬೌದ್ಧಿಕ ಕುತೂಹಲ, ಜೀವನದ ಸರಳ ಪ್ರವೃತ್ತಿಗಳು ಮಾನವೀಕರಣದ ಮೆಟ್ಟಿಲುಗಳಾಗಿವೆ. ಮಾನವತಾವಾದದ ತಿರುಳನ್ನು ತನ್ನ ಕಲ್ಪನೆಯ ತೊಟ್ಟಿಲಲ್ಲಿಟ್ಟು ತೂಗುವ ಆದರ್ಶವಾದ ಸ್ವಲ್ಪ ಮಾತ್ರ ಹತ್ತಿರವಾಗುತ್ತದೆ. ಅಂದರೆ ಆದರ್ಶವಾದ ಅನುಷ್ಠಾನಕ್ಕೆ ನಿಲುಕದ ಕೆಲ ತತ್ತ್ವಗಳನ್ನು ಬೋಧಿಸುತ್ತದೆ. ಅನುಷ್ಠಾನಕ್ಕೆ ಅನುವಲ್ಲದ

ತತ್ತ್ವಗಳು ಬರೀ ತತ್ವಗಳಾಗುತ್ತವೆ. ಅವುಗಳಿಂದ ಪರಿಣಾಮ ಶೂನ್ಯ. ಇಂತಹ ತತ್ವಗಳನ್ನು ಮಾತ್ರ ಮಾನವೀಕರಣ ಒಪ್ಪಲಾರದು. ಉಳಿದಂತೆ ಸಮ್ಮಿಳಿತಗೊಳ್ಳುತ್ತದೆ. 'ಸೌಂದರ್ಯವಾದ'ದಲ್ಲಿ ಮಾನವತಾವಾದದ ಆಶ್ರಯತ್ವವನ್ನು ನೋಡತೊಡಗಿದರೆ; ಮನುಷ್ಯನ ಸರ್ವಶಕ್ತಿ, ಸರ್ವ ಸಂವೇದನೆ ಕೇಂದ್ರೀಕರಣಗೊಂಡಿರುವುದು ರಸಾಸ್ವಾದನೆ ಹಾಗೂ ಸೌಂದರ್ಯ ಪ್ರಜ್ಞೆಯಲ್ಲಿ ಎಂಬುದು ಸರ್ವವಿದಿತ. ಆದರೆ ಕೆಲವೊಮ್ಮೆ 'ಜೀವನಕ್ಕಾಗಿ ಕಲೆ; ಬದುಕಿನ ಹೋರಾಟ'ವೆಂದಾಗ ಸೌಂದರ್ಯದ ಪ್ರಜ್ಞೆ ಅಮುಖ್ಯವಾಗುತ್ತದೆ. ಚೋಮನಂತಹ ಬಡವನಿಗೆ ತನ್ನ ಹೊಟ್ಟೆಯ ಹಸಿವು ನೀಗಿಸುವ ಕೂಲಿ ಮುಖ್ಯವಾಗುತ್ತದೆಯೇ ಹೊರತು ಸೌಂದರ್ಯ ಪ್ರಜ್ಞೆಯಲ್ಲ. ಅದೇರೀತಿ ರಾಧಾಕೃಷ್ಣನಿಗೆ ಶಾಲಾಮಕ್ಕಳು ಬದುಕುವ ದಾರಿ ಅರಿಯಬೇಕು, ಪ್ರವಾಹದ ಸುಳಿಯಲ್ಲಿ ಸಿಕ್ಕ ಹೊಲೆಯರು ಬದುಕಬೇಕು ಎನ್ನುವ ಮಾನವೀಯ ಹೋರಾಟ ಮುಖ್ಯವಾಗುತ್ತದೆಯೇ ಹೊರತು 'ಪ್ರವಾಹ ಎಷ್ಟು ಸುಂದರವಾಗಿ ಭೋರ್ಗರೆಯುತ್ತದೆ ಅಹಾ!' ಎಂದು ಸುಭಗತೆಯನ್ನು ಆಸ್ವಾದಿಸುವ ಸೌಂದರ್ಯ ಮುಖ್ಯವಲ್ಲ.

'ವಾಸ್ತವತಾವಾದ'ವು ಮಾನವತಾವಾದಕ್ಕೆ ತೀರಾ ಹತ್ತಿರವಾಗುತ್ತದೆ. ರಮ್ಯವಾದ ಕಲ್ಪನೆಯನ್ನು, ಸೌಂದರ್ಯವಾದ ತೋರಿಕೆಯ ಸೌಂದರ್ಯವನ್ನು ಗಮನಿಸುತ್ತಾ ಬಾಹ್ಯ ನೋಟದಲ್ಲಿ ಸಾಗುತ್ತದೆ. ಆದರೆ ವಾಸ್ತವವಾದ ಮಾತ್ರ ಬಾಹ್ಯ-ಆಂತರ್ಯಗಳೆರಡನ್ನೂ ಅವಲೋಕಿಸುತ್ತದೆ. ಸಾಮಾನ್ಯರಿಂದ ಸಾಮಾನ್ಯ ವಿಷಯಗಳನ್ನೂ ಪರಾಂಬರಿಸುತ್ತದೆಯಾದ್ದರಿಂದ ಮಾನವತಾವಾದದೊಂದಿಗೆ ಸಾಮೀಪ್ಯ ಹೊಂದುತ್ತದೆ. ಸಾಹಿತ್ಯದಲ್ಲಿ ಮಾನವೀಯ ಪರಂಪರೆಯನ್ನು ಶ್ರೀಮಂತಗೊಳಿಸಲಾಗಿದೆ. ವಾಸ್ತವತಾ ವಾದವು ಮಾನವತಾವಾದದ ಇನ್ನೊಂದು ಮುಖವೇ ಆಗಿದೆ. ವಸ್ತುನಿಷ್ಠವಾದ ಸ್ಪಷ್ಟವಾದ ಹಾಗೂ ಆಡಂಬರಕ್ಕೆ ಮಾನ್ಯತೆ ಕೊಡದ ಚಿತ್ರಣವು ವಾಸ್ತವತಾವಾದದಲ್ಲಿ ಇರುತ್ತದೆ. ಇದೇ ರೀತಿಯ ಅಂಶಗಳನ್ನು ಮಾನವತಾವದವೂ ಒಳಗೊಂಡಿದೆ. ಈ ಎರಡೂ ವಾದಗಳ ಸಮ್ಮಿಳಿತ ಶಿವರಾಮ ಕಾರಂತರ ಬರಹಗಳಲ್ಲಿ ಕಾಣಬಹುದಾಗಿದೆ. ''ನಾಟಕದಲ್ಲಿ ಸಾಮಾನ್ಯವಾಗಿ-ನಾವು ಮಾನವ ಕುಲಕ್ಕೆ ಸಂಬಂಧಪಟ್ಟ ಪ್ರಶ್ನೆಗಳನ್ನು ಎತ್ತಿಕೊಳ್ಳುತ್ತೇವೆ. ದೇವ, ದಾನವರನ್ನು ತರುವ ಪೌರಾಣಿಕ ಕತೆಗಳೂ ಉಂಟು. ಅವರುಗಳು ಬಂದ ಮಾತ್ರದಿಂದ ನಾಟಕ ಅವಾಸ್ತವಿಕವಾಗಬೇಕಾಗಿಲ್ಲ. ಕಾರಣ - ಈ ತನಕ ಮಾನವನು ಚಿತ್ರಿಸಿದ ಯಾವತ್ತು ದಾನವರು, ದೇವರು, ದೇವತೆಗಳು-ಮಾನವೀ ಧರ್ಮದ ಮಟ್ಟವನ್ನು ಮೀರಿ ನಿಂತಿಲ್ಲ; ಮೀರುವುದು ಶಕ್ಯವೂ ಅಲ್ಲ. ನಿಜವಾದ ದೇವ ದಾನವರಿದ್ದರೆ ಅವರ ಪರಿಚಯ ಮಾನವನ ತಿಳಿವಿಗೆ ಇನ್ನೂ ಅತೀತವಾಗಿಯೇ ಉಳಿದಿದೆ. ರಾಮಾಯಣದ ಕತೆಗಳು, ಮಹಾಭಾರತದ ಕತೆಗಳು ಮಾನವೀಯ ಕತೆಗಳೇ. ಮನುಷ್ಯ ಪಟ್ಟಿರಲಾರದ ದುಃಖ, ಕರುಣ, ಆನಂದ, ಆಕ್ರೋಶಗಳನ್ನು ಅಲ್ಲಿನ ಯಾವ ಪಾತ್ರಗಳೂ ತೋರುವುದಿಲ್ಲ. ಅಲ್ಲಿನ ಗುಣಗಳು ಯಾವತ್ಕಾಲದ ಮಾನವೀ ಸ್ವಭಾವಗಳನ್ನು ತೋರುವುದರಿಂದ ಅವು ವಾಸ್ತವಿಕವಾದವುಗಳೇ. ಮಹಾಭಾರತದಲ್ಲಿಯ ದುಶ್ಯಾಸನನ ನೀತಿ ಅನಾಗರಿಕ; ಅದನ್ನು ನೆರವೇರಿಸಿದ ಬಗೆಯೂ ಅನಾಗರಿಕವೇ. ಆದರೆ ಈ ಎರಡು ಶೀಲಗಳನ್ನು

ಪ್ರಕಟಿಸಿದ ವ್ಯಕ್ತಿಗಳು ಅವರ ಬಗೆಗಳು-ಇಂದಿಗೂ ಮಾನವೀಯ ಕೃತಿಗಳೇ. ಸರ್ವಸಾಮಾನ್ಯ ಅಲ್ಲದುದರಿಂದ ಅಮಾನುಷ್ಯ ವೆನಿಸಿಬಹುದು. ಮನುಷ್ಯ ಹೀಗಾದರೂ ಇರಬೇಕು-ಎಂದೇ ಬಯಸುವ ನಮ್ಮ ಆದರ್ಶಕ್ಕೆ ಕಡಿಮೆಯಾದ ನಡೆತೆಯನ್ನು ನಾವು-ಅಮಾನುಷ್ಯ ವೆನ್ನಬಹುದು, ಅದಕ್ಕೂ ಹೆಚ್ಚಿನ ನಡತೆಗಳನ್ನು ನಾವು ದೈವಿಕ ಎನ್ನುತ್ತೇವೆ. ಆದರೂ ಅವು ಮಾನವೀಯ ಗುಣಗಳೇ.”[೬೩] ಇಲ್ಲಿ ವಾಸ್ತವತೆ ಹಾಗೂ ಮಾನವೀಯ ಮೌಲ್ಯಗಳ ಸಂಘಟನೆಯನ್ನು ಕಾಣಬಹುದಾಗಿದೆ. ವಾಸ್ತವತಾವಾದವು ಈ ಜಗತ್ತನ್ನು ಇಹದ ಜಗತ್ತು, ಭೌತಿಕ ಜಗತ್ತು, ಮನುಷ್ಯರ ಜಗತ್ತು ಎಂದು ಪರಿಭಾವಿಸುತ್ತದೆ. ಹೀಗಾಗಿ ಮಾನವೀಕರಣದ ನಿಯೋಗಿಯಾಗಿಯೂ ಕೆಲಸ ಮಾಡುತ್ತದೆ.

‘ನೈಜವಾದ’ ವಾಸ್ತವತಾವಾದದ ಇನ್ನೊಂದು ಮುಖವೇ ಆಗಿರುವುದರಿಂದ ಮಾನವತಾವಾದ ದೊಂದಿಗಿನ ಸಂಬಂಧ ವಾಸ್ತವತಾವಾದದಷ್ಟೇ ಹತ್ತಿರವಾಗಿದೆ. ಮುದ್ರಾವಾದವು(ಅಂತರ್ಭಾವವಾದ) ಭಿನ್ನ ಲಕ್ಷಣಗಳನ್ನು ಹೊಂದಿರುವುದರಿಂದ ಮಾನವೀಕರಣದೊಂದಿಗೆ ಸಂಬಂಧ ಸ್ಪಷ್ಟವಾಗಿ ಗೋಚರಿಸುತ್ತಿಲ್ಲ. ‘ಪ್ರತಿಮಾವಾದವು ಮಾನವತಾವಾದದೊಂದಿಗೆ ಸಹಭಾಗಿತ್ವ ಹೊಂದಿಲ್ಲವೆಂಬುದು ಸ್ಪಷ್ಟ. ಆದರೆ ಮಾನವೀಕರಣದ ಅನುಬೋಧನೆಯ ಸಂದರ್ಭದಲ್ಲಿ ಪ್ರತಿಮಾವಾದದ ಬಳಕೆಯಾಗುತ್ತದೆ. ‘ಪ್ರತಿಮಾವಾದ’ ಮುಖ್ಯ ಲಕ್ಷಣವಾದ ಜೀವನದ ಘಟನೆ-ಪಾತ್ರವನ್ನು ಅರ್ಥೈಸಲು ಸ್ಪಷ್ಟವಾದ ಸಂಕೇತಾರ್ಥವಾಗಿ ಪ್ರತಿಮೆಯನ್ನು ಬಳಸುವುದು. ‘ಅಳಿದ ಮೇಲೆ’ ಕಾದಂಬರಿಯಲ್ಲಿ ಕೆಲ ಪಾತ್ರಗಳ ಗುಣಗಳನ್ನು ವಿವರಿಸಲು ಪ್ರತಿಮೆಗಳನ್ನು ಕಾರಂತರು ಬಳಸುತ್ತಾರೆ. ಅಂತೆಯೇ ‘ಅಭಿವ್ಯಕ್ತಿವಾದ’ವು ಸಹ ಮಾನವತಾವಾದದೊಂದಿಗೆ ಸಂಬಂಧ ಹೊಂದಿದೆ. ಪ್ರತಿಮೆಯನ್ನು ಅಭಿವ್ಯಕ್ತಿಸುವ ಕಲೆ ಮುಖ್ಯವಾಗಿದೆ. ಅಭಿವ್ಯಕ್ತಿಯ ಪರಿಕಲ್ಪನೆಗೆ ಮನಸ್ಸಿಗೆ ಸಂಬಂಧಿಸಿದ್ದಾದರಿಂದ ಮಾನವೀಕರಣದಲ್ಲಿ ಮುಖ್ಯವಾಗುವ ಮನಸ್ ತತ್ವವನ್ನು ಅದು ಅವಲಂಬಿಸುತ್ತದೆ. ಈ ವಾದ ಮಾನವೀಕರಣದೊಂದಿಗೆ ಅಂತಸ್ಸಂಬಂಧ ಹೊಂದಿದೆ.

ಮಾನವನ ಅಸ್ತಿತ್ವವನ್ನು ಪ್ರಶ್ನಿಸುವ, ಉಳಿಸುವ ‘ಅಸ್ತಿತ್ವವಾದ’ವು ಮಾನವೀಕರಣದೊಂದಿಗೆ ತೀರ ಹತ್ತಿರದ ಸಂಬಂಧ ಹೊಂದಿದೆ. ಮನುಷ್ಯನ ಇರುವಿಕೆಯನ್ನು ಗಟ್ಟಿಗೊಳಿಸುವಿಕೆ ಮಾನವೀಕರಣದಿಂದ ನಡೆದರೆ ಆ ಇರುವಿಕೆಯನ್ನು ಶಾಶ್ವತಗೊಳಿಸುವುದು ಅಸ್ತಿತ್ವವಾದದ ಕೆಲಸವಾಗುತ್ತದೆ. ಮನುಷ್ಯ ಜೀವನದ ಸಾರ್ಥಕತೆ ಅನಾವರಣಗೊಳ್ಳುವುದೇ ಈ ಎರಡು ವಾದಗಳಿಂದ. ಮಾನವತಾವಾದ ಅನಾಗರಿಕತೆ ಹಾಗೂ ಅಮಾನವೀಯತ್ವವನ್ನು ವಿರೋಧಿಸಿದಂತೆ ಅಸ್ತಿತ್ವವಾದವೂ ವಿರೋಧಿಸುತ್ತದೆ. ಅದಕ್ಕೂ ಮಾನವೀಯ ಮೌಲ್ಯಗಳೇ ಇಷ್ಟವಾಗುತ್ತವೆ. ಸಮಾಜದಿಂದ ಕೊಂಡುದದುಕ್ಕಿಂತಲೂ ಕೊಡುವುದು ಮಾನವತಾವಾದದಲ್ಲಿ ಎಷ್ಟು ಮುಖ್ಯವೋ ಅಸ್ತಿತ್ವವಾದದಲ್ಲೂ ಅಷ್ಟೇ ಮುಖ್ಯವಾಗುತ್ತದೆ. ‘ನಾನು’, ‘ನನ್ನ’, ‘ನನ್ನದು’, ‘ನಮ್ಮ’, ‘ನಮ್ಮದು’-ಎಂಬುದು ಮಾನವತಾವಾದದಲ್ಲಿ ಕೇಂದ್ರವಾದಂತೆ

ಅಸ್ತಿತ್ವವಾದದಲ್ಲೂ ಕೇಂದ್ರವಾಗುತ್ತದೆ. ಆದರೆ ಈ ಸ್ವಂತಿಕೆಯು ಪದಗಳು ಹಮ್ಮಿಗಿಳಿಯುವುದಿಲ್ಲ. ಒಟ್ಟಿನಲ್ಲಿ ಮಾನವತಾವಾದ ಮತ್ತು ಅಸ್ತಿತ್ವವಾದಗಳು ಮನುಷ್ಯನ ಒಳ್ಳೆಗುಣಗಳ ಪ್ರಚುರತೆ, ಅನಾಗರಿಕತೆಯ ವಿನಾಶ, ಬಾಳಿದ ಮನುಷ್ಯ ಬಿಟ್ಟು ಹೋಗುವ ಹೆಗ್ಗುರುತುಗಳನ್ನು ಪ್ರೀತಿಸುತ್ತವೆ. ಮೊದಲು ಮಾನವ ಅನಂತರ ಸಮಾಜ ಆರೋಗ್ಯಕರವಾಗಿರಬೇಕು, ಮನುಷ್ಯತ್ವ ಸದಾ ಉಳಿಯಬೇಕು ಎಂಬುದೇ ಎರಡರ ಮುಖ್ಯ ಆಶಯ. 'ನವ್ಯವಾದ'-ಮಾನವತಾವಾದದೊಂದಿಗಿನ ಸಂಬಂಧ ರಮ್ಯವಾದದೊಂದಿಗಿನ ಸಂಬಂಧದಷ್ಟೇ ಇದೆ. ಇದು ಅಂತಹ ಮುಖ್ಯ ಸಂಬಂಧವನ್ನು ಕಲ್ಪಿಸಿಕೊಂಡಿಲ್ಲ. ಮಾನವೀಕರಣದ ಸಂದರ್ಭದಲ್ಲಿ ನವ್ಯತೆಯೊಂದಿಗೆ ಆಧುನೀಕರಣಗೊಳ್ಳುವ ವಿಶಿಷ್ಟತೆಯನ್ನು ನವ್ಯವಾದ ಎತ್ತಿ ಹಿಡಿಯುತ್ತದೆ. ನವ್ಯವಾದದ ಮುಖ್ಯ ಲಕ್ಷಣಗಳಾದ ಪ್ರಾಮಾಣಿಕತೆ, ಪರಂಪರೆಗೆ ಕೇಳುವ ಪ್ರಶ್ನೆ, ಸಮಕಾಲೀನ ಪ್ರಜ್ಞೆ, ವಾಸ್ತವ ಘಟನೆಗಳನ್ನು ಮಾನವತಾವಾದವೂ ಬಯಸುತ್ತದೆ. ಈ ಲಕ್ಷಣಗಳು ಮಾನವೀಕರಣಕ್ಕೆ ಸಂವಾಹಕಗಳಾಗುತ್ತವೆ.

'ಪ್ರಜ್ಞಾ ಪ್ರವಾಹ ತಂತ್ರ' ಇದು ಸಿದ್ಧಾಂತವಲ್ಲ. ಸಾಹಿತ್ಯದಲ್ಲಿ ಘಟನಾವಳಿ ಹಾಗೂ ಪಾತ್ರಗಳನ್ನು ನಿರೂಪಿಸಲು ಬಳಸುವ ಪ್ರಯೋಗ ಅಥವಾ ತಂತ್ರ. ಇದನ್ನು ಮಾನವತಾವಾದದೊಂದಿಗೆ ಸಂಬಂಧ ಕಲ್ಪಿಸುವ ಆಶಯವಿಷ್ಟೇ. ತಂತ್ರದ ಬಳಕೆಯಿಂದ ಮಾನವೀಕರಣದ ರೂಪಿಸುವಿಕೆ ಸುಲಭವಾಗುತ್ತದೆ ಎಂದು. 'ಪ್ರಜ್ಞಾ ಪ್ರವಾಹ ತಂತ್ರ' ಯಾವುದೇ ವಸ್ತು-ವಿಷಯವನ್ನು ಅನೇಕವಾಗಿ ಹೇಳದೆ, ಸ್ಪಷ್ಟವಾಗಿ-ನಿಖರವಾಗಿ ಹೇಳುತ್ತದೆಯಾದ್ದರಿಂದ ಮಾನವೀಕರಣಕ್ಕೆ ಪ್ರಿಯವಾಗುತ್ತದೆ. ಇದೊಂದು ತಾಂತ್ರಿಕವಾಗಿ ನಿಯೋಗಿಯಾಗಿ ಕೆಲಸ ಮಾಡುತ್ತದೆ.

ಈ ಮೇಲೆ ಕಂಡುಕೊಂಡ ವಾದಗಳ ಅಂತಸ್ಸಂಬಂಧ ತೀರಾ ಸೂಕ್ಷ್ಮವಾದುದು. ಎಲ್ಲ ವಾದಗಳ ಲಕ್ಷಣಗಳು ಮಾನವತಾವಾದದ ಲಕ್ಷಣಗಳೊಂದಿಗೆ ತಾದಾತ್ಮ ಹೊಂದುತ್ತವೆ ಎಂದು ಹೇಳಲು ಬರುವುದಿಲ್ಲ. ಮೇಲ್ನೋಟದಲ್ಲಿ ಕಾಣುವ ಲಕ್ಷಣ ಆಂತರ್ಯದಲ್ಲಿ ವಿರೋಧವನ್ನು ವ್ಯಕ್ತಪಡಿಸುತ್ತಿರುತ್ತದೆ. ಆಗ ಅದರ ಸಂಬಂಧ ಹಳಸುತ್ತದೆಯೇ ಹೊರತು ಹೊಸತನ್ನು ಬಿಂಬಿಸುವುದಿಲ್ಲ. ಈ ವಾದಗಳ ಸಂಬಂಧದ ವಿಷಯವನ್ನು ತೀರಾ ಆಳವಾಗಿ ಅಧ್ಯಯಿನಿಸದೆ ವಿಹಂಗಮನ ನೋಟದ ತುಲನೆ ನಡೆಸಿದ್ದೇನೆ.

## ಅಡಿಟಿಪ್ಪಣಿಗಳು

೧. ಇಷ್ಟೆಲ್ಲ ದೌರ್ಜನ್ಯಕ್ಕೆ ನಾನು ಮಾಡಿದ ತಪ್ಪೇನು? ಸಂಯುಕ್ತ ಕರ್ನಾಟಕ, ೧೮-೭-೧೯೯೯

೨. ಬಾಗೂರು ನವಿಲೆಯಲ್ಲಿ ಮಾನವ ಹಕ್ಕುಗಳ ಉಲ್ಲಂಘನೆ, ಕನ್ನಡ ಪ್ರಭ:೨೫-೯-೧೯೯೯

೩. ಎಲ್.ಶ್ರೀಕಂಠಯ್ಯ, ೧೯೮೫, ಪು.೮೦

೪. ಸಮಾಜವಾದದೆಡೆಗೆ ಆಚಾರ್ಯ ನರೇಂದ್ರ ದೇವ, ಜನ ಪ್ರಕಾಶನ, ಸಮಾಜವಾದಿ ಅಧ್ಯಯನ ಕೇಂದ್ರ, ಬೆಂಗಳೂರು, ೧೯೮೧, ಪು.೩೯

೫. ಪ್ರೊ.ಎ.ಆರ್.ಕಟ್ಟಿ, ಸಮಾಜಶಾಸ್ತ್ರದ ಮೂಲತತ್ವಗಳು, ೧೯೮೯, ಪು.೨೩೬

೬. ಅದೇ,

೭.. ಅದೇ, ಪು.೨೩೭

೮. ಟಿಪ್ಪಣಿ : ಹಿಂದೂ ಧರ್ಮ ಒಂದೇ? ಹಲವೇ ಎನ್ನುವ ಚರ್ಚೆ ಇಲ್ಲಿ ಮುಖ್ಯವಾಗಿಲ್ಲ ಒಂದೇ ಎಂದು ಪರಿಗಣಿಸಲಾಗಿದೆ. ಭಗವದ್ಗೀತೆಯ ತತ್ವಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಈ ಮಾತು ಹೇಳಿದ್ದೇನೆ

೯. ಶಿವರಾಮ ಕಾರಂತ, ಮನೋದೇಹಿಯಾದ ಮಾನವ, ೧೯೭೪, ಪು.೧

೧೦. ಥಿಯೋಡರ್ ರೋಸ್ಜಕ್, ಅಂಕಣ, ಜನವರಿ, ೧೯೮೨, ಪು. ೩-೭

೧೧. ಎಂ.ಎನ್.ರಾಯ್, ೧೯೮೮, ಪು.೧೮೬

೧೨. ಅದೇ, ಪು. ೧೮೭

೧೩. ಅದೇ, ಪು. ೧೯೧

೧೪. ಅದೇ, ಪು. ೧೮೭

೧೫. ಅದೇ, ಪು. ೧೯೮

೧೬. ಅದೇ, ಪು. ೧೯೮

೧೭. ಅದೇ, ಪು. ೧೨೭

೧೮. ಸದಾಶಿವ ಒಡೆಯರ, ಜೀವನದಲ್ಲಿ ಮಾನವೀಯ ಮೌಲ್ಯಗಳು, ೧೯೯೦, ಪು. ೩

೧೯. ಅದೇ, ಪು.೪

೨೦. Thomas More, Utpoia, 1901, Pp. 139

೨೧. M.Petrosya-Humanism, 1972, Pp. 28

೨೨. Raymod Williams, Key words, 1988, P.148

೨೩. ಟಿಪ್ಪಣಿ : ದ್ಯುತಿ ಸಂಶ್ಲೇಷಣೆ : ನೀರು ಮತ್ತು ಕಾರ್ಬನ್ ಡೈ ಆಕ್ಸೈಡ್‌ಗಳನ್ನು ಉಪಯೋಗಿಸಿ ಬೆಳಕಿನ ಶಕ್ತಿಯಿಂದ ಆಹಾರ (ಗ್ಲುಕೋಸ್) ತಯಾರಿಸುವ ಕ್ರಿಯೆಗೆ 'ದ್ಯುತಿ ಸಂಶ್ಲೇಷಣೆ' ಎಂದು ಹೆಸರು. ಆಕ್ಸಿಜನ್ ಅನಿಲವು ಒಂದು ಉಪ ಉತ್ಪನ್ನವಾಗಿ ಬಿಡುಗಡೆಯಾಗುವುದು. ದ್ಯುತಿ ಸಂಶ್ಲೇಷಣೆಗೆ ಬೇಕಾದ ಬೇರುಗಳ ಮೂಲಕ ಕಾಂಡ ತಲುಪಿ ಎಲೆಗಳಿಗೆ ದೊರೆಯುವುದು. ಕಾರ್ಬನ್ ಡೈ ಆಕ್ಸೈಡ್ ಮತ್ತು ಆಕ್ಸಿಜ್‌ನಗಳ ವಿನಿಮಯ ಎಲೆಗಳ ಪತ್ರ ರಂಧ್ರಗಳ ಮೂಲಕ ನಡೆಯುವುದು. ಇದು ಒಂದರ ನಂತರ ಇನ್ನೊಂದು ನಡೆವ ರಾಸಾಯನಿಕ ಕ್ರಿಯೆಗಳ ಪರಿಣಾಮ. ನವಕರ್ನಾಟಕ ಜ್ಞಾನ - ವಿಜ್ಞಾನ ಕೋಶ, ಸಂಪುಟ ೩, ಪು. ೧೦೦

೨೪. ಕಾದಂಬರಿ ಲೋಕ, ೧೯೯೦, ಪು. ೧೩೪

೨೫. ಅದೇ, ಪು. ೧೪೫

೨೬. ಹಿರಣ್ಮಯ ಬ್ಯಾನರ್ಜಿ, ಠಾಕೂರರ ಮಾನವತಾ ಸಿದ್ಧಾಂತ, ೧೯೭೫, ಪು. ೩

೨೭.. ಅದೇ, ಪು. ೩

೨೮. ಅದೇ, ಪು. ೪

೨೯. D.Venkntewaswarn-Humanism and American Jews Drama

೩೦. ಗೌರೀಶ ಕಾಯ್ಕಿಣಿ, ನವಮಾನವತಾವಾದ, ೧೯೯೩, ಪು:೫೬

೩೧. ಹಿರಣ್ಮಯ ಬ್ಯಾನರ್ಜಿ-ಠಾಕೂರರ ಮಾನವತಾ ಸಿದ್ಧಾಂತ, ೧೯೭೫, ಪು.೧೧-೧೨

೩೨. ಅದೇ, ಪು. ೫೧

೩೩. ಅದೇ, ಪು. ೫೦

೩೪. ಬಿ.ಶಿವರಾವ್, ಮಹಾತ್ಮಾಗಾಂಧಿ, ನೂರುವರ್ಷಗಳು, ೧೯೬೮, ಪು. ೨೬೯

೩೫. ಅದೇ, ಪು. ೮೪

೩೬. ಜಿ.ಆರ್.ತಿಪ್ಪೇಸ್ವಾಮಿ, ಕನ್ನಡ ಸಾಹಿತ್ಯದಲ್ಲಿ ನೋವಿನ ನೆಲೆಗಳು, ೧೯೯೨, ಪು.೮೯

೩೭. ಅದೇ, ಪು.೮೮

೩೮. ಶಂಬಾ ಜೋಶಿ, ವೈವಸ್ವತ ಮನುಪ್ರಣೀತ ಮಾನವ ಧರ್ಮದ ಆಕೃತಿ, ೧೯೭೯, ಪು.XX

೩೯. ಎಚ್.ಎಸ್. ರಾಘವೇಂದ್ರರಾವ್, ಶಂ.ಬಾ.ಕೃತಿ ಸಮೀಕ್ಷೆ, ೧೯೯೨, ಪು. ೯೭

೪೦. ಎಸ್. ಶಿವಲಿಂಗಯ್ಯ, ಶಂಬಾ ಕೃತಿ ಸಮೀಕ್ಷೆ, ೧೯೯೨, ಪು. ೧೧೬

೪೧. ಅದೇ, ಪು. ೧೧೭

೪೨. ಅದೇ, ಪು.೧೧೭

೪೩. ಅದೇ, ಪು. ೧೧೮

೪೪. ಅದೇ, ಪು. ೧೧೮

೪೫. ಶಂಬಾಜೋಶಿ, ಜೀವನ ಅರ್ಥಗ್ರಹಣ ಪದ್ಧತಿ, ೧೯೮೬, ಪು. ೨

೪೬. ಅದೇ, ಪು. ೨

೪೭. ಅದೇ, ಪು. ೨

೪೮. ಅದೇ, ಪು.೩

೪೯. ಎಚ್.ಎಸ್. ರಾಘವೇಂದ್ರರಾವ್ ಶಂಬಾ ಕೃತಿ ಸಮೀಕ್ಷೆ, ೧೯೯೨, ಪು. ೧೦೪

೫೦. ಕುವೆಂಪು, ಕಾನೂರು ಹೆಗ್ಗಡತಿ, ಪು. ೧೭೦

೫೧. ಅದೇ, ಪು.೧೭೧

೫೨. ಕುವೆಂಪು, ವಿಚಾರ ಕ್ರಾಂತಿಗೆ ಆಹ್ವಾನ, ೧೯೮೭, ಪು. ೪೯

೫೩ ಎಚ್.ಎಂ. ಚನ್ನಯ್ಯ, ಜಿಜ್ಞಾಸೆ, ೧೯೯೦, ಪು.೬೨

೫೪. ಸಿದ್ಧಯ್ಯ ಪುರಾಣಿಕ, ವಚನೋದ್ಯಾನ, ೧೯೭೨, ವ.೩೬೪ ಪು. ೧೮೭

೫೫. ಅದೇ, ವ.೩೧೧, ಪು. ೧೫೭

೫೫. ಅದೇ, ವ.೩೧೧, ಪು. ೧೫೭

೫೬. ಅದೇ, ವ.೨೦೩, ಪು.೧೦೧

೫೭. ಅದೇ, ವ.೩೦೩, ಪು.೧೫೩

೫೮. ಮಲ್ಲಿಕಾಘಂಟಿ, ಬ.ಕಟ್ಟಿಮನಿಯವರ ಸಾಹಿತ್ಯ, ಪು. ೬೫

೫೯. ದೇವನೂರು ಮಹಾದೇವ, ೧೯೯೪, ಪು. ೫೬

೬೦. ರಹಮತ ತರೀಕೆರೆ, ಪ್ರತಿಸಂಸ್ಕೃತಿ, ೧೯೯೩, ಪು. ೧೬೭

೬೧. ವಿವರಗಳಿಗೆ ನೋಡಿ : ಪಾಶ್ಚಾತ್ಯ ವಾದಗಳು, ಸಿ.ಆರ್. ಯರವಿನ ತಲೆ ಮಠ, ೧೯೯೪, ಪು.೧-೨

೬೨. ಅದೇ, ಪು.೨೨-೨೩

೬೩. ಉಧೃತ, ಟಿ.ಪಿ.ಅಶೋಕ, ವಾಸ್ತವತಾವಾದ, ೧೯೯೨, ಪು. ೮

ಅಧ್ಯಾಯ ೩

# ಕನ್ನಡ ಕಾದಂಬರಿಗಳಲ್ಲಿ ಮಾನವೀಕರಣ

ಕನ್ನಡ ಕಾದಂಬರಿಯ ಇತಿಹಾಸ ಈಗ ಒಂದು ಶತಮಾನವನ್ನು ದಾಟಿ ಎರಡನೆಯ ಶತಮಾನದಲ್ಲಿ ಹೆಜ್ಜೆ ಇಟ್ಟಿದೆ. ಇಂತಹ ಭವ್ಯ ಇತಿಹಾಸದ ಹಿನ್ನೆಲೆಯಲ್ಲಿ ಕಾದಂಬರಿಯು ಪಡೆದುಕೊಂಡಿರುವ ಆಕಾರ ಮತ್ತು ಬೋಧಿಸಿರುವ ನೀತಿ ಬಹು ಮಹತ್ವದ್ದಾಗಿದೆ. ಸ್ವರೂಪ-ಪ್ರಕಾರದಲ್ಲಿ ವಿವಿಧ ಪ್ರಯೋಗಗಳನ್ನು ಅನುಸರಿಸಿದೆ. ತನ್ನ ಬೆಳವಣಿಗೆಗಾಗಿ ಒಡಲಲ್ಲಿ ಅಳವಡಿಸಿಕೊಂಡ ತತ್ತ್ವಗಳು ಸಾಕಷ್ಟಿವೆ. ವಾದ(Isms)ಅಥವಾ ತತ್ತ್ವಗಳಿಗೆ ಬದ್ಧವಾಗಿ ಕಾದಂಬರಿ ಬೆಳೆದುಬಂದಿರುವುದನ್ನು ಆರಂಭದಲ್ಲಿ ಸ್ಪಷ್ಟವಾಗಿ ಗುರುತಿಸಲಾಗದಿದ್ದರೂ ಪ್ರಗತಿಶೀಲ ಸಾಹಿತ್ಯ ಪಂಥದಿಂದ ನಿಖರವಾಗಿ ಗುರುತಿಸಿ ಹೇಳಬಹುದಾಗಿದೆ. ಸಾಹಿತ್ಯದ ಅನೇಕ ವಾದಗಳು ಮತ್ತು ಸಾಹಿತ್ಯೇತರ ಸಿದ್ಧಾಂತಗಳು ಕಾದಂಬರಿ ಸಾಹಿತ್ಯದಲ್ಲಿ ಮುಖಾಮುಖಿಯಾಗಿವೆ. ಅವುಗಳಲ್ಲಿ ಅಸ್ತಿತ್ವವಾದ, ಅಭಿಜಾತವಾದ, ಆದರ್ಶವಾದ, ಅಭಿವ್ಯಕ್ತಿವಾದ, ಅತಿವಾಸ್ತವವಾದ, ನವ್ಯವಾದ, ಪ್ರತಿಮಾವಾದ, ಸಂಕೇತವಾದ, ಮುದ್ರಾವಾದ, ನೈಜವಾದ, ವಾಸ್ತವವಾದ, ಸೌಂದರ್ಯವಾದ ಮತ್ತು ರಮ್ಯವಾದಗಳು ಪ್ರಮುಖವಾದವುಗಳಾಗಿವೆ. ಈ ವಾದಗಳು ಕನ್ನಡ ಕಾದಂಬರಿ ಸಾಹಿತ್ಯದಲ್ಲಿ ಎರಡು ರೀತಿಯಿಂದ ಅನುಸಂಧಾನಗೊಂಡಿವೆ. ೧. ವಾದದ ಉದ್ದೇಶಕ್ಕಾಗಿ ಕಾದಂಬರಿ ರೂಪಿಸಿರುವುದು. ೨. ಕಾದಂಬರಿಗಳಲ್ಲಿ ಆಕಸ್ಮಿಕವಾಗಿ ಪಾತ್ರ-ಘಟನೆಗಳೊಂದಿಗೆ ಅನುಸಂಧಾನಗೊಂಡಿರುವುದು. ಎರಡನೆಯ ರೀತಿಯೇ ಅತಿಹೆಚ್ಚು ಕೃತಿಗಳಲ್ಲಿ ಪಾಲ್ಗೊಂಡಿದೆ. ಮಾನವತಾವಾದ, ಆದರ್ಶವಾದ, ನೈಜವಾದ, ಸೌಂದರ್ಯವಾದ ಮೊದಲಾದವುಗಳೆಲ್ಲ ಸಾಹಿತ್ಯದಲ್ಲಿ ಸೇರಿಕೊಂಡಿರುವುದು ಎರಡನೆಯ ರೀತಿಯಲ್ಲಿ.

೧೮೬೪ರಲ್ಲಿ ಕನ್ನಡಕ್ಕೆ ಬಂದ ಕಾದಂಬರಿಯು ಯಾವುದೇ ರೀತಿಯ ಸಿದ್ಧಾಂತಗಳ ನೆರಳನ್ನು ಆಶ್ರಯಿಸಲಿಲ್ಲ ಮತ್ತು ಸಿದ್ಧಾಂತಗಳನ್ನು ಹುಟ್ಟು ಹಾಕಲಿಲ್ಲ. ದಾರಿ ಸಾಗಿದಂತೆಲ್ಲ ಹೊಸ ಹೊಸ ಆವಿಷ್ಕಾರಗಳನ್ನು(ಸಾಕಾರ ಮತ್ತು ನಿರೂಪಣೆಯಲ್ಲಿ) ಮಾಡುವ ಪ್ರಯತ್ನವನ್ನು ಮಾಡಿತು. ಅದರ ಫಲಿತವೇ ನವೋದಯ, ನವ್ಯ, ಪ್ರಗತಿಶೀಲ ಮತ್ತು ದಲಿತ-ಬಂಡಾಯಗಳೆಂದು ರೂಪುಗೊಂಡದ್ದು.

ನವೋದಯದ ಕಾಲ ಜನನದ ಕಾಲವಾದ್ದರಿಂದ, ಗದ್ಯ ಮತ್ತು ಪದ್ಯಗಳ ನಡುವಿನ ಸಂಕ್ರಮಣ ಸ್ಥಿತಿಯಾದ್ದರಿಂದ ಬೇರೆ ಭಾಷೆಯ ಕೃತಿಗಳಿಂದ ಪ್ರಭಾವ ಪಡೆಯಿತೇ ಹೊರತು ಸವಾಲಾಗಿ ಸ್ವೀಕರಿಸಲಿಲ್ಲ. ನಂತರದ ನವ್ಯದ ಸಂದರ್ಭದಲ್ಲಿ ಪಾಶ್ಚಾತ್ಯ ಸಿದ್ಧಾಂತಗಳ ಅಳವಡಿಕೆಯ ಯುಗವೇ ಆರಂಭವಾಯಿತೆನ್ನಬಹುದು. ಇಂಗ್ಲಿಷ್ ವಿದ್ಯಾಭ್ಯಾಸ ಕ್ರಮ ಮತ್ತು ಮನುಷ್ಯನ ಅಂತರಂಗದ ನೇರ ನಡಾವಳಿಗಳ ಪ್ರಭಾವದಿಂದಾಗಿ ನವ್ಯ ಪಂಥವು ತುಂಬಾ ಪ್ರಭಾವಯುತವಾಗಿ ಬೆಳೆಯಿತು. ಡಿಕೆನ್ಸ್, ಲಾರೆನ್ಸ್, ಫ್ರಾಯ್ಡ್, ವ್ಹಿಕ್ಟರ್, ಹ್ಯೂಗೋ, ಸಾರ್ತ್ರೆ, ವರ್ಜಿನಿಯಾ ವೂಲ್ಫ್, ಜೇಮ್ಸ್, ಕಾಫ್ಕಾ ಮೊದಲಾದವರ ಕೃತಿಗಳನ್ನು ಮತ್ತು ಅಲ್ಲಿನ ತತ್ವಗಳನ್ನು ನವ್ಯ ಪಂಥವು ಕನ್ನಡಗರಿಗೆ ಪರಿಚಯಿಸಿತು. ಕನ್ನಡದಲ್ಲಿ ಯು. ಆರ್. ಅನಂತಮೂರ್ತಿ, ಪಿ. ಲಂಕೇಶ್, ಶೌರಿ, ಗಿರಿ, ಶಾಂತಿನಾಥ ದೇಸಾಯಿ, ಯಶವಂತ ಚಿತ್ತಾಲ, ಪೂರ್ಣಚಂದ್ರ ತೇಜಸ್ವಿ, ಮೊದಲಾದವರು ನವ್ಯ ಕಾದಂಬರಿಗಳನ್ನು ರಚಿಸಿದವರಲ್ಲಿ ಪ್ರಮುಖರು. ನವ್ಯ ಪಂಥವು ತನ್ನ ಒಡಲೊಳಗೆ ಅನೇಕ ವಾದ ಮತ್ತು ತಂತ್ರ (Ism and Techinic)ಗಳನ್ನು ಗರ್ಭೀಕರಿಸಿಕೊಂಡಿದೆ. ಅಸ್ತಿತ್ವವಾದ, ಅಭಿವ್ಯಕ್ತವಾದ, ಪ್ರತಿಮಾವಾದ, ನೈಜವಾದ, ರಮ್ಯವಾದ ಮತ್ತು ಪ್ರಜ್ಞಾ ಪ್ರವಾಹ ತಂತ್ರದಂತಹ ತಂತ್ರಗಳ ಮೂಲಕ ಸಾಹಿತ್ಯ ಬೆಳವಣಿಗೆಗೊಂಡಿತು. ಅಥವಾ ಈ ವಾದಗಳನ್ನ ಬೆಳೆಸಿತು.

ಪ್ರಗತಿಶೀಲ ಕಾದಂಬರಿ ಸಾಹಿತ್ಯದ ಗುರಿ ಜನಸಾಮಾನ್ಯರ ಕುರಿತು ರೂಪುಗೊಳ್ಳುವುದಾಗಿತ್ತು. ಅನಕೃ, ಕಟ್ಟೀಮನಿ, ತರಾಸು, ನಿರಂಜನ ಮೊದಲಾದವರು ಹದಿಹರೆಯದವರ ಸಮಸ್ಯೆಗಳನ್ನು, ಮಧ್ಯಮ ವರ್ಗದ ಜನತೆಯ ನೋವುಗಳನ್ನು, ವೇಶ್ಯಾ ಜೀವನ ಶೈಲಿಯನ್ನು, ಡಂಬಾಚಾರದ ಸ್ವಾಮಿಗಳ ನಯವಂಚಕತೆಯನ್ನು ಕಾದಂಬರಿಗಳಲ್ಲಿ ಹೇಳುವುದಕ್ಕಾಗಿ ವಾಸ್ತವತಾವಾದ, ಆದರ್ಶವಾದ ಮತ್ತು ರಮ್ಯವಾದಗಳನ್ನು ಬಳಸಿ ಕೊಂಡರು. ಪ್ರಗತಿಶೀಲ ಸಾಹಿತ್ಯವು ಬಹುತೇಕ ಮಾರ್ಕ್ಸ್‌ವಾದವನ್ನು ಅವಲಂಬಿಸಿದೆ. 'ಮಾರ್ಕ್ಸ್ ವಾದವನ್ನು 'ಮಾರ್ಕ್ಸ್ ಮಾನವತಾವಾದ'ವೆಂದೇ ಗುರುತಿಸಲಾಗುತ್ತಿದೆ.

ದಲಿತ-ಬಂಡಾಯ ಸಾಹಿತ್ಯವು ಪಾಶ್ಚಾತ್ಯ ತತ್ತ್ವಗಳ ನೆರಳನ್ನು ಹೆಜ್ಜೆ ಹೆಜ್ಜೆಗೂ ಅನುಸರಿಸಲಿಲ್ಲ. ತನ್ನ ನೆಲದ ಸತ್ವವನ್ನೇ ಮುಂದಿಟ್ಟುಕೊಂಡು ವಿರಳವಾಗಿ ಮುದ್ರಾವಾದ ಮತ್ತು ನೈಜವಾದಗಳನ್ನು ರೂಢಿಸಿಕೊಂಡಿತು. ಮಾನವತಾವಾದವನ್ನು ಮಾತ್ರ ಪ್ರತಿಯೊಂದು ಕೃತಿಯೂ ಕೈಹಿಡಿದುಕೊಂಡಿದೆ ಎಂದರೆ ತಪ್ಪಾಗುವುದಿಲ್ಲ. ಕೆಲವೊಮ್ಮೆ ಅದರ ಜೊತೆಗೆಯೇ ಅಮಾನವತಾವಾದವು ಹೆಜ್ಜೆ ಹಾಕಿರುವುದನ್ನು ಕುಸುಮಬಾಲೆ, ವೈಶಾಖ, ಮುಂಜಾವು ಮುಂತಾದ ಕೃತಿಗಳಲ್ಲಿ ಕಾಣುತ್ತೇವೆ. ದೇವನೂರು ಮಹಾದೇವ, ಕುಂ.ವೀರಭದ್ರಪ್ಪ, ಚೆನ್ನಣ್ಣ ವಾಲೀಕಾರ, ಮ.ನ.ಜವರಯ್ಯ, ಬರಗೂರು ರಾಮಚಂದ್ರಪ್ಪ, ಚದುರಂಗ ಮೊದಲಾದ ಲೇಖಕರು ದಲಿತ ಚಳುವಳಿಯನ್ನು ಪ್ರೋತ್ಸಾಹಿಸಿ ಮಾನವತಾವಾದವನ್ನ ತಮ್ಮ ಕೃತಿಗಳಲ್ಲಿ ಪ್ರತಿನಿಧಿಸಿದ್ದಾರೆ.

ದಲಿತ-ಬಂಡಾಯ ಸಾಹಿತ್ಯದ ನಂತರ ಕಾಲವು (ಈಗ ಆ ಬಿಸಿ ಇಲ್ಲದ್ದರಿಂದ ಅಥವಾ ಬಂಡಾಯೋತ್ತರ ಕಾಲ) ಯಾವುದೇ ಒಂದು ಸಿದ್ಧಾಂತವನ್ನು ಪ್ರಚುರಪಡಿಸದೆ ಸಾಗಿದೆ. ಹಿಂದಿನ ಸಾಹಿತ್ಯ ಪಂಥಗಳಲ್ಲಿ ಪ್ರಮುಖರಾಗಿದ್ದವರ ಕೃತಿಗಳಲ್ಲಿ ಮೊದಲಿನ ವಾದ-ಕೆಚ್ಚು ಮಂಡಿತವಾಗುತ್ತಿಲ್ಲ. ಉದಾಹರಣೆಗೆ ಕುಂ.ವೀ. ಅವರ 'ಶಾಮಣ್ಣ' ಒಂದು ಸಾವಧಾನದಿಂದ ನಿರೂಪಗೊಳ್ಳುವ ಕೃತಿ. ಅಂತೆಯೇ ಶಾಂತಿನಾಥ ದೇಸಾಯಿ ಅವರ 'ಓಂ ಣಮೋ' ಧರ್ಮದ ನೆರಳನ್ನು ಬಯಸುತ್ತದೆ. ಆದರೆ ಜೈನ ಧರ್ಮದ ಆಳ-ಅಗಲಗಳನ್ನು ಇಂಚು ಇಂಚಿಗೂ ಟೀಕಿಸುತ್ತಾ ಸಾಗುವುದು ಬೇರೆ ಮಾತಾಗುತ್ತದೆ. ಚದುರಂಗ ಅವರ 'ಹೆಜ್ಜಾಲ' ಕಾದಂಬರಿಯೂ ಸಹ ರೂಕ್ಷವಾಗಿ ಬೆಳೆಯುತ್ತದೆಯೇ ಹೊರತು ಸಮರ್ಪಕವಾದ ಸಿದ್ಧಾಂತದಲ್ಲಿ ನೆಲೆ ನಿಲ್ಲುವುದಿಲ್ಲ. ಹೀಗಾಗಿ ಮೊದಲಿನ ವಾದಗಳು ಇಣುಕು ಹಾಕುತ್ತವೆಯೇ ಹೊರತು ಘನೀಕೃತಗೊಳ್ಳುವುದಿಲ್ಲ.

## ನವೋದಯ

ಕನ್ನಡದಲ್ಲಿ ಕಾದಂಬರಿಯುಗವು ಅನುವಾದದ ಮೂಲಕ ಶುರುವಾಯಿತು. ೧೮೯೦ ರಿಂದ ೧೯೨೦ ರವರೆಗಿನ ಕಾಲವನ್ನು 'ಅರುಣೋದಯದ ಕಾಲ'ವೆಂದು ಗುರುತಿಸಿ, ಈ ಸಂದರ್ಭದಲ್ಲಿ ಬಂದ ಕೃತಿಗಳು ಬಂಗಾಳಿ, ಇಂಗ್ಲಿಷ್, ಮರಾಠಿ ಭಾಷೆಗಳಿಂದ ರೂಪುಗೊಂಡಿವೆ. ಒಮ್ಮೆಲೆ ಪ್ರಬುದ್ಧತೆಯನ್ನು ಯಾವ ಪ್ರಕಾರವೂ ಪಡೆದಿಲ್ಲದಿರುವುದು ಗಮನಾರ್ಹ. 'ಶೃಂಗಾರ ಚಾತುರ್ಯೋಲ್ಲಾಸಿನಿ' ಕಾದಂಬರಿಯಲ್ಲಿನ ಗದ್ಯವು ತುಂಬಾ ಸಡಿಲತೆಯನ್ನು ಪಡೆದಿದೆ ಎಂದು ಕಂಡರೂ ಅಂದಿನ ಕಾಲಕ್ಕೆ ಉಚ್ಚತಮವಾಗಿತ್ತು. ಕಾದಂಬರಿಯ ರಚನೆಯ ಕಾಲಕ್ಕೆ ಕಥೆ ಮತ್ತು ವಸ್ತು ಮೂಲ ಭಾಷೆಯದಾಗಿದ್ದು, ಪಾತ್ರ ಮತ್ತು ಭಾವಗಳು ಕನ್ನಡೀಕರಣಗೊಂಡಿರುತ್ತಿದ್ದವು.

ಸ್ವಾತಂತ್ರ್ಯ ಸಂಗ್ರಾಮಕ್ಕೆ ಅಣಿಗೊಳಿಸಿದ 'ಆನಂದ ಮಠ' ಕಾದಂಬರಿಯು ಹಲವಾರು ಗುರಿಗಳನ್ನು ಸಾಧಿಸಿತು. ೧. ಸಾಮಾಜಿಕ ಬದಲಾವಣೆ, ೨. ಸ್ವಾತಂತ್ರ್ಯ ಹೋರಾಟಕ್ಕೆ ಪ್ರೋತ್ಸಾಹ, ೩. ಮಾನವೀಯ ಮೌಲ್ಯ ಎತ್ತಿ ಹಿಡಿಯುವಿಕೆ. ಈ ಮೂರು ಅಂಶಗಳನ್ನು ಬಂಕಿಮ ಚಂದ್ರರು ಬಂಗಾಳಿ ಭಾಷೆಯಲ್ಲಿ ಸಮರ್ಥವಾಗಿ ಅನಾವರಣಗೊಳಿಸಿದರು. ಕನ್ನಡಕ್ಕೆ ಯಥಾವತ್ ಅನುವಾದಗೊಂಡಿತು.

ಸಾಮಾಜಿಕ ನೆಲೆಗಟ್ಟಿನ ಮೇಲೆ ರಚಿತವಾದ 'ಮುಸುಕು ತೆಗೆಯೇ ಮಾಯಾಂಗನೆ' ಮತ್ತು 'ಮಾಡಿದ್ದುಣ್ಣೋ ಮಹಾರಾಯ' ಸಾಮಾಜಿಕ ಚಿತ್ರಣ ಹಾಗೂ ಸಾಹಿತ್ಯವನ್ನು ಸಮರ್ಥವಾಗಿ ಪ್ರತಿನಿಧಿಸಿವೆ. 'ಮಾಡಿದ್ದುಣ್ಣೋ ಮಹಾರಾಯ' ಕಾದಂಬರಿ ಪರಂಪರೆಯ ಪ್ರಣೀತವಾಗಿಯೂ ಮಾನವೀಯ ಜಗತ್ತಿಗೆ ತೀರಾ ಹತ್ತಿರವಾಗುತ್ತದೆ. ಕಾದಂಬರಿಯ ಪಾತ್ರಗಳು ಜೀವಂತಿಕೆಯಿಂದ ಮಾನವ ಪ್ರೀತಿಯನ್ನು ಪರಸ್ಪರ ಹಂಚಿಕೊಳ್ಳುತ್ತವೆ. ಸೀತಮ್ಮನ ಮಾನನಿಷ್ಠವಾದ ಜೀವನವೇ

ಆದರ್ಶನೀಯ. ಅವಳ ಅತ್ತೆ ತಿಮ್ಮಮ್ಮನ ನಡವಳಿಕೆಯಿಂದ ತೀರಾ ಎದೆಗುಂದಿದಳಾದರೂ ತುಂಬಾ ಗೌರವಾನ್ವಿತಳಂತೆ ಬಾಳುತ್ತಾಳೆ. ಗಂಡನ ಅಲ್ಪಪ್ರೀತಿಯಿಂದಲೇ ನೆಮ್ಮದಿ ಕಂಡ ಸೀತಮ್ಮ ಕುಟುಂಬದ ಸಹಸದಸ್ಯರು ಮತ್ತು ನೆರೆ ಹೊರೆಯವರನ್ನು ಮಾನವೀಯ ಪ್ರೀತಿಯಿಂದಲೇ ಕಾಣುತ್ತಾಳೆ. ಅಮಾಸ ಎಂಬ ಕಳ್ಳನು ಕಳ್ಳನಾಗಿದ್ದರೂ ಸಹ ಅವನು ಮಾಡುವ ಕೆಲಸ ಉತ್ತಮವಾಗಿವೆ. ಉಪ್ಪಾರ ಜಾತಿಯ ಹೆಣ್ಣನ್ನು ಅಪಹರಿಸಿ ಬಂಧನದಲ್ಲಿಟ್ಟ ಸಾಹುಕಾರನ ಆಳುಗಳನ್ನು ಹೊಡೆದು ಅವಳನ್ನು ರಕ್ಷಿಸಿ, ಅವಳ ಗಂಡ ಮತ್ತು ಮಕ್ಕಳ ಹತ್ತಿರ ಸೇರಿಸುತ್ತಾನೆ. ಮತ್ತು ಸಂಬಂಧಿಕರೋರ್ವರ ಮನೆಯಲ್ಲಿಯೇ ಕಳ್ಳತನ ಮಾಡುವ ಸಂದರ್ಭ ಒದಗಿ ಬಂದಾಗ ಕನ್ನ ಹಾಕಿ ಕದ್ದ ಆಭರಣಗಳನ್ನು ಅವರ ತಲೆದಿಂಬಿಗಿರಿಸಿ ಹೊರ ಬಂದು ತನ್ನ ಗೆಳೆಯರಿಗೆ ಬಂಗಾರವನ್ನೆಲ್ಲ ನೆಲಮಾಳಿಗೆಯಲ್ಲಿಟ್ಟಿದ್ದಾರೆಂದು ಹೇಳುವುದು ಅವನಲ್ಲಿಯ ಮನುಷ್ಯತ್ವವನ್ನು ಅರುಹುತ್ತದೆ. ಸತ್ತು ಚಿತೆಯೇರಿದ್ದ ಸೀತೆಯನ್ನು ಮಂತ್ರವಾದಿ ಭಟಜಿ ಮತ್ತು ಗಿರಿಯಣ್ಣರು ರಕ್ಷಿಸಿ ಅವಳನ್ನು ಸಹೋದರಿಯಂತೆ ಕಂಡು ಅವಳ ಗಂಡನ ಮನೆಗೆ ಸೇರಿಸುವುದು ಸ್ತುತ್ಯರ್ಹ ಕೆಲಸವಾಗಿದೆ. ಇಂತಹ ಉತ್ತಮ ಮಾನವೀಯ ಕೆಲಸಗಳನ್ನು ಕಾದಂಬರಿಯು ಸಾದರಪಡಿಸುತ್ತದೆ. ಆದ್ದರಿಂದ ಇದೊಂದು ವಾಸ್ತವವಾದೀ ಕಾದಂಬರಿಯಾಗಿದೆ. "......ಐತಿಹಾಸಿಕ ಸಂದರ್ಭದಲ್ಲಿಯೇ ಈ ಕಾದಂಬರಿಯನ್ನು ಇಟ್ಟು ನೋಡಿದರೆ, ಅದರ ಐತಿಹಾಸಿಕತೆಯನ್ನು ಲಕ್ಷ್ಯದೊಳಗಿಟ್ಟುಕೊಂಡೇ ಅದನ್ನು ಪರೀಕ್ಷಿಸಿದರೆ ನಮಗೆ ಕಂಡುಬರುವ ಮಾತೆಂದರೆ 'ಮಾಡಿದ್ದುಣ್ಣೋ ಮಹಾರಾಯ' ಕಾದಂಬರಿ ನಿಜವಾಗಿಯೂ ಅದ್ಭುತ ರಮ್ಯ ಕಾದಂಬರಿ ಪರಂಪರೆಗೆ ಸೇರಿದೆ ಎಂಬುದು. ಈ ಕಾದಂಬರಿಗೆ ವಾಸ್ತವದ ಡ್ರೆಸ್ಸು ಹಾಕಿದ ಅದ್ಭುತ ರಮ್ಯ ಕಾದಂಬರಿ ಎಂದು ಕರೆದರೆ ತಪ್ಪಾಗಲಾರದು."[೧] ಇದರೊಂದಿಗೆ ಇದೊಂದು ಸ್ಪಷ್ಟವಾಗಿ ಮಾನವೀಕರಣವನ್ನು ನಿರೂಪಿಸುವ ಮೊದಲ ಕಾದಂಬರಿ ಎಂದೂ ಗುರುತಿಸಬಹುದಾಗಿದೆ.

ಇದೇ ಮಾನವೀಕರಣದ ಗತ್ತಿನೊಳಗೆ ಕೆರೂರ ವಾಸುದೇವಾಚಾರ್ಯರ 'ಇಂದಿರೆ', ಮಾಸ್ತಿ ಅವರ 'ಚಿಕ್ಕವೀರ ರಾಜೇಂದ್ರ', ದೇವುಡು ಅವರ 'ಮಹಾಬ್ರಾಹ್ಮಣ', 'ಅಂತರಂಗ', ಅನಕೃ ಅವರ 'ಸಂಧ್ಯಾರಾಗ' ಕಾದಂಬರಿಗಳು ಹೊರಬಂದವು. 'ಮಹಾಬ್ರಾಹ್ಮಣ' ಕಾದಂಬರಿಯು ಮಾನವತಾವಾದದ ಪಡಿಯಚ್ಚಾಗಿ ಹೊರಬಂದಿದೆ. ವಾಸ್ತವ ಮೌಲಿಕತೆಯನ್ನು ಪ್ರಚುರಪಡಿಸುತ್ತದೆ. ವಿನಾಯಕ ಕೃಷ್ಣಗೋಕಾಕ ಅವರ 'ಸಮರಸವೇ ಜೀವನ'ವು ಒಂದು ಮೌಲಿಕ ಕೃತಿ. ಮಾನವನು ತನ್ನ ಜೀವಿತ ಸಂದರ್ಭದಲ್ಲಿ ಕಂಡುಕೊಳ್ಳುವ ಯಥಾರ್ಥತೆ ಮತ್ತು ಸಮಾಜಕ್ಕೆ ಕೊಡುವ ಅರ್ಥವಂತಿಕೆಯ ಬದುಕಿನ ಮೌಲ್ಯವನ್ನು ಎತ್ತಿ ಹಿಡಿಯುತ್ತದೆ. ಜೀವನದಲ್ಲಿ ವಿರಸಕ್ಕೆ ಅರ್ಥವಿಲ್ಲ, ಸರಸ-ಸಮರಸಗಳೇ ಮಾನವನ ಸೌಖ್ಯದ ಮೂಲ ಲಕ್ಷಣಗಳೆನ್ನುವ ಮಾತು ಕೃತಿಯದಾಗಿದೆ. ಮಾನವಪ್ರೀತಿಯೇ ಮೂಲ ಸೆಲೆಯಾದ ಈ ಕಾದಂಬರಿಯಲ್ಲಿ ಪಾತ್ರಗಳು ವಾಸ್ತವಿಕ ಪ್ರಜ್ಞೆಯನ್ನು ವಿಜೃಂಭಿಸುವಲ್ಲಿ ಯಶಸ್ವಿಯಾಗುತ್ತವೆ. "ವ್ಯಕ್ತಿ-ಕುಟುಂಬ-ಸಮಾಜ-ರಾಷ್ಟ್ರ-ಪ್ರಪಂಚ-ವಿಶ್ವ ಈ ಸಂಬಂಧಗಳನ್ನೂ, ಚೇತನ-ಮನಸ್ಸು-ದೇಹ ಇವುಗಳ

ಸಂಬಂಧಗಳನ್ನೂ ಅಳವಡಿಸಿಕೊಂಡ ಜೀವನ ದರ್ಶನವು ಇವುಗಳೆಲ್ಲದರ ನಡುವೆ ಸಾಮರಸ್ಯವನ್ನು ಸಾಧಿಸಬಲ್ಲದು, ಮಾತನ್ನು ಮೀರಿದ ಶಾಂತಿಯನ್ನು ತಂದುಕೊಡಬಲ್ಲದು ಎನ್ನುವುದು ಅವರ ದರ್ಶನ''[೨] ಎಂಬ ಎಲ್. ಎಸ್. ಶೇಷಗಿರಿರಾಯರ ಮಾತು 'ಸಮರಸವೇ ಜೀವನ'ವು ಮಾನವತಾವಾದವನ್ನು ಎತ್ತಿ ಹಿಡಿಯುತ್ತದೆ ಎಂಬುದನ್ನು ಸ್ಪಷ್ಟಪಡಿಸುತ್ತದೆ.

'ಚಿಕ್ಕವೀರರಾಜೇಂದ್ರ'ವು ಬ್ರಾಹ್ಮಣ ಹೆಣ್ಣಿನ ಶೋಷಣೆಗೆ ಕಾರಣವಾಗಿದೆ ಎಂದೂ, ಬ್ರಾಹ್ಮಣ ಕನ್ಯೆ ಪಾಪಾ(ಭಗವತಿ)ಳನ್ನು ಅನೈತಿಕತೆಗೆ ಅಣಿಗೊಳಿಸುವುದು ಅಮಾನವೀಯವೆಂಬುದು ಮನಜ ಅವರ ವಿಮರ್ಶೆಯ ತಿರುಳು. ಆದರೆ ಸಿ. ಎನ್. ರಾಮಚಂದ್ರನ್ ಅವರು "ಚಿಕ್ಕವೀರರಾಜೇಂದ್ರದಲ್ಲಿ ಜಾತೀಯತೆಯ ಪ್ರಶ್ನೆಯನ್ನೆತ್ತುವುದು ಅಸಮರ್ಥನೀಯ ಹಾಗೂ ದುರದೃಷ್ಟಕರ ಎಂದೇ ತೋರುತ್ತದೆ. 'ಮಾಸ್ತಿಯವರು ಬ್ರಾಹ್ಮಣರನ್ನು ಎತ್ತಿ ಹಿಡಿಯಲೇ ಮತ್ತು ಇತರರನ್ನು ಅವಹೇಳನ ಮಾಡಲೇ ಈ ಕೃತಿಯನ್ನು ರಚಿಸಿದ್ದಾರೆನ್ನುವವರು ಕೃತಿಯಲ್ಲಿ ಬರುವ ಗೌಣ ಪಾತ್ರಗಳನ್ನು ಬೇಕೆಂದೇ ಅಲಕ್ಷಿಸುತ್ತಾರೆಂದು ತೋರುತ್ತದೆ. ಹಾರ್ಡಿಯ ಕಾದಂಬರಿಗಳಲ್ಲಿ ಬರುವ ಗೌಣ ಪಾತ್ರಗಳಂತೆ 'ಚಿಕ್ಕವೀರರಾಜೇಂದ್ರ'ದಲ್ಲಿ ಬರುವ ಚೋಮ, ಕೊಗ್ಗನ ಹೆಂಡತಿ ಮುಂತಾದವರು ಮಾಸ್ತಿಯವರ ಜಾತ್ಯತೀತ ಮಾನವತೆಯ ಶ್ರದ್ಧೆಗೆ ಕನ್ನಡಿ ಹಿಡಿಯುತ್ತವೆ. "ತನ್ನ ಒಡೆಯರಿಗಾಗಿ ನಗುತ್ತಲೇ ಜೀವ ಕೊಡುತ್ತಾನೆ ಚೋಮ. ದೇವಮ್ಮಾಜಿಯ ಮಗುವನ್ನು ನೋಡಲು ಅದರ ಮುಖದ ಮೇಲಿನ ಹೊದಿಕೆ ಸರಿಸಿದಾಗ 'ಮುಖಕ್ಕೆ ಬಿಸಿಲು ತಾಗಿ ಮಗು ಮುಖಸಿಣಿಕಿತು. ಕೊಗ್ಗನ ಹೆಂಡತಿ 'ಅಯ್ಯೋ ಬಿಸಿಲು ದಣಿಯರೇ' ಎಂದು ಬಾಗಿ ತನಗೆ ಸಾಲದ ತನ್ನ ಸೆರಗನ್ನು ಮಗುವಿಗೆ ಬಿಸಿಲು ತಾಗದಂತೆ ಅಡ್ಡ ಹಿಡಿದಳು". ಇಲ್ಲಿ ಲೇಖಕರು ಗುರುತಿಸಿರುವ ಮಾತೃತ್ವ-ಮಾನವತೆ ಯಾವ ಜಾತಿಯನ್ನೂ ಮೀರಿದುದು. ಇದರ ಧ್ವನಿ ಹಾರ್ಡಿಯ Dynastsನಂತೆ ಇದೆ. ರಾಜ್ಯಗಳು ಏಳಬಹುದು, ಬೀಳಬಹುದು. ಆದರೆ ಎಲ್ಲಿಯ ತನಕ ಕಷ್ಟಜೀವಿಗಳಲ್ಲಿ ಮಾನವತೆ ಮಿಡಿಯುತ್ತಿರುತ್ತದೆಯೋ, ಅಲ್ಲಿಯ ತನಕ ಮನುಕುಲದ ಭವಿಷ್ಯದ ಬಗ್ಗೆ ಚಿಂತಿಸಬೇಕಾಗಿಲ್ಲ''[೩]

ಭಾರತದ ಹಳ್ಳಿಗಳ ಮೇಲೆ ಪಾಶ್ಚಾತ್ಯ ಸಂಸ್ಕೃತಿಯು ತೀವ್ರತರವಾಗಿ ದಾಳಿ ಮಾಡುತ್ತಿರುವ ಸಂದರ್ಭದಲ್ಲಿ ಗ್ರಾಮೀಣ ಸಮಾಜ ವ್ಯವಸ್ಥೆಯು ಅಧೋಗತಿಗೆ ಸಾಗುವ ಪರಿಸ್ಥಿತಿಯಲ್ಲಿ ರಾವ್ ಬಹದ್ದೂರ ಅವರ 'ಗ್ರಾಮಾಯಣ' ಕಾದಂಬರಿ ಹೊರಬಂದಿತು. ಶುದ್ಧ ಗ್ರಾಮೀಣ ಪರಿಸರದಲ್ಲಿ ಊಳಿಗಮಾನ್ಯ ಪದ್ಧತಿ ಮತ್ತು ಧರ್ಮದ ಪಾತಳಿಯನ್ನು ಅವಲಂಬಿಸಿ ಹಲವಾರು ಅವಘಡಗಳನ್ನು ನಿರೂಪಿಸುತ್ತದೆ. ಊಳಿಗಮಾನ್ಯ ಪದ್ಧತಿಯು ಅವನತಿಯತ್ತ ಸಾಗುತ್ತಿದೆ. ಅದರ ಬೆನ್ನ ಹಿಂದೆಯೇ ಮಾನವತೆಯ ಜಯ ಸ್ಪಷ್ಟವಾಗಿಲ್ಲದಿದ್ದರೂ ಸೂಕ್ಷ್ಮವಾಗಿ ಕಾಣಿಸುತ್ತದೆ. ಜಯ ಸಾಧಿಸಬೇಕೆನ್ನುವ ಹಂತದಲ್ಲಿಯೇ ಹಳ್ಳಿಯ ಸರ್ವನಾಶವಾಗುವುದು ದುಷ್ಟಶಕ್ತಿಗಳ ಹೆಸರೂ ಇಲ್ಲದಂತಹ ಅವಸಾನವನ್ನು

ಎತ್ತಿ ಹಿಡಿಯುತ್ತದೆ. ಪಾದಳ್ಳಿಯ ಬಾಳಾಚಾರ್ಯರು ತುಂಬ ಮಾನವಪ್ರೀತಿಯುಳ್ಳ ವ್ಯಕ್ತಿ. ಗ್ರಾಮ ನಾಶ ಹೊಂದುತ್ತದೆ ಎಂಬ ಸುಳಿವು ದೊರೆತಂದಿನಿಂದಲೇ ಅದರ ನಿವಾರಣೆಗೆ ಶ್ರಮಿಸಿದವರು. ದೇವರಲ್ಲಿ-ಧರ್ಮದಲ್ಲಿ ಸಂಪೂರ್ಣ ನಂಬಿಕೆಯಿಟ್ಟು ಕಷ್ಟದ ಸಂದರ್ಭಗಳಲ್ಲಿನ ಸಮಾಧಾನಕ್ಕಾಗಿ ಭಾಗವತಕ್ಕೆ ಮೊರೆ ಹೋಗುತ್ತಾರೆ. ಆದರೆ ತನ್ನ ಕುಟುಂಬದಲ್ಲಿಯೇ ಹಾಳಾಗುತ್ತಿರುವ ಮೌಲ್ಯಗಳನ್ನು ಗುರುತಿಸಲು ವಿಫಲರಾಗುತ್ತಾರೆ.

ಕಾದಂಬರಿಯನ್ನು ಮಾನವೀಕರಣ ಮತ್ತು ಅಮಾನವೀಕರಣಗಳೆರಡೂ ದಿಕ್ಕಿನಲ್ಲಿ ಸಾಗುವಂತೆ ಮಾಡುವ Double acting ಪಾತ್ರಗಳು ಕಾದಂಬರಿಯಲ್ಲಿವೆ. ಆ ಪಾತ್ರಗಳು ಖಳನಾಯಕನ ಸ್ಥಾನ ವಹಿಸುತ್ತವೆ. ಡಾಂಭಿಕ ಪಡದಯ್ಯ, ಆಸ್ತಿವಂಚಕ ಲಿಂಗಪ್ಪ ಮತ್ತು ಬಾಪುಗೌಡ- ಈ ಮೂವರನ್ನು ಡಾ.ಮಹಾದೇವ ಕಣವಿ ಅವರು 'ಜಾತ್ರೆಗೆ ಬಂದ ಹೆಂಗಸರಂತೆ' ಎಂದು ಟೀಕಿಸಿದ್ದಾರೆ. ಅಂದರೆ ಲಾಭ ಮಾತ್ರ ಬರಲಿ, ಅದು ಯಾವ ಮಾರ್ಗದಲ್ಲಾದರೂ. ತಮ್ಮಿಂದ ಏನೂ ನಷ್ಟ ಆಗಿರಬಾರದು ಎನ್ನುವುದು ಅವರ ತತ್ವ. ಇವರ ಚಟುವಟಿಕೆಗಳೆಲ್ಲ ಅನೈತಿಕತೆಯನ್ನು ಪ್ರಚೋದಿಸುತ್ತಿರುವಾಗ ಮಾನವೀಕರಣದ ವಾಹಕಗಳಾಗುವುದು ಹೇಗೆನ್ನುವ ಪ್ರಶ್ನೆ ಉದ್ಭವಿಸುತ್ತದೆ. ಈ ಪಾತ್ರಗಳು ಇಲ್ಲದಿದ್ದರೆ ಊರಲ್ಲಿ ಚಟುವಟಿಕೆಗಳಿಲ್ಲ-ಚಟುವಟಿಕೆಗಳಿಲ್ಲದಿದ್ದರೆ ಇನ್ನುಳಿದವರು ಅಂತಹ ಚಟುವಟಿಕೆಗಳನ್ನು ನಿಯಂತ್ರಿಸುವ ಸಲುವಾಗಿಯಾದರೂ ಒಳ್ಳೆಯ ಕೆಲಸಗಳನ್ನು ಮಾಡಬೇಕು. ಇದು ಉಡಾಫೆಯ ಮಾತಾಗಬಹುದು. 'ಕಳ್ಳರಿರುವುದರಿಂದಲೇ ಪೋಲಿಸರಿಗೆ ಕೆಲಸ' ಎನ್ನುವಂತೆ. ಆದರೆ ಕಾದಂಬರಿಯಲ್ಲಿ ನಡೆಯುವುದೆಲ್ಲ ಹೀಗೆಯೇ.

ಸಮತಾವಾದಿಯೂ, ಪ್ರಜಾಪ್ರಭುತ್ವವಾದಿಯೂ ಆದ ಕುವೆಂಪು ಅವರು ಇವೆರಡರ ನಡುವೆ ಮಾನವತಾವಾದವನ್ನು ಪ್ರತಿಪಾದಿಸಿದರು. ಶ್ರೀಮಂತರ ಪರವಾಗಿಲ್ಲದ, ದೀನದಲಿತರ ವಿರೋಧವಾಗಿಲ್ಲದ ಸಮಾನಾಂತರ ಕಾಯ್ದುಕೊಳ್ಳುವಿಕೆಯ ಅವರ ಧೋರಣೆಯು ಮಾನವೀಕರಣದ ಸಂದರ್ಭದಲ್ಲಿ ಬಹುಮುಖ್ಯವಾಗುತ್ತವೆ. "ಮೇಲುನೋಟಕ್ಕೆ ಎರಡೂ (ಕಾನೂರು ಹೆಗ್ಗಡತಿ, ಮಲೆಗಳಲ್ಲಿ ಮದುಮಗಳು) ಕಾದಂಬರಿಗಳು ಜಮೀನ್ದಾರರು ಮತ್ತು ಅವರ ಮಕ್ಕಳ ಏಳುಬೀಳಿನ ಕಥಾಹಂದರವುಳ್ಳವು. ಆದರೆ ಲೇಖಕನ ಮನುಷ್ಯವಾದೀ ಧೋರಣೆಯಿಂದ (ಇಲ್ಲಿ ಯಾರೂ ಮುಖ್ಯರಲ್ಲ, ಯಾರೂ ಅಮುಖ್ಯರಲ್ಲ; ಯಾವುದೂ ಯಃಕಶ್ಚಿತವಲ್ಲ) ಕೃತಿಗಳು ದುರ್ಬಲ ವರ್ಗಗಳ ಪರವಾಗಿದ್ದು, ವ್ಯವಸ್ಥೆಯ ಎದುರು ಪ್ರತಿಭಟನೆ ಸಿಡಿಯುವ ಬಗೆಯ ಸಂಕೀರ್ಣ ಸ್ವರೂಪದ್ದಾಗಿದೆ"[೪] ಶೋಷಿಸುವ ವರ್ಗದ ವಿರುದ್ಧ ಅವರ ಅಂತರಾಳದಲ್ಲಿರುವ ಅನುತಾಪ ಹಾಗೂ ಕೆಲಸದವರ ಮೇಲಿರುವ ಅನುಕಂಪ ಈ ಮುಖಾಮುಖೀ ಸಂಘರ್ಷವೇ ಇವರ ಕಾದಂಬರಿಗಳ ಕೇಂದ್ರ. ಈ ಕೇಂದ್ರವೇ ಕಾದಂಬರಿ ಯಲ್ಲಿ ಮಾನವೀಕರಣದ ಚೌಕಟ್ಟನ್ನು ನಿರ್ಮಿಸುತ್ತದೆ ಮತ್ತು ಅನುಷ್ಠಾನಗೊಳಿಸುತ್ತದೆ.

ಕುವೆಂಪು ಅವರ ಕಾದಂಬರಿಗಳಲ್ಲಿನ ಮಾನವೀಕರಣವು ಮೂರು ರೀತಿಯಲ್ಲಿ ಹರವಿಕೊಂಡಿರುವುದನ್ನು ಗುರುತಿಸಬಹುದಾಗಿದೆ. ೧. ಮೇಲ್ಜಾತಿ ಪಾತ್ರಗಳ ಮಾನವೀಕರಣ, ೨. ಮೇಲ್ಜಾತಿ-ಕೆಳಜಾತಿ ಪಾತ್ರಗಳ ಮಾನವೀಕರಣ ೩. ಕೆಳಜಾತಿ ಪಾತ್ರಗಳ ಮಾನವೀಕರಣ. ಮೊದಲ ರೀತಿಗೆ ಹೂವಯ್ಯ-ರಾಮಯ್ಯ, ಸುಬ್ಬಮ್ಮ-ಸೀತೆ, ಹೂವಯ್ಯ-ಸೀತೆ, ಸುಬ್ಬಮ್ಮ ಇವರ ನಡುವೆ ಏರ್ಪಡುವ ಸಂಬಂಧಗಳೇ ಸಾಕ್ಷಿ. ಮುಕುಂದಯ್ಯ-ಚಿನ್ನಮ್ಮ, ಪಾದ್ರಿ ಜೀವರತ್ನಯ್ಯ ಮೊದಲಾದವರ ಮಾನವೀಯ ಸಂಬಂಧಗಳು ಮಹತ್ತರವಾಗಿವೆ. ಇವರು ತಮ್ಮ ಹಾಗೂ ಸಮಾಜದ ನಡುವೆ ಇಟ್ಟುಕೊಂಡಿರುವ ಬಾಂಧವ್ಯಗಳು ಸೂಕ್ಷ್ಮಜ್ಞತೆಯನ್ನು ಚುರುಕುಗೊಳಿಸುತ್ತವೆ. ಎರಡನೇ ಪ್ರಕಾರದ ಮಾನವೀಯ ಸಂಬಂಧದಲ್ಲಿ ಹೂವಯ್ಯ-ಸೋಮ, ಮುಕುಂದಯ್ಯ-ಐತ -ಪೀಂಚಲು, ಮುಕುಂದಯ್ಯ-ಗುತ್ತಿ ಇವರ ಸಂಬಂಧಗಳನ್ನು ಸಾದರಪಡಿಸುತ್ತದೆ. ಕಾನೂರು ಹೆಗ್ಗಡತಿಯಲ್ಲಿ ಹೂವಯ್ಯನು ಸೋಮನ ಕೈಗೆ ಐವತ್ತು ರೂ. ಕೊಟ್ಟಿದ್ದಾಗ-ಅದನ್ನು ಕೋಳಿ ಅಂಕವಾಡಲು ಕದ್ದು ಬಳಸಲು ಸೋಮ ತೀರ್ಮಾನಿಸುವ ರೀತಿ ಈ ಪ್ರಕಾರಕ್ಕೆ ಒಳ್ಳೆಯ ಉದಾಹರಣೆಯಾಗಬಲ್ಲದು. “ಸ್ವಾಮಿಗೆ, ತನ್ನನ್ನು ಕಾಡುತನದಿಂದ ಈ ನಾಗರಿಕ ಸ್ಥಿತಿಗೆ ತಂದು ಪೊರೆದ ಸ್ವಾಮಿಗೆ, ಯಾರಿಗೂ ಕೇಡೆಣಿಸದೆ ಎಲ್ಲರನ್ನೂ ಉದ್ಧಾರ ಮಾಡಬೇಕೆಂದು ಯತ್ನಿಸುತ್ತಿರುವ ಸ್ವಾಮಿಗೆ, ಕೀಳು ಜಾತಿಯ ಬಡಬಗ್ಗರ ಮುರಕಲು ಹರಕಲು ಗುಡಿಸಲುಗಳಿಗೆ ಔಷಧಿ ಪಥ್ಯಗಳನ್ನು ಕೊಂಡೊಯ್ದು ನೀಡಿ ಕಾಪಾಡಿ ದೇವರಂತಿರುವ ಸ್ವಾಮಿಗೆ ದ್ರೋಹವೆಸಗಿದಂತಾಗುತ್ತದಲ್ಲವೇ?”[೫] ಅದೇ ರೀತಿ ‘ಮದುಮಗಳು’ವಿನಲ್ಲಿ ಐತ ಮತ್ತು ಅವನ ಹೆಂಡತಿ ಪೀಂಚಲು ಜೊತೆ ನಡೆದುಕೊಳ್ಳುವ ರೀತಿಯ ಸೂಕ್ಷ್ಮತೆಯನ್ನು ಗಮನಿಸಬಹುದು. ಪೀಂಚಲು ಒಬ್ಬಳೇ ಇದ್ದಾಗ ಅವನು ಅಕಸ್ಮಾತ್ ಬೀಳುತ್ತಿರುವವಳನ್ನು ಹಿಡಿದು ನಿಲ್ಲಿಸಿದಾಗ “...ಐತ ಅಪೇಕ್ಷಿಸಿದ್ದನ್ನು ಮುಕುಂದಯ್ಯ ಅಪೇಕ್ಷಿಸಿದ್ದರೆ ಅವಳು ‘ಇಲ್ಲ’ ಎನ್ನುವ ಸ್ಥಿತಿಯಲ್ಲಿರಲಿಲ್ಲ. ಒಲ್ಲೆ ಎನ್ನುತ್ತಿರಲಿಲ್ಲ. ತನಗಿಂತಲೂ ಮಹತ್ತಾದುದಕ್ಕೆ ತನ್ನನ್ನು ಅರ್ಪಿಸಿಕೊಳ್ಳಲು ಅವಳು ಹಿಂಜರಿಯುತ್ತಿರಲಿಲ್ಲ. ತಾನು ಬಹು ಪೂರ್ವದಿಂದಲೂ ಮೆಚ್ಚಿಕೊಂಡೇ ಬಂದಿರುವ ತನ್ನ ಒಡೆಯನಿಗೆ ತೋರುವ ಗೌರವವೆಂದೂ, ವಿಧೇಯತೆಯ ಅಂಗವೆಂದೂ, ಅವಳು ತನ್ನನ್ನು ಸಮರ್ಪಣಾಭಾವದಿಂದಲೇ, ಸಂತೋಷವಾಗಿಯೇ, ಪಾಪಭಯಲೇಶವಿಲ್ಲದ ಆತ್ಮ ನೈವೇದ್ಯ ರೂಪದಿಂದಲೆ ಒಪ್ಪಿಸಿಕೊಂಡು ಬಿಡುತ್ತಿದ್ದಳು. ಹಾಗೆ ಒಪ್ಪಿಸಿಕೊಂಡೂ, ಐತನಿಗೆ, ತನ್ನ ಕೈಹಿಡಿದ ಗಂಡನಿಗೆ, ವಂಚನೆ ಮಾಡುತ್ತಿದ್ದೇನೆ ಎಂಬ ಭಾವನೆ ಅವಳಲ್ಲಿ ಇನಿತೂ ಇರಲಿಲ್ಲ. ಆ ಭಾವನೆ ಇದ್ದೂ ಒಂದು ವೇಳೆ ಅವಳು ಒಪ್ಪಿಸಿಕೊಂಡಿದ್ದರೆ, ಅವಳು ಮೋಸಗಾರ್ತಿಯಾಗುತ್ತಿದ್ದಳು, ಜಾರೆಯಾಗುತ್ತಿದ್ದಳು, ಕುಟಿಲೆಯಾಗುತ್ತಿದ್ದಳು”[೬] ಈ ಅರ್ಪಣಾ ಭಾವವನ್ನೇನಾದರೂ ಮುಕುಂದಯ್ಯ ಬಳಸಿಕೊಂಡಿದ್ದರೆ ಐತನ ದೃಷ್ಟಿಯಲ್ಲಿ ತೀರಾ ಹೀನನಾಗುತ್ತಿದ್ದನು. ಮುಕುಂದಯ್ಯ ಐತನ ಒಡವೆಯನ್ನು ಅಪಹರಿಸುವ ಪ್ರಯತ್ನವಾಗಲಿ, ಕದ್ದುಬಳಸುವ ತಂತ್ರವಾಗಲಿ ಮಾಡಲಿಲ್ಲದ್ದು ಅವನ ಉತ್ತಮ ಮಾನವೀಯ

ಮೌಲ್ಯವಾಗಿದೆ. ಇನ್ನು ಮೂರನೇ ರೀತಿಯ ಮಾನವೀಕರಣವನ್ನು ಗಮನಿಸಬೇಕೆಂದರೆ, ಗುತ್ತಿ-ತಿಮ್ಮ, ಐತ-ಪೀಂಚಲು, ಸೋಮ, ಬೈರ ಮೊದಲಾದವರ ನಡವಳಿಕೆಯಲ್ಲಿ ಕಾಣಬಹುದು.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ತನ್ನ ಕೇರಿಯ ಒಡೆತನದಲ್ಲಿದ್ದ ಕೇರಿಯ ಹೆಣ್ಣಾಳನ್ನು ಇನ್ನೊಬ್ಬ ಶ್ರೀಮಂತನ ಒಡೆತನದಲ್ಲಿದ್ದ ಕೇರಿಗೆ ಮದುವೆ ಮಾಡಲು ಸಮ್ಮತಿ ನೀಡುವುದಿಲ್ಲ. ಇದಕ್ಕೆ ಕಾರಣ 'ಒಡೆಯರಿಗೆ ಬೇಕಾಗಿದ್ದುದು ಜೀತ ಮಾಡಲು ಒಂದು ಆಳು. ತಮ್ಮ ಹೊಲಗೇರಿಯ ಒಂದು ಹೆಣ್ಣನ್ನು ಹೊರಗೆ ಕೊಟ್ಟರೆ ತಮ್ಮ ಕೆಲಸಕ್ಕೆ ಒಂದಾಳು ಖೋತಾ ಬೀಳುತ್ತದೆ. ಆದ್ದರಿಂದ ಹೆಣ್ಣನ್ನು ಕೇರಿಯ ಗಂಡೇ ಮದುವೆಯಾಗಬೇಕು ಎಂಬುದು ಅವರ ಕಟ್ಟಪ್ಪಣೆ. ಬೇರೆ ರೀತಿಯಿಂದ ವರ್ತಿಸಿದರೆ ಆ ಹೆಣ್ಣು ಇನ್ನೊಬ್ಬ ಬೇರೆ ಹಳ್ಳಿಯ ಕೇರಿಯವನಿಂದ ತಾಳಿ ಕಟ್ಟಿಸಿಕೊಂಡಿದ್ದರೂ ಸರಿ. ಅವಳನ್ನು ಎಳೆದು ತರಿಸಿ, ತಾಳಿ ಕೀಳಿಸಿ, ತಮ್ಮ ಕೇರಿಯವನಿಗೇ ಮದುವೆ ಮಾಡಿಸುತ್ತಿದ್ದರೆಂಬುದರಲ್ಲಿ ಸಂದೇಹವಿರಲಿಲ್ಲ.[೭] ಇಂತಹ ಕಠೋರ ನೀತಿಯನ್ನು ಅನುಸರಿಸುವ ಶ್ರೀಮಂತಿಕೆಯ ದರ್ಪಣದಲ್ಲಿ ಮಾನವೀಯತೆ ಕಾಣುವುದಿಲ್ಲ. ಶ್ರೀಮಂತರು ಮನುಷ್ಯನನ್ನು ಬೆಳೆಯಲು ಬಿಡುವುದಿಲ್ಲ. ಚಿಟ್ಟಳ್ಳಿ ಕಲ್ಲಯ್ಯಗೌಡರು, ಹಳೆಮನೆ ಸುಬ್ಬಣ್ಣ ಹೆಗ್ಗಡೆಯವರು, ಸಿಂಬಾವಿ ಭರಮ ಹೆಗ್ಗಡೆಯವರು, ಲಕ್ಕುಂದದ ಹಳೇಪೈಕದ ಸೇಸನಾಯಕರು ಮೊದಲಾದವರೆಲ್ಲ ವಸೂಲಿ ಸಾಬರ ಸೇವೆಯನ್ನು ದುಡ್ಡು ಇಲ್ಲವೆ ಭತ್ತ ಇಲ್ಲವೆ ಅಡಕೆಗೆ ಪಡೆಯುತ್ತಿದ್ದರು. ಇದರಿಂದ ಸಾಮಾನ್ಯರಿಗೆ ಸಂಕಷ್ಟ ಎದುರಾಗುತ್ತಿತ್ತು. ಹೀಗಾಗಿಯೇ "ಅಮಾನವೀಯ ವಾತಾವರಣವೇ ಇಲ್ಲಿ ಎಲ್ಲ ಕಡೆಯೂ ವಿಜೃಂಭಿಸುತ್ತದೆ....ಮನುಷ್ಯರ ಹಿಂಸಾತ್ಮಕ ಮನೋಧರ್ಮಗಳಿಗೆ ಸಾಂಕೇತಿಕವಾಗಿಯೂ ನಿಲ್ಲುತ್ತದೆ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಬೇಟೆಯೆನ್ನುವುದು ಮನುಷ್ಯರು ಮನುಷ್ಯರನ್ನೇ ಬೇಟೆಯಾಡುವ ಕ್ರಿಯೆಯಾಗಿ ಪ್ರಧಾನ ಪಾತ್ರ ವಹಿಸುತ್ತದೆ."[೮] ಇಂತಹ ಮಾನವೀಯ ಮತ್ತು ಅಮಾನವೀಯ ವಾದಗಳ ನಡುವೆ ರಾಜೀ ಮಾಡಿಸುವುದು ಯಥಾಸ್ಥಿತಿ ಮುಂದುವರಿಕೆಯ ಕೆಲಸವೇ ಆಗಿರುತ್ತದೆ. ಕುವೆಂಪು ಅವರು ವಾಸ್ತವ ಜಗತ್ತಿಗೂ ಕಲ್ಪನಾ ಪ್ರಪಂಚಕ್ಕೂ ಭಿನ್ನವೆನ್ನದ ರೀತಿಯಲ್ಲಿ "ಇರುವ ವ್ಯವಸ್ಥೆಯಲ್ಲೇ ಅಲ್ಪಸ್ವಲ್ಪ ಬದಲಾವಣೆ ಮಾಡಿ ಮೂಲಭೂತ ಅಡಿಪಾಯವನ್ನು ಪ್ರಶ್ನಿಸದಂತೆ ಮಾಡುವುದೂ ಇದರ ಒಂದು ಭಾಗವೇ. ಈ ಕಾರ್ಯದಲ್ಲಿ ಮಾನವತಾವಾದಿಗಳು, ಸಮಾಜ ಸುಧಾರಕರು, ಜನೋಪಕಾರಿಗಳೂ ಇಂಥ ಬೂರ್ಷ್ವಾ ಹೋರಾಟ ನಡೆಸುತ್ತಾರೆಂದು ಮಾರ್ಕ್ಸ್ ಹೇಳುತ್ತಾನೆ. ಹೂವಯ್ಯ ಮಾನವೀಯತೆಯ ಸ್ವಭಾವದಿಂದ, ಚಂದ್ರಯ್ಯಗೌಡರ ದರ್ಪಕ್ಕೆ ಬದಲಾಗಿ ವಿಶ್ವಾಸವನ್ನು ತೋರಿ, ಭಯವನ್ನು ಗೌರವವಾಗಿಸಿಕೊಳ್ಳುತ್ತಾನೆ- ತಂತ್ರದಿಂದಲ್ಲ, ಸಹಜ ಅನುಕಂಪೆ ಯಿಂದ್ ಹೀಗಾದಾಗ ಮಾತ್ರ ವ್ಯವಸ್ಥೆಯನ್ನು ಶಾಂತವಾಗಿ ಬದಲಾಯಿಸಲು ಸಾಧ್ಯ. ತತ್‌ಕ್ಷಣವೇ ಬದಲಾಗಬೇಕೆಂದು ಬಯಸಿದರೆ ಅದು ಅನಾಹುತಕ್ಕೆ ಎಡೆ ಮಾಡಿಕೊಡುತ್ತದೆ. "ಟಾಲ್‌ಸ್ಟಾಯ್‌ಗೂ

ಕುವೆಂಪು ಅವರಿಗೂ ಕೆಲವು ಆಕಸ್ಮಿಕವಾದ ಸಾಮ್ಯಗಳೂ ಇವೆ. ಇಬ್ಬರೂ ಜಮೀನುದಾರ ವರ್ಗದಿಂದ ಬಂದು ಬಡವರ ಮೇಲಿನ ಮಹಾಪ್ರೀತಿಯಿಂದ ಸಹಾನುಭೂತಿಯಿಂದ ಅವರ ಬದುಕನ್ನು ಕಂಡಿರಿಸಿದವರು. ಶ್ರೇಷ್ಠ ಮಾನವತಾವಾದಿಗಳು ಮತ್ತು ಮಹಾನ್ ಕಲಾವಿದರು.”[೧೦]

ಕನ್ನಡದ ಪ್ರಾದೇಶಿಕ ಕಾದಂಬರಿಗಳಲ್ಲಿ ಪ್ರಮುಖ ಸ್ಥಾನವನ್ನು ಗಳಿಸಿರುವ 'ನಿಸರ್ಗ'ವು ಬೆಳಗಾಂ ಜಿಲ್ಲೆಯ ಭಾಷೆ, ಪರಿಸರ, ಆಚರಣೆ ಹಾಗೂ ಮಾನವೀಯ ಮೌಲ್ಯಗಳನ್ನು ಸಾರವತ್ತಾಗಿ ವಿವರಿಸುತ್ತದೆ. ಜೈನಧರ್ಮದ ನೀತಿ ನಿಯಮಗಳನ್ನು ಒಂದು ಒಡಲಲ್ಲಿ ಕಚ್ಚಿಕೊಂಡು, ಇನ್ನೊಂದೆಡೆ ಆ ನೆಲದ ಮಾನವ ಸಂಪತ್ತಿನ ಉನ್ನತ ಮೌಲ್ಯಗಳನ್ನು ತುಂಬಿಕೊಂಡು ಇಡೀ ಕಾದಂಬರಿ ಲೋಕಕ್ಕೆ ಅನಾವರಣಗೊಳಿಸಿದೆ. ಧರ್ಮದ ಆಚರಣೆಗಳನ್ನು ಅನುಷ್ಠಾನಗೊಳಿಸುವಾಗ ಕೆಲವೊಂದು ಮೌಲ್ಯಗಳು ಗಾಳಿಯಲ್ಲಿ ತೇಲಿ ಹೋಗುವುದುಂಟು. ಇದಕ್ಕೆ ಅನಂತಮೂರ್ತಿ ಅವರ 'ಸಂಸ್ಕಾರ' ಕಾದಂಬರಿಯೂ ಉತ್ತಮ ಉದಾಹರಣೆಯಾಗಿದೆ. ಮತ್ತು 'ನಿಸರ್ಗ'ದಲ್ಲಿ 'ತಾರಾಳ ಕೂಡಿಕೆ ಸಂದರ್ಭದಲ್ಲಿ ಈ ಮಾತು ಸತ್ಯವೆನಿಸುತ್ತದೆ. ಇನ್ನೊಂದು ನಿಟ್ಟಿನಲ್ಲಿ ಅದು ಅನಿವಾರ್ಯವಾದ್ದರಿಂದ ಅದುವೇ ಸಂಗತ ಎನ್ನಿಸುತ್ತದೆ. ಕಾದಂಬರಿಯು ಮಾನವೀಯ ಅನುಕಂಪವನ್ನು ಸಾರುವುದರ ಜೊತೆಗೆ ಓದುಗರಿಂದಲೂ ಗಳಿಸುತ್ತದೆ. ತಾರಾ-ಅನಂತ ಇವರ ಸಂಬಂಧ ಮಾನವೀಯ ಚೌಕಟ್ಟನ್ನು ನಿರ್ಮಿಸಿಕೊಳ್ಳುವಲ್ಲಿ ಯಶಸ್ವಿಯಾಗುತ್ತದೆ. ತಾರಾ-ಭರಮಾ(ಗಂಡ)ನ ಜೊತೆಯ ಬದುಕು ತೀರಾ ಅಸಹನೀಯ. ಹೆಣ್ಣು ಜೀವ ಅನುಭವಿಸುವ ಕಷ್ಟವು ಯಾವ ಮನುಷ್ಯನಿಗೂ ಬೇಡ ಎನಿಸುವ ಅನೇಕ ಸಂದರ್ಭಗಳು ಕೃತಿಯಲ್ಲಿವೆ. ಕಾಲ್ಪನಿಕ ಚೌಕಟ್ಟಿನಲ್ಲಿರುವ ಈ ಘಟನೆಗಳು ವಾಸ್ತವ ಜಗತ್ತಿನಲ್ಲಿ ಮಾನವೀಯ ಮೌಲ್ಯಗಳೊಂದಿಗೆ ನಡೆಸುವ ಸಂಘರ್ಷ ತುಂಬ ವಿಪರ್ಯಾಸವೆನಿಸುತ್ತವೆ. ಅನಂತನಲ್ಲಿ ಅನುರಕ್ತಳಾಗುವ ತಾರಾ ಅನುಭವಿಸಿದ ಪ್ರೀತಿ ಅಲ್ಪವೇ ಆದರೂ ಅವಳಿಗೆ ಅದು ಜೀವದ್ರವವಾಗಿತ್ತು. ಭರಮಾನ ಜೊತೆಯಲ್ಲಿದ್ದ ದಿನಗಳು ನರಕಸದೃಶವಾದರೆ, ನಂತರ ಅಪ್ಪಣ್ಣನೊಂದಿಗೆ ಮಾಡಿದ 'ಕೂಡಿಕೆ'ಯಿಂದ ನೆಮ್ಮದಿಯ ಬಾಳು ಸಾಗಿತು. ಆದರೆ ಅನಂತನ ಪ್ರೀತಿಯನ್ನು ಪ್ರತಿ ಹೆಜ್ಜೆಗೂ ಅವಳ ಜೀವ ಬಯಸುತ್ತಿತ್ತು. ಒಂದು ರೀತಿಯ ಮಾನವ ಸಹಜ ಸಂಬಂಧಗಳಿಗೆ ತಳುಕು ಹಾಕಿಕೊಳ್ಳುವ ಇವರ ಬಂಧುತ್ವವು, ಕೊನೆಗೆ ಒಬ್ಬೊಬ್ಬರ ಮುಖ ನೋಡದೆ ಸಾಯುವುದು ತುಂಬಾ ವಿಷಾದವೆನಿಸಿದರೂ ಅವರು ಪ್ರೇಮದ ಪ್ರತೀಕರಾಗಿ ಒಂದೇ ಚಿತೆಯಲ್ಲಿ ದೇಹ ದಹಿಸುತ್ತಾರೆ.

ಕಾದಂಬರಿಯು ವಿರೋಧಿ ಮಾನವೀಕರಣವನ್ನು ಚಿಮ್ಮವ್ವ, ಭೀಮಣ್ಣನ ಪಾತ್ರಗಳಲ್ಲಿ ಸಾದರಪಡಿಸುತ್ತದೆ. 'ನಿಸರ್ಗ' ಕಾದಂಬರಿಯಲ್ಲಿ ಚಿಮ್ಮವ್ವ ಎಲ್ಲ ಕೆಡಕುಗಳ ಜನರೇಟರ್. ಎಂತಹ ಸಂದರ್ಭದಲ್ಲಿಯೂ ಅವಳಲ್ಲಿ ಮಾನವೀಯತೆಯ ಸೆಲೆ ಒಸರುವುದೇ ಇಲ್ಲ. ಅವಳ ಅಹಂಕಾರ, ಹಟಗಳಿಂದಾಗಿಯೇ ತನ್ನ ಮನೆಯನ್ನೂ ಒಡೆಯುತ್ತಾಳೆ. ಮಗ, ಸೊಸೆಯರನ್ನು ಅಸುಖಿಗಳನ್ನಾಗಿಸು

ವುದರಲ್ಲಿಯೇ ಅವಳಿಗೆ ತೃಪ್ತಿ. ಅವಳ ನಾಲಿಗೆಯೋ ಹರಿತವಾದ ಖಡ್ಗ. ಎಂಥ ಎದುರಾಳಿಗಳನ್ನೂ ಸೋಲಿಸಬಲ್ಲ ದುಷ್ಟಶಕ್ತಿ ಅವಳದು. ಗಂಡ ಸತ್ತುದಕ್ಕೆ ಅವಳಿಗೆ ದುಃಖವಿಲ್ಲ, ಆತನ ಸಾವು ಮಗನನ್ನು ಹತೋಟಿಯಲ್ಲಿಟ್ಟುಕೊಳ್ಳುವ ಸಾಧನ ಮಾತ್ರ. "ಕೆಟ್ಟ ಮಕ್ಕಳು ಹುಟ್ಟುತ್ತಾರೆ. ಆದರೆ ಎಂದೂ ಕೆಟ್ಟ ತಾಯಿಯರು ಇರುವುದಿಲ್ಲ" ಎಂಬುದು ಚಿಮ್ಮವ್ವಳ ವಿಷಯದಲ್ಲಿ ಸಂಪೂರ್ಣ ಸುಳ್ಳಾಗುತ್ತದೆ."[10] ಮಗನೆಂಬ ಮಮಕಾರವೂ ಇಲ್ಲ, ಸೊಸೆ ಎಂಬ ಸ್ವಾಭಿಮಾನವೂ ಇಲ್ಲ. ಅದಕ್ಕಿಂತ ಮುಖ್ಯವಾಗಿ ತನ್ನಂತೆ ಅವಳೂ ಒಬ್ಬ ಹೆಣ್ಣುಮಗಳು ಎಂಬ ಸಹಜ ಸ್ತ್ರೀಕನಿಕರವೂ ಇಲ್ಲದ ನಿರ್ಮಮಕಾರದ ಕಟುಕಿ. ಹಾಗಲಕಾಯಿಗೆ ಬೇವಿನಕಾಯಿ ಸಾಕ್ಷಿ ಎಂಬಂತೆ ಭೀಮಣ್ಣ ಇವಳಿಗೆ ಸಹಕಾರ ಕೊಡತ್ತಾನೆ. ಸಹಾನುಭೂತಿಯಿಲ್ಲದ ವ್ಯಕ್ತಿ. ಇದರಿಂದ ಕಾದಂಬರಿಯು ಹೊಸ ಹೊಸ ದಿಕ್ಕುಗಳನ್ನು ಪಡೆಯುತ್ತದೆ.

ಈ ಕಾದಂಬರಿಗಳ ಅವಲೋಕನದಿಂದ ನವೋದಯದ ಸಂದರ್ಭದಲ್ಲಿ ರೂಪುಗೊಂಡ ಮಾನವೀಕರಣವನ್ನು ವಾಸ್ತವತಾವಾದೊಂದಿಗೆ ತಳಕು ಹಾಕಿಕೊಂಡೇ ಬಂದಿದೆ ಎಂದು ತಿಳಿಯುತ್ತದೆ. 'ವಿಶ್ವಮಾನವತ್ವ'ವನ್ನು ಸಾರಿದ ಕುಂವೆಂಪು ಅವರು ಹೂವಯ್ಯನ ಮೂಲಕ ಅದನ್ನು ಸಾಧಿಸಿ ತೋರಿಸಿದರು. ಲಿಂಗಭೇದ, ಜಾತಿ ವಿಂಗಡನೆ, ವರ್ಗವೈಷಮ್ಯತೆ ಮೊದಲಾದವುಗಳ ಗೊಂದಲಗಳ ನಡುವೆ ಬಳಲುತ್ತಿದ್ದ ಸಮಾಜವನ್ನು ಇವೆಲ್ಲವುಗಳಿಂದ ಮುಕ್ತ ಎಂದು ಘೋಷಿಸುವ ಹಂತವನ್ನು ಕುವೆಂಪು ಅವರ ಹೂವಯ್ಯ, ರಾವ್ ಬಹದ್ದೂರರ ಬಾಳಾಚಾರ್ಯ, ಮಿರ್ಜಿ ಅಣ್ಣಾರಾಯರ ತಾರಾ ಇವರು ತಲುಪುತ್ತಾರೆ. ಮಾನವತಾವಾದ ಅಥವಾ ಮಾನವೀಕರಣದ ಪ್ರಕ್ರಿಯೆ ಕ್ಷಿಪ್ರಗತಿಯಲ್ಲಿ ಸಾಗುವಂತೆ ಮಾಡಿದ ಕೀರ್ತಿ ನವೋದಯದ ಲೇಖಕರಿಗೆ ಹೆಚ್ಚಿನ ಮಟ್ಟದಲ್ಲೆ ಸಲ್ಲುತ್ತದೆ. ಮನುಷ್ಯ ಮನುಷ್ಯರ ನಡುವಿನ ಅಮಾನವೀಯ ಕಬ್ಬಿಣದ ಬಾಹುಗಳನ್ನು ಸಡಿಲಿಸಿ, ಅವರನ್ನು ಮಾನವೀಯ ಮೌಲ್ಯದ ಪ್ರೀತಿಯ ಮಧುರ ಬಾಂಧವ್ಯದಲ್ಲಿ ನಿಲ್ಲಿಸಿರುವುದು ಸೂರ್ಯನಷ್ಟೇ ಸತ್ಯ.

## ಪ್ರಗತಿಶೀಲ

ನವೋದಯ ಮತ್ತು ನವ್ಯ ಪಂಥಗಳ ನಡುವೆ ಅಲ್ಪಕಾಲದಲ್ಲಿಯೇ ನೇತ್ಯಾತ್ಮಕವಾದ ಪ್ರಭಾವವನ್ನು ಪ್ರಜ್ವಲಮಾನವಾಗಿಯೇ ಬೆಳಗಿದ ಪಂಥವಾಗಿದೆ. ನವೋದಯ ಪಂಥವು ಸಾಮಾಜಿಕ ಸಮಸ್ಯೆಗಳಿಗೆ ಸ್ಪಂದಿಸಿದ ರೀತಿ ತುಂಬಾ ಆಪ್ಯಾಯಮಾನವಾಗಿದೆ. ವ್ಯಕ್ತಿಯ ಬಲಹೀನತೆ-ಸಾಧನೆ, ಧರ್ಮದ ದುರ್ಬಳಕೆ-ಪಾವಿತ್ರ್ಯ, ಸ್ತ್ರೀಯ ಸಮಸ್ಯೆ-ಸಾಮಿಪ್ಯ, ಕುಟುಂಬ ಮತ್ತು ಸಮಾಜದ ಶಿಥಿಲೀಕರಣ-ಭದ್ರತೆ ಮೊದಲಾದ ವಾಸ್ತವಿಕ ಮುಖಗಳನ್ನು ಜಗತ್ತಿಗೆ ಉತ್ಪ್ರೇಕ್ಷೆಯಿಲ್ಲದೆ ಅನಾವರಣಗೊಳಿಸುವುದು ಇವರ ಕೆಲಸವಾಗಿತ್ತು. ಈ ನಿಟ್ಟಿನಲ್ಲಿ ಅನಕೃ ಅವರ 'ಸಂಧ್ಯಾರಾಗ', 'ಉದಯರಾಗ', 'ದೀಪಾರಾಧನೆ',

‘ನಟಸಾರ್ವಭೌಮ’, ‘ನಗ್ನಸತ್ಯ’ ಮೊದಲಾದ ಕಾದಂಬರಿಗಳು, ಬಸವರಾಜ ಕಟ್ಟೀಮನಿ ಅವರ ‘ಜ್ವಾಲಾಮುಖಿಯ ಮೇಲೆ’, ‘ಜರತಾರಿ ಜಗದ್ಗುರು’, ‘ಬೀದಿಯಲ್ಲಿ ಬಿದ್ದವಳು’, ‘ಮೋಹದ ಬಲೆಯಲ್ಲಿ’ ಕಾದಂಬರಿಗಳು, ನಿರಂಜನ ಅವರ ‘ಏಕಾಂಗಿನಿ’, ‘ಮೃತ್ಯುಂಜಯ’ ಕಾದಂಬರಿಗಳು, ತರಾಸು ಅವರ ‘ಬಿಡುಗಡೆಯ ಬೇಡಿ’ ಮೊದಲಾದ ಕಾದಂಬರಿಗಳು ವಾಸ್ತವ ಲೋಕದ ತಾಕಲಾಟಗಳನ್ನು ಯಥಾವತ್ತಾಗಿ ಚಿತ್ರಿಸುತ್ತವೆ. ಮಧ್ಯಮವರ್ಗದ ಜನತೆಯ ಬವಣೆಯನ್ನು, ನೊಂದವರ ಬದುಕಿನ ಅನಿವಾರ್ಯಗಳನ್ನು ಸಾಹಿತ್ಯದಲ್ಲಿ ಮೆರೆಸುವುದಷ್ಟೆ ಇವರ ಕೆಲಸವಾಗಿರಲಿಲ್ಲ. ಸಮಸ್ಯೆಯ ಹುಡುಕುವಿಕೆ ಮತ್ತು ಸಮಸ್ಯೆಗೊಂದು ಸೂಕ್ತ ಪರಿಹಾರದ ವ್ಯವಸ್ಥೆಯನ್ನು ರೂಪಿಸುವುದು ಲೇಖಕನ ಜವಾಬ್ದಾರಿಯಾಗಿತ್ತು. ಅಂತಲೇ ಅನಕೃ ಅವರು “ಈ ನನ್ನ ಅಲ್ಪಸೇವೆಯಿಂದ ಸಮಾಜದ ಘಾತಗಳಿಂದ ಗಾಸಿಗೊಂಡಿರುವವರಿಗೆ ಸ್ವಲ್ಪವಾದರೂ ಮನಶ್ಶಾಂತಿ ದೊರೆತಲ್ಲಿ ಹಾಗೂ ಇವರನ್ನು ನೋಯಿಸುವುದು ದೇವನೊಪ್ಪಿದ ಕೆಲಸವೆಂದು ದಬ್ಬಾಳಿಕೆಯ ದರ್ಪದಲ್ಲಿ ಸತ್ಯ ಪ್ರೇಮಗಳಿಗೆ ತಿಲತರ್ಪಣವನ್ನು ಕೊಟ್ಟಿರುವವರಲ್ಲಿ ತಿಳಿವು ಸ್ವಲ್ಪವಾದರೂ ಉಂಟಾದರೆ ನಾನು ಧನ್ಯವೆಂದು ಭಾವಿಸುತ್ತೇನೆ.”[೧೨] ಎಂದಿದ್ದಾರೆ. ಇವರು ಪ್ರಗತಿಶೀಲ ಚಳುವಳಿಯನ್ನು ಆರಂಭಿಸಿದ್ದೆ ಸಮಾಜದ ಹುಳುಕುಗಳನ್ನು ಅನಾವರಣಗೊಳಿಸಲು. ಹಳತನ್ನು ಹೊಸಮಾರ್ಗದಲ್ಲಿ ಸಾಗಿಸುವ ಪ್ರಕ್ರಿಯೆಗೆ ಕಾದಂಬರಿಯನ್ನು ಆಯ್ದುಕೊಂಡು ತಮ್ಮ ಆತ್ಮ ಸಮರ್ಥನೆಯ ಕಾರ್ಯವನ್ನು ಬಲವಾಗಿ ಸ್ಥಾಪಿಸಿದರು. ಬ್ರಿಟಿಷರ ವಿರುದ್ಧ ಹೋರಾಡಲು ಜನತೆಯನ್ನು ಅಣಿಗೊಳಿಸುವ ದೇಶ ಸೇವೆ ಒಂದೆಡೆ, ಸಮಾಜದಲ್ಲಿದ್ದ ಬಂಡವಾಳಶಾಹಿಗಳ ವಿರುದ್ಧ ಸಮರ ಸಾರುವ ಜರೂರತ್ತು ಇನ್ನೊಂದೆಡೆ - ಈ ಎರಡು ತುರ್ತುಗಳನ್ನು ಸಾಹಿತ್ಯದಲ್ಲಿ ಸಮರ್ಥವಾಗಿಯೇ ಬಳಸಿದ್ದಾರೆ.

“ಮಾನವನಿಗೆ ಮಾನವ್ಯದಲ್ಲಿ ಗೌರವ, ಮಾನವರಲ್ಲಿ ಅನುಕಂಪ ಮೂಡಿಸುವುದೇ ನನ್ನ ಕಾದಂಬರಿಗಳ ಗುರಿ”[೧೩] ಇದು ಅನಕೃ ಅವರು ಮಾನವತಾವಾದದಲ್ಲಿ ಇಟ್ಟ ಶ್ರದ್ಧೆಯನ್ನು ಎತ್ತಿ ಹಿಡಿಯುತ್ತದೆ. ಈ ಮಾತಿಗೆ ಉದಾಹರಣೆಯಾಗಿ ‘ಸಂಧ್ಯಾರಾಗ’ ಮತ್ತು ‘ನಟಸಾರ್ವಭೌಮ’ ಕಾದಂಬರಿಗಳನ್ನು ಬರೆದು ಕಲಾವಿದನ ಜೀವನ ಮತ್ತು ಅವನ ಮಾನವೀಯ ಸಹಾಯವನ್ನು ಪ್ರಚುರಪಡಿಸಿದರು. ರಾಮಚಂದ್ರ ಮತ್ತು ಲಕ್ಷ್ಮಣರೆಂಬ ಅಣ್ಣತಮ್ಮಂದಿರ ಜೀವನದ ದೃಶ್ಯವನ್ನು ಕಾದಂಬರಿ ಚೌಕಟ್ಟಿಗೆ ಅಳವಡಿಸಿದ್ದಾರೆ. ಅಣ್ಣ ರಾಮಚಂದ್ರ ವಕೀಲಿ ವೃತ್ತಿಯೊಂದಿಗೆ, ದುರ್ಗುಣಗಳ ಪ್ರಭಾವದಿಂದ ತನ್ನ ಕುಟುಂಬವನ್ನು ಹಾಳುಗೆಡವಿದ ಅಮಾನುಷ ವ್ಯಕ್ತಿಯಾಗುತ್ತಾನೆ. ಇವನ ನಡತೆಯಿಂದ ಬೇಸತ್ತ ಲಕ್ಷ್ಮಣನು ಸಂಗೀತಕ್ಷೇತ್ರದಲ್ಲಿ ವಿರಾಜಮಾನನಾಗಿ ಬಾಳಿ ಯಾರಿಗೂ ತೊಂದರೆ ಮಾಡದೆ ಹೆಸರು ಗಳಿಸುತ್ತಾನೆ. ಅನಕೃ ಅವರು ಲಕ್ಷ್ಮಣನ ಮೂಲಕ ಸಾಧಿಸುವ ಕಲಾವಿದನ ಮಾನವೀಯ ಜಗತ್ತು ಶ್ಲಾಘನೀಯವಾಗಿದೆ. ಅವರ ಸನ್ನಿವೇಶಗಳ ಜೋಡಣೆ, ಕಲ್ಪನಾ ತರಂಗದ

ನಿರೂಪಣೆಯು ಮಾನವೀಕರಣದ ಪ್ರಕ್ರಿಯೆಗೆ ಸಹಕಾರಿಯಾಗಿದೆ. 'ನಟಸಾರ್ವಭೌಮ'ದಲ್ಲಿ ನಟನು ಸಾಧಿಸುವ ಮಾನವೀಯ ಸಂಪತ್ತು ಅಪಾರವಾದುದು. ಕಲಾವಿದ ಬಳಗ ಮತ್ತು ಪ್ರೇಕ್ಷಕವರ್ಗ ಎರಡೂ ಕಡೆಯಿಂದಲೂ ಗಳಿಸುವ ಮಮತೆ ಮತ್ತು ಪ್ರೀತಿಗಳು ತುಂಬಾ ಮನನೀಯವಾಗಿವೆ. 'ಗೃಹಲಕ್ಷ್ಮಿ'(೧೯೫೩) ಎಂಬ ಕಾದಂಬರಿ ಭಾರತೀಯ ಮಾನವತಾವಾದಕ್ಕೆ ತೀರಾ ಸಮೀಪವಾಗಿದೆ. "ಶ್ರದ್ಧೆ, ಕರುಣೆ, ವಿಶ್ವಾಸ ಮತ್ತು ಪ್ರಾಮಾಣಿಕತನಗಳಂಥ ಮೌಲ್ಯಗಳನ್ನೊಳಗೊಂಡ ಸಮಷ್ಟಿ ಜೀವನದ ಪರಿಪೂರ್ಣ ಚಿತ್ರ ಗೃಹಲಕ್ಷ್ಮಿಯಲ್ಲಿದೆ. ಈ ಕಾದಂಬರಿಯ ಪ್ರಮುಖ ಪಾತ್ರಗಳಾದ ಮಾಧವರಾಯ ಮತ್ತು ರುಕ್ಮಿಣಿಯರು ಜೀವನದ ಬಗೆಗಿನ ಎರಡು ಮೂಲಭೂತ ದೃಷ್ಟಿಕೋನಗಳನ್ನು ಪ್ರತಿನಿಧಿಸುತ್ತಾರೆ. ಭಾರತೀಯ ಸಂಸ್ಕೃತಿಯಲ್ಲಿಯೇ ಹುಟ್ಟಿದ ಇವುಗಳಲ್ಲಿ ಒಂದು ಮಾನವತಾವಾದ, ಇನ್ನೊಂದು ದೈವವಾದ. ವಕೀಲ ಮಾಧವರಾಯರ ಯಶಸ್ಸಿನ ಹಿಂದೆ ಅನೇಕ ಶಕ್ತಿಗಳು ದುಡಿಯುತ್ತವೆ. ಅನಿಷ್ಟ ಪ್ರವೃತ್ತಿಗಳಾದ ಈರ್ಷ್ಯೆ, ಕ್ಷುಲ್ಲಕತನ ಮುಂತಾದವುಗಳನ್ನು ಕಾದಂಬರಿ ಅಲಕ್ಷಿಸುವುದಿಲ್ಲ. ಆದರೆ ಇವು ಒಳ್ಳೆಯತನದ ವಿರುದ್ಧ ನಿಂತು ಗೆಲ್ಲಲಾರವು ಎಂಬ ನಂಬುಗೆ ಈ ಕಾದಂಬರಿಯ ವೈಚಾರಿಕತೆಯ ತಳಹದಿಯಾಗಿದೆ."[೪] ಅನಕೃ ಅವರು ಕಟ್ಟಾ ಮಾನವತಾವಾದಿಯಾಗಿಯೂ ಅಸಭ್ಯ ಎನ್ನಿಸುವಂತಹ ಸಂಜೆಗತ್ತಲು, ನಗ್ನಸತ್ಯ ಮತ್ತು ಶನಿಸಂತಾನದಂತಹ ಕಾದಂಬರಿ ಬರೆದಿದ್ದು ಅವು ಎಲ್ಲರ ಕೋಪಕ್ಕೂ ಗುರಿಯಾದವು. ವೇಶ್ಯಾ ಸಮಸ್ಯೆಯನ್ನು ತಮ್ಮ ಕಾದಂಬರಿಗೆ ವಸ್ತು ಮಾಡಿಕೊಂಡ ಹಿನ್ನೆಲೆಯಲ್ಲಿ ಇಂತಹ ಕೃತಿ ರಚಿಸುವ ಇರಾದೆಯಿತ್ತು. ಆದರೆ ಅದು ತೀರಾ ಅತಿರೇಕ ಎನ್ನುವಷ್ಟು ಆಗಿದ್ದರಿಂದ ಪ್ರಗತಿಶೀಲ ಲೇಖಕರಿಂದಲೇ ಅವಗಣನೆಗೆ ಈಡಾದರು. ಅದು ಸಾಹಿತ್ಯದ ರಚನೆಯ ಗೀಳೋ ಅಥವಾ ವಯಸ್ಸಿನ ವಾಂಛೆಯೋ ತಿಳಿಯದು. ಖುಷವಂತ್ ಸಿಂಗ್ ಕೂಡ ಇತ್ತೀಚಿಗೆ 'ದಿ ಕಂಪನಿ ಆಫ್ ದಿ ವುಮೆನ್' ಕೃತಿ ರಚಿಸಿ ತನ್ನ ಮನೆಯ ಸದಸ್ಯರಿಂದಲೇ ಟೀಕಿಸಿಕೊಂಡಿರುವುದೂ ಈ ಎರಡರಲ್ಲಿ ಒಂದರ ಹುಚ್ಚಿನಿಂದಲೇ.

ಬಸವರಾಜ ಕಟ್ಟೀಮನಿ ಅವರು ಪ್ರಗತಿಶೀಲ ಪಂಥದಲ್ಲಿ ಮತ್ತೊಬ್ಬ ಪ್ರಮುಖರು. ಇವರ ಕಾದಂಬರಿಗಳಲ್ಲಿ ಬಡತನ, ಅಜ್ಞಾನ, ನಿರಕ್ಷರತೆ, ಜಾತಿ ಭೇದದಲ್ಲಿ ತಲ್ಲೀನರಾಗಿರುವ ಜನ, ಶೋಷಿಸುವ ಶ್ರೀಮಂತರು, ರಾಜಕೀಯ ನಾಯಕರು, ಡಾಂಭಿಕ ಸ್ವಾಮಿಗಳು ಈ ಮೊದಲಾದ ಅಂಶಗಳೇ ತುಂಬಿವೆ. ಬಾಲ್ಯದಲ್ಲೆ ಬೆಂಬಿಡದ ಹಸಿವು, ಅಲೆಮಾರಿತನ, ಬದುಕಿನ ತುಂಬ ಅನುಭವಿಸಿದ ತಾರತಮ್ಯ ಮೋಸಗಳಿಂದ ವಿಪುಲವಾದ ಜೀವನಾನುಭವ, ಸಮಾಜದ ಎಲ್ಲ ಸ್ತರದ ಜನರ ಬದುಕಿನ ನಿಕಟ ಪರಿಚಯಗಳಿಸಿದ ಕಟ್ಟೀಮನಿ ಅವರು ಎಲ್ಲ ಅಪಮಾನಿತರ ಪರವಾಗಿ ನೋವನ್ನು ಉಂಡವರು. ಅವರ ಕೃತಿಗಳುದ್ದಕ್ಕೂ ನೊಂದವರ ಬಗ್ಗೆ ಮಾನವೀಯ ಅನುಕಂಪವನ್ನೂ, ನೋವಿಗೆ ಕಾರಣರಾಗುವವರ ವಿರುದ್ಧ ಸಿಡಿದೇಳುವ ಕ್ರೋಧ, ಆವೇಶಗಳು ಸ್ಫುಟವಾಗಿ ಕಾಣುತ್ತವೆ.

“ಮಣ್ಣು ಮತ್ತು ಹೆಣ್ಣು” ಕಾದಂಬರಿಯಲ್ಲಿ ಭೂಮಿ ಮತ್ತು ಹೆಣ್ಣನ್ನು ಸಂಕೇತಗಳನ್ನಾಗಿಟ್ಟುಕೊಂಡು ಜಮೀನುದಾರನಿಂದ ಪಡೆದಿದ್ದ ಭೂಮಿ ಮತ್ತೆ ಮಾಲೀಕನಿಗೆ ಹೋದಾಗ ಆದ ನಿರಾಳ ಹಾಗೂ ಅದರ ಉಳಿಯುವಿಕೆಗೆ ಮಾಡಿದ ಪ್ರಯತ್ನ ವಿಫಲವಾದಾಗ ಪಡುವ ಪಾಡು ವಿಚಿತ್ರವಾಗಿದೆ. ತನ್ನ ತಾಯಿಗೆ ವಿಷವಿಕ್ಕಲು ಹೇಸದ ಭೀಮಪ್ಪ, ಸೊಸೆ ಬಾಲಿಯ ಮೇಲೂ ದಬ್ಬಾಳಿಕೆ ನಡೆಸುತ್ತಾನೆ. ಈ ಘಟನಾವಳಿಗಳು ಮಾನವೀಯ ಮೌಲ್ಯಗಳನ್ನು ಹರಾಜು ಹಾಕಿವೆ. ಇದನ್ನು ಪ್ರತಿಭಟಿಸುವ ಸೊಸೆಯ ಛಲ ಮಾತ್ರ ಗಟ್ಟಿಯಾಗಿದೆ. ಇಡೀ ಹಳ್ಳಿಯೇ ಮಾನವೀಯತೆಯನ್ನು ಕಳೆದುಕೊಂಡ ಸಂದರ್ಭದಲ್ಲಿ ಮಾನವೀಯತೆಗೆ ಧ್ವನಿಯಾಗುವ ಪ್ರಯತ್ನ ಮಾಡಿದ ಬಾಲಿ ಮಾತ್ರ ಕೆಚ್ಚೆದೆಯ ಸ್ತ್ರೀಯಾಗುತ್ತಾಳೆ. ‘ಜ್ವಾಲಾಮುಖಿಯ ಮೇಲೆ’ ಕಾದಂಬರಿಯಲ್ಲಿನ ಚಂದ್ರಣ್ಣನ ಹೋರಾಟ ಮಾನವೀಯ ನೆಲೆಗಟ್ಟಿನ ಮೇಲೆ ನಿಂತಿದೆ. ಚಂದ್ರಣ್ಣ ಮತ್ತು ರತ್ನಾಳ ಹೋರಾಟ ಅಸಹಾಯಕ ಕಾರ್ಮಿಕ ಬಂಧುಗಳಿಗೆ ಜೀವಸೆಲೆಯಾಗುತ್ತದೆ. ಆದರೆ ರಾಜಕೀಯ ವ್ಯವಸ್ಥೆಯು ಅವರ ಹೋರಾಟವನ್ನು ತುಳಿಯಲು ಯತ್ನಿಸಿ ವಿಫಲವಾಗುತ್ತದೆ.

‘ಜರತಾರೀ ಜಗದ್ಗುರು’ ಕಾದಂಬರಿಯು ಖಾವೀಧಾರಿಗಳು ಮಾಡುವ ಅಮಾನವೀಯ ಚಟುವಟಿಕೆಗಳನ್ನು ಖಂಡಿಸುತ್ತದೆ. ಆಧುನಿಕ ಜಗತ್ತಿನಲ್ಲಿ ಹೆಸರಿಗೆ ಮಾತ್ರ ಭಕ್ತಿಯನ್ನು, ದೇವಲೀಲೆಯನ್ನು ಕೊಂಡಾಡುವ ಜಗದ್ಗುರುಗಳ ಹಿಂದಿನ ಮಾಯಾಲೋಕವು ಜನರಿಗೆ ತತ್‌ವಿರುದ್ಧವಾಗಿರುವುದನ್ನು ಚಿತ್ರಿಸುತ್ತದೆ. ‘ಮೋಹದ ಬಲೆಯಲ್ಲಿ’ ಕೂಡಾ ಮಠಾಧೀಶರ, ರಾಜಕಾರಣಿಗಳ ಸ್ತ್ರೀಲಂಪಟತೆಯನ್ನು ಹಣದಾಸೆಯನ್ನು ಪ್ರಕಟಿಸುತ್ತದೆ. ಮಾನವೀಕರಣದ ವಿರೋಧಿ ಚಿತ್ರಣವು ಕಾದಂಬರಿಯುದ್ದಕ್ಕೂ ಕಾಣುತ್ತದೆಯಾದರೂ ಕೊನೆಗೆ ಹೇಳುವ ನೈತಿಕ ಸಾರ ಮಾತ್ರ ಮಾನವೀಯ ಜಗತ್ತಿಗೆ ಹತ್ತಿರವಾಗಿರುತ್ತದೆ.

ಅನಕೃ ಮತ್ತು ಕಟ್ಟೀಮನಿಯವರಿಗಿಂತಲೂ ತಣ್ಣನೆಯ ಧ್ವನಿಯಲ್ಲಿ ಪ್ರಗತಿಶೀಲ ಪಂಥದಲ್ಲಿ ಮಾನವೀಕರಣದ ಧ್ವನಿ ಎತ್ತಿದವರೆಂದರೆ ನಿರಂಜನ ಅವರು. ‘ಚಿರಸ್ಮರಣೆ’, ‘ಸೌಭಾಗ್ಯ’, ‘ಮೃತ್ಯುಂಜಯ’ ಕಾದಂಬರಿಗಳ ಮೂಲಕ ಮಾನವೀಯ ಜಗತ್ತಿನ ಅನಾವರಣವನ್ನು ತುಂಬ ಸ್ಪಷ್ಟಗೊಳಿಸಿದ್ದಾರೆ. ಮೊದಲ ಕಾದಂಬರಿಕಾರರ ಕಾದಂಬರಿಗಳಲ್ಲಿ ಕಾಮ-ವ್ಯಭಿಚಾರ ವಿಷಯವೇ ಹೆಚ್ಚು ಆಕ್ರಮಿಸಿತ್ತು. ಅಂತಹ ಸ್ಥಾನದಲ್ಲಿ ಮಾನವೀಯ ಭಾವನೆಗಳನ್ನು ಸ್ಥಾಪಿಸಿದವರು ನಿರಂಜನರು. ಚಿರಸ್ಮರಣೆಯ ಪಾತ್ರಗಳು ಆದರ್ಶೀಕರಣಕ್ಕಾಗಿ ಹೆಣಗಿದರೆ, ‘ಏಕಾಂಗಿನಿ’ ಕಾದಂಬರಿಯ ಪಾತ್ರಗಳು ಮನುಷ್ಯತ್ವದ ಪ್ರತಿಪಾದನೆಗಾಗಿ ಹೋರಾಡುತ್ತವೆ. ಜಾತಿ ಭೇದ, ಲಿಂಗಭೇದ ಮತ್ತು ವರ್ಗಗಳನ್ನು ಮೀರಿದ ತತ್ತ್ವಗಳನ್ನು ಹೇಳುವಲ್ಲಿ ನಿರಂಜನರು ಯಶಸ್ವಿಯಾಗಿದ್ದಾರೆ. ವೈಚಾರಿಕತೆಯ ಹಿನ್ನೆಲೆಯೊಂದಿಗೆ ಪ್ರಗತಿಶೀಲ ಪಂಥದ ಮಹತ್ವದ ಬರಹಗಾರರಾಗಿ ಮಾನವೀಕರಣವನ್ನು ವಿಜೃಂಭಿಸಲು ಪ್ರಯತ್ನಿಸಿದ್ದಾರೆ.

ಸ್ತ್ರೀಲೋಕಕ್ಕೊಂದು 'ಶಾಪ'ವಾಗಿರುವ ವೇಶ್ಯಾ ಸಮಸ್ಯೆಯನ್ನು ವಿ.ಎಂ.ಇನಾಂದಾರ್ ಅವರು 'ಶಾಪ' ಕಾದಂಬರಿಯಲ್ಲಿ ಪ್ರಕಟಪಡಿಸಿದ್ದಾರೆ. ಇದು ವೇಶ್ಯಾ ಸಮಸ್ಯೆಯ ಸಂಕೋಲೆಯಿಂದ ಹೊರಬರಬೇಕೆಂದು ಪ್ರಯತ್ನಿಸಿ ವಿಫಲವಾಗುವ ಹೆಣ್ಣಿನ ಕಥಾನಕವಾಗಿದೆ. ಶಾಪ ವಿಮೋಚನೆಯಾಗದೆ ಮತ್ತೆ ಅದರಲ್ಲಿಯೇ ನರಳುವ ಹೆಣ್ಣಾಗುತ್ತಾಳೆ 'ಸರೋಜಾ'. ತನ್ನ ತಾಯಿ ಮಾಡುತ್ತಿರುವ ಕುಲಕಸುಬನ್ನು ಧಿಕ್ಕರಿಸಿ ನಿಲ್ಲಬೇಕೆಂದು ಪ್ರಯತ್ನಿಸಿದ ಸರೋಜಾ ತನ್ನ ತಾಯಿಯ ಅನಾರೋಗ್ಯದ ನಿಮಿತ್ತ ಮುಂಬೈ ಆಸ್ಪತ್ರೆಗೆ ತೆರಳಿದಾಗ ಅಲ್ಲಿ ತನ್ನ ಯಜಮಾನನಿಗೆ ಬಲಿಯಾಗುತ್ತಾಳೆ. ಅವಳು ಪ್ರೀತಿಸಿದ ಗೆಳೆಯ ಮಾಧವ ಅವಳ ಅಣ್ಣನೇ ಆಗಿರುವುದು ವಿಪರ್ಯಾಸದ ಇನ್ನೊಂದು ತುದಿ. ಮಾಧವ ಪ್ರೀತಿಸಿದ ಮೇಲೆ, ಅವಳು ವೇಶ್ಯಾ ಕುಲಕ್ಕೆ ಸೇರಿದವಳು ಎಂದು ತಿಳಿದಾಗ ಅವನು ಮದುವೆಯಾಗಲು ಹಿಂಜರಿಯುತ್ತಾನೆ. ಅವನಲ್ಲಿನ ಮಾನವತೆಯ ಪ್ರಜ್ಞೆ ಸರೋಜಾಳಿಗೆ ಹೊಸಬಾಳನ್ನು ಕೊಡಲು ಯೋಚಿಸುತ್ತದೆ.

ಸಾಮಾಜಿಕ ಮನಸ್ಸು ಮತ್ತು ಮಾನವತೆಯ ಪ್ರಜ್ಞೆಗಳೆರಡರ ಮುಖಾಮುಖಿ ಚರ್ಚೆ ತುಂಬಾ ಅರ್ಥವಂತಿಕೆಯನ್ನು ಪಡೆದಿದೆ. "ವೇಶ್ಯೆಯಾದರೇನು? ಆಕೆ ಮನುಷ್ಯಳಲ್ಲವೆ? ಹೆಂಗಸಲ್ಲವೆ?"ಎಂಬ ಮಾನವತೆಯ ಮನಸ್ಸಿನ ಮಾತಿಗೆ "ಆಕೆ ಹೆಂಗಸಾಗಿರಬಹುದು, ಮಾನವ ಪ್ರಾಣಿಯೂ ಅಹುದು. ಆದರೆ ಆಕೆಯ ಸಹವಾಸ ಪಾಪ! ಆ ಪಾಪದಿಂದ ಕಲಂಕಿತನಾಗಿ ನೀನು ಸಮಾಜದಲ್ಲಿ ಸುಖವಾಗಿ ಬದುಕಿರಲಾರೆ"[೧೫] ಎಂದು ಸಾಮಾಜಿಕ ಮನಸ್ಸು ಉತ್ತರಿಸುತ್ತದೆ. ಚಿಂತನೆ ಮತ್ತು ಅನುಷ್ಠಾನದಲ್ಲಿ ವೈಶಾಲ್ಯತೆಯನ್ನು ಪಡೆದಿರುವ ಮಾನವತೆಯು, ಸಂಕುಚಿತತೆಯನ್ನು ಹೊಂದಿರುವ ಸಾಮಾಜಿಕ ಮನಸ್ಸು ತಾನೂ ಮಾನವನ ಜೀವನವನ್ನು ಬೇಕಾದಂತೆ ತಿರುಗಿಸಬಲ್ಲೆ ಎನ್ನುತ್ತದೆ. ಆದರೆ ಮಾನವತೆ ಇಲ್ಲದ ಸಮಾಜವು ಸಮಾಜವೇ ಅಲ್ಲ. ಅಂತೆಯೇ ಕಾದಂಬರಿಯಲ್ಲಿ "....ಇಷ್ಟೊಂದು ಪರಂಪರೆಯನ್ನು ಕಾಯ್ದುಕೊಂಡು ಬದುಕನ್ನು ಬಿಗಿದಿಡಬೇಕೆನ್ನುವ ನೀನು ಯಾರು? ನಾನು ಸಮಾಜ ಎಂದರೆ ನೀನು ಮಾನವತೆ. ನೀನಿಲ್ಲದೆ ನನಗೆಲ್ಲಿಯ ಅಸ್ತಿತ್ವ? ನೀನು ರೂಪಿಸಿದ ಹಾಗೆ ಇರುವವ ನಾನು..."[೧೬]ಎಂದು ಕೈ ಚೆಲ್ಲುತ್ತದೆ. ಸಮಾಜವನ್ನು ಮಾನವತೆ ರೂಪಿಸುತ್ತದೆ. ಮಾನವತೆ ಮತ್ತು ಸಮಾಜ ಪರಸ್ಪರ ಪೂರಕವಾಗಿ ಚಲನೆಗೊಳ್ಳುತ್ತವೆ. ಸಮಾಜದಲ್ಲಿದ್ದವರೆಲ್ಲರೂ ಮಾನವತೆ ಹೊಂದಿರುತ್ತಾರೆ. ('ನಿಸರ್ಗ'ದ ಚಿಮ್ಮಪ್ಪನಂತಹ ಪಾತ್ರಗಳು ಇದಕ್ಕೆ ಅಪವಾದ). ಮಾಧವ ಮಾನವತೆಯನ್ನು ಮರೆದು ಅವಳ ಕೈಹಿಡಿಯಬಹುದು. ಆದರೆ ಅದಕ್ಕೆ ಸಮಾಜದ ಅಂಕಿತ ಶೂನ್ಯ. ಅದಕ್ಕೆಂದೆ ಅವನಲ್ಲಿಯ ಮಾನವತೆ ಕ್ಷಣಕಾಲ ಹಿಂದೆ ಸರಿದಿತ್ತು. ".....ಆಕೆ ವೇಶ್ಯೆಯ ಮಗಳು, ವೇಶ್ಯೆಯಲ್ಲ! ಆಕೆ ವೇಶ್ಯೆಯ ಮಗಳೆಂದ ಮಾತ್ರಕ್ಕೆ ತ್ಯಾಜ್ಯಳೆಂಬ ಭಾವನೆಯನ್ನು ಉಳಿದವರಂತೆ ತಾನು ಬೆಳೆಸಿಕೊಳ್ಳುವುದಾದರೆ ತನ್ನ ವಿದ್ಯೆಯ, ವಿವೇಕದ ಉಪಯೋಗವೇನು? ಎಂದು ಕೇಳಿಕೊಂಡು ಸಮಾಜದ ಒಂದು ಅನ್ಯಾಯಕ್ಕೆ ಬಲಿಯಾಗಿದ್ದ

ಈಕೆಯನ್ನು ಉಳಿಸಿಕೊಳ್ಳುವುದು ತನ್ನಿಂದ ಸಾಧ್ಯವಾಗಬಹುದೇ ಎಂದ. ಅಲ್ಲದೆ ಆಗಲೇ ಈಕೆ ತನ್ನಲ್ಲಿ ವಿಶ್ವಾಸವನ್ನಿಟ್ಟು ತನ್ನಿಂದ ಸಹಾಯ ಸಹಾನುಭೂತಿಗಳನ್ನು ಅಪೇಕ್ಷಿಸುತ್ತಿರಬಹುದೆಂಬುದರಲ್ಲಿ ಸಂದೇಹವೇ ಇರಲಿಲ್ಲ. ತನ್ನ ಮಾತಿನ ಸಲಿಗೆಯಿಂದ ಬೆಳೆದ ಸಹವಾಸದ ಮೂಲಕ ಆಕೆಗೆ ತಾನು ಅಪ್ರತ್ಯಕ್ಷವಾಗಿ ಉತ್ತೇಜನ ಕೊಟ್ಟು ಈಗ ಒಮ್ಮೆಲೆ ಆಕೆಯಿಂದ ದೂರವಾಗುವುದೆಂದರೆ ಎಂಥ ಹೇಡಿತನ. ಆದರ್ಶದ ಬಗೆಯಲ್ಲಿ ಎಂಥ ಅವಿಶ್ವಾಸ ಎಂದೆನಿಸಿತು....”[೭] ಎಂಬ ಅವನ ಮನಸ್ಸಿನ ತೊಳಲಾಟವು ಅಂತಿಮವಾಗಿ ಅವಳನ್ನು ಕೈ ಹಿಡಿಯಲು ತೀರ್ಮಾನಿಸುತ್ತದೆ. ಸರೋಜಾಳು ತನ್ನ ತಾಯಿಯ ಮತ್ತು ಗೋವಿಂದೇಗೌಡನ ಕುತಂತ್ರಕ್ಕೆ ಬಲಿಯಾಗಿ ತನ್ನ ಕನ್ಯತ್ವವನ್ನು ಕಳೆದುಕೊಳ್ಳುತ್ತಾಳೆ. ಇದರಿಂದ ಅವಳಲ್ಲಿನ ಮನುಷ್ಯತ್ವ ಮಾಧವನಿಗೆ ಮೋಸ ಮಾಡುತ್ತಿದ್ದೇನೆ ಎಂಬ ಅಳುಕು ಕಾಡುವುದರಿಂದ ಅವನನ್ನು ಮರೆಯಲು ಯತ್ನಿಸುತ್ತದೆ. ಕಾದಂಬರಿಯ ಕೊನೆಗೆ ಸರೋಜಾಳಿಗೆ ಮಾಧವ ತನ್ನ ಅಣ್ಣ ಎಂದು ಗೊತ್ತಾದಾಗ ತುಂಬ ವಿಚಿತ್ರವೆನಿಸುತ್ತದೆ. ತಾಯಿ ರಂಗಾಸಾನಿಯನ್ನು ಮಾಧವನ ತಂದೆ ಕೃಷ್ಣರಾಯರು ಇಟ್ಟುಕೊಂಡಿದ್ದರು ಎಂಬ ಸತ್ಯ ಅವಳಿಗೆ ಷಾಕ್ ನೀಡುತ್ತದೆ. ರಂಗಸಾನಿಯ ಜೀವನಾರ್ಥವಾಗಿ ಕೃಷ್ಣರಾಯರು ಕೊಟ್ಟ ತೋಟವನ್ನು ಹಿಂಪಡೆದ ನಂತರ ಈ ಸತ್ಯ ತಿಳಿಯುತ್ತದೆ. ಮಾಧವನು ದೊಡ್ಡ ಮನಸ್ಸು ಮಾಡಿ ತೋಟವನ್ನು ಸರೋಜಾಳ ಭವಿಷ್ಯದ ಒಳಿತಿಗಾಗಿ ಹಿಂತಿರುಗಿಸಿ ಮಾನವೀಯತೆಯನ್ನು ಮೆರೆಯುತ್ತಾನೆ.

ವೇಶ್ಯಾ ಕುಲಕ್ಕೆ ಅಂಟಿಕೊಂಡ ಶಾಪವನ್ನು ತೊಳೆಯಲು ಪ್ರಯತ್ನಿಸಿದ ಮಾಧವ ಮತ್ತು ಸರೋಜನಿಯರು ಆದರ್ಶ ಯುವ ಜೋಡಿಗಳಾದರೂ ವಿಧಿಯ ಆಟದಿಂದೆಂಬಂತೆ ಸಹೋದರ-ಸಹೋದರಿಯರಾಗಿರುವುದು ವಿಪರ್ಯಾಸವೇ ಸರಿ. ತನ್ನ ವಂಶದ ಶಾಪವನ್ನು ತಾನು ಹೊರಲಾರೆನೆಂಬ ಸರೋಜನಿಯ ಅಭೀಪ್ಸೆಯು ಈಡೇರದೆ ಸಮಾಜವು ಹಾಕಿದ ಕಟ್ಟುಪಾಡುಗಳಿಗಿಂತಲೂ ಮುಖ್ಯವಾಗಿ ಕಾಮಪಿಪಾಸೆಯುಳ್ಳ ಗೌಡನಂತಹ ಶಕ್ತಿಗಳನ್ನು ಮಣಿಸುವುದು ಸರೋಜನಿಯಂತಹ ಸೌಮ್ಯ ಜೀವಿಗಳಿಗೆ ಸಾಧ್ಯವಿಲ್ಲವಾಗುತ್ತದೆ. ಸಮಾಜ-ಮಾನವತೆಗಳ ಸಂಘರ್ಷದ ನಡುವೆ ಕಾಮವು ಗೆಲ್ಲುತ್ತದೆ. ಇಲ್ಲಿ ಅದಕ್ಕೆ ಭವಿಷ್ಯವಿಲ್ಲವಾದರೂ ಕ್ಷಣದ ಪರಿಣಾಮವು ಜೀವನವಿಡೀ ನರಳುವಂತೆ ಮಾಡುತ್ತದೆ. ಇನಾಂದಾರ್ ಅವರು ಮಾನವತೆ-ಸಮಾಜಗಳ ತಾರ್ಕಿಕ ಸಂಭಾಷಣೆಯನ್ನು ಸೈದ್ಧಾಂತಿಕವಾಗಿ ಮಂಡಿಸಿದ್ದಾರೆ. ಮಾನವೀಕರಣದ ಪ್ರಕ್ರಿಯೆಯಲ್ಲಿ ಮಾಧವ ಮತ್ತು ಸರೋಜನಿಯಂತಹ ಯುವ ಪೀಳಿಗೆಯನ್ನು ತೊಡಗಿಸುವಲ್ಲಿ ಶ್ರಮಿಸುತ್ತಾರೆ. ‘ಶಾಪ’ ಕಾದಂಬರಿಯು ಮಾನವತಾವಾದವನ್ನು ಗರ್ಭೀಕರಿಸಿಕೊಂಡು ಕೃತಿಯ ತುಂಬ ಅದನ್ನೇ ಸಾರುತ್ತದೆ.

ಪ್ರಗತಿಶೀಲ ಪಂಥದ ಧೋರಣೆಗಳನ್ನು ನಿರ್ಲಿಪ್ತರಾಗಿ ಕಂಡರೂ ಆ ಕಾಲದಲ್ಲಿ ಸಾಹಿತ್ಯಕೃತಿ ರಚಿಸಿದ ಎಚ್. ವಿ. ಸಾವಿತ್ರಮ್ಮ, ತ್ರಿವೇಣಿ, ಡಾ. ಅನುಪಮಾ ನಿರಂಜನ ಮೊದಲಾದ ಲೇಖಕಿಯರು

ಮಾನವೀಯ ಜಗತ್ತಿಗೆ ಸ್ಪಂದಿಸಿದ ರೀತಿ ಅಸಾಧಾರಣವಾದುದು. ಸ್ತ್ರೀಯರ ಒಳತುಡಿತಗಳನ್ನು, ಅನುಭವದ ಗಟ್ಟಿ ತಿರುಳನ್ನು, ತಮ್ಮ ಕೃತಿಗಳಲ್ಲಿ ಸಾದರಪಡಿಸಿದ್ದಾರೆ. ತಮ್ಮ ಕಾಲದ ಸಾಮಾಜಿಕ ಸಂದರ್ಭಗಳ ಸಾಂಸ್ಕೃತಿಕ ಅಂಶಗಳನ್ನು ಚರ್ಚೆಗೆ ಗುರಿಪಡಿಸುವಂಥ ಪ್ರಯತ್ನಗಳ ಜೊತೆಗೆ ಮಾನವೀಯ ಅಂತಃಕರಣದ ಪ್ರತಿಮೂರ್ತಿಯಾದ ಸ್ತ್ರೀಯ ಆಂತರ್ಯದ ಶೋಧನೆಗೆ ತೊಡಗಿದ್ದಾರೆ. ತ್ರಿವೇಣಿಯವರ ಕಾದಂಬರಿಗಳ ಮನೋವೈಜ್ಞಾನಿಕ ನೆಲೆಗಟ್ಟು ಮಾನವೀಯ ಪರಿಧಿಯನ್ನು ಮೀರದೆ ರೂಪುಗೊಂಡಿದೆ. ಸ್ತ್ರೀ ಸಂಬಂಧೀ ಮೌಲ್ಯಗಳ ಕಡೆ ಹೆಚ್ಚಿನ ಗಮನ ಕೊಟ್ಟಿದ್ದಾರೆ. 'ಗಂಡನೇ ಪರಮ ದೈವ' ಎಂದು ಪರಂಪರೆ ನಂಬಿದ್ದರೆ ಅದನ್ನು ವಿರೋಧಿಸುವಂತಹ ಮನಸ್ಥಿತಿಯನ್ನು ಸ್ತ್ರೀಯರಲ್ಲಿ ಉಂಟು ಮಾಡುವಂತಹ ಬರಹ ತ್ರಿವೇಣಿಯವರದು. ಗಂಡು ಸಂತಾನವೇ ಬೇಕೆಂಬ ತಾಯಂದಿರನ್ನು ಟೀಕಿಸುವ ಹಾಗೂ ಅವರ ಮನಸ್ಸನ್ನು ಹೆಣ್ಣು ಮಗುವಿನ ಮೇಲೆ ಅಕ್ಕರೆ ತೋರಿಸುವಂತೆ ಪರಿವರ್ತಿಸುತ್ತಾರೆ. ಅನುಪಮಾ ನಿರಂಜನ ಅವರು ಸ್ತ್ರೀಯರ ಸಮಸ್ಯೆಗಳ ಕಡೆ ತಮ್ಮ ಬರಹವನ್ನು ವಾಲಿಸಿದ್ದಾರೆ. ಸಮಾಜದ ಸ್ವಾಸ್ಥ್ಯ ಕಾಪಾಡುವಲ್ಲಿ ಸ್ತ್ರೀಯರ ಪಾತ್ರವನ್ನು ಕೊಂಡಾಡಿದ್ದಾರೆ. ಮಾನವೀಯ ಮೌಲ್ಯಗಳಿಗಾಗಿ ಲೇಖಕಿಯರಲ್ಲಿ ಶ್ರಮಿಸಿದವರೆಂದರೆ ತ್ರಿವೇಣಿ, ಎಂ.ಕೆ.ಇಂದಿರಾ, ಅನುಪಮಾ ಮೊದಲಾದವರು ಸ್ತ್ರೀಯರು ಮಾನವೀಕರಣದ ಪ್ರಕ್ರಿಯೆಗೆ ಹೇಳಿ ಮಾಡಿಸಿದ ವಕ್ತಾರರು. ಇವರು ಸಮಾಜದಲ್ಲಿ ಮತ್ತು ಕುಟುಂಬದಲ್ಲಿ ಶ್ರಮವಹಿಸಿದರೆ ಮಾನವೀಕರಣವು ಜಗತ್ತಿನಾದ್ಯಂತ ಯಾವುದೇ ತೊಂದರೆಗಳಿಲ್ಲದೆ ರೂಪುಗೊಳ್ಳುತ್ತದೆ. ಇಂತಹ ರೂಪಿಸುವಿಕೆಯ ಕೆಲಸ ಮಾಡುವಲ್ಲಿ ನಮ್ಮ ಮಹಿಳಾ ಬರಹಗಾರರು, ಸಮಾಜ ಕಾರ್ಯಕರ್ತೆಯರು ವಾಹಿನಿಗಳಾಗಿ ಕೆಲಸ ನಿರ್ವಹಿಸುವ ಜರೂರತ್ತು ಇದೆ.

ಮಧ್ಯಮವರ್ಗದ ಜನತೆಯ ಆಶೋತ್ತರಗಳಿಗೆ ಸ್ಪಂದಿಸುವ, ಬದುಕಿನ ಬೇಗೆಯಲ್ಲಿ ದಡ ಮುಟ್ಟದೆ ಒಂದೇ ಹಂತದಲ್ಲಿ ದುಡಿಯುತ್ತಿರುವ ಕಾರ್ಮಿಕ ಬಂಧುಗಳ, ಪುರುಷರ ದೌರ್ಜನ್ಯಕ್ಕೋ, ಕುತಂತ್ರಕ್ಕೋ ಬಲಿಯಾಗಿರುವ ನಿರಪರಾಧಿ ಹೆಣ್ಣಿನ ನೋವನ್ನು ಅರ್ಥೈಸುವ ಮತ್ತು ಸಂತೈಸುವ ಪ್ರಯತ್ನ ಮಾಡಿದ ಪ್ರಗತಿಶೀಲ ಸಾಹಿತ್ಯ ಪಂಥವು ಕಾದಂಬರಿಯ ಮೂಲಕ ಕೊಟ್ಟ ಕೊಡುಗೆ ಅಪಾರ. ಮಾನವೀಯ ಜಗತ್ತು ಅನುಭವಿಸಿಯೂ ಹೇಳಲಾರದಂತಹ ಸ್ಥಿತಿಯಲ್ಲಿದ್ದ ಸಂದರ್ಭದಲ್ಲಿ 'ಸಂಜೆಗತ್ತಲು', 'ಮೋಹದ ಬಲೆಯಲ್ಲಿ' ಮತ್ತು 'ಶಾಪ' ಕಾದಂಬರಿಗಳ ಮೂಲಕ ಸ್ತ್ರೀ ಕುಲದ ಕೆಲವು ಒಳತೋಟಿಗಳನ್ನು ಬಹಿರಂಗವಾಗಿ ಅನಾವರಣಗೊಳಿಸಲಾಯಿತು. ಸಮಾಜ ಸುಧಾರಣೆಯ ಸಾಹಸಕ್ಕೆ ಕೈ ಹಾಕಿದ ಪ್ರಗತಿಶೀಲರು ರಾಜಕಾರಣಿಗಳನ್ನು, ಮಠಾಧೀಶರನ್ನು ಮತ್ತು ಶ್ರೀಮಂತರ ದೌರ್ಜನ್ಯವನ್ನು ಹೀನಾಮಾನವಾಗಿ ಖಂಡಿಸಿದರು. ಇದರಿಂದುಂಟಾದ ಪರಿಣಾಮ ಸಮಾಜದ ಮೇಲೆ ಕ್ಷಕಿರಣದಂತೆ ಪ್ರಭಾವ ಬೀರಿತು. ಅನಕೃ ಆರಂಭಿಸಿದ ಚಳುವಳಿಯು ಕನ್ನಡ ನಾಡಿನಲ್ಲಿ ತುಂಬಾ ಶಕ್ತಿಶಾಲಿಯಾಗಿಯೇ ಕೆಲಸ ಮಾಡಿತು. ನಿರಂಜನ, ತರಾಸು, ಬಸವರಾಜ ಕಟ್ಟೀಮನಿ, ಇನಾಂದಾರ್, ಕುಮಾರ ವೆಂಕಣ್ಣ

ಮೊದಲಾದ ಬರಹಗಾರರು ತಮ್ಮ ಬರಹದ ಮೂಲಕ ಚಳುವಳಿಗೆ ಸ್ಪಂದಿಸಿದರು. ಚಳುವಳಿಯ ಅವಸಾನದ ಕಾಲವೋ ಅಥವಾ ವೇಶ್ಯಾ ಸಮಸ್ಯೆಯನ್ನು ಇದೇ ಚಳುವಳಿಕಾರರು ಅರ್ಥೈಸಿದ ರೀತಿಯ ಪರಿಣಾಮವೋ ಕೊನೆಯ ಸಂದರ್ಭದಲ್ಲಿ ಬಂದ 'ಶನಿಸಂತಾನ', 'ಸಂಜೆಗತ್ತಲು' ಮತ್ತು 'ನಗ್ನ ಸತ್ಯ' ಎಂಬ ತ್ರಿವಳಿ ಕಾದಂಬರಿಗಳು ಯುವಕರನ್ನು ಮೋಜಿಗಾಗಿ ಓದಿಸಿಕೊಳ್ಳಲು ತೊಡಗಿದವು. ಅವುಗಳ ಬೆನ್ನಲ್ಲೆ ಬಂದಂತಹ 'ಮೋಹದ ಬಲೆಯಲ್ಲಿ', 'ಖಾನಾವಳಿಯ ನೀಲಾ' ಕೃತಿಗಳು ಕೂಡ ಈ ಮಾತಿಗೆ ಹಿಂದೆ ಬಿದ್ದಿಲ್ಲ. ಈ ಮಾತಿಗೆ ಇನಾಂದಾರ್‌ರ ಶಾಪ ಮಾತ್ರ ಸ್ವಲ್ಪ ಭಿನ್ನವೆನ್ನಿಸುತ್ತದೆ. 'ಸಂಜೆ ಗತ್ತಲಿ'ನ ನಾಯಕಿ, 'ಮೋಹದ ಬಲೆಯಲ್ಲಿ'ನ ಸುಶೀಲ, 'ಖಾನಾವಳಿಯ ನೀಲಾ'ದ ನೀಲಾ ಮತ್ತು 'ಶಾಪ'ದ ಸರೋಜಾ ಪಾತ್ರಗಳಲ್ಲಿ ಮೊದಲ ಮೂರು ಪಾತ್ರಗಳು ಲೈಂಗಿಕತೆಯನ್ನು ಪ್ರಚೋದಿಸುವುದರ ಜೊತೆಗೆ ನೈತಿಕತೆಯನ್ನು ಬೋಧಿಸಲು ಹೆಣಗಾಡುತ್ತವೆ. 'ಶಾಪ'ದ ಸರೋಜಾ ಮಾತ್ರ ಸ್ಪಷ್ಟವಾಗಿ ಮಾನವತಾವಾದದ ಹರಿಕಾರಳಾಗುತ್ತಾಳೆ. ಅವಳಿಗೆ ವ್ಯವಸ್ಥೆಯು ದುರಂತವನ್ನು ತಂದುಕೊಡುತ್ತದೆ. ಸಮಾಜದ ಬೆಂಬಲವೇನಾದರೂ ದೊರಕಿದ್ದರೆ ಅಥವಾ ತಾಯಿಯ ಕುತಂತ್ರವಿಲ್ಲದಿದ್ದರೆ ಸರೋಜಾಳು ಆಧುನಿಕ ಕಾದಂಬರಿ ಸಾಹಿತ್ಯದಲ್ಲಿ ಆದರ್ಶ ಸ್ತ್ರೀಯಾಗುತ್ತಿದ್ದಳು. ಪ್ರಗತಿಶೀಲರಿಗೆ ಸ್ವಾತಂತ್ರ್ಯ ಹೋರಾಟದ ಕಾವು ತಟ್ಟುತ್ತಿದ್ದುದರಿಂದಲೂ ಅತ್ತ ಗಮನಕೊಡುವುದು ಅನಿವಾರ್ಯವಾಗಿತ್ತು. ಇಂತಹ ಅನಿವಾರ್ಯತೆಗೆ ಅನಕೃ ಕತೆಗಳ ಮೊರೆ ಹೋದರೆ, ಕಟ್ಟೀಮನಿ ಅವರು ಕಾದಂಬರಿಗೆ ಮೊರೆ ಹೋದರು. ತರಾಸು ಅವರು ಇತಿಹಾಸದ ಪುನರ್‌ಕಟ್ಟುವಿಕೆಯ ಜೊತೆಗೆ ವಾಸ್ತವಿಕತೆಗೆ ಪ್ರೋತ್ಸಾಹ ನೀಡಿದರು. ಐತಿಹಾಸಿಕ ಘಟನೆಗಳನ್ನು ಭವಿಷ್ಯತ್ತಿನಲ್ಲಿ ಮಾನವೀಕರಣಗೊಳಿಸುವುದಕ್ಕಾಗಿ ಮತ್ತು ಅದಕ್ಕೆಂದೇ ಆದರ್ಶನೀಯ ವ್ಯಕ್ತಿಗಳನ್ನು ಕಾದಂಬರಿಗಳ ನಾಯಕರನ್ನಾಗಿ ಮಾಡಿಕೊಂಡರು. ಒಟ್ಟಿನಲ್ಲಿ ಪ್ರಗತಿಶೀಲರು ತಮ್ಮ ಕೃತಿಗಳಲ್ಲಿ ಬಳಸಿದ ಕಾಮ ಸಮಾಜದ ಸ್ವಾಸ್ಥ್ಯವನ್ನು ಕೆಡಿಸದೆ ಮುನ್ನಡೆಯಿತು. ಐತಿಹಾಸಿಕತೆ ಆದರ್ಶವನ್ನು ಬೋಧಿಸಿತು, ರಾಜಕೀಯ-ಧಾರ್ಮಿಕ ಮುಖಂಡರ ಭ್ರಷ್ಟಾಚಾರಗಳು ಖಂಡನೆಗೊಳಗಾದವು.

## ನವ್ಯ

ಸಾಹಿತ್ಯದ ಹೆದ್ದಾರಿಯಲ್ಲಿ ವಿಶಿಷ್ಟ ಛಾಪನ್ನು ಮೂಡಿಸಿದ ನವ್ಯ ಪ್ರಕಾರವು ಕನ್ನಡಕ್ಕೆ ಕೊಟ್ಟ ಕೊಡುಗೆ ಅಪಾರ. ಕಾದಂಬರಿಲೋಕದಲ್ಲಿ ಮಾನವನ ವೈಯಕ್ತಿಕ ಸಮಸ್ಯೆಗಳಿಂದ ಮತ್ತು ವೈಯಕ್ತಿಕ ಆಶೋತ್ತರಗಳಿಂದ ನವ್ಯ ಕಾದಂಬರಿಗಳು ವಿಜೃಂಭಿಸಿದವು. ವ್ಯಕ್ತಿಯ ದೌರ್ಬಲ್ಯ, ಹಿಂಜರಿಕೆ, ನಪುಂಸಕತ್ವ, ಲೈಂಗಿಕ ವರ್ಣನೆ ಮೊದಲಾದವುಗಳಿಗೆ ಮಹತ್ವ ಕೊಡತೊಡಗಿದ ನವ್ಯವು ಒಂದು ಹಂತದಲ್ಲಿ ಮಾನವತಾವಾದವನ್ನು ಮರೆತೇ ಬಿಟ್ಟಿದೆಯೇನೋ ಎಂಬ ಭಾವನೆ ತಂದುಕೊಂಡಿತ್ತು. "ನವ್ಯ ಪ್ರಜ್ಞೆ ಎಷ್ಟು ಆಳವಾಗಿ ಹೋಗಬಲ್ಲದೋ ಅಷ್ಟೇ ಸೀಮಿತವಾಗಿದೆ. ಆಳವಾಗಿ ಹೋದಷ್ಟು

'ಮನುಷ್ಯತೆ'ಯಿಂದ ದೂರ ಹೋಗುವ ಸಂಭವವೂ ಹೆಚ್ಚು. ಗ್ಯಾಸೇ ಎಂಬ ವಿಚಾರವಂತ ಹೇಳುವುದೆಂದರೆ ನವ್ಯ ಸಾಹಿತ್ಯದಲ್ಲಿ ಅಮಾನವೀಕರಣದ ಪ್ರಕ್ರಿಯೆ (Dehumanisation) ನಡೆಯುತ್ತದೆ ಎಂದು."[೧೮] ವಸಾಹತೀಕರಣದ ಕಾವು ಏರುತ್ತಿರುವ ಸಂದರ್ಭದಲ್ಲಿ ಹುಟ್ಟಿದ ನವ್ಯವು ನಾವು ನಿರೀಕ್ಷಿಸುವ ಮಾನವನ ಅನುಭವ ಮತ್ತು ಮಾನವೀಯತೆಯನ್ನು ತೆಕ್ಕೆಗೆ ಹಾಕಿಕೊಳ್ಳಲು ವಿಫಲವಾಯಿತು. ಈ ಸಂದರ್ಭದ ತೆವಲೆಂದರೆ ಅನುಭವದ ವಿನಾಶ ಮತ್ತು ನಿರ್ನಾಮ. "ಸಂಸ್ಕೃತಿಯೊಂದರ ಒಳಧಾರೆಗಳಾದ ಬಹುಮುಖೀ ನ್ಯಾಯಬದ್ಧತೆಯ ಸ್ತರಗಳನ್ನು ನಾಶ ಮಾಡುವುದು ವಸಾಹತೀಕರಣ ಉಂಟುಮಾಡುವ ಮಹಾನ್ ಹಿಂಸೆ"[೧೯] ಎನ್ನುವುದು ಅದಕ್ಕಾಗಿಯೆ. ಈ ಮಾತುಗಳನ್ನು ಅಡಿಗರ ಮತ್ತು ವಿನಾಯಕರ ಕವನಗಳು ಸಮರ್ಥಿಸುತ್ತವೆ. ಕಾದಂಬರಿಗಳಲ್ಲಿ ಲಂಕೇಶ್, ತೇಜಸ್ವಿ, ಚಿತ್ತಾಲರ ಕೃತಿಗಳೂ ಹೇಳುತ್ತವೆ. ನವ್ಯದ ಬರಹದ ದಿಕ್ಕು ವ್ಯಷ್ಟಿ ನೆಲೆಯಲ್ಲಿ ಹೋರಾಡುತ್ತಿತ್ತು, ಸಮಷ್ಟಿ ಪ್ರಜ್ಞೆ ಈ ಪ್ರಕಾರಕ್ಕೆ ಕಡಿಮೆ. ಲಂಕೇಶ್‌ರ 'ಬಿರುಕು', ಅನಂತಮೂರ್ತಿ ಅವರ 'ಸಂಸ್ಕಾರ', ಚಿತ್ತಾಲರ 'ಛೇದ' ಮತ್ತು ಶಾಂತಿನಾಥ ದೇಸಾಯಿ ಅವರ 'ಮುಕ್ತಿ' ಕಾದಂಬರಿಗಳು ತಮ್ಮ ನಾಯಕರ ಸಂಕೀರ್ಣತೆಯನ್ನು ವಿವರಿಸುತ್ತವೆ. ಆದರೆ ಸಾಮಾಜಿಕ ವಿಷಯಗಳನ್ನು ವಿವರಿಸುವಲ್ಲಿ ಅಥವಾ ದಾಖಲಿಸುವಲ್ಲಿ ಸೋಲುತ್ತವೆ. ಇದು ಕಾದಂಬರಿಕಾರರ ಹಾಗೂ ನವ್ಯದ ತಾತ್ವಿಕತೆಯ ಸೋಲು. ಈ ಸೋಲು ಉಂಟಾದದ್ದು ಯಥೇಚ್ಛವಾದ ಲೈಂಗಿಕತೆ ಮತ್ತು ಇತರೆ ಚಟಗಳ ವ್ಯಸನದಿಂದ. ಒಂದು ಕಡೆ ಲೇಖಕರ ಚಟಗಳು ಕಾರಣವಾದರೆ ಇನ್ನೊಂದೆಡೆ ಕೃತಿಗಳ ನಾಯಕರ ಚಟಗಳು ಕಾರಣವಾಗುತ್ತವೆ. ಹೀಗಾಗಿ ನವ್ಯ ಮಾನವೀಕರಣದ ನೆಲೆಗಳನ್ನು ಶೋಧಿಸುವಲ್ಲಿ ಮತ್ತು ಪಸರಿಸುವಲ್ಲಿ ವಿಫಲವಾಯಿತು.

ಶಾಂತಿನಾಥ ದೇಸಾಯಿ ಅವರ 'ಮುಕ್ತಿ' ಕಾದಂಬರಿಯ ನಾಯಕ ಗೌರೀಶನ ಅಧೈರ್ಯವು ಅಮಾನವೀಕರಣವನ್ನು ಬಲಪಡಿಸುತ್ತದೆ. ಹಾಗೆಯೇ ಅವನ ಅಪರಾಧಿ ಪ್ರಜ್ಞೆಯ ಮನೋಭೂಮಿಕೆಯು ಮಾನವೀಕರಣವನ್ನು ವಿರೋಧಿಸುತ್ತದೆ. 'ಗಂಗವ್ವ ಗಂಗಾಮಾಯಿ' ಕಾದಂಬರಿಯು ನವ್ಯ ಪರಂಪರೆಯ ಲಕ್ಷಣಗಳನ್ನಿಟ್ಟುಕೊಂಡರೂ ನವ್ಯದ ವ್ಯಾಪ್ತಿಯ ಹೊರಗೆ ನಿಲ್ಲುತ್ತದೆ. ಕೌಟುಂಬಿಕ ವಾತಾವರಣದಲ್ಲಿ ನಿರ್ಮಿತಿಗೊಳ್ಳುವ ಕಾದಂಬರಿಯು ಗಂಗವ್ವ, ರಾಘುಪ್ಪ ಮತ್ತು ದೇಸಾಯಿ ಅವರ ಮನೆಗಳ ಸುತ್ತ ಆವರಿಸುತ್ತದೆ. ಪರಂಪರೆಯ ಕತೆಯನ್ನು ತಲೆಮಾರಿನಿಂದ ತಲೆಮಾರಿಗೆ ಹಂಚುವ ಬಟವಾಡೆದಾರನ ಕೆಲಸದಲ್ಲಿ ನಿರತರಾಗುವ ಕಾದಂಬರಿಕಾರರು ಮಾನವೀಯತೆಯನ್ನು ಮರೆಯದೆ ಜೋಡಿಸುತ್ತಾರೆ. ಗಂಗವ್ವನ ದುಃಖ ರಾಘುಪ್ಪ-ಚಂಪಿಯರ ದುರ್ಮರಣದಿಂದ ಪರ್ಯವಸಾನವಾಗಿ ಕಂಡರೆ ಅವಳಲ್ಲಿನ ಪ್ರೀತಿ ಮತ್ತು ಜಿಜ್ಞಾಸೆಗಳು ಮಗ ಕಿಟ್ಟನಲ್ಲಿ ಅನುಕರಣಗೊಳ್ಳುತ್ತವೆ. ಶಂಕರ ಮೊಕಾಶಿ ಅವರು ಪಾತ್ರಗಳ ಜೋಡಣೆಯಲ್ಲಿ ಸಾಂಪ್ರದಾಯಿಕ ಚೌಕಟ್ಟನ್ನು ಅನುಸರಿಸುತ್ತಾರೆ. ಈ ಸಾಂಪ್ರದಾಯಿಕ ಚೌಕಟ್ಟನ್ನು ಬಿಗಿಗೊಳಿಸುವ ನಿಟ್ಟಿನಲ್ಲಿ ಮಾನವನ ಅಜ್ಞಾನ, ದುರಂತ ಮತ್ತು ಮಾನವೀಯ

ಮೌಲ್ಯಗಳನ್ನು ಪರಿಕರಗಳನ್ನಾಗಿ ಬಳಸುತ್ತಾರೆ. ಹೀಗಾಗಿ ಅವರ ಕಾದಂಬರಿ 'ಗಂಗವ್ವ ಗಂಗಾಮಾಯಿ'ಯು ಮಾನವೀಯತೆಗೆ ಅರ್ಪಿಸಿಕೊಳ್ಳುತ್ತದೆ.

ಮಾನವನ ಜೀವನವು ಧರ್ಮವನ್ನು ಆಶ್ರಯಿಸಿದಾಗ ಮಾನವೀಕರಣವು ಮರೆಯಾಗಿ ಬಿಡುತ್ತದೆ. ಧರ್ಮವೇ ಬೇರೆ ಮಾನವೀಯತೆಯೇ ಬೇರೆ, ಎರಡೂ ಸರಳರೇಖೆಗಳಾಗಿ ಎಂದೂ ಕೂಡದಂತೆ ಸಾಗುತ್ತವೆ. 'ಧರ್ಮ' ಮಾನವಧರ್ಮವಾದಾಗ ಮಾತ್ರ ರಾಜಿಯಾಗಬಹುದೇನೋ? ಈ 'ಮಾನವಧರ್ಮ'ದ ನಿರ್ಮಾಣ ಮಾತ್ರ ಕಷ್ಟದ ಕೆಲಸವಾಗಿದೆ. ಅನಂತಮೂರ್ತಿ ಅವರ 'ಸಂಸ್ಕಾರ' ಕಾದಂಬರಿಯು ಮಾನವೀಕರಣವನ್ನು ದೂರೀಕರಿಸಿ ಕೇವಲ ಧರ್ಮವನ್ನು ಅನುಷ್ಠಾನಗೊಳಿಸಲು, ಆರಾಧಿಸಲು ತೊಡಗುತ್ತದೆ. ಧರ್ಮದ ಸಂಕಷ್ಟತೆ ಮತ್ತು ಮಾನವೀಕರಣದ ಸುಭಗತೆ ಎರಡು ಮುಖಗಳೂ ಕಾದಂಬರಿಯಲ್ಲಿ ವ್ಯಕ್ತವಾಗಿವೆ. ಧರ್ಮದ ಆಧಾರದಿಂದ ಅನಾಚಾರಿ ಬ್ರಾಹ್ಮಣ ನಾರಣಪ್ಪನ ಸಂಸ್ಕಾರ ಮಾಡಬೇಕೆನ್ನುವಾಗ ಧರ್ಮದ ಸಂಕಷ್ಟತೆ ಎದ್ದು ನಿಲ್ಲುತ್ತದೆ. ಪ್ರಾಣೇಶಾಚಾರ್ಯರು ತಮ್ಮ ಸತಿಯನ್ನು ಶುಶ್ರೂಷೆ ಮಾಡುವ ಆದರಣೀಯತೆಯಲ್ಲಿ ಧಾರ್ಮಿಕ ನೆಲೆಯ ಬೆಂಬಲಕ್ಕಿಂತಲೂ ಮಾನವೀಯ ಮೌಲ್ಯವೇ ಹೆಚ್ಚು ಕಾಣುತ್ತದೆ. ಮನುಷ್ಯತ್ವವನ್ನು ಆಧರಿಸಿ, ಯಾವುದೇ ಸಂಪ್ರದಾಯದ ಜಿಡ್ಡನ್ನು ಅಂಟಿಸಿಕೊಳ್ಳದೆ, ಊರಿನ ಜನತೆಗೆ ಪ್ಲೇಗಿನ ಸೋಂಕು ತಗಲಬಾರದು ಎನ್ನುವ ಉದ್ದೇಶದಿಂದ ನಾರಾಣಪ್ಪನ ಸಂಸ್ಕಾರ ಮಾಡಿದರೆ ಏನೂ ತೊಂದರೆಯಾಗುತ್ತಿರಲಿಲ್ಲ. ಈ ಪ್ರಕ್ರಿಯೆಗೆ ಬ್ರಾಹ್ಮಣ ಧರ್ಮ ಅಡ್ಡಿಯಾಗುತ್ತದೆ. ನಾರಣಪ್ಪ ನೀತಿಗೆಟ್ಟವನು, ಬ್ರಹ್ಮತ್ವವನ್ನೇ ಪ್ರಶ್ನೆ ಮಾಡಿದವನು, ದೇವರಿಗೆ ಬೆಲೆ ಕೊಡದವನು ಎಂಬೆಲ್ಲ ಕಾರಣಕ್ಕಾಗಿ ಅವನನ್ನು ದೂರೀಕರಿಸಲಾಯಿತು. ಪರಿಣಾಮವಾಗಿ ಅನನುಕೂಲಗಳೇ ಹೆಚ್ಚಾದವು. "ಸಂಸ್ಕಾರದಲ್ಲಿ ಕೆಲಸ ಮಾಡುವ ಪ್ರಜ್ಞೆ 'ಅಮಾನವೀಕರಣ'ದ ದಿಶೆಯಲ್ಲಿದೆ. ಆದರೆ ಇನ್ನೂ ರೋಮ್ಯಾಂಟಿಕ್ ವಲಯವನ್ನು ಬಿಟ್ಟು ಹೋಗಿಲ್ಲ. ಅರ್ಥಪೂರ್ಣತೆಯ ಅವಶ್ಯತೆಯಿದ್ದುದರಿಂದಲೇ 'ಸಂಸ್ಕಾರ'ದ ನವ್ಯತೆ ಗ್ರಾಹ್ಯವಾಯಿತು. ಇಲ್ಲದಿದ್ದರೆ ಅಮಾನವೀಯ ವರ್ತನೆಯಲ್ಲಿ ಸೊಕ್ಕಿಬಿಡಬಹುದಿತ್ತು"[೨೦] ಇದಕ್ಕೆ ಪ್ರತಿಯಾಗಿ ಎಂಬಂತೆ ಜಿ. ಎಸ್. ಆಮೂರ ಅವರು "ಸಂಸ್ಕಾರದ ಪ್ರಾಣೇಶಾಚಾರ್ಯ ನಂಬಿದ ಮೌಲ್ಯಗಳಿಗೆ ಆಧಾರಭೂತವಾದ ಸನಾತನ ಸಂಸ್ಕೃತಿಯಲ್ಲಿ ಅವನಿಗೆ ಗೊತ್ತಿಲ್ಲದೆಯೆ ಮೂಲಭೂತವಾದ ಬದಲಾವಣೆಗಳು ನಡೆದುಹೋಗಿರುತ್ತವೆ. ವಾಸ್ತವದ ಅನುಭವದ ಮೂಲಕ ತಾನು ನಂಬಿಕೊಂಡ ಮೌಲ್ಯಗಳ ಅರ್ಥಹೀನತೆಯನ್ನು ಪ್ರಾಣೇಶಾಚಾರ್ಯ ಕಂಡುಕೊಂಡಾಗ ಅವನ ಅಸ್ಮಿತೆ ಚೇತರಿಸಿಕೊಳ್ಳಲಾರದಂತಹ ಆಘಾತದಿಂದ ಒಡೆದು ಹೋಗುತ್ತದೆ. ಹೊಸ ಮೌಲ್ಯಗಳನ್ನೊಪ್ಪಿಕೊಂಡು ತನ್ನ ಜೀವನಕ್ಕೆ ಅರ್ಥಪೂರ್ಣವಾದ ತಿರುವನ್ನು ಪ್ರಾಣೇಶಾಚಾರ್ಯ ಕೊಡಬಲ್ಲ ಸಾಧ್ಯತೆಗಳನ್ನು ಕಾದಂಬರಿಯ ಕೊನೆಯ ಭಾಗ ಸೂಚಿಸುತ್ತದೆಯಾದರೂ ಈ ಆಶಾವಾದಕ್ಕೆ ಭದ್ರವಾದ ನೆಲೆಯಿಲ್ಲ"[೨೧] ಎಂಬಲ್ಲಿ ಕಂಡುಕೊಳ್ಳುವ ಆದರ್ಶ-ವಾಸ್ತವಗಳ ವಿಫಲತೆಯು ಮಾನವೀಕರಣದ

ವಿರೋಧಿ ನೆಲೆಯೂ ಆಗುತ್ತದೆ. ಇನ್ನೊಂದೆಡೆ ಆಮೂರ ಅವರು ಪ್ರಾಣೇಶಾಚಾರ್ಯರ ಪ್ರೇರಕತ್ವ, ರಾಕ್ಷಸತ್ವ ಮತ್ತು ಮಾನವತ್ವಗಳನ್ನು ಪ್ರಸ್ತಾಪಿಸುತ್ತಾರೆ. ಮಾನವತ್ವದ ಕಡೆಗೆ ಸಂಚರಿಸುವ ಆಚಾರ್ಯರ ಕ್ರಿಯೆಗೆ ಧರ್ಮ, ನಾರಣಪ್ಪ ಮತ್ತು ಚಂದ್ರಿಯರು ಸಾಧನಗಳಾಗುತ್ತಾರೆ. "ಭಯ, ಸೋಲಿನ ಅರಿವು, ಆತ್ಮವಂಚನೆಯ ಅಳುಕು-ಇವೆಲ್ಲವುಗಳೊಡನೆ ಸೆಣಸಿ, ಬಾಹ್ಯ ಜಗತ್ತಿನ ಸಂಪರ್ಕದಲ್ಲಿ ನಿಜವಾದ ಸಂಸ್ಕಾರ ಪಡೆದು ಸ್ವೇಚ್ಛೆಯಿಂದ, ಎಚ್ಚರದಲ್ಲಿ, ಪರಿಪೂರ್ಣ ನಿಶ್ಚಯದಲ್ಲಿ ಮಾಡುವ ಕ್ರಿಯೆಯಿಂದಲೇ ನಿಜವಾದ ಬಿಡುಗಡೆ ಸಾಧ್ಯ' ಎಂಬ ಅರಿವು ಅವನಲ್ಲಿ ಮೂಡಿದಾಗ, ದ್ವಂದ್ವಾತೀತವಾಗುವ ಹಾದಿ ತೋರಿದಾಗ, ಉದಾತ್ತ ವ್ಯಕ್ತಿತ್ವದ ವೇಷ ಕಳಚಿ ಹೋಗಿ ಒಳಬಾಳಿನ ಸತ್ಯ ಹೊರಬಾಳಿನ ಸತ್ಯವೂ ಆದಾಗ ಅದನ್ನು ಸ್ವೀಕರಿಸುವ ಧೈರ್ಯವನ್ನು ಆತ ಗಳಿಸಿದಾಗ ಪ್ರಾಣೇಶಾಚಾರ್ಯರ ಬದುಕು ಸಾರ್ಥಕತೆಯತ್ತ ತಿರುಗುತ್ತದೆ. ಪ್ರೇತತ್ವ, ರಾಕ್ಷಸತ್ವ ಕಳೆದು ಅವನೂ ಒಬ್ಬ 'ಮನುಷ್ಯ'ನಾಗುತ್ತಾನೆ."[೨೨] ಹೀಗೆ ಎರಡು ಪೊರೆ ಕಳೆದು ಮನುಷ್ಯತ್ವವನ್ನು ಧರಿಸುವುದು ಕೃತಕವಾಗಿಯೇ ಬಂದಿದೆ. ಜನ್ಮತಃ ಮಾನವತೆ ಮೈಗೂಡಿದ್ದರೆ ಪ್ರಾಣೇಶಾಚಾರ್ಯನ ವ್ಯಕ್ತಿತ್ವ ಇನ್ನೂ ಭಿನ್ನವೆನ್ನಿಸುತ್ತಿತ್ತು.

'ಭಾರತೀಪುರ' ಕಾದಂಬರಿಯು ಮಾನವೀಕರಣದ ಪ್ರಕ್ರಿಯೆಗಳನ್ನು ಎರಡು ಸಂದರ್ಭದಲ್ಲಿ ಪ್ರಸ್ತುತಪಡಿಸಲು ಯತ್ನಿಸುತ್ತದೆ. ೧. ಕೇವಲ ಮೇಲ್ವರ್ಗದವರಿಗೆ ಮಾತ್ರ ಸೀಮಿತವಾಗಿರುವ ಮಂಜುನಾಥನ ಗರ್ಭಗುಡಿಯನ್ನು ಹೊಲೆಯರು ಪ್ರವೇಶಿಸುವುದು, ೨. ಜಗನ್ನಾಥನು ಮಾರ್ಗರೇಟ್‌ಳನ್ನು ಸ್ವೀಕರಿಸುವುದು. ಮೊದಲನೆಯದು ಧಾರ್ಮಿಕ ನಿಬಂಧನೆಗಳನ್ನು ಮೀರುವ ಮಾನವೀಕರಣ. ಎರಡನೆಯದು ವೈಯಕ್ತಿಕ - ಸಾಮಾಜಿಕ ಪಾತಳಿಯದು. ಗರ್ಭಗುಡಿ ಪ್ರವೇಶಸಿದರೆ ರಕ್ತಕಾರಿ ಸಾಯುತ್ತಾರೆ ಎನ್ನುವುದು ದ್ವಿಜರು ಸೃಷ್ಟಿಸಿರುವ 'ಭಯ'ದ ಭೂತವಷ್ಟೆ. ಅದನ್ನು ಧಿಕ್ಕರಿಸಿ, ಹೊಲೆಯರಲ್ಲಿದ್ದ ಭಯವನ್ನು ದೂರಮಾಡಿ ಜಗನ್ನಾಥ ಕ್ರಾಂತಿಗೆ ಸಜ್ಜಾಗುತ್ತಾನೆ. ಜಗನ್ನಾಥ ಇಂತಹ ಕ್ರಿಯೆಗೆ ಸಿದ್ಧನಾಗುವ ಮೊದಲು ತನ್ನ ಸುತ್ತ ನಿರ್ಮಿಸಿಕೊಳ್ಳುವ ಮಾನವೀಯ ಸಖ್ಯ ಅಂದರೆ ಚಿಕ್ಕ, ಕಾವೇರಿ, ರಾಯರು, ಪಿಳ್ಳೆ, ಭಾಗ್ಯಮ್ಮ ಮತ್ತು ನಾಗಮಣಿ ಮೊದಲಾದವರೊಂದಿಗೆ ಹೊಂದಿರುವ ಸಂಬಂಧ ಉತ್ತಮವಾಗಿದೆ. ಅನಂತಮೂರ್ತಿ ಅವರ ಈ ಎರಡು ಕಾದಂಬರಿಗಳಲ್ಲಿ ಪ್ರಾಣೇಶಾಚಾರ್ಯರು ಧಾರ್ಮಿಕ ನೆಲೆಯಿಂದ ಮಾನವೀಕರಣದತ್ತ ಸಾಗಲು ಯತ್ನಿಸುತ್ತಾರೆ. ಆದರೆ ವಿಫಲರಾಗುತ್ತಾರೆ. ಜಗನ್ನಾಥ ಕ್ರಾಂತಿಯ ನೆಲೆಯಿಂದ ಸಾಗುತ್ತಾನೆ.

ಕನ್ನಡದ ಉತ್ತಮ ಕಾದಂಬರಿಗಳಲ್ಲೊಂದಾದ ಯಶವಂತ ಚಿತ್ತಾಲರ 'ಶಿಕಾರಿ'ಯು ಮಾನವನ ಅಂತಃಕರಣವನ್ನು ಪರಿಶೋಧಿಸುವ ಪ್ರಕ್ರಿಯೆಯನ್ನು ಪ್ರಕಟಪಡಿಸುತ್ತದೆ. ಕಾದಂಬರಿಯ ಉದ್ದಕ್ಕೂ ನಾಗಪ್ಪನು ಅವಸಾನಗೊಳ್ಳುತ್ತಿರುವ ಮಾನವೀಯ ಮೌಲ್ಯಗಳ ಬಗ್ಗೆ ಆತಂಕ ವ್ಯಕ್ತಪಡಿಸುತ್ತಾನೆ.

ತಾನು ಕೆಲಸ ಮಾಡುತ್ತಿದ್ದ ಫ್ಯಾಕ್ಟರಿಯ DMD, ಫಿರೋಜ್ ಮತ್ತು ತನಿಖೆ ನಡೆಸಲು ಬಂದಿರುವ ದಸ್ತೂರ್ , ಪಟೇಲ್ ಮೊದಲಾದವರ ಅನೀತಿಯುತವಾದ ವರ್ತನೆಯನ್ನು ಕಂಡು ಮರುಗುತ್ತಾನೆ. ತನ್ನ ಕೆಲಸಕ್ಕೆ ರಾಜೀನಾಮೆ ಕೊಡುತ್ತಾನೆ. ಯಾರದೋ ಅಪರಾಧಕ್ಕೆ ತನ್ನನ್ನು ಆರೋಪಿಯನ್ನಾಗಿ ಮಾಡುವ ಕಂಪನಿಯ DMDಯ ಬಗ್ಗೆ ಬೇಸರ ಹುಟ್ಟಿಸಿಕೊಳ್ಳುತ್ತಾನೆ. ಪ್ರತಿವ್ಯಕ್ತಿಯಲ್ಲೂ ಮಾನವತೆ ನೆಲೆಗೊಳ್ಳಬೇಕಾದರೆ ಮನುಷ್ಯ ಮನುಷ್ಯರ ನಡುವೆ ಇರುವ ಎಲ್ಲ ರೀತಿಯ ಸಂಬಂಧಗಳನ್ನು ತೊರೆಯಬೇಕು. "ಈ ಎಲ್ಲ ಸುಳ್ಳು ಸಂಬಂಧಗಳನ್ನು, ಮನುಷ್ಯನನ್ನೇ ಸುಳ್ಳು ಮಾಡುವ ಸಂಬಂಧಗಳನ್ನು ಕಡಿಯುತ್ತ ಹೋಗಬೇಕು. ಅಂದರೇನೇ ನಿಜವಾದ, ನಿಸ್ಪೃಹವಾದ ಸಂಬಂಧಗಳು ಹುಟ್ಟಬಹುದೇನೋ. ಯಾವುದೇ ರೀತಿಯ ಸ್ವಾರ್ಥಕ್ಕೆ, ಹಿತಾಸಕ್ತಿಗಳ ರಕ್ಷಣೆಗೆ ಕಟ್ಟುಬಿದ್ದಿರದ ಸಂಬಂಧಗಳು ಇದ್ದಲ್ಲಿ ಮಾತ್ರ ಮನುಷ್ಯನೇ ಮನುಷ್ಯನ ಹಿಂಸೆಗೆ ಕಾರಣವಾಗುವುದು ತಪ್ಪಬಹುದೇನೋ...."[೨೩] ಎಂದು ಹೇಳಿಕೊಳ್ಳುತ್ತಾನೆ. ತಕ್ಷಣಕ್ಕೆ ಮುಂದುವರೆದು "......ತಿರುಗಿ, ಬೇರಿನವರೆಗೆ ಅಲ್ಲಾಡಿಸಿದ್ದನ್ನು ಕೂಡ ನಿರ್ಜೀವ ಶಬ್ದಗಳಲ್ಲಿ ಹಿಡಿಯ ಹೊರಟ ತನ್ನ ಹುಚ್ಚು ಹವ್ಯಾಸಕ್ಕೆ ತಾನೇ ಬೇಜಾರು ಪಟ್ಟು ಹಾಸಿಗೆಯಿಂದ ಧಡಕ್ಕನೆ ಎದ್ದ"[೨೪] ಈ ಮಾತುಗಳಲ್ಲಿ ತಾನು ಮೊದಲು ಕಟ್ಟಲು ಬಯಸಿದ ಮಾನವೀಕರಣ ಅನಂತರ ವ್ಯಾವಹಾರಿಕ ಜಗತ್ತಿನಲ್ಲಿ, ಯಾಂತ್ರಿಕ ಬದುಕಿನಲ್ಲಿ ಲಾಭದ ಪಿಪಾಸೆಯ ವೃತ್ತಿಯಲ್ಲಿ ಅದು ನಿರ್ಜೀವ ಶಬ್ದಗಳ ಹುಚ್ಚುತನವಾಗುತ್ತದೆ. "ಏನಿದ್ದರೂ ಬದುಕಬಹುದೇನೋ. ಆದರೆ ಪ್ರೀತಿಯಿಲ್ಲದೆ? ಗೆಳೆತನವಿಲ್ಲದೆ? ಮಾನವೀಯ ಅಂತಃ ಕರಣವಿಲ್ಲದೆ? ಸಹಾನುಭೂತಿಯಿಲ್ಲದೆ?....."[೨೫] ಬದುಕಲು ಸಾಧ್ಯವಿಲ್ಲ ಎನ್ನುವ ಸ್ಥಿತಿಗೆ ನಾಗಪ್ಪ ತಲುಪಿದ್ದಾನೆ. ಸೀತಾರಾಮನಂತಹ ಮಾನವೀಯ ಅಂತಃಕರಣವುಳ್ಳ ಗೆಳೆತನವನ್ನು ಕಳೆದುಕೊಳ್ಳಲಾರ. ತನ್ನನ್ನು ನಿನಗೆ(ನಾಗಪ್ಪ) ಅರ್ಪಿಸಿದ್ದೇನೆ ಎಂದು ಹೇಳಿ ಅವನ ಜೊತೆಗಿದ್ದು ಅವನಿಂದ ಎಲ್ಲ ಗುಟ್ಟಿನ ವಿಷಯಗಳನ್ನು ತಿಳಿದು ಕಂಪನಿ ಮ್ಯಾನೇಜ್ ಮೆಂಟಿಗೆ ತಿಳಿಸಿದಂತಹ ವಿಶ್ವಾಸಘಾತಕ ರೀನಾಳ ಮೇಲೆ ನಾಗಪ್ಪನ ಕೋಪ ರುದ್ರಾವತಾರ ತಾಳುತ್ತದೆ. ಮೇರಿ ಒಂದು ಕಡೆಯಾದರೆ ಅದಕ್ಕೆ ತದ್ವಿರುದ್ಧವಾಗಿ ರೀನಾ ನಿಲ್ಲುತ್ತಾಳೆ. ಮೇರಿಯು ನಾಗಪ್ಪನಿಗೆ ರಾಜೀನಾಮೆ ತಿರಸ್ಕಾರಗೊಂಡು ಪ್ರಮೋಶನ್ ಕೊಟ್ಟಿರುವ ಸುದ್ದಿಯನ್ನು ಹೇಳಲು ಬಂದಾಗ ನಾಗಪ್ಪ ಅದನ್ನು ಆಶ್ಚರ್ಯವೆಂದು ಸ್ವೀಕರಿಸುವುದಿಲ್ಲ. ತನ್ನಲ್ಲಿದ್ದ, ಪ್ರಾಮಾಣಿಕತೆ ಅಮೆರಿಕೆಯಲ್ಲಿರುವ MDಗೆ ತಿಳಿದಿದೆಯಲ್ಲ ಸಾಕು. "Believe me Mary, the experience of the last two weeks has made me an expert in guessing motives behind human behaviour...."[೨೬]ಎನ್ನುತ್ತಾನೆ.

ನಾಗಪ್ಪ "ನನ್ನ...ಮಟ್ಟಿಗೆ...ಇನ್ನೂ...ಕಂಡಿರದ...ಅಣ್ಣನನ್ನು... ಕಾಣೆಯಾದ...ತಂಗಿಯನ್ನು ನಾನು ಹುಡುಕಿ ತೆಗೆಯುವುದೇ...ನನ್ನ... ಇನ್ನು ಮುಂದಿನ...ಆಯುಷ್ಯದ...ಗುರಿಯಾಗಬೇಕು..."[೨೭]ಎಂಬ

ಉದ್ದೇಶವನ್ನಿಟ್ಟುಕೊಂಡು ಬಂದ ಪ್ರಮೋಷನ್ ಅನ್ನು ಕೈಬಿಟ್ಟು ಇನ್ನೂ ಕಂಡಿರದ ಅಣ್ಣ, ತಂಗಿಯರನ್ನು ಹುಡುಕುವುದು ಅಥವಾ ಅವರ ಸಂಕೇತಗಳಂತಿರುವ ಮಾನವೀಯತೆ ಮತ್ತು ಸ್ನೇಹತ್ವವನ್ನು ಹುಡುಕುವ ಪ್ರಯತ್ನದಲ್ಲಿ ನಿರತನಾಗಲು ಯೋಚಿಸುತ್ತಾನೆ.

ಮಾನವನಿಗೆ ಮಾನವನೇ ಶತ್ರುವಾಗಿರುವಂತಹ ನಗರ ಪ್ರದೇಶಗಳಲ್ಲಿ ಮಾನವೀಕರಣದ ನೆಲೆಗಟ್ಟನ್ನು ಸ್ಥಾಪಿಸಲು ಹೊರಟಿರುವ ನಾಗಪ್ಪ ವ್ಯವಸ್ಥೆಯ ವಿರುದ್ಧ ಬಲಿಪಶುವಾಗುತ್ತಾನೆ. ಇಂದಿನ ರಾಜಕಾರಣ ಮತ್ತು ಸಾಮಾಜಿಕ ನಡಾವಳಿಯು ಸ್ಪಷ್ಟವಾಗಿ ಅಭದ್ರತೆಯಲ್ಲಿ ಸಂಚರಿಸುತ್ತದೆ. ನೂರಕ್ಕೆ ಒಬ್ಬ ಸಿಗಬಹುದಾದ ನಾಗಪ್ಪನಂತಹ ದುರ್ದೈವಿಗಳು ಫಿರೋಜ್‌ನಂತಹ ಭ್ರಷ್ಟಾಚಾರಿಗಳಿಗೆ ಬಲಿಯಾಗುವುದು ತಪ್ಪಬೇಕು. ಸತ್ಯ ಮತ್ತು ಪ್ರಾಮಾಣಿಕತೆಗಳ ಜೊತೆಗೆ ಮಾನವೀಯತೆಗೆ ಹೆಗಲು ಕೊಡಬೇಕು ಎನ್ನುವುದು ಚಿತ್ತಾಲರ ಆಶಯ. "ಮನುಷ್ಯ ಅಥವಾ ಮನುಷ್ಯರಂತೆ ಕಾಣುವ ಈ ಜನ ನಿಸರ್ಗವನ್ನು ಮಾನವ ಜಗತ್ತನ್ನು ನೋಡುವ ದೃಷ್ಟಿಕೋನವೆ ಭ್ರಷ್ಟವಾಗಿ ಹೋಗಿದೆ. ಅವನ ಸೃಷ್ಟಿಶೀಲತೆ, ಕ್ರಿಯಾಸ್ಫೂರ್ತಿ ಸೊಲ್ಲು ಎತ್ತಲಾಗದಂತೆ ಅಡಗಿ ಹೋಗಿದೆ. ಈ ಔದ್ಯೋಗೀಕೃತ, ವ್ಯಾವಸಾಯಿಕ ಜಗತ್ತು ಮನುಷ್ಯತ್ವದ ಇರುವಿಕೆಯ ಬಗ್ಗೆಯೇ ನಿಸ್ಸೀಮ ನಿರ್ಲಕ್ಷ್ಯ ತಾಳಿದೆ"[೨೮] ಮುಂಬೈ ನಗರದ ಯಾಂತ್ರಿಕ ಜಗತ್ತಿನ ಒಬ್ಬರಿಗೊಬ್ಬರು ಸಂಬಂಧವಿಲ್ಲದಂತೆ ನಡೆದುಕೊಳ್ಳುವ ರೀತಿ ಫಿರೋಜ್‌ನ ಕುತಂತ್ರತೆಗಳು, ನಾಗಪ್ಪನಲ್ಲಿಯ ತಲ್ಲಣಗಳು, ಮೇರಿಯ ಪ್ರಶಾಂತತೆ, ರೀನಾಳ ನಯವಂಚಕತೆಗಳು ಮಾನವೀಯ ಮೌಲ್ಯಗಳನ್ನು ಬುಡಮೇಲು ಮಾಡುತ್ತವೆ. ಹೀಗಾಗಿ 'ಮಾನವ ಜೀವಿಗಳನ್ನು ಬೇರೆಯೇ ಒಂದು ದೃಷ್ಟಿಕೋನದಿಂದ ನೋಡುವ ವಿಲಕ್ಷಣ ಲೋಕವೊಂದು ಇಡೀ ಮಹಾನಗರದಲ್ಲಿ ಸೃಷ್ಟಿಯಾಗಿದೆ' ಎಂದುಕೊಳ್ಳುತ್ತಾನೆ ನಾಗಪ್ಪ. ತಾಂತ್ರಿಕ ಜಗತ್ತಿನಲ್ಲಿ ತುಂಬಿರುವ ಸ್ವಾರ್ಥ, ವೈರ, ಹಿಂಸೆಗಳ ನಡುವೆ ಮಾನವತ್ವವನ್ನು ಹುಡುಕುವ ಮೂಕ ಶೋಧಕನಾಗಿ ಕಾಣುತ್ತಾನೆ.

ಕನ್ನಡದ ಸಂದರ್ಭದಲ್ಲಿ ರಕ್ತ ಸಂಬಂಧವನ್ನು ಮೀರಿ 'ಮಾನವ ಪ್ರೀತಿ'ಯನ್ನು ಹುಡುಕುವ, ಪುನರ್ ಸ್ಥಾಪಿಸುವ ಕಾರ್ಯ ಮಾಡುತ್ತಿರುವ ಯಶವಂತ ಚಿತ್ತಾಲರು, ಕಾರಂತರ 'ಕರುಳಿನ ಕರೆ'ಯ ನಂತರ 'ಪುರುಷೋತ್ತಮ' ಕಾದಂಬರಿಯನ್ನು ಬರೆದಿದ್ದಾರೆ. ಮಾನವ ಪ್ರೀತಿಯ ಒಂದು ತುದಿಯಲ್ಲಿ 'ಕರುಳಿನ ಕರೆ' ನಿಂತರೆ ಇನ್ನೊಂದು ತುದಿಯಲ್ಲಿ 'ಪುರುಷೋತ್ತಮ' ನಿಲ್ಲುತ್ತದೆ. ಪುರುಷೋತ್ತಮದಲ್ಲಿ ಎಲ್ಲಿಂದಲೋ ಎತ್ತಿ ತಂದ ಮಗುವನ್ನು ಜೋಪಾನ ಮಾಡಿದ ವಿಷಯವು ತಾಯಿ ಮತ್ತು ಮಗನ ಸಹಜ(Natural) ಪ್ರೀತಿಗಿಂತಲೂ ಸೂಕ್ಷ್ಮವಾಗುತ್ತದೆ. ಮೋಹನದಾಸ್ ಧಾವಸ್ಕರ್ ಅವರ 'ಸಿಕ್ಕಿದ್ದು' ಕಾದಂಬರಿ ಕೂಡ ಇಂತಹ ಸಂದರ್ಭವನ್ನು, ಸಂಬಂಧವನ್ನು ಸೃಷ್ಟಿಸುತ್ತದೆ. ಅಲ್ಲಿ ತಂದೆ-ಮಗಳ ಸಂಬಂಧ ಮೂಲವಾಗುತ್ತದೆ. ಗೂಂಡಾ ಆಗಿದ್ದ ಜಗ್ಗಯ್ಯ ತನ್ನ ಮಗಳ ಮೇಲೆ ತುಂಬ ಮಮತೆ-ಪ್ರೀತಿ ಇಟ್ಟವನು. ಮಗಳಿಗೆ ತನ್ನ ಯಾತನಾಮಯ ಬದುಕಿನ ಪರಿಚಯವಾಗದಂತೆ

ಬೆಳೆಸಿರುತ್ತಾನೆ. ಮಗಳು ಮತ್ತು ಅನಾಥನಾಗಿ ತನ್ನಲ್ಲಿಯೇ ಇರುವ ಬಾಲು ಇಬ್ಬರ ವಿಷಯದಲ್ಲಿ ತಾನು ಗೂಂಡಾ ಎನ್ನುವುದನ್ನೇ ಮರೆತಿರುತ್ತಾನೆ. ಕೊನೆಗೆ ಮಗಳು ತನ್ನ ಮಗಳಲ್ಲವೆಂದು ತಿಳಿದಾಗ ಅವನು ಅನುಭವಿಸುವ ಸಂಕಷ್ಟಗಳು ತೀರಾ ವಿಚಿತ್ರವೆನಿಸುತ್ತವೆ. ಅಂದಿನಿಂದ ಗೂಂಡಾ ಬದುಕಿಗೆ ತಿಲಾಂಜಲಿಯಿಡುತ್ತಾನೆ. ಅಂತಿಮವಾಗಿ ತನ್ನ ಮತ್ತು ಮಗಳ ನಡುವಿನ ಮಾನವೀಸಂಬಂಧಕ್ಕೆ ಶರಣಾಗುತ್ತಾನೆ. ಇಂತಹದೇ ಕಥನ ಪುರುಷೋತ್ತಮದ್ದಾಗುತ್ತದೆ. ಇವರಿಗೆ ರಕ್ತ ಸಂಬಂಧಕ್ಕಿಂತಲೂ ಮಾನವೀಯ ಸಂಬಂಧವೇ ಶ್ರೇಷ್ಠವಾಗುತ್ತದೆ. ಈ ಸಿದ್ಧಾಂತಕ್ಕೆ ಭಿನ್ನವಾಗಿ ರಕ್ತ ಸಂಬಂಧವೇ ಅಮೂಲ್ಯವೆಂದು ಗುರುತಿಸುವ ಪ್ರಯತ್ನದಲ್ಲಿ ಸಾಗುವ ಕಾದಂಬರಿ 'ಭೇದ'. ಇದು ರಕ್ತ ಸಂಬಂಧದ ಜೊತೆಗೆ ಮಾನವೀಯ ಸಂಕಲ್ಪಗಳನ್ನು ಸೃಜಿಸುವ-ಅನುಪಾಲಿಸುವ ಪ್ರಯತ್ನ ಮಾಡುತ್ತದೆ.

ಪೂರ್ಣಚಂದ್ರ ತೇಜಸ್ವಿ ಅವರ ಕಾದಂಬರಿಗಳನ್ನು ಎರಡು ಸ್ತರಗಳಲ್ಲಿ ಗುರುತಿಸಬಹುದು. ವಿಜ್ಞಾನ-ಪರಿಸರ ಎನ್ನುವುದು ಆ ಎರಡು ಸ್ತರಗಳು. ಕರ್ವಾಲೋ, ನಿಗೂಢ ಮನುಷ್ಯರು, ಸ್ವರೂಪ, ಚಿದಂಬರ ರಹಸ್ಯ ಈ ನಾಲ್ಕು ಕೃತಿಗಳು ಈ ಎರಡು ಸ್ತರಗಳಲ್ಲಿ ಐಕ್ಯಗೊಳ್ಳುತ್ತವೆ. ಮೊದಲಿನ ಮೂರು ಕೃತಿಗಳು ಹೆಚ್ಚಾಗಿ ಸಾಮಾಜಿಕ ಸಂಬಂಧಗಳನ್ನು ಸಮಾವೇಶಗೊಳಿಸಿಕೊಳ್ಳಲು ವಿಫಲವಾಗುತ್ತವೆ. ಚಿದಂಬರ ರಹಸ್ಯವು ಇದಕ್ಕಿಂತ ತೀರಾ ಭಿನ್ನವೆನ್ನಿಸಿಕೊಳ್ಳುವುದಿಲ್ಲ. ಆದರೂ ಜಾತಿ ಸಾಮರಸ್ಯದಂತಹ ಐಕ್ಯೀಕರಣಕ್ಕೆ ನಾಂದಿ ಹಾಡುತ್ತದೆ. ಇದು ಸಂಪೂರ್ಣವಾಗಿ ಮಾನವಕೇಂದ್ರಿತವೂ ಆಗದೆ ನಿಸರ್ಗ ಕೇಂದ್ರಿತವೂ ಆಗದೆ ಉಳಿಯುತ್ತದೆ. ವಿಜ್ಞಾನ-ಪರಿಸರದ ನಂತರದ ಸ್ಥಾನದಲ್ಲಿ ಮಾನವೀಯ ಜಗತ್ತು ನೆಲೆಗೊಳ್ಳುತ್ತದೆ. ಮಾನವನ ವಾಸ್ತವ ಜೀವನದ ಜೊತೆಗೆ ಫ್ಯಾಂಟಸಿಯು ಪಾಲ್ಗೊಳ್ಳುವುದರಿಂದ ಅದು ಕಲೆಯ ಚೌಕಟ್ಟಿಗೆ ಸೇರುತ್ತದೆ. ಜಯರಾಂ ಸೃಷ್ಟಿಸುವ ಕೆಸರೂರಿನ ಘಟನೆಗಳು ಮನುಷ್ಯನ ಮನಸ್ಸಿನ ಆಕಾರ-ವಿಕಾರಗಳನ್ನು ಒರೆಗೆ ಹಚ್ಚಿ ಪರೀಕ್ಷಿಸುತ್ತವೆ. ಅಂತ್ಯದ ಸಂದರ್ಭದಲ್ಲಿ ವಿರೋಧಿ ಗುಂಪುಗಳಿಗೆ ಸೇರಿದ ರಫಿ ಮತ್ತು ಜಯಂತಿಯರ ಮಿಲನ ಮಾತ್ರ ಮಾನವೀಯ ಐಕ್ಯವನ್ನು ಸಾರುತ್ತದೆ, ಭವಿಷ್ಯದ ಹೊಂಗನಸಾಗುತ್ತದೆ.

ಲಂಕೇಶ್ ಅವರ ಹೆಸರು ನವ್ಯದಲ್ಲಿ ಎದ್ದು ಕಾಣುವಂತಹದು. ಅವರ ಮೂರು ಕಾದಂಬರಿಗಳಲ್ಲಿ ಮೊದಲನೆಯದಾದ 'ಬಿರುಕು' ಕೃತಿಯು ನಗರವಾಸಿ ತರುಣನ ಯಾತನೆ ಮತ್ತು ಹರೆಯದ ತಲ್ಲಣಗಳನ್ನು ವೈಭವೀಕರಿಸುತ್ತದೆ. ನಂತರದ 'ಮುಸ್ಸಂಜೆಯ ಕಥಾ ಪ್ರಸಂಗ'ವು ಸಂಘರ್ಷಗಳ ಗೂಡಾಗುತ್ತದೆ. 'ಅಕ್ಕ' ಕಾದಂಬರಿಯು ದಲಿತ ಪ್ರಜ್ಞೆಯನ್ನು ಪರಿಚಯಿಸಲು ತೊಡಗುತ್ತದೆ. 'ಅಕ್ಕ'ದಲ್ಲಿಯ ದೇವೀರಿ ಮತ್ತು ಕ್ಯಾತರ ಆಂತರಿಕ ಒಡನಾಟವು ಮಾನವೀಯ ತುಡಿತವನ್ನು ಸ್ಪಷ್ಟಗೊಳಿಸುವಲ್ಲಿ ತಡಕಾಡುತ್ತದೆ.

ಮೊದಲೇ ಗಮನಿಸಿದಂತೆ ನವ್ಯ ಕಾದಂಬರಿಗಳು ಮಾನವೀಕರಣವನ್ನು ಕೆನೆಗಟ್ಟಿಸಲು ವಿಫಲವಾಗುತ್ತವೆ. ಪ್ರಮುಖ ಕಾದಂಬರಿಕಾರರಾಗಿ ಗುರುತಿಸಿದ ಲಂಕೇಶ್, ತೇಜಸ್ವಿ, ಅನಂತಮೂರ್ತಿ, ದೇಸಾಯಿ ಅವರ ಕೃತಿಗಳು ಮೇಲಿನ ಮಾತುಗಳಿಗೆ ಸಾಕ್ಷಿಯಾಗುತ್ತವೆ. ಯಶವಂತ ಚಿತ್ತಾಲ ಅವರಂತಹ ಕಾದಂಬರಿಕಾರರು ಮಾತ್ರ ಮಾನವೀಕರಣಕ್ಕೆ ಅದೂ ನಗರಕೇಂದ್ರಿತ ಪ್ರಜ್ಞೆಯುಳ್ಳ ಮಾನವೀಯ ಜಗತ್ತಿಗೆ ಒಲಿಯುತ್ತಾರೆ. ಪ್ರಾಣೇಶಾಚಾರ್ಯ ಧರ್ಮಕ್ಕೆ ಕಟ್ಟು ಬಿದ್ದರೆ, ಗೌರೀಶ ಪ್ರೀತಿಗೆ ಬಲಿಯಾಗುತ್ತಾನೆ. ಜಗನ್ನಾಥ ದಲಿತರ ಭಕ್ತಿಯನ್ನು ಪ್ರಕಟಿಸಲು ಯತ್ನಿಸಿದರೆ, ಗಂಗವ್ವ ಸಮಾಜಕ್ಕೆ ಶರಣಾಗುತ್ತಾಳೆ. ಬಸವರಾಜ ಹುಡುಗಿಯರನ್ನರಸಿದರೆ, ಕ್ಯಾತ ವ್ಯಥೆಯ ಕಥೆಯಾಗುತ್ತಾನೆ. ಈ ಎಲ್ಲ ನವ್ಯ ಪಾತ್ರ ವರ್ಗವನ್ನು ಗಮನಿಸಿದರೆ ನಾಗಪ್ಪ ಮಾನವೀಕರಣವನ್ನು ಕಟ್ಟುವಲ್ಲಿ ಗಂಗವ್ವ ಅದನ್ನು ಜಾರಿಗೊಳಿಸುವಲ್ಲಿ ಸಫಲರಾಗುತ್ತಾರೆ. ಮೊಕಾಶಿ ಮತ್ತು ಚಿತ್ತಾಲರೇ ಮುಖ್ಯರಾಗುತ್ತಾರೆ.

## ದಲಿತ-ಬಂಡಾಯ

ಭಾರತೀಯ ಪರಂಪರೆಯ ಆರಂಭದಿಂದಲೂ ರೂಪುಗೊಂಡಿರುವ ವ್ಯವಸ್ಥೆಯನ್ನು ಎದುರಿಸುವ ತಾತ್ವಿಕ ನೆಲೆಗಟ್ಟನ್ನು ಕಂಡುಕೊಳ್ಳಲು ಬಂಡಾಯ ಸಾಹಿತ್ಯ ಆವಿಷ್ಕಾರಗೊಂಡಿತು. ನೊಂದವರ, ಬೆಂದವರ ಮನದ ಬಯಕೆಗಳನ್ನು ಕೇಳಲು ಮತ್ತು ಸಾಧ್ಯವಿದ್ದಷ್ಟು ಈಡೇರಿಸಲು ಯೋಜಿಸಿತು. ಜೀವನದಲ್ಲಿ ತುಳಿತಕ್ಕೊಳಪಟ್ಟ ಮಾನವರ ಮನಸ್ಸನ್ನು ಹತ್ತಿರದಿಂದ ಕಂಡು ಮತ್ತು ತುಳಿತಕ್ಕೊಳಪಟ್ಟು ತಾವು ಅನುಭವಿಸಿದ ಯಾತನೆಯನ್ನು ತಮ್ಮ ಸಾಹಿತ್ಯದಲ್ಲಿ ಅನಾವರಣಗೊಳಿಸುವಂತಹ ಸ್ತುತ್ಯರ್ಹ ಕಾರ್ಯಕೈಗೊಂಡವರು ದಲಿತ ಬಂಡಾಯ ಸಾಹಿತ್ಯದ ಲೇಖಕರು. ಇವರ ಕೃತಿಗಳು ಮಾನವೀಯ ಮೌಲ್ಯಗಳನ್ನು ಪ್ರಶ್ನಿಸುವ ಹಾಗೂ ಪ್ರತಿಪಾದಿಸಿ ಒಂದು ಸಮರ್ಥ ತೀರ್ಮಾನವನ್ನು ಕೈಗೊಳ್ಳುವ ಸಾಹಸವನ್ನು ಮಾಡಿವೆ. ಬಂಡಾಯ ಪಂಥದ ಕೃತಿಗಳು ಒಂದು ಪಾತಳಿಯಲ್ಲಿ ಮಾನವೀಕರಣವನ್ನು ಊರ್ಜಿತಗೊಳಿಸತೊಡಗಿದರೆ ಇನ್ನೊಂದು ನಿಟ್ಟಿನಲ್ಲಿ ಅಮಾನವೀಕರಣವನ್ನು ರೂಪಿಸುವ ಸಂಚನ್ನು ಹೂಡುತ್ತವೆ. ಜಾತಿಪದ್ಧತಿಯಂತಹ, ಮೇಲು-ಕೀಳು ಎಂಬಂತಹ ಸಾರ್ವತ್ರಿಕ ಅಸಮಾನ ಅನಾಚಾರಗಳನ್ನು ಧಿಕ್ಕರಿಸಿ ಮಾನವ ಕುಲ ಒಂದೇ ಎನ್ನುವಲ್ಲಿ ಮಾನವೀಕರಣವನ್ನು ರೂಪಿಸಿದರೆ, ತುಳಿತಕ್ಕೊಳಗಾದವನಿಗಾಗಿ ಬರೆಯುವ, ಜಾತೀಯತೆಯನ್ನೆ ಮೂಲ ಆಕರವನ್ನಾಗಿಟ್ಟುಕೊಂಡು ಜಾತಿ ಪದ್ಧತಿ ಇನ್ನಷ್ಟು ಬಲಿಯುವಂತೆ ಕಥೆ ಹೆಣೆಯುವುದು ಅಮಾನವೀಕರಣವನ್ನು ಬಲಿಷ್ಠಗೊಳಿಸುವುದೇ ಆಗಿದೆ. ದಲಿತ-ಬಂಡಾಯ ಎಂದು ಹಣೆಪಟ್ಟಿ ಕಟ್ಟಿದ್ದರಿಂದಲೋ ಅಥವಾ ಆ ರೀತಿಯ ಅಬ್ಬರದ ಪ್ರಕ್ರಿಯೆಯಿಂದಲೋ ಅದು ತನ್ನ ಸುತ್ತ ತಾನೇ ಅಸ್ಪೃಶ್ಯತೆಯನ್ನು ಕಟ್ಟಿಕೊಳ್ಳತೊಡಗಿತು. ಅಮಾನವೀಕರಣದ ವೇಗ ಬಲಗೊಂಡತೆಲ್ಲ ಮಾನವೀಕರಣದ ದಾರಿ ಸ್ಪಷ್ಟವಾಗುತ್ತದೆ. ದಲಿತ-ಬಂಡಾಯದ ಸಂದರ್ಭದಲ್ಲಿ ಮಾನವೀಕರಣದ ನೆಲೆಯು ವ್ಯಕ್ತಿ ನೆಲೆಗಿಂತಲೂ ಸಾಮಾಜಿಕ(ಸಾಮೂಹಿಕ)

ನೆಲೆಯೇ ಬಹುಮುಖ್ಯವಾಗಿದೆ. ಇದರ ಸ್ಪಷ್ಟತೆಯು ದೇವನೂರು ಮಹಾದೇವ ಅವರ 'ಕುಸುಮಬಾಲೆ', ಚದುರಂಗ ಅವರ 'ವೈಶಾಖ', ವ್ಯಾಸರಾಯ ಬಲ್ಲಾಳರ 'ಬಂಡಾಯ', ವೈದೇಹಿ ಅವರ 'ಅಸ್ಪೃಶ್ಯರು', ಕುಂ.ವೀರಭದ್ರಪ್ಪ ಅವರ 'ಕಪ್ಪು', ಬರಗೂರು ರಾಮಚಂದ್ರಪ್ಪ ಅವರ 'ಸೂರ್ಯ', ಅರವಿಂದ ಮಾಲಗತ್ತಿ ಅವರ 'ಕಾರ್ಯ' ಮೊದಲಾದ ಕಾದಂಬರಿಗಳಲ್ಲಿ ಗೋಚರವಾಗುತ್ತದೆ. ಇವು ಒಂದಲ್ಲ ಒಂದು ರೀತಿಯಲ್ಲಿ ಮಾನವೀಯ ತತ್ತ್ವಗಳನ್ನು ಅಕ್ಷರಶಃ ಪಾಲಿಸುತ್ತವೆ. "ಬಂಡಾಯ ಸಾಹಿತ್ಯ ಚಳುವಳಿಯ ಮುಖ್ಯ ತಳಹದಿ ಮಾನವೀಯತೆ. ಮನುಷ್ಯನನ್ನು ಮನುಷ್ಯನಾಗಿಯೇ ನೋಡುವುದು ಚರಿತ್ರೆಯ ಕಟುವಾಸ್ತವಗಳ ಹಿನ್ನೆಲೆಯಲ್ಲಿ ಅರಿಯುವುದು, ಸರಿಯಾದ ವಿಧಾನವೆಂಬುದು ನಮ್ಮ ಭಾವನೆ. ಬದುಕಿನ ಭ್ರಮೆಗಳನ್ನು ಸೀಳಿ ವಾಸ್ತವವನ್ನು ಹುಡುಕುವುದು ಬಂಡಾಯ ಸಾಹಿತಿಗಳ ಸೃಜನಶೀಲ ಪ್ರಕ್ರಿಯೆ. ಈ ವಾಸ್ತವವನ್ನು ಕಂಡುಕೊಳ್ಳುತ್ತ ಅದರ ಸೂಕ್ಷ್ಮಗಳನ್ನು ಸೂರೆಗೊಳ್ಳುವ ಶಕ್ತಿ ಸಾಹಿತ್ಯದಲ್ಲಿ ಪ್ರಕಟವಾಗಬೇಕು. ಒಬ್ಬೊಬ್ಬ ಸಾಹಿತಿ ಕಾಣುವ ಒಂದೊಂದು ಮಗ್ಗುಲೂ ಒಗ್ಗೂಡಿ ಸಮಕಾಲೀನ ಬದುಕಿನ ನೈಜರೂಪ ಕಣ್ಣೆದುರು ಕಟ್ಟಬೇಕು. ಇದು ಇರುವ ಸ್ಥಿತಿಯನ್ನು ಬದಲಾಯಿಸುವ, ಹೊಸ ಬದುಕನ್ನು ಬಯಸುವ ಪ್ರೇರಣೆಯಾಗಬೇಕು. ನಮ್ಮ ಕೃತಿಗಳ ಸಿಟ್ಟು, ವ್ಯಂಗ್ಯ, ವಿಷಾದ, ವಿಡಂಬನೆ, ಅಸಹಾಯಕತೆಗಳ ಹಿಂದೆ ಮಾನವೀಯ ತುಡಿತವಿರಬೇಕು. ಇದು ಬಂಡಾಯ ಸಾಹಿತ್ಯ ಚಳುವಳಿಯ ಆಶಯ ಮತ್ತು ಜವಾಬ್ದಾರಿ"[೨೯] ಎಂಬ ಬೃಹತ್ ಬ್ಯಾನರ್‌ನಡಿ ಬರೆದ ಈ ಮೇಲಿನ ಎಲ್ಲ ಲೇಖಕರು ಇದರ ಕರಾರುವಾಕ್ ಪಾಲನೆಗೆ ಶ್ರಮಿಸಿದ್ದಾರೆ. ಜನಪರವಾದ ನಿಲುವನ್ನು ಪ್ರಕಟಪಡಿಸುವುದು ಹಾಗೂ "ಅಮಾನುಷತೆಯನ್ನು ಪ್ರತಿಭಟಿಸುತ್ತ ಮಾನವೀಯ ಪರ್ಯಾಯಗಳಿಗೆ ಆಸೆ ಪಡುವುದು ಇಲ್ಲಿಯ ಸೃಜನಶೀಲತೆಯ ಮುಖ್ಯ ಕಾಳಜಿ"[೩೦] ಅಲ್ಲದೆ "...ಸಾಹಿತಿಗೆ ಸಾಮಾಜಿಕ, ರಾಜಕೀಯ ಪ್ರಜ್ಞೆ ಇರಬೇಕೆಂಬ ಆಶಯ ಇಲ್ಲಿ ಮುಖ್ಯವಾದದ್ದು. ಅಸ್ಪೃಶ್ಯತೆ, ಜಾತಿಪದ್ಧತಿ, ಲಿಂಗಭೇದ ಮತ್ತು ವರ್ಗಭೇದ ನೀತಿಯ ವಿರುದ್ಧ ಹೋರಾಟವನ್ನು ಕಟ್ಟುವುದು ನಮ್ಮ ಮುಖ್ಯ ಉದ್ದೇಶಗಳಲ್ಲಿ ಒಂದು. ಎಲ್ಲ ಜನಪರ ನಿಲುವುಗಳಿಗೆ ನಮ್ಮ ಬೆಂಬಲ. ಜನಪರವಾದ ಸಾಂಸ್ಕೃತಿಕ ಹೋರಾಟ ನಮ್ಮ ಮುಖ್ಯ ನೆಲೆ. ಇಂಥ ಒಲವಿನ ಸಾಹಿತ್ಯ ಸೃಷ್ಟಿ ನಮ್ಮ ಹೋರಾಟದ ಮುಖ್ಯ ದಾಖಲೆಯ"[೩೧]ನ್ನಾಗಿ ರೂಪಿಸಿದ ಕೀರ್ತಿ ಬಂಡಾಯ ಸಾಹಿತ್ಯ ಚಳುವಳಿಗಾರರಿಗೆ ಸಲ್ಲುತ್ತದೆ. ಇಂತಹ ತಾತ್ವಿಕ ನೆಲೆಯನ್ನೇ ಅಡಿಗಲ್ಲನ್ನಾಗಿ ಮಾಡಿಕೊಂಡ ಬಂಡಾಯ ಸಾಹಿತ್ಯವು ತನ್ನ ಚರಿತ್ರೆಯುದ್ದಕ್ಕೂ ಅದನ್ನೇ ಬೋಧಿಸಿತು ಮತ್ತು ಅನುಪಾಲಿಸಿತು. 'ಖಡ್ಗವಾಗಲಿ ಕಾವ್ಯ, ಜನರ ನೋವಿಗೆ ಮಿಡಿವ ಪ್ರಾಣ ಮಿತ್ರ' ಎನ್ನುವುದು ಬಂಡಾಯ ಸಾಹಿತ್ಯದ ಧ್ಯೇಯ ವಾಕ್ಯ. ಇದರ ಅನುಪಾಲನೆ ಆಗಿದೆ ಎಂದು ಡಾ.ರಹಮತ್ ತರೀಕೆರೆ ಮತ್ತು ಎಚ್. ಎಸ್. ರಾಘವೇಂದ್ರರಾವ್ ಅವರು ಸಮರ್ಥಿಸಿದ್ದಾರೆ. ಆದರೆ ಜಿ. ರಾಜಶೇಖರ್ ಮತ್ತು ಆರ್ಕೆ ಮಣಿಪಾಲ ಅವರು "ಇದೊಂದು ಮೂರ್ತರೂಪ ಪಡೆಯದ ಯುಟೋಪಿಯನ್ ಕಲ್ಪನೆಯಾಗಿ ಅಸಹ್ಯವಾಗಹತ್ತಿತ್ತು."[೩೨] ಒಡಲಾಳ

ಒಂದೇ ಈ ಆಶಯವನ್ನು ಈಡೇರಿಸಿದ್ದು. ಅನಂತರದ ಸಾಹಿತ್ಯವೆಲ್ಲ ಬೂಸಿಯಾಗಿದೆ ಎನ್ನುತ್ತಾರೆ. ಈ ಮಾತು ಸಂಪೂರ್ಣ ಸತ್ಯವೆನ್ನುವುದು ಸಾಧ್ಯವಿಲ್ಲದಿದ್ದರೂ 'ಯುಟೋಪಿಯನ್ ಕಲ್ಪನೆ' ಎನ್ನುವುದು ಮಾತ್ರ ಸತ್ಯವಾಗಿದೆ. ಬಂಡಾಯ ಸಾಹಿತ್ಯ ಚಳುವಳಿಯು ಪ್ರಗತಿಶೀಲ ಚಳುವಳಿಗಿಂತಲೂ ಭಿನ್ನವಾಗಿಲ್ಲ ಎಂಬುದು ವಸ್ತು, ವಿಷಯ ಮತ್ತು ಧೋರಣೆಗಳ ಹಿನ್ನೆಲೆಯಲ್ಲಿ ಸತ್ಯವಾಗಿದೆ. ಬಂಡಾಯ ಸಾಹಿತ್ಯವು ಕಥನದ ಜೊತೆಗೆ ಕಾವ್ಯವನ್ನೂ ಆಯ್ದುಕೊಂಡಿದ್ದು ಅದರ ಹೆಚ್ಚುಗಾರಿಕೆ ಅಷ್ಟೆ. ಕಾವ್ಯದ ಮೂಲಕ ಸಾಧಿಸಬಹುದಾದದ್ದನ್ನು ಕಥನದ ಮೂಲಕವೇ ಸಾಧಿಸಿದೆ ಪ್ರಗತಿಶೀಲತೆ. ಹೀಗಾಗಿ ಪ್ರಗತಿಶೀಲ ಚಳುವಳಿಯ ಮುಂದುವರಿದ ಭಾಗವೇ ಆಗಿದೆ ಎನ್ನುವ ಮಾತು ಪರಿಶೀಲನೆಗೆ ಅರ್ಹವಾದದ್ದು. ಅಂತೂ ಬಂಡಾಯ ಸಾಹಿತ್ಯ ಚಳುವಳಿಯು ಮಾನವೀಕರಣದ ಪ್ರಕ್ರಿಯೆಯ ಪ್ರವಾಹದಲ್ಲಿ ಮುಂಚೂಣಿಯಲ್ಲಿ ಸಾಗಿದ ಸಾಹಿತ್ಯ ಪಂಥವೆಂಬುದನ್ನು ಮಾತ್ರ ಮರೆಯುವಂತಿಲ್ಲ. ಈ ಪಂಥದ ಕಾದಂಬರಿಕಾರರನ್ನ ಎರಡು ವಿಧದಲ್ಲಿ ಗುರುತಿಸಬಹುದು. ೧. ದಲಿತರ ಜೀವನದ ದಾರಿದ್ರ್ಯತೆಯನ್ನು, ದಾರುಣತೆಯನ್ನು, ಸೂಕ್ಷ್ಮವಾಗಿ ಚಿತ್ರಿಸುವವರು, ೨. ದಲಿತರ ಬಡತನ, ಅನಕ್ಷರತೆ, ಅವಜ್ಞೆಗಳೆಂಬ ಅಮಾನವೀಯ ನಿಯಮಗಳ ಮಾನವೀಯಗೊಳಿಸುವುದು. ಮೊದಲ ವಿಧದಲ್ಲಿ ಕುಂ.ವೀ., ಚನ್ನಣ್ಣ ವಾಲೀಕಾರ, ವೈದೇಹಿ ಮೊದಲಾದವರು ಕೃತಿ ರಚಿಸಿದ್ದಾರೆ. ಎರಡನೆಯ ವಿಧದಲ್ಲಿ ಚದುರಂಗ, ದೇವನೂರು, ಬರಗೂರು, ಬಲ್ಲಾಳ ಅವರಂತಹ ಕಾದಂಬರಿಕಾರರು ಸೇರುತ್ತಾರೆ.

ದೇವನೂರು ಮಹಾದೇವ ಅವರ 'ಕುಸುಮಬಾಲೆ'ಯನ್ನು ಒಂದು ಕಡೆ 'ದಲಿತ ಮಹಾಕಾವ್ಯ'ವೆಂಬ ಹೆಗ್ಗಳಿಕೆ, ಇನ್ನೊಂದು ಕಡೆ 'ದಲಿತರ ನೇಣುಗಂಬ'ವೆಂಬ ಟೀಕೆಗಳ ಮಧ್ಯೆ ಅವಲೋಕಿಸಿದಾಗ, ದಲಿತ ಜಗತ್ತಿನ ಮಾನವೀಯ-ಅಮಾನವೀಯ ಚಟುವಟಿಕೆಗಳು ಸ್ಪಷ್ಟವಾಗಿ ರಾಚುತ್ತವೆ. ದೇವನೂರು ಅವರು ಕಾದಂಬರಿಯಲ್ಲಿ ಅಮಾಸ-ಭಗವತಿ, ಅಕ್ಕಮಾದೇವಮ್ಮ-ಹಟ್ಟಿ ಜೀತಗಾರ, ಸಾವಿತ್ರಿ-ಹರಿಜನ ಹುಡುಗ, ಕುಸುಮ-ಚನ್ನ ಹೀಗೆ ಎರಡು ವಿರುದ್ಧ ಧ್ರುವಗಳನ್ನು ಕೂಡಿಸುವ ಪ್ರಯತ್ನ ಮಾಡಿದ್ದಾರೆ. ಈ ಕೆಳಜಾತಿ-ಮೇಲ್ಜಾತಿ ಹೆಣ್ಣು-ಗಂಡುಗಳ ಸಂಕರತೆಯ ಮೂಲಕ ಮಾನವೀಕರಣದ ಪ್ರಕ್ರಿಯೆಗೆ ಕೈ ಹಾಕಿದ್ದಾರೆ. ಇದು ಬುನಾದಿಯಿಂದಲೇ ಆರಂಭವಾಗಬೇಕಾದ ಕಾರ್ಯವೆಂದೂ, ಮುಂದಿನ ಜನರೇಶನ್ ವರ್ಣಸಂಕರತೆಯ ನೆಲೆಯಲ್ಲಿ ಅಥವಾ ಮಾನವೀಕರಣದ ಚೌಕಟ್ಟಿನಲ್ಲಿ ತನ್ನ ಜೀವನವನ್ನು ಶುರುವಾತುಗೊಳಿಸುವ ಸಾಹಸ ಇವರದಾಗಿದೆ. ದೇವನೂರು ಅವರು ಸಂಪ್ರದಾಯವಾದಿಗಳು ಅಮಾನ್ಯವೆಂದು ದೂರೀಕರಿಸಿದ್ದನ್ನು ಮಾನ್ಯ ಮಾಡುವುದರ ಮೂಲಕ ಪ್ರತಿಭಟಿಸತೊಡಗಿದರು. "'ಪ್ರತಿಭಟನೆ' ಎಂದರೆ ಆರ್ಭಟ ಇಲ್ಲವೆ ನಿಂದನೆ ಎಂದು ಭಾವಿಸುವ ಮಂದಿಗೆ ದೇವನೂರರ ಪ್ರತಿಭಟನೆ ಅರ್ಥವಾಗಲಾರದು"[೩೩] ಎನ್ನುವ ಪುರುಷೋತ್ತಮ ಬಿಳಿಮಲೆ ಅವರ ಮಾತು ದೇವನೂರರ ಪ್ರತಿಭಟನೆ ಈ ಎರಡೂ ಅರ್ಥಗಳಲ್ಲಿರದೆ ಮಾನವೀಯವಾದ ಅರ್ಥವನ್ನು ಕಟ್ಟಿಕೊಳ್ಳುತ್ತದೆ.

ಬಂಡಾಯ ಸಾಹಿತ್ಯ ಚಳುವಳಿಯಲ್ಲಿ ವ್ಯಾಸರಾಯ ಬಲ್ಲಾಳರ ‘ಬಂಡಾಯ’ ಕೃತಿಯು ಸಾಮೂಹಿಕ ನೆಲೆಯ ಮಾನವೀಕರಣವನ್ನು ಪ್ರತಿಪಾದಿಸುತ್ತದೆ. ‘ಶಕ್ತಿ ಪ್ರವಹಿಸುವುದು ಬಂದೂಕು ನಳಿಕೆಯ ಮುಖಾಂತರ’ ಎಂಬ ನಕ್ಸಲೈಟ್ ಸಂಘಟನೆಗಳ ಧೋರಣೆ ಮತ್ತು ‘ಹಿಂಸೆಯನ್ನು ಶಕ್ತಿ ಅಂದುಕೊಂಡಿಲ್ಲ’ ಎನ್ನುವ ಕಾದಂಬರಿ ನಾಯಕ ರಾಜೀವನ ಧ್ಯೇಯದ ನಡುವೆ ಶೋಷಿತರ ಜೀವನವನ್ನು ಕಲ್ಯಾಣಮಯಗೊಳಿಸಬೇಕು. ಶ್ರೀಮಂತರ ಅಟ್ಟಹಾಸವನ್ನು ಸರ್ವನಾಶ ಮಾಡದಿದ್ದರೂ ನಿಯಂತ್ರಣ ದಲ್ಲಿಡಬೇಕೆಂಬ ಸದಾಶಯ ಕಾದಂಬರಿಯದು. ರಾಜೀವನ ಅಹಿಂಸೆಯ ನೀತಿ, ದೇಶಪಾಂಡೆಯ ಹಿಂಸೆಯ ಉಗ್ರತೆಗಳು ತೀರಾ ಅಸಹಜವೆನ್ನಿಸಿದರೂ ಕಾದಂಬರಿಗೆ ಶಕ್ತಿ ಒದಗಿಸಿವೆ. ಕಾರ್ಖಾನೆಯ ಮಾಲೀಕ ನಾಗೇಶ ಶರ್ಮಾನು ಸ್ಥಾಪಿಸಲಿರುವ ‘ಕಲ್ಯಾಣ ಕೇಂದ್ರ’ದ ಉದ್ಘಾಟನೆಗೆ ರಾಜೀವ ಮೊದಲು ಒಪ್ಪುವುದಿಲ್ಲ. ಇದು ಅವನಲ್ಲಿಯ ಉಂಟಾಗಿರುವ ‘ಮಾನವೀಯ ದೌರ್ಬಲ್ಯ’ವಿರಬಹುದು. ಇದಕ್ಕೆ ಕಾರಣ ಅವನು ಅಸಹ್ಯ ಮತ್ತು ಚಡಪಡಿಕೆಯ ಸ್ಥಿತಿಯಲ್ಲಿ ಹಾರ್ನಿಮನ್ ವೃತ್ತದ ಬಳಿ ಕುಳಿತಿದ್ದ ಕುಷ್ಠರೋಗಿಯನ್ನು ನೋಡಿ ವ್ಯಾಕುಲನಾಗುತ್ತಾನೆ. ನಂತರ ‘ಅಪಾಂಗ ಕಲ್ಯಾಣ ಕೇಂದ್ರ’ವನ್ನು ಉದ್ಘಾಟಿಸಲು ಒಪ್ಪಿ “....ತಮ್ಮ ಉತ್ಪನ್ನದ ಒಂದು ತುಣುಕನ್ನಾದರೂ ಈ ವಿಕಲಾಂಗ ಮಕ್ಕಳ ನೋವು ಕಳೆಯಲು ಉಪಯೋಗಿಸಬೇಕೆಂದು ಯೋಚಿಸಿರುವ ಶರ್ಮಾಜಿಯ ಈ ಕೆಲಸವನ್ನು ಮಾನವೀಯ ದೃಷ್ಟಿಯಿಂದ ಮೆಚ್ಚದಿರುವುದು ಸಾಧ್ಯವಿಲ್ಲ”[೩೪]ಎನ್ನುತ್ತಾನೆ. ಶರ್ಮಾಜಿ ತಾನು ಅಂಗವಿಕಲರಿಗೆ ಸೌಲಭ್ಯ ಒದಗಿಸಿಕೊಡುವ ತೋರಿಕೆ ಮಾತ್ರ ಇಲ್ಲಿದೆ. ಅವನು ತುಂಬು ಹೃದಯದಿಂದ ಮಾಡುತ್ತಿಲ್ಲ. ರಾಜೀವನ ಅಂತರಂಗಕ್ಕೂ ಈ ವಿಷಯ ಹೊಳೆದಿತ್ತು. ನಾಯಕಿ ಯಾಮಿನಿ ಮದುವೆಯಾಗಿದ್ದರೂ ರಾಜೀವನ ಸ್ನೇಹ ಬೆಳಸಿ ಕನಸುಗಳನ್ನು ಕಟ್ಟುವುದು ಅಮಾನವೀಯ ಎನ್ನಿಸುತ್ತದೆಯಾದರೂ, ಮೊದಲು ಮದುವೆಯಾದ ಶ್ರೀಕಾಂತನು ಇವಳನ್ನು ವಿನಾಕಾರಣ ಅನುಮಾನಿಸುವುದು ಇನ್ನೊಂದು ರೀತಿಯ ಅಮಾನವೀಯ ಗುಣಕ್ಕೆ ದಾರಿಮಾಡಿಕೊಡುತ್ತದೆ. ರಾಜೀವ ಮತ್ತು ಯಾಮಿನಿ ಇಬ್ಬರೂ ಕಾರ್ಮಿಕ ಚಳುವಳಿಯ ಜೀವಾಳವಾಗಿ ಬೆಳೆಯುತ್ತಾರೆ. ತಮ್ಮ ಹಿತಾಸಕ್ತಿಗಿಂತಲೂ ಕಾರ್ಮಿಕರ ಹಿತವೇ ಮುಖ್ಯವೆಂದು ಹೋರಾಡುವ ಅವರ ನೈತಿಕ ಜವಾಬ್ದಾರಿ ಮಾನವೀಯ ನೆಲೆಯದ್ದಾಗಿದೆ. ಇಂತಹುದೇ ಜವಾಬ್ದಾರಿಯನ್ನು ಬಸವರಾಜ ಕಟ್ಟೀಮನಿ ಅವರ ‘ಜ್ವಾಲಾಮುಖಿಯ ಮೇಲೆ’ಯಲ್ಲಿನ ಚಂದ್ರಣ್ಣ ಮತ್ತು ರತ್ನಾ ನಿರ್ವಹಿಸುತ್ತಾರೆ. ಕಾದಂಬರಿಯ ಕೊನೆಗೆ ರಾಜೀವ ಪ್ರೀತಿಸಿದ್ದ ಯಾಮಿನಿಯನ್ನು ವಾಸಿಸಿದ್ದ ಮುಂಬಯಿಯನ್ನು ಬಿಡಬೇಕಾಗುತ್ತದೆ. ಅವನ ಈ ಪಲಾಯನವಾದವು ಆಕಸ್ಮಿಕವಲ್ಲ ಎನ್ನುವುದೂ, ಮುಂದೆ ನಕ್ಸಲೈಟ್ ಆದನೇ ಅಥವಾ ಸಾಮಾನ್ಯ ನಾಗರಿಕನಾಗಿ ಜೀವಿಸಿದನೇ ಎನ್ನುವುದನ್ನು ಲೇಖಕರು ಹೇಳುವುದೇ ಇಲ್ಲ. ಕಾರ್ಮಿಕ ವರ್ಗದ ಹಿತಕ್ಕಾಗಿ ಶ್ರಮಿಸಿದ, ಅವರ ಮಾನವಂತ ಹೃದಯಗಳಿಗೆ ನೆರಳು ನೀಡಲು ಹೋರಾಡಿದ ರಾಜೀವ ಕೊನೆಗೆ ಮರೆಯಾಗುವುದು ವಿಪರ್ಯಾಸ.

ಬಂಡವಾಳಶಾಹಿವರ್ಗದ ಪ್ರತಿಮೂರ್ತಿಗಳಾದ ನಾಗೇಶ ಶರ್ಮಾ ಮತ್ತು ಸತೀಶ್ ಶರ್ಮಾ ಇವರು ಮಾನವತಾ ಧೋರಣೆಗೆ ವಿರುದ್ಧವಾಗಿಯೇ ವರ್ತಿಸುತ್ತಾರೆ. ಆದರೆ ಸತೀಶನ ಸಹೋದರಿ ನಯನಾಳು ಮಾತ್ರ ಸಂಪತ್ತನ್ನು ಧಿಕ್ಕರಿಸಿ ಆಶ್ರಮವಾಸಿಯಾಗಿ ಜೀವಿಸುತ್ತಾಳೆ. ಸಾಮಾನ್ಯ ಜನತೆಯ ಕಷ್ಟಗಳನ್ನು ಅನುಭವಿಸಿ ಹಂಚಿಕೊಳ್ಳುತ್ತಾಳೆ. ಅನಾಥರ, ಕಾರ್ಮಿಕರ ಮತ್ತು ದೀನರ ಪರ ನಿಲ್ಲುವ ಲೇಖಕರು ಮೇಲುಕೀಳು ಭಾವನೆಗಳನ್ನು ಅಳಿಸಲು ಶ್ರಮಿಸಿದ್ದಾರೆ. ಜಿ. ಎಸ್. ಆಮೂರ ಅವರು ಹೇಳುವಂತೆ 'ಬಲ್ಲಾಳರು ಮುಂಬಯಿ ಕುರಿತ ಕಾದಂಬರಿಕಾರರೂ ಹೌದು ಎನ್ನುವುದರ ಜೊತೆಗೆ 'ಕಾರ್ಮಿಕ ಮಾನವತಾವಾದಿಯೂ ಹೌದು' ಎನ್ನುವುದು ಸ್ಪಷ್ಟವಾಗಿದೆ.

ವೈದೇಹಿ ಅವರ 'ಅಸ್ಪೃಶ್ಯರು' ಕಾದಂಬರಿಯಲ್ಲಿ ಬ್ರಾಹ್ಮಣಳಲ್ಲದವಳನ್ನು ಮದುವೆಯಾದದ್ದಕ್ಕಾಗಿ ಭಾಸ್ಕರನನ್ನು ಮನೆಯಿಂದ ದೂರವಿಟ್ಟ ತಂದೆ ತಾಯಿಗಳಿಗೆ 'ಜಾತಿ'ಯೇ ಮುಖ್ಯವಾಗುತ್ತದೆ. ಆದರೆ ಭಾಸ್ಕರನಿಗೆ 'ಮನುಷ್ಯತ್ವ' ಮುಖ್ಯವಾಗುತ್ತದೆ. 'ಮನುಷ್ಯ ಮನುಷ್ಯನನ್ನು ಗುರುತಿಸುವುದೇ ನೀತಿ ನಡತೆಯಿಂದ ಸ್ಥಾನಮಾನದಿಂದ. ಹುಟ್ಟನಿಂದ ಅಲ್ಲ"[೩೫] ಎನ್ನುವುದು ಅವನ ವಾದವಾಗುತ್ತದೆ. ಮನೆಯಿಂದ ಹೊರಗಿಟ್ಟಿದ್ದು ಅವನಿಗೆ ಆಶ್ಚರ್ಯವೇನೂ ಅನ್ನಿಸುವುದಿಲ್ಲ. 'ಜನರಿಗೆ ಮನುಷ್ಯತ್ವಕ್ಕಿಂತ ಜಾತಿಯೇ ಮುಖ್ಯವಿರುವ ಕಾಲದಲ್ಲಿ ಅದೇನು ಆಶ್ಚರ್ಯವಲ್ಲ' ಎಂದು ಸರಳವಾಗಿಯೇ ಗ್ರಹಿಸಿಕೊಳ್ಳುತ್ತಾನೆ. ಭಾಸ್ಕರನಂತೆಯೇ ಅವನ ಮಾವಯ್ಯ(ಸಾಕಿದವ) ಕುಮುದಿನಿಯನ್ನು ಆಂತರ್ಯದಿಂದ ಪ್ರೀತಿಸುತ್ತಾನೆ. ಅವನಲ್ಲಿನ ಮನುಷ್ಯತ್ವದಿಂದ, ಕುಮುದಿನಿ ಗರ್ಭಿಣಿಯಾಗಿ ಹೆರಿಗೆಯ ಸಂದರ್ಭ'ದಲ್ಲಿ ಕರೆಯಲು ಬರುತ್ತಾನೆ. ಮನೆಯಲ್ಲಿನ ಇತರ ಸದಸ್ಯರ ವಿರೋಧ ಕಟ್ಟಿಕೊಳ್ಳುತ್ತಾನೆ. ಭಾಸ್ಕರ, ಕುಮುದಿನಿಯರ ಪ್ರೇಮ ವಿವಾಹಗಳು ಯುವ ಪೀಳಿಗೆಯಲ್ಲಿ ಮಾನವೀಕರಣವನ್ನು ಚಳುವಳಿಯ ರೂಪದಲ್ಲಿ ಪ್ರಚೋದಿಸುವಂತಾದರೆ ಅದು ಸಾಹಿತ್ಯಕ್ಕೆ ದೊರೆತ ಮೌಲ್ಯವಾಗುತ್ತದೆ. ಇಂತಹ ಚಳುವಳಿಗೆ ವಾಸುದೇವರಾಯರಂತಹ ಸಾಮಾಜಿಕರ ಪ್ರೋತ್ಸಾಹ ಅತ್ಯಗತ್ಯವಾಗುತ್ತದೆ. ಒಂದು ಸಮಾಜ, ಕುಟುಂಬದ ಕಟ್ಟುಪಾಡುಗಳು ಇನ್ನೊಂದು ಕಡೆ ಮನಸ್ಸಿನ ಸ್ವಚರ್ಚೆಗಳು. ಇವೆರಡರ ನಡುವೆ ಮನುಷ್ಯ ನಲುಗುವುದು ಸಹಜ. ಸಮಾಜವನ್ನು ಅವಲಂಬಿಸಿ ಜೀವನ ಮಾಡುವ ಗ್ರಾಮೀಣ ಜನತೆಯಲ್ಲಿ ಸಮಾಜದ ನಿರ್ಬಂಧಗಳನ್ನು ದಾಟುವ ತಾಕತ್ತು ಕಡಿಮೆ. ನಗರ ಪ್ರದೇಶದ ಜನತೆಗೆ ಈ ಚೌಕಟ್ಟು ಮೀರುವ ಸಾಮರ್ಥ್ಯ ಇದ್ದರೂ ಹಿಂದೆ ಉಳಿದಿರುವುದು ಅಪಹಾಸ್ಯವಾಗಿ ಕಾಣುತ್ತದೆ. ಅಂತಹ ಮಾನವೀಯ ಸಮಾಜದ ಕನಸು ನನಸಾಗಿಸಲು ದೀರ್ಘ ದಾರಿ ಸವೆಸಬೇಕಾಗಿದೆ. "ಜಾತಿಯ ಪೊರೆ ಕಳಚಿ ಮನುಷ್ಯತ್ವ ಕಾಣಬೇಕಾದರೆ ಇನ್ನೂ ಎಷ್ಟು ವರ್ಷ ಕಳೆಯಬೇಕೋ..."[೩೬]ಎನ್ನುವ ಭಾಸ್ಕರನ ಮಾತು ನೆನಪಾಗುತ್ತದೆ.

ಬಂಡಾಯದ ಧೋರಣೆಗಳನ್ನು ಸ್ಪಷ್ಟಪಡಿಸುವ ಚದುರಂಗರ 'ವೈಶಾಖ' ಕಾದಂಬರಿಯು ಸಾಹಿತ್ಯದಲ್ಲಿ ಹೊಸಗಾಳಿಯನ್ನೇ ಎಬ್ಬಿಸಿತು. ವೈಶಾಖವು ಮಾನವೀಕರಣಕ್ಕೆ ಕೊಟ್ಟಷ್ಟೇ ಮಹತ್ವವನ್ನು ಅಮಾನವೀಕರಣಕ್ಕೂ ಕೊಟ್ಟಿದೆ. ಇದರ ಉದ್ದೇಶ ಮಾನವೀಕರಣದ ಪ್ರಕ್ರಿಯೆ ಚುರುಕುಗೊಳಿಸುವುದಾಗಿದೆ. ಕೆಳಜಾತಿಯ ಪಾತ್ರಗಳು ಮಾನವೀಯತೆಯನ್ನು ಗುರುತಿಸುವಿಕೆಯಲ್ಲಿ ಶ್ರಮ ಪಡುತ್ತವೆ. ತಕ್ಕಂತೆಯೇ ಮೇಲ್ಜಾತಿ ಪಾತ್ರಗಳು ಅಮಾನವೀಕರಣದ ಪ್ರಕ್ರಿಯೆಗೆ ಹೊಂಚು ಹಾಕುತ್ತವೆ. ದಲಿತ ಟಗರೂರನು ಯಾವುದೇ ತಪ್ಪಿಗಾಗಿ "ಬ್ಯಾಡಿ, ಬ್ಯಾಡಿ. ಅಂಗೆ ಮಾಡಬ್ಯಾಡಿ. ನಿಂತುಗನ್ನಿ.... ಇನ್ನೇನ ಮಾಡಾದು ನನ್ನ ಎಣ್ಣನೇ ಯಾರತ್ರನಾರೂ ಜೀತಕಿರುಸಿ ರೂಪಾಯ ತಂದುಕ್ಕಡ್ತೀನಿ. ವಸಿ ಜಿನ ತಡೀರಿ..."[೩೭] ಎಂದು ತನ್ನ ಮಗಳಾದ ಚಲುವಿಯನ್ನ ಸಾವಿರ ರೂಪಾಯಿಗೆ ನಾಮಧಾರಿಗಳ ಉದ್ದೂರಯ್ಯನಲ್ಲಿ ಜೀತಕ್ಕಿರಿಸುತ್ತಾನೆ. ಇಲ್ಲಿ ಸಂಚು ಮತ್ತು ದುರ್ಬಲತೆಗಳು ವಿತರ್ಕ ಮಾಡುತ್ತವೆ. ಸಂಚಿನ ಗೆಲುವೇ ಮುಖ್ಯವಾಗಿ ಕಾಣುತ್ತದೆ. ಟಗರೂರನ ಮಗಳನ್ನೇ ಜೀತಕ್ಕಿರಿಸಿಕೊಳ್ಳುವ ಸಂಚು, ಅವನು ದುಡಿಯುವ ಶಕ್ತಿ ಇದ್ದರೂ ಅವನನ್ನು ದುರ್ಬಲನ್ನಾಗಿ ಮಾಡುವ ಸಂಚು ಅಮಾನವೀಯ ಕೃತ್ಯಕ್ಕೆ ಹೊಣೆಗಾರವಾಗುತ್ತದೆ. ನಂಜೇಗೌಡ, ಗಂಗಪ್ಪ, ಉದ್ದೂರಯ್ಯ ಇವರು ಆಕಸ್ಮಿಕವಾಗಿ ಸತ್ತ ಹೆಣಕ್ಕಾಗಿ ಟಗರೂರನನ್ನು ಹೆದರಿಸಿ, ಅವನ ಆರ್ಥಿಕ ದುರ್ಬಲತೆಯನ್ನು ದಾಳವನ್ನಾಗಿ ಉಪಯೋಗಿಸಿ ಮಗಳನ್ನು ಜೀತಕ್ಕಿಟ್ಟುಕೊಂಡು ಮುಂದಿನ ಅನಾಚಾರಗಳಿಗೆ ರೂವಾರಿಗಳಾಗುತ್ತಾರೆ. ಭಾರತೀಯ ಸಂಸ್ಕೃತಿಯಲ್ಲಿ ಎಷ್ಟೋ ಅಮಾನವೀಯ ಆಚರಣೆಗಳು ರೂಢಿಯಲ್ಲಿವೆ ಎನ್ನುವುದಕ್ಕೆ ವೈಶಾಖದ ಒಂದು ಚಿಕ್ಕ ಘಟನೆ ಸಾಕ್ಷಿಯಾಗುತ್ತದೆ. "ಈ ಮಕ್ಕಳಗೊಂದು ಬ್ರಾಂತು.... ಅದೊಂದು ಬಂಜರು ಭೂಮಿ. ಇವರು ಅದೇಟು ಹ್ವಸ ರಕ್ತ ತಂದು ನೀರಿಗೆ ಬೆರುಸಿ ವೊಲಕೆಲ ತಕ್ಕಳಿಸಿದ್ರೂವೆ, ನೆಲ ಫಲವತ್ತಾಕ್ಕಿಲ್ಲ. ಉತ್ತಮಾದ ಫಸಲ ಕ್ವಡಕ್ಕಿಲ್ಲ"[೩೮] ಹೊಲದಲ್ಲಿ ಫಸಲು ಸರಿಯಾಗಿ ಬಾರದಿದ್ದಾಗ ಋತುಮತಿಯಾದವಳ ರಕ್ತವನ್ನು ತಂದು ಹೊಲಕ್ಕೆ ನೀರು ಬೆರಸಿ ಚಿಮುಕಿಸಿದರೆ ಹೆಚ್ಚು ಬೆಳೆ ಬರುತ್ತದೆ ಎಂಬ ನಂಬಿಕೆಯನ್ನ ವಿವರಿಸುತ್ತದೆ. ಈ ನಂಬಿಕೆಯನ್ನು ಪ್ರಕಟಿಸಿ ನಂತರ ಲೇಖಕರು ಕೆಂಗಣ್ಣಪ್ಪನ ಮೂಲಕ ಇದೊಂದು ಅಮಾನವೀಯ ಪ್ರಕ್ರಿಯೆ ಎಂದು ಹೇಳುತ್ತಾರೆ.

ರುಕ್ಮಿಣಿ ಗರ್ಭಧರಿಸುವುದು ಲಕ್ಕನಿಂದಲೋ ಅಥವಾ ಶಾಸ್ತ್ರಿಗಳಿಂದಲೋ ಅದು ಬೇರೆ ವಿಷಯ. 'ಲಕ್ಕನಿಂದಲೇ' ಎಂದು ಊರಲ್ಲಿ ಗುಸುಗುಸು. ಪಂಚಾಯ್ತಿ ಬೇರೆ ಸೇರಿದೆ. ಪಂಚಾಯ್ತಿ ಸಂದರ್ಭದಲ್ಲಿ ಲಕ್ಕನಿಗೆ ಸತ್ಯ ಹೇಳಲು ಹಿಂಸೆ ಕೊಡುತ್ತಿದ್ದಾರೆ. ತನಗೆ ಎಷ್ಟೇ ಹಿಂಸೆ ಆದರೂ ಸಹಿಸಿಕೊಳ್ಳಲು ಸಿದ್ಧನಿದ್ದಾನೆ. ತನ್ನ ತಪ್ಪು ಇಲ್ಲದ್ದರಿಂದ ಸುಮ್ಮನಿದ್ದುದರಿಂದ ಪಂಚಾಯಿತಿದಾರರು ರುಕ್ಮಿಣಿಯನ್ನೂ ಪಂಚಾಯಿತಿಗೆ ತರುವ ಯತ್ನ ಮಾಡುತ್ತಾರೆ. ರುಕ್ಮಿಣಿ ಪಂಚಾಯಿತಿಗೆ ಎಂದರೆ ಅಲ್ಲಿನ ಜನರು

ಅವಳನ್ನು ಹದ್ದುಗಳು ಮಾಂಸವನ್ನು ಕುಕ್ಕಿ ತಿನ್ನುವಂತೆ ಬಸುರಿ ಹೆಂಗಸನ್ನು ಚುಚ್ಚುತ್ತಾರೆಂದು ತಾನೇ ತಪ್ಪು ಮಾಡಿದ್ದೆಂದು ಒಪ್ಪಿಕೊಳ್ಳುತ್ತಾನೆ. ಇಲ್ಲಿ ಅವಳು ಅವನನ್ನು ನೋಡಿಕೊಂಡ ಪರಿ ಮತ್ತು ಅನ್ನ ಹಾಕಿದುದರ ಕೃತಜ್ಞತಾಭಾವವನ್ನು ಮೆರೆಯುತ್ತಾನೆ. ಮುಂದುವರಿದ ಸಂದರ್ಭದಲ್ಲಿ ಶಾಸ್ತ್ರಿಗಳು ಬಂದು 'ಆ ತಪ್ಪು ನನ್ನಿಂದಾದುದು' ಎಂದರೂ ಪಂಚಾಯ್ತಿ ನಂಬುವುದಿಲ್ಲ. ಇದು ಅವರ ಮೊದಲಿನ ನೇಮ-ನಿಷ್ಠೆಗಳ ಫಲವಷ್ಟೆ.

ಅಮಾನವೀಕರಣವನ್ನು ಪ್ರಸ್ತುತಪಡಿಸುವ ಸಂದರ್ಭದಲ್ಲಿ ಎರಡು ರೀತಿಯ ಸನ್ನಾಹಗಳನ್ನು ಹೂಡುತ್ತದೆ. ೧. ಜಾತಿ-ಮತ-ವರ್ಗಗಳನ್ನು ಒಳಗೊಂಡ ಕೃತಕ ಸ್ಥಿತಿ, ೨. ಮಾನವೀ ಸಹಜ ಕಾಮ-ಕ್ರೋಧಾದಿಗಳ ಬಲೆ. ಈ ಎರಡರ ನಡುವೆಯೇ ಸಾಗುವ ಅನೇಕ ಘಟನೆಗಳ ಉಪಕಥೆಗಳ-ಸಂಕಲನವಾಗಿ ಕಾಡುತ್ತದೆ ವೈಶಾಖ. ಸಮಾಜದಲ್ಲಿನ ಅಂತಸ್ತುಗಳಿಗಾಗಿ ಹೆಣಗಾಡುವ ಬ್ರಾಹ್ಮಣ ಮತ್ತು ತಮ್ಮ ನಿತ್ಯದ ಹೊಟ್ಟೆಪಾಡಿಗಾಗಿ ಬದುಕುವ ಶೂದ್ರರ ನಡುವಿನ ಆಸೆ-ಆಕಸ್ಮಿಕಗಳ, ಬಯಲು-ಬಂಧನಗಳ, ನೀತಿ-ನಿಯಂತ್ರಣಗಳ, ತೆವಲು-ತೀಟೆಗಳ ನಿರೂಪಣೆಯಿಂದ ಮಾನವತೆ ಮರೆಯಾಗುತ್ತದೆ. ಈ ಮಾತುಗಳಿಗೆ ಲಕ್ಕ-ರುಕ್ಮಿಣಿ, ರುಕ್ಮಿಣಿ-ಶಾಸ್ತ್ರಿಗಳು, ಗಂಗಿ, ನಂಜೇಗೌಡ, ಕೆಂಪಣ್ಣಪ್ಪ, ಲೂಸಿ, ಪುಟ್ಟಾರಿ, ಕೋಸಯ್ಯ ಗುರುಗಳು-ಮೊದಲಾದ ಪಾತ್ರಗಳು ಜೀವಂತ ಸಾಕ್ಷಿಯಾಗುತ್ತವೆ.

ಲಕ್ಕನ ಔದಾರ್ಯ, ಶಾಸ್ತ್ರಿಗಳ ದೈನ್ಯತೆ, ರುಕ್ಮಿಣಿಯ ಅಸಹಾಯಕತೆಗಳು ಮಾನವೀಕರಣದ ಪ್ರಕ್ರಿಯೆಗೆ ಚಾಲನೆ ಕೊಡುತ್ತವೆ. ಮೇಲ್ವರ್ಗ-ಕೆಳವರ್ಗಗಳ ನಡುವಿನ ಸಂಘರ್ಷ ಕಾದಂಬರಿಯಲ್ಲಿ ಸ್ಪಷ್ಟವಿರುವುದರಿಂದ ಮಾನವೀಕರಣ ಇಣುಕು ನೋಟದಲ್ಲಿ ಮಾತ್ರ ಸಾಗುತ್ತದೆ.

ಕನ್ನಡದ ಸಂದರ್ಭದಲ್ಲಿ ದಲಿತ ಬಂಡಾಯದ ಕಾದಂಬರಿಗಳು ಮಾನವೀಕರಣವನ್ನು ಪ್ರಚುರಪಡಿಸುವ ಸಲುವಾಗಿಯೇ ಹುಟ್ಟಿದರೂ ಸಹ ಅವು ತಮ್ಮ ಸುತ್ತ ಕಟ್ಟಿಕೊಳ್ಳುವ ಅಸ್ಪೃಶ್ಯತೆಯ ಚೌಕಟ್ಟು ಅದಕ್ಕೆ ಬಂಧನವಾಗುತ್ತದೆ. ದೇವನೂರು, ಬರಗೂರು, ಮಾಲಗತ್ತಿ, ಚದುರಂಗ, ಆಲನಹಳ್ಳಿ ಮೊದಲಾದ ಲೇಖಕರು ಮಾನವೀಕರಣದ ಪ್ರಕ್ರಿಯೆಗೆ ಆರಿಸಿಕೊಂಡ ವಸ್ತು ಎಂದರೆ 'ವಿಜಾತಿಗಳ ಪ್ರೇಮ ಪ್ರಕರಣ'ಗಳನ್ನು. ಇವು ಸಾಮಾಜಿಕರಿಂದ ದೂರ ಉಳಿಯುತ್ತವೆ. ಓದುಗರಿಗೆ ಸಂತೋಷ ಕೊಡುತ್ತವೆಯೇ ಹೊರತು ಆದರ್ಶವನ್ನು ಪಾಲಿಸು ಎಂದು ಹೇಳುವುದಿಲ್ಲ. ಪ್ರಗತಿಶೀಲ ಲೇಖಕರು ವೇಶ್ಯಾ ಪದ್ಧತಿಯನ್ನು ಕೃತಿಯಲ್ಲಿಟ್ಟು ನೋಡಿದ್ದನ್ನೆ ಇವರು ಪ್ರೇಮ ಪ್ರಕರಣಗಳನ್ನಿಟ್ಟು ನೋಡಿದರು. ಅಂತಹ ಪ್ರಕರಣಗಳು ಸಮಾಜದಲ್ಲಿ 'ಹಾದರ'ದ ಸ್ಥಾನವನ್ನು ಗಳಿಸಿ ಮೂಲೆಗುಂಪಾಗುತ್ತವೆ. ಅಸಡ್ಡೆಗೆ ಗುರಿಯಾಗುತ್ತವೆ.

ನವೋದಯದವರ ಮಾನವೀಕರಣ ನೈಸರ್ಗಿಕತೆಯನ್ನು ಪಡೆದುಕೊಂಡರೆ ಪ್ರಗತಿಶೀಲರ ಮಾನವೀಕರಣವು ಕೃತಕತೆಯನ್ನು ಸೃಷ್ಟಿಸಿತು. ಅದೇರೀತಿ ನವ್ಯದವರಲ್ಲಿ ಕೃತಕವಾಗಿರುವುದರ ಜೊತೆಗೆ

ಶೋಕೇಸಿನಲ್ಲಿರುವ ಗೊಂಬೆಯಾಯಿತು. ಬಂಡಾಯದಲ್ಲಿ ಅದು ನೈಸರ್ಗಿಕತೆಯ ಹರಿತವನ್ನು ತಲುಪಿ ಮತ್ತೆ ಕೃತಕ ನೆಲೆಗಟ್ಟಿಗೆ ತಳ್ಳಲ್ಪಟ್ಟಿತು.

ಅನಂತಮೂರ್ತಿ ಅವರ ಭಾರತೀಪುರ ಮತ್ತು ಎಸ್. ಎಲ್. ಭೈರಪ್ಪ ಅವರ ದಾಟು ಮಾನವೀಯ ನೆಲೆಯ ಸಂದರ್ಭದಲ್ಲಿ ಜೊತೆಗೆ ಸಾಗುವ ರೈಲುಕಂಬಿಗಳಾಗುತ್ತವೆ. ೧. ಜಾತಿ ಸಮಸ್ಯೆಯಲ್ಲಿ : ದಾಟುವಿನಲ್ಲಿ ಬ್ರಾಹ್ಮಣ ಸತ್ಯ ಭಾಮೆ- ಶೂದ್ರ ಶ್ರೀನಿವಾಸರ ಮದುವೆ. ಗಂಡು-ಹೆಣ್ಣು ಎರಡೇ ಜಾತಿಗಳು ಎಂದು ನಂಬಿದ ಸತ್ಯಳು ಶ್ರೀನಿವಾಸನನ್ನು ವರಿಸುತ್ತಾಳೆ. ಭಾರತೀಪುರದಲ್ಲಿ ಸ್ವಲ್ಪ ಭಿನ್ನವೆನ್ನಿಸಿದರೂ ಸಹ ಜಗನ್ನಾಥ-ಮಾರ್ಗರೇಟ್‌ಳ ಮದುವೆ ಇದೇ ತೆರನದ್ದು. ಇಲ್ಲಿ ಉನ್ನತ ಜಾತಿಯ ಜಗನ್ನಾಥ ಅಲ್ಪಸಂಖ್ಯಾತರ ಮಾರ್ಗರೇಟಳ ಸಂಕರತೆ.

೨. ಧರ್ಮದ ಸಮಸ್ಯೆಯಲ್ಲಿ: ಜಗನ್ನಾಥ ಹೊಲೆಯರನ್ನು ಗರ್ಭಗುಡಿ ಪ್ರವೇಶಕ್ಕೆ ಅಣಿಗೊಳಿಸುವುದು ಒಂದೆಡೆಯಾದರೆ, ದಾಟುವಿನಲ್ಲಿ ಹೊಲೆಯರ ಮೋಹನದಾಸನೇ ಅಂತಹ ಕ್ರಿಯೆಗೆ ಮುಂದಾಗುವುದು. ಜಗನ್ನಾಥ ತನ್ನ ಜಾತಿಯ ಸಮಾಜದ 'ಗುರುತ್ವ' ಬಿಂದುವಿನಿಂದ ತಪ್ಪಿಸಿಕೊಳ್ಳುವುದು. ನಂತರ ಹೊಲೆಯರನ್ನು ಗರ್ಭಗುಡಿಯ ಭಕ್ತಿಯ ಗುರುತ್ವದ ಪರಿಧಿಗೆ ತಂದು ನಿಲ್ಲಿಸುವ ಎರಡು ಸಮಸ್ಯೆಗಳನ್ನು ಜಯಿಸಬೇಕಾಗುತ್ತದೆ. ಇಂತಹದೇ ಸಮಸ್ಯೆಗಳು ದಾಟುವಿನಲ್ಲಿಯ ಸತ್ಯಭಾಮೆಗೂ ಇವೆ. ಸತ್ಯಭಾಮೆ-ಮೋಹನದಾಸ ಇವರಿಬ್ಬರ ಹೋರಾಟ ಕೊನೆಗೆ 'ಜಲಪ್ರಳಯ'ದೊಂದಿಗೆ ಮುಕ್ತಾಯವಾಗುತ್ತದೆ.

ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಈ ಜಾತಿ-ಧರ್ಮದ ಸಮಸ್ಯೆ ಕನಕದಾಸರಿಂದಲೂ ಎದುರಾಗುತ್ತಲೇ ಬಂದಿದೆ. ಕನಕದಾಸರು ಭಕ್ತಿಯ ನೆಲೆಯಲ್ಲಿದ್ದೇ ಗರ್ಭಗುಡಿಯನ್ನು ಪ್ರವೇಶಿಸಲು ಯತ್ನಿಸಿ, ಸಾಮಾಜಿಕರಿಂದ ವಿಫಲರಾಗಿ ದೇವರೇ ತನ್ನತ್ತ ತಿರುಗುವಂತಹ ಪವಾಡವನ್ನು ಸೃಷ್ಟಿಸಿದರು. ಅಂತಹ ಭಕ್ತಿಯ ಪರಾಕಾಷ್ಠತೆ ಅನಂತಮೂರ್ತಿ ಅವರ (ಜಗನ್ನಾಥನ) ಹೊಲೆಯರಿಗೂ ಇಲ್ಲ, ಭೈರಪ್ಪನವರ (ಸತ್ಯಳ) ಮೋಹನದಾಸನಿಗೂ ಇಲ್ಲ. ಒಟ್ಟಿನಲ್ಲಿ ಈ ಮೂರು ಪ್ರಕ್ರಿಯೆಗಳು ಮಾನವೀಕರಣದ ಪ್ರಮುಖ ಬಿಂದುಗಳಾಗಿವೆ.

ದಾಟು ಕಾದಂಬರಿಯಲ್ಲಿ ಸತ್ಯ-ಶ್ರೀನಿವಾಸ-ಮೋಹನದಾಸರು ಮಾನವೀಕರಣದ ರೂವಾರಿಗಳಾಗುತ್ತಾರೆ. ಮಾನವೀಕರಣದ ಹೋರಾಟ ಯಶಸ್ವಿಯಾಗುವ ಸಂದರ್ಭದಲ್ಲಿ ಜಲಪ್ರಳಯಕ್ಕೆ ಇಡೀ ವ್ಯವಸ್ಥೆಯೇ ತುತ್ತಾಗುತ್ತದೆ. ಇಂತಹ ಅಂತಿಮ ಹಂತದಲ್ಲಿ ಸರ್ವನಾಶವನ್ನು ಬಯಸುವ ಲೇಖಕರ ಆಶಯ ಪಲಾಯನವಾದಿತ್ವವೇ ಆಗಿದೆ ಎಂಬುದು ನನ್ನ ತಿಳುವಳಿಕೆ. ಏಕೆಂದರೆ ಅಂದುಕೊಂಡಿದ್ದನ್ನು ಸಾಧಿಸಲಾಗದೆ, ಇದ್ದಂತಹ ವ್ಯವಸ್ಥೆಯನ್ನು ಹಾಗೆಯೇ ಬಿಡಲಾರದೆ ಪ್ರಳಯ, ಪ್ರವಾಹ, ಕಾಲರಾ ಇಂತಹ ನಿಸರ್ಗ ನಿರ್ಮಿತ ವಿಕೋಪಗಳನ್ನು ಸೃಷ್ಟಿಸಿ ಕೃತಿಗಳನ್ನು ಅಂತ್ಯಗೊಳಿಸುವ ಪ್ರಯತ್ನ

ಪಲಾಯನವಲ್ಲದೆ ಮತ್ತೇನು? ಇದಕ್ಕೆ ಕನ್ನಡದ ಸಂದರ್ಭದಲ್ಲಿ ಗ್ರಾಮಾಯಣ, ದಾಟು, ಬಿಸಿಲುಪುರ-ಮೊದಲಾದ ಕಾದಂಬರಿಗಳ ಅಂತ್ಯ ಸಾಕ್ಷಿಯಾಗುತ್ತವೆ. ಇದು ಇನ್ನೊಂದು ರೀತಿಯ ಅಂದರೆ ಹೊಸ ಮಾನವಸಮಾಜದ ಉದಯಕ್ಕೆ ನಾಂದಿ ಹಾಡುವ ಸೂಚನೆಯೂ ಇರಬಹುದು.

ಸಾಂಸ್ಕೃತಿಕ ಜಗತ್ತಿನಲ್ಲಿ ಮಹಿಳೆ ಹಿಂದೆ ಉಳಿದಿರುವುದೇ ವಿಷಾದನೀಯ. ಅಲ್ಪಸಂಖ್ಯಾತ ಮಹಿಳೆ ಹಿಂದುಳಿದಿರುವುದು ಇನ್ನೂ ವಿಷಾದನೀಯ. ಸಾರಾ ಅಬೂಬಕ್ಕರ್ ಅವರು ಎರಡನೆಯ ರೀತಿಯ ಮಹಿಳೆ ಹಿಂದುಳಿದಿರುವುದಕ್ಕೆ ಆಕೆಯ ಧರ್ಮದ ಅಮಾನವೀಯ ನಿಬಂಧನೆಗಳೇ ಕಾರಣ ಎನ್ನುತ್ತಾರೆ. ಇದರ ಜೊತೆಗೆ ಇಡೀ ವ್ಯವಸ್ಥೆಯು ಅವಳನ್ನು ದಾಳವನ್ನಾಗಿ ಬಳಸಿಕೊಳ್ಳುವುದು, ಪುರುಷ ಮಹಿಳೆಯನ್ನು 'ಮೊದಲ ಸಾಕುಪ್ರಾಣಿ' ಎಂದು ಭಾವಿಸಿರುವುದು ಮತ್ತು ಸಂಪ್ರದಾಯಗಳ ಕಗ್ಗತ್ತಲೆಯಲ್ಲಿ ಜೀವಿಸುವ ಅರೆಜ್ಞಾನದ ಮಹಿಳೆ - ಈ ಅಂಶಗಳೂ ಸಹ ಮಹಿಳೆ ಹಿಂದುಳಿದಿರುವುದಕ್ಕೆ ಅಥವಾ ಶೋಷಣೆಗೆ ಒಳಗಾಗಲು ಕಾರಣವಾಗಿವೆ. ಮುಸ್ಲಿಂ ಮಹಿಳೆಗೆ ವಿವಾಹ ವಿಚ್ಛೇದನದ 'ತಲಾಖ್' ಅಮಾನವೀಯವಾಗಿದೆ. ಲೇಖಕಿ "ಯಾವ ಸದುದ್ದೇಶವನ್ನಿಟ್ಟುಕೊಂಡು ಮಹಮ್ಮದ್ ಪೈಗಂಬರರು 'ತಲಾಖ್' ಪದ್ಧತಿಯನ್ನು ಜಾರಿಗೆ ತಂದರೋ ಅದಕ್ಕೆ ತದ್ವಿರುದ್ಧವಾದ, ದುರುದ್ದೇಶದಿಂದ ಕೂಡಿದ 'ತಲಾಖ್' ಪದ್ಧತಿ ಇಂದು ಜಾರಿಯಲ್ಲಿದೆ. ಮುಸ್ಲಿಂ ಸಮಾಜದಲ್ಲಿ ಈ ಸೌಲಭ್ಯದ ದುರಪಯೋಗ ಬಹಳ ವ್ಯವಸ್ಥಿತವಾಗಿ, ಸಮುಖವಾಗಿ ನಡೆಯುತ್ತಾ ಇದೆ ಎಂದು ನಾನು ದುಃಖದಿಂದಲೇ ಹೇಳುತ್ತಿದ್ದೇನೆ."[೩೯] ಎಂದೇ ಹೇಳುತ್ತಿದ್ದಾರೆ. ಕಾದಂಬರಿ 'ಚಂದ್ರಗಿರಿ ತೀರದಲ್ಲಿ' ನಾದಿರಾಳ ಬದುಕು ಧಾರ್ಮಿಕ ಕಟ್ಟುಪಾಡುಗಳಿಂದಲೇ ವಿಶಿಷ್ಟವಾದ ತಿರುವುಗಳನ್ನು ಪಡೆದುಕೊಳ್ಳುತ್ತದೆ. ಕೇವಲ ಮಾವನ ಮಾತಿನಿಂದಲೇ ನಾದಿರಾಳಿಗೆ ತಲಾಖ್ ಹೇಳುವ ರಶೀದ್‌ನಂತಹ ಅರೆಮನೆಸ್ಸಿಗನು ಸಹ ವ್ಯವಸ್ಥೆಯಲ್ಲಿ ಬಂಧಿತನಾಗಿರುತ್ತಾನೆ. ಹೀಗಾಗಿ ಲೇಖಕಿ ನಾದಿರಾಳಿಗೆ ಆಗುವ ಅನ್ಯಾಯದ ಬಗ್ಗೆ ತುಂಬ ಕಳಕಳಿಯಿಂದ ವರ್ಣಿಸಿದ್ದಾರೆ. ಹೀಗೆಂದೇ ಜಯಪ್ರಕಾಶ ಮಾವಿನಕುಳಿ ಅವರು "ಧರ್ಮ ಪಶುವಾಗಿ ಬದುಕು ಬಂಧಿಯಾಗಿ ಕೊನೆಗೆ ಇಲ್ಲವಾಗುವ ನಾದಿರಾಳ ಚಿತ್ರಣ ಅತ್ಯಂತ ಸುಂದರವಾಗಿ, ಮಾನವೀಯವಾಗಿ ಮೂಡಿಬಂದಿದೆ. ಆ ಕಾರಣದಿಂದಲೇ ಅದು ನನ್ನ ಮನಸ್ಸಿನಲ್ಲಿ ತನ್ನ ಛಾಪು ಹೊಡೆಯಿತು. ನಿಮಗೆ ಗೊತ್ತಿರಬಹುದು ಒಂದು ಕೃತಿ ಸಹೃದಯರ ಮನಸ್ಸಿನಲ್ಲಿ ನಿಲ್ಲುವುದು. ಅದರ ಹೆಚ್ಚು ಮಾನವಾನುಭವ ಆಗುವುದರಿಂದ"[೪೦] ಎಂದಿದ್ದಾರೆ. ಒಟ್ಟಿನಲ್ಲಿ ಸಾರಾ ಅವರು ಧರ್ಮವನ್ನು ಮಾನವೀಯ ಮೌಲ್ಯದ ಪರವಾಗಿ ನಿಂತು ಪ್ರಶ್ನೆ ಮಾಡುವ ರೀತಿ ತುಂಬ ಮಹತ್ವದ್ದಾಗಿದೆ. ಈ ಪ್ರಶ್ನೆಗಳಿಗೆ ಇಸ್ಲಾಂ ಧರ್ಮವು ಸಮರ್ಪಕವಾದ ಉತ್ತರ ಕೊಟ್ಟರೆ ಅದು ಮಾನವೀಕರಣದ ಗೆಲುವು. "ಧರ್ಮದ ಹೆಸರಿನಲ್ಲಿ ಸಮಾಜ ಹೆಣ್ಣನ್ನು ಶೋಷಿಸುತ್ತಿರುವ ಒಂದು ರೀತಿಯನ್ನು ಮುಸ್ಲಿಂ ಸ್ತ್ರೀಯರು ಎದುರಿಸುತ್ತಿರುವ ಒಂದು ಗಂಭೀರ ಸಮಸ್ಯೆಯನ್ನು ನಾನು ಮಾನವೀಯತೆಯಿಂದ

ಯೋಚಿಸಬಲ್ಲ ಮನುಷ್ಯರೆದುರು ತೆರೆದಿಟ್ಟಿದ್ದೇನೆ''[೪೧] ಎನ್ನುವ ಸಾರಾ ಅವರ ಮಾತುಗಳನ್ನು ಮಾನವೀಯ ಜಗತ್ತು ಅದರಲ್ಲೂ ಮುಸ್ಲಿಂ ಮೌಲ್ವಿಗಳು ಯೋಚಿಸುವ, ತಲಾಖನ್ನು ಪುನರ್ ವಿಮರ್ಶಿಸುವ ಜರೂರತ್ತು ತುಂಬಾ ಇದೆ.

ಮಾನವೀಕರಣದ ಪ್ರಕ್ರಿಯೆಯನ್ನು ಸ್ತ್ರೀ-ಪುರುಷ ಬರಹಗಾರರೆಲ್ಲ ಒಂದಲ್ಲ ಒಂದು ರೀತಿಯಲ್ಲಿ ತಮ್ಮ ಸಾಹಿತ್ಯದಲ್ಲಿ ಪ್ರಚುರಪಡಿಸಿದ್ದಾರೆ. ಮತ್ತು ಇನ್ನೂ ಹೆಚ್ಚಿನ ರೀತಿಯಲ್ಲಿ ವಸಾಹತೀಕರಣದ ಪ್ರಚುರ ಪಡಿಸಬೇಕಾಗಿದೆ. ವಸಾಹತೀಕರಣದ ಸಂದರ್ಭದಲ್ಲಿ ಮಾನವೀಕರಣವೇ ಮುಖ್ಯವಾಹಿನಿಯಾಗಿ ಜಗತ್ತಿನಲ್ಲಿ ಕೆಲಸ ಮಾಡುತ್ತದೆ. ಜಾಗತೀಕರಣದ ನಿಲುವು ಮಾನವೀಕರಣವನ್ನು ಅವಲಂಬಿಸಿದೆಯೆಂದರೆ ತಪ್ಪಾಗಲಾರದು.

## ಅಡಿಟಿಪ್ಪಣಿಗಳು

೧. ಟಿ. ಪಿ. ಅಶೋಕ, ಪುಸ್ತಕ ಪ್ರೀತಿ, ೧೯೯೩, ಪು. ೩೮೬

೨. ಎಲ್. ಎಸ್. ಶೇಷಗಿರಿರಾವ್, ಹೊಸಗನ್ನಡ ಸಾಹಿತ್ಯ,೧೯೯೩, ಪು. ೧೧೮

೩. ಡಾ. ಸಿ. ಎನ್. ರಾಮಚಂದ್ರನ್, ಶಿಲ್ಪ, ೧೯೮೬, ಪು. ೧೯

೪. ಡಾ. ರಹಮತ್ ತರೀಕೆರೆ, ಪ್ರತಿ ಸಂಸ್ಕೃತಿ, ೧೯೯೬, ಪು. ೧೨೫

೫. ಕುವೆಂಪು, ಕಾನೂರು ಹೆಗ್ಗಡತಿ, ೧೯೯೨, ಪು. ೫೩೮

೬. ಅದೇ, ೧೯೯೨, ಪು. ೧೫೧

೭. ಕುವೆಂಪು, ಮಲೆಗಳಲ್ಲಿ ಮದುಮಗಳು, ೧೯೯೨, ಪು. ೧೭೦

೮. ಬಸವರಾಜ ಕಲ್ಗುಡಿ, ಕನ್ನಡದ ಕೆಲವು ಪ್ರಮುಖ ಕಾದಂಬರಿಗಳು, ೧೯೯೦, ಪು. ೯೪-೯೫

೯. ರಹಮತ್ ತರೀಕೆರೆ, ಪ್ರತಿ ಸಂಸ್ಕೃತಿ, ೧೯೯೬, ಪು. ೧೩೮

೧೦. ಅದೇ, ಪು. ೧೩೮

೧೧. ಡಾ. ಮಹಾದೇವ ಕಣವಿ, ಕನ್ನಡ ಪ್ರಾತಿನಿಧಿಕ ಪ್ರಾದೇಶಿಕ ಕಾದಂಬರಿಗಳು, ೧೯೯೪, ಪು. ೨೪೪

೧೨. ಅನಕೃ, ಮುನ್ನುಡಿ, ೧೯೩೦

೧೩. ಕೃಷ್ಣರಾಯ ಎಸ್. ಎಂ. (ಸಂ), ಚಿರಚೇತನ, ೧೯೭೨, ಪು. ೨೫೩

೧೪. ಜಿ. ಎಸ್. ಆಮೂರ, ಕನ್ನಡ ಕಥನ ಸಾಹಿತ್ಯ: ಕಾದಂಬರಿ, ೧೯೯೪, ಪು. ೧೮೭

೧೫. ವಿ. ಎಂ. ಇನಾಂದಾರ್, ಶಾಪ, ೧೯೯೧, ಪು. ೧೩೮

೧೬. ಅದೇ, ಪು. ೧೩೯

೧೭. ಅದೇ, ಪು. ೧೪೦

೧೮. ಟಿ. ಪಿ. ಅಶೋಕ, ಪುಸ್ತಕ ಪ್ರೀತಿ, ೧೯೯೩, ಪು. ೩೮೮

೧೯. ಉದ್ಧೃತ, ಪುರುಷೋತ್ತಮ ಬಿಳಿಮಲೆ, ಸಾಹಿತ್ಯ ವಿಮರ್ಶೆ, ೧೯೯೨, ಪು. ೧೩೯

೨೦. ಟಿ. ಪಿ. ಅಶೋಕ, ಪುಸ್ತಕ ಪ್ರೀತಿ, ೧೯೯೩, ಪು. ೩೮೮

೨೧. ಜಿ. ಎಸ್. ಆಮೂರ, ಕನ್ನಡ ಕಥನ ಸಾಹಿತ್ಯ- ಕಾದಂಬರಿ, ೧೯೯೪, ಪು. ೨೯೧

೨೨. ಅದೇ, ಪು. ೨೯೪

೨೩. ಯಶವಂತ ಚಿತ್ತಾಲ, ಶಿಕಾರಿ, ೧೯೭೯, ಪು. ೧೪೩

೨೪. ಅದೇ, ಪು. ೧೪೩

೨೫. ಅದೇ, ಪು. ೩೩೪

೨೬. ಅದೇ, ಪು. ೩೪೮

೨೭. ಅದೇ, ಪು. ೩೫೬

೨೮. ಡಿ. ಎ. ಶಂಕರ್, ವಸ್ತುವಿನ್ಯಾಸ, ೧೯೮೪, ಪು. ೧೫

೨೯. ಬರಗೂರು ರಾಮಚಂದ್ರಪ್ಪ, ಸಾಹಿತ್ಯ ಮತ್ತು ರಾಜಕಾರಣ, ೧೯೯೮, ಪು. ೨೭

೩೦. ಪುರುಷೋತ್ತಮ ಬಿಳಿಮಲೆ, ಶಿಷ್ಟ-ಪರಿಶಿಷ್ಟ ೧೯೯೨, ಪು. ೧೨೯

೩೧. ಬರಗೂರು ರಾಮಚಂದ್ರಪ್ಪ, ಸಾಹಿತ್ಯ ಮತ್ತು ರಾಜಕಾರಣ, ೧೯೯೮, ಪು. ೩

೩೩. ಪುರುಷೋತ್ತಮ ಬಿಳಿಮಲೆ, ಶಿಷ್ಟ-ಪರಿಶಿಷ್ಟ, ೧೯೯೨, ಪು. ೧೩೨

೩೪. ವ್ಯಾಸರಾಯ ಬಲ್ಲಾಳ, ಬಂಡಾಯ, ೧೯೯೧, ಪು. ೧೭೭

೩೫. ವೈದೇಹಿ, ಅಸ್ಪೃಶ್ಯರು, ೧೯೯೨, ಪು. ೩೩

೩೬. ಅದೇ, ಪು. ೧೩೨

೩೭. ಚದುರಂಗ, ಪು. ೨೫೬

೩೮. ಅದೇ ಪು. ೨೫೪

೩೯. ಉದ್ಧೃತ, ಡಾ. ಜಯಪ್ರಕಾಶ ಮಾವಿನಕುಳಿ, ೧೯೯೭, ಪು. ೯೭

೪೦. ಅದೇ, ಪು. ೯೪

೪೧. ಅದೇ, ಪುಟ : ೯೯

ಅಧ್ಯಾಯ ೪

# ಕಾರಂತರ ಕಾದಂಬರಿಗಳು ಮತ್ತು ಮಾನವೀಕರಣದ ಪ್ರಕ್ರಿಯೆಗಳು

ಕನ್ನಡದಲ್ಲಿ ಕಾದಂಬರಿ ಪ್ರಕಾರವು ಅಸ್ತಿಭಾರವನ್ನು ಹಾಕುತ್ತಿರುವ ಸಂದರ್ಭದಲ್ಲಿ, ಅನುವಾದ ಮತ್ತು ಸೃಜನಗಳ ನಡುವೆ ನಿಧಾನವಾಗಿ ಸಾಗಿ ಬರುತ್ತಿರುವ ಸಂದರ್ಭದಲ್ಲಿ ಅನಕೃ ಮತ್ತು ಶಿವರಾಮ ಕಾರಂತರು ಕಾದಂಬರಿ ಕ್ಷೇತ್ರಕ್ಕೆ ಪಾದಾರ್ಪಣೆ ಮಾಡಿದರು. ಶಿವರಾಮ ಕಾರಂತರು ಆರಂಭದಲ್ಲಿ ಬರೆದ 'ವಿಚಿತ್ರಕೂಟ', 'ಭೂತ', 'ದೇವದೂತರು', 'ಕನ್ಯಾಬಲಿ', 'ನಿರ್ಭಾಗ್ಯ ಜನ್ಮ' ಮೊದಲಾದ ಕಾದಂಬರಿಗಳು ಸಾಮಾನ್ಯ ವಿಷಯಗಳನ್ನಿಟ್ಟುಕೊಂಡು ಬಂದವು. 'ವಿಚಿತ್ರಕೂಟ' (೧೯೨೪) ಕಾದಂಬರಿಯು ಪತ್ತೇದಾರಿ ಸಾಹಿತ್ಯದ ಪಡಿನೆಳಲಾಯಿತು. ಕಳ್ಳರ ಮತ್ತು ಪೋಲೀಸ್ ವ್ಯವಸ್ಥೆಯ ನಡುವಿನ ಸಂಘರ್ಷವನ್ನು ವಸ್ತುವನ್ನಾಗಿಟ್ಟುಕೊಂಡು ಕೃತಿ ರಚಿಸಿದರು. ನಂತರ 'ಭೂತ' (೧೯೨೫) ಕಾದಂಬರಿಯು ಸಹ ಪತ್ತೇದಾರಿ ಕೃತಿಯಾಗಿದೆ. ಇವರ ಮೂರನೆಯ ಕಾದಂಬರಿ 'ನಿರ್ಭಾಗ್ಯ ಜನ್ಮ' ಪ್ರಕಟವಾದದ್ದು ೧೯೨೫ರಲ್ಲಿ. ಸಾಮಾಜಿಕ ಸಮಸ್ಯೆಗಳನ್ನು ಮೊದಲಿಗೆ ಕೈಗೆತ್ತಿಕೊಂಡ ಕಾರಂತರು ತರುಣರ, ವೇಶ್ಯೆಯರ ಮತ್ತು ಅವರಿಂದ ಸಮಾಜದಲ್ಲುಂಟಾಗುವ ಆರೋಗ್ಯ - ಅನಾರೋಗ್ಯದ ಚಟುವಟಿಕೆಗಳತ್ತ ಕಣ್ಣೋಡಿಸಿದರು. ಸ್ತ್ರೀಯರ ಸಹಜ ಮನೋಭಿಲಾಶೆಗಳು ಸಮಾಜದ ಮೇಲುಂಟುಮಾಡುವ ಪರಿಣಾಮಗಳನ್ನು ಈ ಕೃತಿಯಲ್ಲಿ ಚಿತ್ರಿಸುತ್ತದೆ. ಭೂಲೋಕದಲ್ಲಿ ದೇವಲೋಕದ ದೇವರುಗಳು ಸಂಚರಿಸುತ್ತಾರೆ. ಅವರಿಗಾಗುವ ಅನುಭವದ ಚಿತ್ರಣವನ್ನು ತುಂಬ ವಿಡಂಬನಾತ್ಮಕವಾಗಿ ನಿರೂಪಿಸಿದ್ದಾರೆ. ೧೯೩೨ರಲ್ಲಿ ಹೊರಬಂದ 'ಕನ್ಯಾಬಲಿ' ಕಾದಂಬರಿಯು ಸಹ ಸಾಮಾಜಿಕ ಕಾದಂಬರಿಯಾಗಿದೆ. ಈ ಐದು ಕಾದಂಬರಿಗಳ ವಸ್ತು ಸಾಮಾಜಿಕ, ಪತ್ತೇದಾರಿ ಮತ್ತು ವಿಡಂಬನೆಗಳಾಗಿದ್ದರಿಂದ ಇವು ನನ್ನ ಅಧ್ಯಯನದ ವ್ಯಾಪ್ತಿಯಿಂದ ಹೊರಗುಳಿಯುತ್ತದೆ.

## ಮಾನವೀಕರಣ ಕುರಿತ ಕಾರಂತರ ಚಿಂತನೆ

ಕಾರಂತರು ತಮ್ಮ ಬಿಡಿ ಬರಹಗಳಲ್ಲಿ ಮಾನವೀಕರಣದ ಚಿಂತನೆ ನಡೆಸಿರುವುದು ಕಡಿಮೆ. ಆ ಕೊರತೆಯನ್ನು ಕಾದಂಬರಿಗಳಲ್ಲಿ ತುಂಬಿಕೊಟ್ಟಿದ್ದಾರೆ. ಪ್ರತಿ ಕಾದಂಬರಿಯೂ ಮಾನವೀಕರಣದ

ಒಂದೊಂದು ಮಗ್ಗಲನ್ನು ಪರಿಚಯಿಸುತ್ತದೆ. ಬಿಡಿ ಬರಹಗಳಲ್ಲಿ 'ಅನುಭವಗಳು ಮತ್ತು ಸಾಹಿತ್ಯ ಚಿಂತನ'ಗಳಲ್ಲಿ ಅಲ್ಲಲ್ಲಿ ತಮ್ಮ ಜೀವನದ ಮೌಲ್ಯಗಳನ್ನು ಸಾದರಪಡಿಸಿದ್ದಾರೆ. ಇವುಗಳು ನೈತಿಕ ಮೌಲ್ಯಕ್ಕೆ ಮಹತ್ವ ಕೊಡುತ್ತವೆ. ಅದೇರೀತಿ 'ಬಾಳ್ವೆಯೇ ಬೆಳಕು' ಎಂಬ ಕೃತಿಯೂ ಸಹ ಮನುಷ್ಯನ ಬಾಳ್ವೆಗೆ ದಾರಿದೀಪವಾಗುತ್ತದೆ. ಇದು ಮಾನವೀಕರಣದ ಕುರಿತ ತಲಸ್ಪರ್ಶಿ ಚಿಂತನೆಯನ್ನು ನಡೆಸುತ್ತದೆ. ಮಾನವನ ಮನೋಧರ್ಮ ಹುಟ್ಟಿನಿಂದ ಅದು ಘನೀಕೃತವಲ್ಲ, ಭೀತಿಯಿಂದ ಹುಟ್ಟಿದ್ದೆನ್ನುತ್ತಾರೆ. ಆ ಮನೋಧರ್ಮ ಸಂಪ್ರದಾಯ, ಜೀವನ ಕ್ರಮ, ವ್ಯಕ್ತಿಯ ತೀರ್ಪು, ದೇವರು ಹಾಗೂ ಆತನ ಭಯ ಮತ್ತು ನಂಬಿಕೆಗಳಿಂದ ಭೀತಿಯಲ್ಲಿ ಹುಟ್ಟಿದೆ. ಅಂತಹ ಭೀತಿಯ ನೆರಳನ್ನು ಹೋಗಲಾಡಿಸಬೇಕಾದರೆ ಸಂಪ್ರದಾಯಗಳ ಪುನರ್ ವಿಮರ್ಶೆ, ವ್ಯಕ್ತಿಗತವಾದ ಸ್ಪಷ್ಟ ತೀರ್ಪು, ದೇವರ ಬಗ್ಗೆ ಅನಾಸ್ಥೆ, ಅರಿವಿನ ನಂಬಿಕೆ, ಜ್ಞಾನದ ವೃದ್ಧಿ-ಮೊದಲಾದ ಅಂಶಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಲು ಹೇಳಿದ್ದಾರೆ. ಅದಕ್ಕೆ "ಬಾಳ್ವೆಯ ಪ್ರಶ್ನೆ ಒಬ್ಬರು ಬಾಳಿ, ಇನ್ನೊಬ್ಬರು ಉತ್ತರಿಸಿ, ಮೂರನೆಯವರು ಒಪ್ಪಿ ಸಾಗುವ ಪ್ರಶ್ನೆ ಎಂದೂ ಆಗಿರಲಾರದು"[೧] ಎಂದು ಹೇಳಿದ್ದಾರೆ. ಹೊಸದಾದ ದಾರಿಯನ್ನು ಕಂಡುಕೊಳ್ಳಲು ಹೊಸತಲೆಮಾರಿನ ಪೀಳಿಗೆ ಯೋಚಿಸಿದರೆ ಅವರಿಗೆ ಹಳೆಯ ಸಂಪ್ರದಾಯನಿಷ್ಠ ಪರಂಪಣೀತ ನಂಬಿಕೆ-ಆಚರಣೆಗಳಿಂದ ಜಾತಿಮತಗಳು ಹುಟ್ಟಿವೆ. ಇವನ್ನು ಕಳಚಿ ಮನುಷ್ಯ ಮನುಷ್ಯರನ್ನು ಗುರುತಿಸುವ ಕೆಲಸ ಮಾತ್ರ ಆಗಬೇಕು. ಬದಲಾಗಿ ಹರಿಜನ, ಬ್ರಾಹ್ಮಣ ಎಂದು ಗುರುತಿಸುವ ಸಂಪ್ರದಾಯ ತೊಲಗಬೇಕು ಎಂದಿದ್ದಾರೆ. ಇಂತಹ ಅಂಶಗಳನ್ನು ಧಿಕ್ಕರಿಸಲು ಅಸಾಧ್ಯವಾಗಿರುವ ಭಾರತೀಯ ಸಮಾಜವನ್ನು ಅವಗಾಹನಿಸಿಯೋ ಏನೋ 'ಬಾಳು ಸ್ವೀಕಾರಕ್ಕಿದೆ, ನಿರಾಕರಣೆಗಲ್ಲ' ಎಂದು ಒಂದೆಡೆ ಹೇಳಿದ್ದಾರೆ. ಏನೇ ಹೊಸತಿದ್ದರೂ ಪಡೆಯಬಹುದು. ಆದರೆ ಈಗಾಗಲೇ ಸ್ವೀಕರಿಸಿ-ಒಪ್ಪಿ-ಅಳವಡಿಸಿಕೊಂಡದ್ದನ್ನು ನಿರಾಕರಿಸಲಾಗದು ಎನ್ನುವ ಅವರ ಮಾತನ್ನು ನೆನಪಿಸಿಕೊಳ್ಳಬಹುದು. ದೇವರು ದೈವ-ದೆವ್ವಗಳೆಲ್ಲ ನಮ್ಮಿಂದಾದವುಗಳು. ಅವನ್ನು ಬಿಟ್ಟು ದೇವರಿಂದ ನಾವಿದ್ದೇವೆ ಎನ್ನುವುದು ಮೂರ್ಖತನ. "ದೇವರಿರುವನೆನ್ನುವವನು ಬದುಕಿನಲ್ಲೆಲ್ಲ ಅದನ್ನು ಕಾಣದೆ, ತಿಳಿಯದೆ ಮಾಡುವ ಯಾವತ್ತು ಪೂಜೆಗಳಿಂದ ಏನೂ ಆಗುವಂತಿಲ್ಲ"[೨] ಹಾಗಾಗಿ ದೇವರುಗಳು ಜನರ ತಿಳುವಳಿಕೆಯ ಮಿತಿಯನ್ನವಲಂಬಿಸಿವೆ ಹಾಗೂ ಪ್ರದೇಶದ ಮಿತಿಯೂ ಅವಕ್ಕಿವೆ. ಆದರೆ ಯಹೂದಿಯರ ದೇವರು ಕನ್ನಡಿಗರಿಗಲ್ಲ, ಕನ್ನಡಿಗರ ಭುವನೇಶ್ವರಿ ರಷ್ಯನ್‌ರಿಗಲ್ಲ ಎಂಬುದು ಅವರ ವಾದದ ತಿರುಳಾಗಿದೆ. ಹಾಗೆಂದೇ ಕಾರಂತರು "ನನಗೆ ಹೊಳೆದ ಮುಖ್ಯವಾದೊಂದು ವಿಷಯವೆಂದರೆ ನಮ್ಮ ಬದುಕೇ ನಮ್ಮ ಭಾವನೆಗಳಿಗೆ ಅಡಿಗಲ್ಲು"[೩] ಎಂದಿದ್ದಾರೆ.

ಕಾರಂತರ ಮಾನವೀಕರಣದ ಚಿಂತನೆಯಲ್ಲಿ ಮೂಡಿ ಬಂದ ಇನ್ನೊಂದು ಮುಖ್ಯ ಅಂಶವೆಂದರೆ 'ಜೀವನ ಅಮರ; ಹುಟ್ಟು, ಸಾವು ತಾತ್ಕಾಲಿಕ' ಎಂಬುದು. ಪ್ರತಿಯೊಬ್ಬ ವ್ಯಕ್ತಿಯ ಹೆಸರು ಚಿರಸ್ಥಾಯಿಯಾಗಿರಬೇಕಾದರೆ ಅವನು ಬದುಕಿನುದ್ದಕ್ಕೂ ಯೋಗ್ಯ ಕೆಲಸಗಳನ್ನು ನಿರ್ವಹಿಸಬೇಕು. ಪ್ರತಿ ವ್ಯಕ್ತಿಯೂ ಹುಟ್ಟುತ್ತಾನೆ, ಬಾಳುತ್ತಾನೆ, ಸಾಯುತ್ತಾನೆ. ಈ ತ್ರಿಕ್ರಿಯೆಗಳಲ್ಲಿಯೇ ಎಲ್ಲರೂ

ಸಾಗಿದರೆ ಮನುಕುಲಕ್ಕೆ ಕೊಟ್ಟ ಕೊಡುಗೆ ದೊಡ್ಡ ಶೂನ್ಯ. ಹೀಗಾಗಿಯೇ "ಕೊಂಡುದುದಕ್ಕಿಂತಲೂ ಕೊಟ್ಟಿದ್ದೆಷ್ಟು" ಎಂದು ಲೆಕ್ಕಾಚಾರ ಮಾಡಿ, ಈ ಜನ್ಮದ ಋಣವನ್ನು ತೀರಿಸಬೇಕು ಎನ್ನುತ್ತಾರೆ. ಸಮಕಾಲೀನ ಜೀವನಕ್ಕೆ ಕೊಡಲು ತನ್ನಿಂದ ಕೊಡಲು ಸಾಧ್ಯವಾಗದಿದ್ದರೆ, ಸಾವಿರ ಎರಡು ಸಾವಿರ ವರ್ಷಗಳ ಅಥವಾ ಮುಂದಿನ ಪೀಳಿಗೆಗೆ ಬೆಳಕನ್ನು ಕೊಡಬಲ್ಲ ಕೊಡುಗೆ ಅಗತ್ಯ. ಬುದ್ಧ, ಥಾಮಸ್ ಅಲ್ವಾ ಎಡಿಸನ್, ಬಸವಣ್ಣ, ಕಾರ್ಲ್‌ಮಾರ್ಕ್ಸ್ ಮೊದಲಾದವರು ಕ್ರಮವಾಗಿ ಧರ್ಮ ಪ್ರವರ್ತಕ, ವಿಜ್ಞಾನಿ ಸುಧಾರಣಾವಾದಿ, ಕ್ರಾಂತಿಕಾರಿಗಳ ಕೊಡುಗೆಗಳನ್ನು ನೆನಪಿಸಿಕೊಳ್ಳಬಹುದು.

ಹೀಗೆ ತಾನು ಸಮಾಜಕ್ಕೆ ಕೊಡುಗೆ ಕೊಟ್ಟ ಹಿರಿಯ ವ್ಯಕ್ತಿ ಎಂದು ಅವನೂ ಬೀಗಬಾರದು. ಆ ದಿನಕ್ಕೆ ಅವನು ದೊಡ್ಡವನಿರಬಹುದು. ಆದರೆ ಮುಂದೊಂದು ದಿನ ಅವನನ್ನು ಮೀರಿಸುವ ವ್ಯಕ್ತಿಯೂ ಬಂದಾನು. ಅದಕ್ಕೆಂದೇ ಕಾರಂತರು"ವ್ಯಕ್ತಿ ತಾನೇ ತೀರ ಮುಖ್ಯ ಎಂದು ತಿಳಿಯುವ ಕಾರಣವೂ ಇಲ್ಲ. ಪ್ರಪಂಚವೇ ಮರುಳು-ಎಂದು ತಿಳಿಯಬೇಕಾಗಿಯೂ ಇಲ್ಲ. ಒಬ್ಬ ಬುದ್ಧನೋ, ಯೇಸುವೋ, ಎಡಿಸನನೋ-ಇವರೆಲ್ಲರೂ ಬದುಕಿಗೆ ಕಳೆಯನ್ನು ಕೊಟ್ಟವರೇ. ಆದರೆ ತಮ್ಮಿಂದಲೇ ಈ ವಿಶ್ವ ಬೆಳದಿದೆ ಎಂದು ಹೇಳುವ ಹೆಮ್ಮೆಯ ಹಕ್ಕು ಯಾರಿಗೂ ಇಲ್ಲ"[೪] ಎನ್ನುವ ಅರ್ಥಗರ್ಭಿತ ಮಾತು ಕಾಣುತ್ತೇವೆ.

"ವಿಶ್ವ ಜೀವದ ಉದ್ದೇಶವನ್ನು ತಿಳಿಯಲು ಹಂಬಲಿಸುವ ವ್ಯಕ್ತಿ ಮಿಕ್ಕ ಜೀವಿಗಳೊಡನೆ ಸ್ನೇಹ ಸಂಪರ್ಕಗಳನ್ನು ಬೆಳಯಿಸಿಕೊಂಡಿರಬೇಕು. ತನಗೆ ಉಪಯುಕ್ತವಾಗಿರಲಿ, ಹಾನಿಕಾರಿಯಾಗಿರಲಿ ಎಲ್ಲ ತೆರನ ಜೀವಿಗಳ ರೀತಿ, ಬಯಕೆ, ಸುಖದುಃಖಗಳನ್ನು ತಿಳಿಯಬೇಕು. ವ್ಯಕ್ತಿ ಬರಿಯ ತನ್ನೊಬ್ಬನ ಬದುಕಿನ ಉದ್ದೇಶವನ್ನು ತಿಳಿಯಬೇಕಾದರೂ ಈ ಬಗೆಯ ನೋಟ ಅವಶ್ಯಕ. ತನ್ನ ಬದುಕಿನೊಡನೆ ಹೊಂದಿರುವ ಇತರ ಜೀವಕೋಟಿಗಳಲ್ಲಿ ಸಾಧ್ಯವಾದಷ್ಟು ಸಮರಸದಿಂದ ಬೆರೆತು, ಅವುಗಳ ಹಿತಾಹಿತವನ್ನು ಚಿಂತಿಸುವಷ್ಟು ಸಾಹಸಪಡಬೇಕು. ಹಾಗೆ ಯತ್ನಿಸಿದ್ದಲ್ಲಿ ತನ್ನ ಸುತ್ತಲಿನ ಬದುಕಿನ ತೀರ ಕೊನೆಯ ಹಂತ ತಿಳಿಯದೆ ಹೋದರೂ, ಇಂದಿನ ಬಾಳ್ವೆಗೆ ತಗಲಿಕೊಂಡಿರುವ ನಾಳಿನ ಬದುಕಿನ ಅರಿವಾದರೂ ಆದೀತು"[೫] ಎನ್ನುವ ಅವರು ಮಾನವನ ಜೀವನದ ಬದುಕಿನ ದಾರಿಯನ್ನು ಅರುಹಿದ್ದಾರೆ. ಅಲ್ಲದೆ "ಬಾಳ್ವೆ ಇರುವುದೇ ಬದುಕುವುದಕ್ಕಾಗಿ; ಬದುಕಿಂದ ಬೆಳೆಯುವುದಕ್ಕಾಗಿ, ಮಳೆಯಾಗಿ ಉದುರಿದ ಹನಿ ಅಲ್ಪವಾಗಿರಬಹುದು. ಆ ಹನಿ ನೆಲದಲ್ಲಿ ಬಿದ್ದು ಇಂಗಿ ಹೋಗುವ ಅದರ ಆಟ ಕ್ಷಣಿಕವಾಗಿ ತೋರಬಹುದು, ಜೀವನ ಪ್ರವಾಹದಲ್ಲಿ ಹುಟ್ಟಿ, ಸಾಯುವ ಪ್ರತಿಯೊಂದು ಜೀವಿಯೂ ಹೀಗೆ ಕ್ಷಣಿಕವೂ ಅಲ್ಪವೂ ಅಹುದು. ಆದರೆ ಅಂಥ ಹನಿಗಳೇ ನೆಲವನ್ನೊಡೆದು ಬುಗ್ಗೆಗಳಾಗುತ್ತವೆ. ಅವು ಜಿನುಗಬೇಕು. ಹಂಬಲಿಸಿ ಹರಿಯಬೇಕು. ನದಿಯಾಗಿ ಹಿಗ್ಗಿ, ವಿಸ್ತರಿಸಿ ತೊಡರುಗಳನ್ನು ಕೊಚ್ಚಿ ಮುಂದಕ್ಕೆ ಸಾಗಬೇಕು. ಬೀಳುವ ಮಳೆಯ ಹನಿಗೆ ನಾಳಿನ ನದಿಯ ಕಲ್ಪನೆ

ಆಗದಾದರೂ, ನದಿಗೆ ಅಂಥ ಹನಿಗಳೇ ಕಾರಣ''[೬] ಎನ್ನುವಲ್ಲಿ ಅವರು ಕೊಡುವ ಪ್ರತಿಮೆ ತುಂಬಾ ಅರ್ಥಗರ್ಭಿತವಾಗಿದೆ. ಮಾನವ ಜನ್ಮ ಕಿರಿದಾದರೂ ಹಿರಿದಾಗಿ ಬಾಳಿಸಬೇಕು, ಬೆಳಗಿಸಬೇಕು ಎನ್ನುವ ಅವರ ಮಾತುಗಳು 'ಮಾನವೀಕರಣದ ಅನುಶಾಸನ'ಗಳಾಗಿವೆ.

ಬಂಡವಾಳವಾದಿ ನೀತಿಯನ್ನು ಕಾರಂತರು ಅಮಾನವೀಯವೆಂದು ಸಾರುತ್ತಾರೆ. ಜಗತ್ತಿನಲ್ಲಿ ಹುಟ್ಟಿದ ಪ್ರತಿ ಮನುಷ್ಯನೂ ನಿಸರ್ಗದ ಸಂಪತ್ತನ್ನು ಬಳಸಲು ಅರ್ಹ. ಆದರೆ ಕೆಲವರು ಅಧಿಕಾರದ ಬಲದಿಂದಲೋ, ಶಕ್ತಿಯ ಬಲದಿಂದಲೋ ಹೆಚ್ಚಿನ ಆಸ್ತಿ-ಒಡವೆ-ಹಣ ಇಟ್ಟುಕೊಂಡು ಶ್ರೀಮಂತರಾಗಿ ಇನ್ನುಳಿದವರಿಗೆ ನೆಲೆ, ಸುಖ ಇಲ್ಲದಂತೆ ಮಾಡುತ್ತಾರೆ. ಇಂತಹ ಶ್ರೀಮಂತರಿಂದಲೇ ಬಂಡವಾಳ ಪದ್ಧತಿ ನಿರ್ಮಾಣವಾಗಿ ಅಮಾನವೀಯ ಘಟನೆಗಳು ನಡೆಯುವಂತಾಗುತ್ತದೆ. ಮನುಷ್ಯ ಸಮಾಜ ನೆಮ್ಮದಿಯನ್ನು ಕಾಣದೆ ಅಸಮಾನತೆ, ಅನಾರೋಗ್ಯ, ಬಡತನಗಳಿಂದ ನರಳುವಂತಾಗುತ್ತದೆ. ಎಲ್ಲ ಜೀವಿಗಳಿಗೂ ಜೀವಿಸುವ ಹಕ್ಕು ಇದೆ. ಅದೇ ರೀತಿ ಸಾಧನ-ಸಲಕರಣೆಗಳನ್ನು ಅನುಭವಿಸುವ ಹಕ್ಕು ಇದೆ ಎಂದು ಚರ್ಚಿಸಿದ್ದಾರೆ.

ಈ ರೀತಿಯ ಅನೇಕ ಅಂಶಗಳಿಂದ ಮಾನವೀಕರಣದ ಬಗ್ಗೆ ಚಿಂತನೆಯನ್ನು ನಡೆಸಿದ್ದಾರೆ. ''ತನ್ನ ಬಾಳ್ವೆಯ ವ್ಯಾಪ್ತಿಯನ್ನು ತಾನು ತಾನೇ ನೋಡಬೇಕು''[೭] ಅಷ್ಟೆ ಅಲ್ಲದೆ ''ಸತ್ಯವೂ ಕೂಡ ಆಯಾಯ ಕಾಲಮಾನದ ತುಲನೆಯಿಂದ ಬದಲಾಗುವ ತಿಳಿವು''[೮] ಆದ್ದರಿಂದ ನಾನು ಹೇಳಿದ್ದೆ ಸತ್ಯವೆಂದು ನಂಬುವ ಅಗತ್ಯವಿಲ್ಲವೆಂದು ಹೇಳಿ ತಮ್ಮ ಮಾನವೀಕರಣವನ್ನೂ ಮೆರೆದಿದ್ದಾರೆ.

## ಸ್ವಾತಂತ್ರ್ಯಪೂರ್ವ ಕಾದಂಬರಿಗಳು

'ಚೋಮನ ದುಡಿ'ಯು ಕಾರಂತರಿಗೆ 'ಮಾನವೀಯ ಸಂವೇದನೆಯ' ಕೃತಿ ಎಂದು ಹೆಸರು ತಂದುಕೊಡುವುದರ ಬದಲು 'ಬಂಡಾಯ ಕಾದಂಬರಿ', 'ಪ್ರಗತಿ ವಿರೋಧಿ ಕಾದಂಬರಿ' ಎನ್ನುವ ಹೆಸರು ತಂದುಕೊಟ್ಟಿತು. ಆದರೆ ಸೂಕ್ಷ್ಮವಾಗಿ ನೋಡಿದರೆ 'ಚೋಮನ ದುಡಿ' ಮಾನವೀಕರಣದ ಪರವಾಗಿ ನಿಂತ ಕೃತಿ ಎನ್ನುವುದು ಗೋಚರವಾಗುತ್ತದೆ. 'ಹೊಲೆಯರಿಗೆ ಉಳುಮೆ ಮಾಡುವ ಹಕ್ಕಿಲ್ಲ' ಎಂಬ ಸಾಂಪ್ರದಾಯಿಕ ನಂಬಿಕೆಯನ್ನು 'ಅಮಾನವೀಯ' ಎಂದು ಹೇಳುವಲ್ಲಿ ಕೃತಿ ಯಶಸ್ವಿಯಾದರೂ ಸಾಧಿಸುವಲ್ಲಿ ವಿಫಲವಾಗುತ್ತದೆ. ಇಡೀ ಕಾದಂಬರಿಯನ್ನು ಸೋಸಿದರೆ ಮಾನವೀಕರಣದ ಘಟನೆಗಳು ಒಂದೆರಡು ಮಾತ್ರ. ಆದರೆ ಒಟ್ಟು ಕೃತಿ ತನ್ನನ್ನು ಅರ್ಪಿಸಿಕೊಳ್ಳುವುದು ಮಾನವೀಕರಣಕ್ಕೆ. ಚೋಮ ರಾತ್ರಿಯ ಊಟಕ್ಕೆ ಬೇಕಾದ ಗಂಜಿಯನ್ನು ಹಗಲೆಲ್ಲ ದುಡಿದೇ ಸಂಪಾದಿಸಬೇಕು. ಒಂದು ವೇಳೆ ಹೆಚ್ಚು ಬೇಕಿದ್ದರೆ ಧಣಿಯ ಮನೆಯಿಂದ ಪಡೆದು-ಮುಂದಿನ ದಿನಗಳಲ್ಲಿ ತೀರಿಸಬೇಕು. ತಿನ್ನುವವರ

ಸಂಖ್ಯೆ ಆರು. ದುಡಿಯುವವರ ಸಂಖ್ಯೆ ನಾಲ್ಕು. ಹೀಗಿದ್ದಾಗ ಬಡತನ ರೇಖೆಯ ಮಾನದಂಡದಿಂದ ನೋಡಿದರೆ ಬಡತನ ಚೋಮನಿಗಿಲ್ಲ. ಆದರೆ ದುಡಿಸಿಕೊಳ್ಳುವ ಧಣಿಗಳು ಅವನ ಶ್ರಮಕ್ಕೆ ಕೊಡುವ ಕೂಲಿ ಮಾತ್ರ ಕಡಿಮೆ. ಅದರಲ್ಲಿಯೇ ಅವನಿಗೆ ಬಿರುಮ ಪೂಜಾರಿಯ ಹೆಂಡದ ಅಂಗಡಿಯಲ್ಲಿ ಸಮಾರಾಧನೆಯೂ ಆಗಬೇಕು. ಬಿರುಮನ ಸುಲಿಗೆ, ಶ್ರೀಮಂತನ ಶೋಷಣೆ, ಸಾಲದ ಬವಣೆಗಳಲ್ಲಿ ಚೋಮನ ಕುಟುಂಬ ನಲುಗುತ್ತದೆ. ಅವನ ಭೂಮಿಯನ್ನು ಉಳುವ ಕನಸು ನನಸಾಗುವ ಸಂದರ್ಭವೇ ಬರುವುದಿಲ್ಲ. ಉಳುಮೆಗಾಗಿ ಎತ್ತುಗಳನ್ನು ಕಟ್ಟಿ "ಈ ಚೋಮನಿಗೂ ಒಂದು ಹಾಳುಕೊಂಪೆಯನ್ನು ಗೇಣಿಗೆ ಕೊಟ್ಟಿದ್ದರೆ, ನಿಮ್ಮ ಹೆಸರು ಹೇಳಿ ಬದುಕುತ್ತಿದ್ದ"[೯] ಎನ್ನುವ ಅಹವಾಲನ್ನು ಧಣಿಗಳ ಮುಂದಿಡುತ್ತಾನೆ. ಆದರೆ ಸಂಕಪ್ಪಯ್ಯ ಧಣಿಗಳು ಒಂದು ಕ್ಷಣ "ಹೊಲೆಯ ಬೇಸಾಯಗಾರನಾಗುವುದುಂಟೇ?"[೧೦] ಎಂದು ಯೋಚಿಸಿ ನಂತರ ತನ್ನಲ್ಲಿಯ ಬಂಜರು ಭೂಮಿಯನ್ನು ಕೊಡುವ ಯೋಚನೆಯನ್ನು ಮಾಡುತ್ತಾರೆ. ತಕ್ಷಣ ತನ್ನ ತಾಯಿಯ ಬಳಿ ವಿಷಯ ಪ್ರಸ್ತಾಪಿಸಲು ನಿರ್ಧರಿಸಿ ಒಳ ಹೋದರು. ಆ ಸಂದರ್ಭದಲ್ಲಿ "ಚೋಮ ಆಸೆಯಿಂದ ಕಾದು ಕುಳಿತ. ತಾನು ಬೇಸಾಯಗಾರನಾಗುವ ಸುದಿನ ಬಂತೆಂದು ಎದೆಯು ಉಲ್ಲಾಸದಿಂದ ಬಡಿಯಿತು"[೧೧] ತನ್ನ ಮಹದಾಸೆ ಈಡೇರಿದಂತೆ ಕನಸು ಕಾಣುತ್ತಾನೆ. ಆದರೆ ಹೊರಬಂದ ಧಣಿ "ಚೋಮ, ಇದುವರೆಗೆ ನಮ್ಮ ಹಿರಿಯರು ನಿಮ್ಮವರಿಗೆ ಗೇಣಿಗೆ ಗದ್ದೆ ಕೊಟ್ಟಿದ್ದಿಲ್ಲ. ಈಗ ಹಾಗೆ ಕೊಡಲಿಕ್ಕೆ ಬರುವ ಹಾಗೆ ಇಲ್ಲ"[೧೨] ಎಂಬ ಪರಂಪರೆಯ ಧೋರಣೆಯನ್ನು ಪಾಲಿಸುವ ವಕ್ತಾರರಾಗುತ್ತಾರೆ. ಮೊದಲು ಮಾನವೀಯ ಮನಸ್ಸಿನಿಂದ ಯೋಚಿಸಿ, ಬಂಜರು ಭೂಮಿ ಕೊಡುವ ಯೋಚನೆ ಮಾಡಿದ್ದ ಸಂಕಪ್ಪಯ್ಯ ತಾಯಿಯ "ಅಬ್ಬಾ! ಈ ಹೊಲೆಯರಿಗೆ ಬಂದ ಸೊಕ್ಕೆ" ಎಂಬ ಪರಂಪರಾಗತ ನಿಯಮಗಳ ಗೆರೆ ದಾಟುವುದಿಲ್ಲ. ಫಲವತ್ತಾಗಿರುವ ಭೂಮಿ ಕೊಡದೆ ಇದ್ದರೂ ಸಹ ಬಂಜರು ಭೂಮಿಯನ್ನು ಕೊಡುವ ಯೋಚನೆ ಒಂದು ಕ್ಷಣ ಅವರನ್ನು ಮಾನವೀಕರಣಕ್ಕೊಳಪಡಿಸುತ್ತದೆ. ಹಾಳುಬಿದ್ದ ಒಂದು ಹೊಲದ ಚೂರನ್ನು ಕೊಡುವುದಕ್ಕೆ ಅವರ ಮನಸ್ಥಿತಿಯ ಆಕ್ಷೇಪವಿರಲಿಲ್ಲ. ಚೋಮ ಇದೇ ವಿಷಯವನ್ನು ಇನ್ನೊಮ್ಮೆ ಪ್ರಸ್ತಾಪಿಸಿದಾಗ-ಸಂಕಪ್ಪಯ್ಯ "ಚೋಮನಿಗಾಗಿ ತಾಯಿಯನ್ನು ಮೃದುವಾಗಿ ಮಾತಾಡಿಸಿ ನೋಡಿದರು. ಬಲುವಾಗಿ ಬೇಡಿದರು". ಮಾತನಾಡಿ ಭೂಮಿ ಕೊಡಲು ಮನವೊಲಿಸಿದರು. ಆದರೆ ತಾಯಿಯ ಚೋಮನ ಪರ ಉತ್ತರ ಒಂದೇ- "ಬೇರೆ ಯಾರಾದರೂ ಹಾಗೆ ಮಾಡಿದ್ದಾರೆಯೇ? ಆಮೇಲೆ ಮಾಡು. ಮೊದಲಾಗಿ ನೀನು ಹೊಲೆಯರಿಗೆ ಉಪವೀತ ಕೊಡುವುದು ಬೇಡ ನಾಳೆ. ನಿನಗೆ ಅಪಕೀರ್ತಿ ಬಂದೀತು"[೧೩] ಎಂಬ ಸಮಾಜದ ದೃಷ್ಟಿಯಲ್ಲಿ ಅವಮಾನವಾಗುವ ತಾಯಿಯ ಮಾತು ಅವರನ್ನು ಕಟ್ಟಿಹಾಕುತ್ತದೆ. ಹೊಲೆಯರು ಸ್ವಂತ ಬೇಸಾಯ ಮಾಡುವುದೆಂಬ ಹೊಸ ಯೋಚನೆಯನ್ನು ಸಂಕಪ್ಪಯ್ಯನವರ ತಾಯಿ, ಅಲ್ಲಿನ ಸಮಾಜ ಅಷ್ಟೆ ಅಲ್ಲ "ಸಾಮಾನ್ಯ ಹಳ್ಳಿಯ ಯಾರೊಬ್ಬರ

ಮನಸ್ಸಿಗೂ ಒಪ್ಪುಗೆ ಕಾಣದಂಥ ಸಂಗತಿಯದು''(೯೯೧೨-೪೬) ಸಂಕಪ್ಪಯ್ಯನವರ ಮನದಲ್ಲಿ ಬದಲಾವಣೆಯಾಗಿರಬಹುದೆಂದು ಚೋಮ ಮೂರನೆಯ ಬಾರಿ ತನ್ನ ಮಹಾನ್ ಅಭೀಪ್ಸೆಯನ್ನು ಅರುಹಿದಾಗ ''ಚೋಮ, ನಿನಗೆ ಕೊಡಬಾರದೆಂದು ನನ್ನ ಮನಸ್ಸಿನಲಿಲ್ಲ. ಊರವರು ಮಾಡದ ಕೆಲಸಕ್ಕೆ ನಾನು ತಯಾರಿಲ್ಲ. ಇನ್ನು ನಿನಗೆ ಅಂಥಾದ್ದಾಗಬೇಕಾದರೆ, ನಮ್ಮ ಅಮ್ಮ ಸಾಯಬೇಕು. ಅವಳಿರುವ ತನಕ ನೀನು ಆ ಸುದ್ದಿಗೆ ಬರಬೇಡ''[೧೪] ಎಂದು ನಿಷ್ಠುರವಾಗಿ ಹೇಳುತ್ತಾರೆ. ಅಮಾನವೀಯ ವ್ಯವಸ್ಥೆಯನ್ನು ಪ್ರತಿನಿಧೀಕರಿಸುವ ಸಂಕಪ್ಪಯ್ಯನ ತಾಯಿಯ ಸಾವು ಅಷ್ಟು ಸುಲಭವಾಗಿಲ್ಲ. ಅವಳು ಹೋದರೂ 'ಊರವರು ಮಾಡದ ಕೆಲಸಕ್ಕೆ ನಾನು ತಯಾರಿಲ್ಲ'ವೆಂದು ಸಮಾಜದಲ್ಲಿ ಇರುವ ಅವರ ತಾಯಿಯಂತಹ ಎಷ್ಟೋ ಜೀವಗಳು ನಶಿಸಬೇಕಾಗಿದೆ. ಆದರೂ ಸಂಕಪ್ಪಯ್ಯನ ಮನಸ್ಸು ಚೋಮನ ಪರವಾಗಿಯೇ ಯೋಚಿಸುತ್ತಿತ್ತು.

ಚೋಮನ ಭೂಮಿ ಉಳುಮೆಗೆ ಪರ್ಯಾಯ ವ್ಯವಸ್ಥೆ 'ಕ್ರಿಶ್ಚಿಯನ್ ಪಾದ್ರಿಯ' ಮೂಲಕ ದೊರೆಯುತ್ತಿದ್ದರೂ ಅವನ ಧರ್ಮ ಅಡ್ಡಿಯಾಗಿದ್ದೊಂದು ವಿಪರ್ಯಾಸ. ಅಲ್ಲಿ ಸಂಕಪ್ಪಯ್ಯನ ತಾಯಿಯ ಮನಸ್ಸು ಒಪ್ಪದಿದ್ದರೆ, ಇಲ್ಲಿ ಚೋಮನ ಮನಸ್ಸೇ ಒಪ್ಪುತ್ತಿಲ್ಲ. ಕ್ರಿಶ್ಚಿಯನ್ ಧರ್ಮಕ್ಕೆ ಪರಿವರ್ತನೆಗೊಂಡರೆ ಈಡೇರಬಹುದಾದ ಆಸೆಗೆ ಅವನ ಆರಾಧ್ಯ ದೈವ ಪಂಜುರ್ಲಿಯ ಭಯದಿಂದ ಅದಕ್ಕೂ ಮಣ್ಣು ಹಾಕುತ್ತಾನೆ. ಒಂದು ವೇಳೆ ಕ್ರಿಶ್ಚಿಯನ್ ಆದರೆ ಸಾಯುವ ತನಕ ಪಂಜುರ್ಲಿ ಭೂತದ ಉಪದ್ರವ ತಪ್ಪಲಾರದು ಎಂದು ''ಏನೇ ಇರಲಿ, ಇದ್ದಂತೆ ಇದ್ದು, ಬಂದದ್ದನ್ನು ಅನುಭವಿಸುತ್ತೇನೆ''[೧೫] ಎನ್ನುತ್ತಾನೆ ಚೋಮ.

ಚೋಮ ತನ್ನ ಮಕ್ಕಳಿಂದ ಹಿಡಿದು ಎಲ್ಲರಿಂದಲೂ ವಂಚನೆಗೆ ತುತ್ತಾಗುತ್ತಾನೆ. ಮನ್ವೇಲನ ಸಾಲ ತೀರಿಸುವ ಸಲುವಾಗಿ ಕಾಫಿ ತೋಟಕ್ಕೆ ಗುರುವ, ಚನಿಯರಲ್ಲಿ-ಗುರುವ ಕ್ರಿಶ್ಚಿಯನ್ ಹುಡುಗಿಯನ್ನು ಮದುವೆಯಾಗಿ ಭೂಮಿಯ ಉಳುಮೆಗಾರನಾಗಿ ಪರಿವರ್ತನೆಗೊಂಡ. ಗುರುವನಿಗೆ ಪಂಜುರ್ಲಿಯ ಭಯವಿಲ್ಲ. ತಂದೆಯ ಭಯವಿದ್ದರೂ ಅದರಿಂದ ದೂರ. ಹೀಗಾಗಿ ಕ್ರಿಶ್ಚಿಯನ್ ಮತಕ್ಕೆ ಸೇರಿದ. ಚನಿಯ ರೋಗಕ್ಕೆ ತುತ್ತಾಗಿ ಸಾವನ್ನಪ್ಪುತ್ತಾನೆ. ನೀಲ ಈಜುತ್ತಿರುವಾಗ ಕೈಸೋತು ಮುಳುಗುತ್ತಾನೆ. ಗಮನಿಸಿದ ಬ್ರಾಹ್ಮಣ ಯುವಕ ಅವನನ್ನು ರಕ್ಷಿಸಲು ಮುಂದಾದಾಗ ಅವನ ಕಡೆಯವರು ''ಅವನು ಹೊಲೆಯನಲ್ಲವೇ?''ಎಂದಾಕ್ಷಣ ಅವನ ಉತ್ಸಾಹ ನೀರಿನಲ್ಲಿಯೇ ಉಡುಗಿ ಹೋಗುತ್ತದೆ. ಜಾತಿಯ ಪ್ರಶ್ನೆ ಸಮಾಜದಲ್ಲಿ ತುಂಬಾ ಹಾನಿಯನ್ನುಂಟು ಮಾಡುತ್ತದೆ. ಇದರಿಂದ ನೀಲ ಸಾವನ್ನಪ್ಪುತ್ತಾನೆ. ಕೊನೆಗೆ ಅದೇ ಯುವಕ ನೀಲನನ್ನು ಮೇಲೆತ್ತಿದರೂ ಪ್ರಯೋಜನವಾಗುವುದಿಲ್ಲ. ಹೊಲದ ಗೇಣಿಯ ಸಂದರ್ಭದಲ್ಲಿ ತಾಯಿಯ ಮಾತು, ನೀಲನ ಸಾವಿನ ಸಂದರ್ಭದಲ್ಲಿಯ ಬ್ರಾಹ್ಮಣ ಹಿರಿಯನ ಮಾತು ಸಮಾಜವನ್ನಾವರಿಸಿದ ಜಾತಿಯ ಕಬಂಧ ಬಾಹುಗಳನ್ನು ಪ್ರತೀಕರಿಸುತ್ತವೆ. ಚೋಮ ತಾನು

ಹೊಲೆಯನ್ನದೆ ಬೇರೆ ಜಾತಿಯವನಾಗಿದ್ದರೆ ಗೇಣಿಗೆ ಭೂಮಿ ದೊರಕುತ್ತಿತ್ತು. ಮಗ ನೀಲನೂ ಬದುಕುತ್ತಿದ್ದ, ಗುರುವನೂ ಮನೆ ಬಿಟ್ಟು ಹೋಗುವ ಸಂದರ್ಭ ಬರುತ್ತಿರಲಿಲ್ಲ. ''ಹೊಲೆಯರ ಕುಲ, ದೇವರಿಗೂ ಬೇಡವಾದ ಕುಲ''ವೆಂದು ಪಶ್ಚಾತ್ತಾಪಪಡುತ್ತಾನೆ.

ಅವನ ಒಬ್ಬಳೇ ಮಗಳು ಬೆಳ್ಳಿ. ಅವಳು ಕಾದಂಬರಿಯಲ್ಲಿ ಬುದ್ಧಿವಂತೆಯಂತೆ ನಿರೂಪಿತಗೊಂಡಿದ್ದಾಳೆ. 'ಕರಿ ನಾಯಿ ಬಿಳದಾಗಲಾರದೆಂದು'ಬಲ್ಲ ಬೆಳ್ಳಿ ತನ್ನ ತಂದೆಯ ಆಸೆಯನ್ನು ಕಂಡು ''ಅಪ್ಪಾ, ನಾವು ನಮ್ಮ ಯೋಗ್ಯತೆಗಿಂತ ಮೀರಿ ಆಸೆ ಮಾಡಿದರೆ ನಡೆದೀತೆ? ನಾವು ಬೇಸಾಯ ಮಾಡಬೇಕಾದರೆ, ಬ್ರಾಹ್ಮಣರಾಗಿಯೋ ಬಂಟರಾಗಿಯೋ, ಗೌಡರಾಗಿಯೋ ಹುಟ್ಟಬೇಕಿತ್ತು? ಹಾಳಾದ ಹೊಲೆಯರಾಗಿ ಹುಟ್ಟಿ ಬೇಸಾಯ ಮಾಡಬೇಕು ಅಂದರೆ ಆಗುತ್ತದೆಯೆ? ಧನಿಗಳಾದರೂ ಏನು ಮಾಡಿಯಾರು? ಊರಿನ ಕಟ್ಟು ಕಟ್ಟಳೆಯಿಲ್ಲವೆ! ಅದನ್ನವರು ಮುರಿದರೆ ಊರವರು ಅವರಿಗೆ ಏನೆಂದಾರು? ಅವರ ಸುದ್ದಿಯನ್ನು ಬಿಡು-ನಾಳೆ ನೀನೇ ಬೇಸಾಯಗಾರನೆಂದು ತಿಳಿ. ಆಗ ನಮ್ಮ ಜಾತಿಯವರೇ ನಿನ್ನ ಮೇಲೆ ಸಿಟ್ಟಾಗಲಿಕ್ಕಿಲ್ಲ!''[೧೬] ಎನ್ನುವ ಅವಳ ಯೋಚನೆಯ ಮಾತುಗಳು ಚೋಮನ ಆಸೆ ಈಡೇರಲಾರದ್ದೆಂದು ತಿಳಿಸುತ್ತವೆ. ಇಷ್ಟೆಲ್ಲ ಯೋಚನೆ ಮಾಡುವ ಬೆಳ್ಳಿ ವ್ಯವಸ್ಥೆಯ ಬಲಿಪಶುವಾಗಿ ಮನ್ವೇಲನ ಬಲೆಗೆ ಬೀಳುತ್ತಾಳೆ. ಅವಳು ಸಹ ಚೋಮನನ್ನು ಕೊನೆಗೆ ವಂಚಿಸಿ ಬಿಡುತ್ತಾಳೆ. ಅಪ್ಪನ ಸಾಲವನ್ನು ತೀರಿಸಲು ಹೋದ ಅಣ್ಣ ಗುರುವ ಮನೆಗೆ ಬರಲೇ ಇಲ್ಲ. ಚನಿಯ ಮನೆಗೆ ಬಂದರೂ ಸಾಲ ತೀರಿಸದೆ ಹೆಚ್ಚು ಮಾಡಿ ಬಂದು ಸಾವಿಗೆ ತುತ್ತಾಗುತ್ತಾನೆ. ಈಗ ಆ ಸಾಲ ತೀರಿಸುವ ಪಾಳಿ ಬೆಳ್ಳಿಯದು. ಬೆಳ್ಳಿ ಕಾಫಿ ತೋಟಕ್ಕೆ ಹೋಗಿ ಸಾಲ ತೀರಿಸುತ್ತಾಳೆ. ಆದರೆ ಅದು ಮನ್ವೇಲನ ಕಪಟತನಕ್ಕೆ ತುತ್ತಾಗಿ ಅನ್ಯ ಮಾರ್ಗದಿಂದ. ಒಮ್ಮೆ ಬೆಳ್ಳಿಯ ಮನ್ವೇಲನೊಂದಿಗೆ ಒಂದೇ ಚಾಪೆ ಮೇಲೆ ಕುಳಿತಿದ್ದನ್ನು ನೋಡಿದ ಚೋಮ ವ್ಯಾಘ್ರನಾಗುತ್ತಾನೆ. ಅವಳನ್ನು ಹಿಡಿದು ಹೊರ ತಳ್ಳುತ್ತಾನೆ. ನನಗೆ ಮಕ್ಕಳೇ ಇಲ್ಲವೆಂದು ಹಲಬುತ್ತಾನೆ. ಧರ್ಮ ಮತ್ತು ನೈತಿಕತೆಗಾಗಿ ಜೀವವನ್ನೇ ತೇಯ್ದ ಚೋಮ ಮಕ್ಕಳಿಂದಲೇ ಮೋಸಗೊಳ್ಳುತ್ತಾನೆ. ಬೆಳ್ಳಿಯ ಮೇಲೆ ತುಂಬ ಪ್ರೀತಿಯಿಟ್ಟಿದ್ದ ಚೋಮ ''ನನ್ನ ಬೆಳ್ಳಿ ನನ್ನನ್ನು ವಂಚಿಸಿಬಿಟ್ಟಳೆ''ಎಂದು ಕೊರಗುತ್ತಾನೆ. ಕೊನೆಗೆ ದುಡಿಯನ್ನು ಬಾರಿಸುತ್ತಾ ಹೃದಯದ ಮಿಡಿತವನ್ನೇ ಕಳೆದುಕೊಳ್ಳುತ್ತಾನೆ.

ಹೆಂಡದಂಗಡಿಯ ಬೀರುವ ಹೆಂಡಕ್ಕೆ ನೀರು ಬೆರಸಿ ಚೋಮನ ಹಣ ಕೀಳುತ್ತಾ ಮೋಸ ಮಾಡಿದರೆ, ಮನ್ವೇಲ ಹೆಚ್ಚು ಕೆಲಸ ಮಾಡಿಸಿಕೊಂಡು ಕಡಿಮೆ ಕೂಲಿ ಕೊಟ್ಟು ಬಡ್ಡಿ ಬೆಳಸಿ, ಅವನ ಸಾಲ ಹಾಗೆಯೇ ಉಳಿಸಿ ಮೋಸ ಮಾಡುತ್ತಿದ್ದ. ಸಂಕಪ್ಪಯ್ಯ ಕೂಡ ಬೆಳ್ಳಿ-ಚೋಮ-ನೀಲ-ಕಾಳ ಎಲ್ಲರು ದುಡಿದರೂ ಸಂಜೆಗೆ ಒಪ್ಪತ್ತಿನ ಗಂಜಿಯ ಅಕ್ಕಿಯನ್ನಷ್ಟೆ ಕೊಡುತ್ತಿದ್ದ. ಚೋಮನ ಮನೆಗೆ ಬಂದ ಬೀಗರು ಸಹ ಮನೆಯಲ್ಲಿದ್ದದನ್ನು ಖಾಲಿ ಮಾಡಿಯೇ ಹೋಗುತ್ತಿದ್ದರು. ಎಲ್ಲ ದಿಕ್ಕಿನಿಂದಲೂ

ಚೋಮ ಮೋಸ-ವಂಚನೆಗೆ ಒಳಗಾಗುತ್ತಾನೆ. ಅವನ ನಿಯತ್ತಿನ ಮನ ಎಲ್ಲವನ್ನು ತಡೆದುಕೊಂಡು ಬಾಳುತ್ತದೆ. ಮಕ್ಕಳ ಮೇಲಿಟ್ಟ ಅವನ ಪ್ರೀತಿ ಮಾತ್ರ ಎಂತಹ ಮೇಲ್ಜಾತಿಯ ಪಾತ್ರಕ್ಕೂ ಬರದು ಎನಿಸುತ್ತದೆ. ಕಾಫಿ ತೋಟಕ್ಕೆ ಹೋಗುವ ಗುರುವ-ಚನಿಯರಿಗೆ ಬುದ್ಧಿ ಹೇಳಿಕಳುಹಿಸುವುದು, ಚನಿಯನ ಬೆರಳಿಗೆ ಉಂಗುರವನ್ನಿಡುತ್ತಾ ''ಮಾನ ಹೋಗುವ ಪ್ರಸಂಗದಲ್ಲಿ ಮಾರಿ ಇದನ್ನು ತಿನ್ನಿ. ಚನಿಯ ಬೇಗನೆ ಸಾಲ ತೀರಿಸಿಕೊಂಡು ಬಾ. ಮುಂದಿನ ಮಳೆ ಬೀಳುವುದರೊಳಗೆ ಒಂದು ಸಂಬಂಧ ನೋಡಿ ಇಡುತ್ತೇನೆ''[೧೭] ಎನ್ನುವ ಆಶಾಭಾವನೆಯ ಮಾತುಗಳು. ''ಸಾಲಗೀಲ ಮಾಡಿಕೊಂಡು ಬರಬೇಡ. ಹೇಗಾದರೂ ದುಡಿ, ಅವರ ಸಾಲವನ್ನೊಮ್ಮೆ ತೀರಿಸಿ ಬಿಟ್ಟರೆ, ತಿರುಗಿ ನೀವು ತೋಟದ ಮುಖ ಕಾಣಬೇಕಾಗಿಲ್ಲ.ಗುರುವ, ಪರವೂರದು ಜಾಗ್ರತೆಯಿಂದಿರಿ ನೀನು ಮುಂಗೋಪಿ: ದೊರೆಗಳೊಂದಿಗಾಗಲಿ, ಸೇರೆಗಾರರ ಜತೆಯಲ್ಲಾಗಲಿ ಎಂದೂ ದುಡುಕಿ ಮಾತನಾಡಬಾರದು. ಇಬ್ಬರೂ ಅಲ್ಲಿನ ಗೆಳೆಯರನ್ನು ಕೂಡಿ, ಹೆಂಡದಂಗಡಿ ಹಾದಿ ಹಿಡಿಯಬೇಡಿ. ನಾನೊಬ್ಬ ಕಲಿತದ್ದು ಸಾಕು. ನನ್ನ ಜೀವಮಾನವೆಲ್ಲ ಭಿಕ್ಷೆ ಬೇಡಿಯೇ ಹೋಯಿತು''[೧೮] ಎನ್ನುವ ಮಾನವೀಯ ನೀತಿಯ ಮಾತುಗಳು ಉತ್ತಮ ತಂದೆಯ ಲಕ್ಷಣಗಳನ್ನು ಹೇಳುತ್ತವೆ.

ಚೋಮನಲ್ಲಿ ಆಕ್ರೋಶದ ಸಂದರ್ಭವೊಂದು ಪ್ರಕಟವಾಗುತ್ತದೆ. ಚೋಮನಿಗೆ ಬೇಸಾಯಗಾರನಾಗುವ ಕನಸು ಮೂರನೆಯ ಬಾರಿಯೂ ಸಂಕಪ್ಪಯ್ಯನವರಿಂದ ತಿರಸ್ಕಾರಗೊಂಡಾಗ ಅವನು ತನ್ನ ಮಕ್ಕಳನ್ನು ಚೆನ್ನಾಗಿ ಕುಣಿಸುತ್ತಾನೆ. ಹುಚ್ಚನಂತೆ ವರ್ತಿಸುತ್ತಾ ದುಡಿ ಬಾರಿಸುತ್ತಾನೆ. ಬೆಳ್ಳಿಗೂ ಕುಣಿಯಲು ಆಜ್ಞಾಪಿಸುತ್ತಾನೆ. ಈ ಉಗ್ರತೆ ಕಂಡ ಬೆಳ್ಳಿ ನಾಳೆಯಿಂದ ಬಿರುಮ ಹೆಂಡ ಕೊಡದಂತೆ ಹೇಳುತ್ತೇನೆ, ಅಂಗಡಿಯನ್ನೇ ಸುಡುತ್ತೇನೆಂದು ನಿಶ್ಚಯಿಸಿದಳು. ಚೋಮ ಮಾತ್ರ ಮಕ್ಕಳು ಕುಣಿಯಲು ಸಾಕಾದಾಗ ಎತ್ತುಗಳ ಕಾಲಿಗೆ ಹೊಡೆಯಲು ತೊಡಗುತ್ತಾನೆ. ಗೇಣಿಗೆ ಭೂಮಿ ಕೊಡದ ಧನಿಯರ ನೆಲವನ್ನು ''ನನ್ನ ಎತ್ತುಗಳು ಇನ್ನು ಉಳಬೇಕೆ?'' ಎನ್ನುತ್ತಲೇ ''ತನಗಿಲ್ಲದ ತುತ್ತು ಪರರಿಗೇತಕ್ಕೆ?''[೧೯] ಎಂದು ಎತ್ತುಗಳ ಮುಂಗಾಲು ಕುಂಟುವಂತೆ ಹೊಡೆಯುತ್ತಾನೆ. ತೀರಾ ಮನುಷ್ಯತ್ವ ಬಿಟ್ಟು ವರ್ತಿಸುತ್ತಿರಬಹುದು. ಆದರೆ 'ಗೇಣಿ ಭೂಮಿ ಹೊಲೆಯನಿಗೆ ಇಲ್ಲ'ಎನ್ನುವ ಅಮಾನವೀಯ ನೀತಿಯ ವಿರುದ್ಧ ತನ್ನಲ್ಲಿಯೇ ಪ್ರತಿಭಟಿಸುವ ರೀತಿ ಇದಾಗಿದೆ. ಆ ಎತ್ತುಗಳು ಇನ್ನು ಧನಿಯ ಹೊಲವನ್ನು ಉಳಬಾರದೆಂದೇ ಕಾಲುಗಳಿಗೆ ಹೊಡೆಯುತ್ತಾನೆ. ಬೆಳಿಗ್ಗೆ ಎತ್ತುಗಳನ್ನು ಧನಿಯರ ಗದ್ದೆಗಾಗಿ ಬಿಚ್ಚುವುದಿಲ್ಲ ಕೂಡ.

'ಚೋಮನ ದುಡಿ' ಕಾದಂಬರಿಯು 'ಹೊಲೆಯನಿಗೆ ಉಳುವ ಹಕ್ಕಿಲ್ಲ' ಎನ್ನುವ ಅಸಮಾನತೆಯ, ಅಮಾನವೀಯ ನೀತಿಯನ್ನ ಎತ್ತಿ ಹಿಡಿದಿದೆ. ಇದು ಸಲ್ಲದ ಸಂಪ್ರದಾಯ. ಇದರಿಂದ ಮಾನವೀಯ ಮನಸ್ಸುಗಳಿಗೆ ಹಾನಿಯುಂಟಾಗುತ್ತದೆ. ಜಗತ್ತಿನ ಮನುಷ್ಯರೆಲ್ಲ ಸಮಾನ. ಜೀವಿಸುವ, ಉತ್ತುವ, ಪ್ರತಿಭಟಿಸುವ ಹಕ್ಕನ್ನು ಮನುಷ್ಯನ ಯಾವಾಗಲೂ ಪಡೆದುಕೊಂಡಿದ್ದಾನೆ ಎಂದೆಲ್ಲ ಹೇಳುತ್ತದೆ.

'ಕಾರಂತರು ಕಾದಂಬರಿಯ ಕೊನೆಗೆ ಚೋಮನಿಗೆ 'ಉಳುಮೆ ಮಾಡುವ ಭೂಮಿಯನ್ನೂ ಒದಗಿಸಬೇಕಿತ್ತು'ಎನ್ನುವ ವಾದವಿದೆ. ಇದು ವ್ಯವಸ್ಥೆಯನ್ನು ಯಥಾವತ್ತಾಗಿ ಚಿತ್ರಿಸಿರುವುದರಿಂದ ಅದರ ಅಗತ್ಯವಿಲ್ಲ ಎನ್ನಬೇಕಾಗಿದೆ. ಹಾಗೇನಾದರೂ ಗೇಣಿ ಭೂಮಿ ದೊರಕಿದರೆ ಕೃತಕತೆಯಾಗುತ್ತದೆ. ವಾಸ್ತವ ಪ್ರಜ್ಞೆಗೆ ಹೆಚ್ಚು ಒತ್ತುಕೊಟ್ಟಿದ್ದಾರೆ ಕಾರಂತರು.

ಮತಾಂತರಗೊಂಡು ಗುರುವ ಬೇಸಾಯಗಾರನಾದ. ಚೋಮ ಹಾಳು ಪಂಜರ್ಲಿಯನ್ನು ನಂಬಿ ಹಾಗೆಯೇ ಉಳಿದ. ಇಲ್ಲಿ ಮಗ ಬೇಸಾಯಗಾರನಾಗಿ ಅಮಾನವೀಯ ಪದ್ಧತಿಯನ್ನು ಮಾನವೀಯಗೊಳಿಸಿದ್ದಾನೆ. ಆದರೆ ಅವನು 'ಧರ್ಮದ ಮಾನವತಾವಾದ'ವನ್ನು ಬಲಿಕೊಟ್ಟಿದ್ದಾನೆ. ಈ ನಿಟ್ಟಿನಲ್ಲಿ ಚೋಮ ಧರ್ಮದ ಮಾನವತೆಗೆ ಕಟ್ಟು ಬಿದ್ದಿದ್ದಾನೆ. ಧರ್ಮ ನಿರಪೇಕ್ಷತೆಯ ಭಾವನೆ ಗುರುವನಲ್ಲಿ ಬಂದಿದ್ದರಿಂದ, ಅವನಿಗೆ ಸುಖದ ಹಸಿವು ಇದ್ದದ್ದರಿಂದ, ತಂದೆ ಸಾಮಿಪ್ಯ ದೂರವಿದ್ದುದರಿಂದ ಕ್ರಿಸ್ತಧರ್ಮಕ್ಕೆ ಮತಾಂತರಗೊಂಡು ಬೇಸಾಯಗಾರನಾದ. ಇದೇ ಆಸೆಯನ್ನು ಚೋಮನಿಗೂ ಹಚ್ಚಿದಾಗ ಚೋಮ ಬಿಲ್‌ಕುಲ್ ಒಪ್ಪುವುದಿಲ್ಲ. "ಚೋಮ, ಗೇಣಿಗೆ ಕೊಡಬಹುದಾದ ಗದ್ದೆಗಳಿವೆ, ಬರೇ ಗದ್ದೆಗಳಲ್ಲ, ಬಹಳ ಒಳ್ಳೆಯ ಗದ್ದೆಗಳೇ ಇವೆ, ನಿಮ್ಮ ಹಳ್ಳಿಗೆ ತೀರ ಸಮೀಪದಲ್ಲಿಯೇ ಇದೆ. ಆದರೆ, ಅವೆಲ್ಲ ಇಗರ್ಜಿಯ ಆಸ್ತಿ, ನಮ್ಮ ಜಾತಿಯವರಿಗೆ ಅಲ್ಲದೆ ಇತರರಿಗೆ ಗೇಣಿಗೆ ಕೊಡಲು ಬರುವುದಿಲ್ಲ. ಚೋಮ, ನೀನು ಹಾಳಾದ ಅವರಿವರ ಚಾಕರಿ ಮಾಡಿಕೊಂಡಿರುವ ಬದಲು ಕ್ರಿಶ್ಚಿನನಾಗಿ ಸ್ವತಂತ್ರನಾಗಬಾರದೇ?"[೨೦] ಎನ್ನುವ ಪಾದ್ರಿಯ ಮಾತುಗಳನ್ನಾಲಿಸಿ ಸಿಟ್ಟಿನಿಂದ ಕಿಡಕಿಡಿಯಾಗುತ್ತಾನೆ. ಮನೆಗೆ ಬಂದು ಯಥಾ ರೀತಿ ದುಡಿ ಬಾರಿಸಿ ದುಃಖ ಕಳೆದುಕೊಳ್ಳುತ್ತಾನೆ. 'ಧರ್ಮ ನನ್ನನ್ನು ಬಿಡಲಾರದು. ಆದ್ದರಿಂದ ನಾನು ಧರ್ಮ ಬಿಡಲಾರೆ' ಎನ್ನುವ ತಿಳುವಳಿಕೆ ಅವನದು. ಆದರೂ ಕೊನೆಗೊಮ್ಮೆ ಮನ್ವೇಲನ ಮಾತು, ಬೆಂಬಲಕ್ಕಿದ್ದ ಬೆಳ್ಳಿಯ ಮಾತು ಕೇಳಿ, ಗುರುವನ ಸುಖಜೀವನವನ್ನು ಕಲ್ಪಿಸಿಕೊಂಡು ಕ್ರಿಶ್ಚಿಯನ್ ಪಾದ್ರಿಯತ್ತ ಹೊರಡುತ್ತಾನೆ. ಮತ್ತೆ ಅದೇ ಪಂಜುರ್ಲಿಯ ಕೋಪವನ್ನು ಗುಡಿಯ ಹತ್ತಿರ ನೆನೆದು ಹಿಂತಿರುಗುತ್ತಾನೆ.

ಚೋಮನ ಮೌಲ್ಯಗಳು ಕೊನೆಯವರೆಗೂ ಉಳಿಯುತ್ತವೆ. ಅವು ಹಿಂದೂಧರ್ಮದ ಮೌಲ್ಯಗಳೇ ಆಗಿವೆ. ಅವನ ನಂಬಿಕೆಗಳು ಸನಾತನತೆಯನ್ನು ಹೇಳುತ್ತವೆ. ದಿನೇ ದಿನೇ ಬದಲಾಗುವ ಪರಿಸರಕ್ಕೆ ಗುರುವ ಹೊಂದಿಕೊಂಡಿದ್ದಾನೆ. ಕಾದಂಬರಿಯು ಮಾನವೀಕರಣವನ್ನು ಸಾಧಿಸಿ ತೋರಿಸುವ ಬದಲು 'ಅಮಾನವೀಯ ಪದ್ಧತಿ'ಯೊಂದು ಈ ರೀತಿ ಇದೆ. ಅದನ್ನು ನಿರ್ಮೂಲನೆ ಮಾಡಬೇಕು. ಅದಕ್ಕೆ ಧರ್ಮದ ನೆರಳು, ಹಿರಿಯ ತಲೆಗಳ ಯಜಮಾನಿಕೆ ನಾಶ ಹೊಂದಬೇಕು-ಹಾಗಾದರೆ ಮಾತ್ರ ಸಾಧ್ಯ ಎನ್ನುವ ಪೂರ್ವ ಮಾನವೀಕರಣದ (Pre humanization) ನಿಲುವನ್ನು ಎತ್ತಿ ಹಿಡಿಯುತ್ತದೆ.

ಕಾರಂತರು ಒಂದು ಅನುಮಾನಕ್ಕೆ ಎಡೆಮಾಡಿಕೊಡುತ್ತಾರೆ. ಮಾನವತಾವಾದಕ್ಕೆ ಬದ್ಧರಾಗಿಯೂ ಚೋಮನ ಮಾನವೀಯ ದುರಂತವನ್ನು ಹಾಡಿ; ಅವನ ಸಾಮಾಜಿಕ, ಧಾರ್ಮಿಕ ಸಂದರ್ಭಗಳನ್ನು ಹಾಗೆಯೇ ಉಳಿಸಿಕೊಳ್ಳುತ್ತಾರೆ. ಚೋಮನ ಅಭೀಪ್ಸೆ ಅಥವಾ ವ್ಯಕ್ತಿಯ ಮನುಷ್ಯತ್ವಕ್ಕಿಂತಲೂ ಅವನ ಸಮಾಜ, ಧರ್ಮ ಮುಖ್ಯವಾಗುವುದು ಮಾನವತವಾದವಾಗಲಾರದು ಎಂಬ ವಾದ ಹುಟ್ಟುತ್ತದೆ. ಅವನ ದುರಂತ ಮಾನವತಾವಾದಕ್ಕೆ ಹಾಗೂ ಮನುಷ್ಯ ಕುಲಕ್ಕೆ ಅವಮಾನ ಮಾಡಿದಂತಾಗುತ್ತದೆ. ಆದರೆ ಕೃತಿಯ ಉದ್ದೇಶ ಮಾನವೀಯವಾಗಿದೆ.

ವೈವಾಹಿಕ ಜೀವನದ ವೈಷಮ್ಯ, ದುರಂತಗಳನ್ನು ಒಂದೆಡೆ ಅನಾವರಣಗೊಳಿಸುತ್ತಾ-ಇನ್ನೊಂದೆಡೆ ಮಾನವೀಯ ಮನಸ್ಸುಗಳ ಮಿಲನಕ್ಕಾಗಿ ಹೆಣ್ಣು-ಗಂಡುಗಳನ್ನು ಅಣಿಗೊಳಿಸುವ ಪ್ರಕ್ರಿಯೆ 'ಸರಸಮ್ಮನ ಸಮಾಧಿ'ಯಲ್ಲಿ ವ್ಯಕ್ತವಾಗಿದೆ. ಮಾನವ-ಪ್ರೇತಗಳ ನಡುವಿನ ಸಂಬಂಧ ಜನತೆ ಈಗ ಕಲ್ಪಿಸಿಕೊಂಡಿರುವುದಕ್ಕೂ ಭಿನ್ನವಾಗಿರುವುದನ್ನು ಕಾರಂತರು ಕಾದಂಬರಿಯಲ್ಲಿ ಕಂಡರಿಸಿದ್ದಾರೆ. ಭ್ರಮೆ(Fantsy)ಗಳು ಕೇವಲ ಭ್ರಮೆಗಳು ಅವು ವಾಸ್ತವದ ಘಟನೆಗಳಲ್ಲ ಎಂದು ಸಮಾಜಕ್ಕೆ ಗೊತ್ತಾಗಬೇಕಾಗಿದೆ. ಅಂತಹ ಗೊತ್ತು ಮಾಡುವ ಪ್ರಯತ್ನವೇ 'ಸರಸಮ್ಮನ ಸಮಾಧಿ'.

ಚಂದ್ರಯ್ಯ-ಬೆಳ್ಳಕ್ಕ, ಚಂದ್ರಯ್ಯ-ಭಾಗೀರಥಿ, ಚಂದ್ರಯ್ಯ-ಸುನಾಲಿನಿ ಈ ಪಾತ್ರಗಳ ಸಂಬಂಧಗಳಲ್ಲಿ ದ್ವಂದ್ವ ಕಾಣುತ್ತದೆ. ಬೆಳ್ಳಕ್ಕನ ಪ್ರೇತರೂಪದ ದರ್ಶನವು ಚಂದ್ರಯ್ಯನಲ್ಲಿ ಹೊಸ ಆಸೆಗೆ ಕಾರಣವಾಗುತ್ತದೆ. ಅಂತಹ ಆಸೆಯ ಅನುಭವ ಹಿಂದೆಯಷ್ಟೆ ಪ್ರೀತಿಸಿದ್ದ ಭಾಗೀರಥಿಯೊಂದಿಗೆ ಬಲಗೊಳ್ಳುತ್ತದೆ. ವಿವಾಹಿತಳಾದ-ಗಂಡನಿಂದ ಅವಮಾನಕ್ಕೊಳಗಾಗಿ ಬಂದ-ಭಾಗೀರಥಿಯೊಂದಿಗೆ ಪ್ರಣಯ ವ್ಯವಹಾರ ಸಮಾಜದ ಚೌಕಟ್ಟನ್ನು ಮೀರುತ್ತದೆಯಾದರೂ ಅವಳೇ ಪ್ರೀತಿಸಿ ಬಂದಿರುವುದರಿಂದ ಅವನ ಬಯಕೆ ಹೆಚ್ಚಾಗುತ್ತದೆ. ಈಗ ಗಂಡನು ದೂರವಿರುವ ಕಾರಣದಿಂದ ಆಸೆ ಪಡುತ್ತಾನೆ. ಆದರೆ ಗಂಡ ಹಿರಣ್ಯ ಅವಳ ಮೇಲಿನ ಪ್ರೀತಿಯಿಂದ ಅವಳನ್ನು ಅವಮಾನ ಮಾಡಿದ ಮನೆಯನ್ನೆ ಬಿಟ್ಟು ಹೆಂಡತಿಯಲ್ಲಿಗೆ ಬರುತ್ತಾನೆ. ಹೀಗಾಗಿ ಚಂದ್ರಯ್ಯನ ಅಭೀಪ್ಸೆ ಮಣ್ಣುಗೂಡುತ್ತದೆ. ಗಂಡನೆಂಬ ಕಾರಣಕ್ಕೆ ಸಮಾಜದ ನಿರ್ಬಂಧನೆಗಳಿಗೆ ಕಟ್ಟುಬಿದ್ದ ಭಾಗೀರಥಿ ತಾನು ಬಯಸಿದ ಚಂದ್ರಯ್ಯನನ್ನು ದೂರವುಳಿಸಿ ಮತ್ತೆ ಹಿರಣ್ಯನೊಂದಿಗೆ ಜೀವಿಸುತ್ತಾಳೆ.

ಸುನಾಲಿನಿಯ ದಾಂಪತ್ಯದ ವಿಷಯದಲ್ಲಿಯೂ ಕೂಡ ವಿಷಮತೆ ತಲೆದೋರುತ್ತದೆ. ಸ್ವಾಭಿಮಾನಿ, ಸುಶಿಕ್ಷಿತೆ, ವೈಚಾರಿಕ ಪ್ರಜೆಯ ಸುನಾಲಿನಿಯ ವಿವಾಹ ವ್ಯಾಪಾರಿ ಮನೋಭಾವನೆಯ-ಬೇರೆ ಪರಿಕಲ್ಪನೆಗಳ ಜ್ಞಾನದಿಂದ ಅಣ್ಣಪ್ಪ ಕಮ್ತಿಯೊಂದಿಗೆ ನೆರವೇರುತ್ತದೆ. ಕಾಮಕ್ಕೆ ಹಾತೊರೆಯುವ, ಮನಸ್ಸಿನ ವಾಂಛೆಗಳನ್ನು ಅರ್ಥೈಸಿಕೊಳ್ಳದ ಅಣ್ಣಪ್ಪನ ವಿಷಯದಲ್ಲಿ ಸುನಾಲಿನಿ ನಿರ್ಲಿಪ್ತಳಾಗುತ್ತಾಳೆ. ಅವಳ ದೃಷ್ಟಿಯಲ್ಲಿ 'ದಾಂಪತ್ಯವೆಂದರೆ ಎರಡು ಜೀವಿಗಳ ಸ್ವಾರಸ್ಯದ ಮಿಲನ. ಅವು

ಹೊಂದಿಕೊಳ್ಳಬೇಕಾದರೆ ಮನಸ್ಸು ಹೊಂದಿಕೊಳ್ಳಬೇಕು. ಅದಕ್ಕೆ ಮನಸ್ಸು ಬೆಳೆಯಬೇಕು' ಎಂಬುದಾಗಿರುತ್ತದೆ. ಇಂತಹ ಮನಸ್ಸಿಲ್ಲದ ಬರೀ ಮನುಷ್ಯನಿಂದ ಏನನ್ನೂ ನಿರೀಕ್ಷಿಸದೆ ಸುನಾಲಿನಿ ಆತ್ಮಹತ್ಯೆಗೆ ಪ್ರಯತ್ನಿಸುತ್ತಾಳೆ. ಬೆಳ್ಳಕ್ಕನನ್ನು ಕಾಣುವ ಕುತೂಹಲದಲ್ಲಿ ಬಂದಿದ್ದ ಚಂದ್ರಯ್ಯ ಕೆರೆಗೆ ಹಾರಿದ ಸುನಾಲಿನಿಯನ್ನು ಬದುಕಿಸುತ್ತಾನೆ. ತನ್ನ ಮನಸ್ಸನ್ನು ಅವಳಲ್ಲಿ ಅನುರಕ್ತಿಗೊಳಿಸುತ್ತಾನೆ.

ಶುದ್ಧ ಹಳ್ಳಿಯ ಹುಡುಗಿಯಾದ ನಾಗವೇಣಿಯು ಇನ್ನೊಂದು ರೀತಿಯ ವಿಷಮತೆಗೆ ಸಿಕ್ಕಿಕೊಳ್ಳುತ್ತಾಳೆ. ಅವಳನ್ನು ಮೂರನೆಯ ಹೆಂಡತಿಯನ್ನಾಗಿ ಸ್ವೀಕರಿಸಿದ ಸೀತಾರಾಮ ಹನಿಮೂನಿನ ನೆಪದಲ್ಲಿ ಬಲಾತ್ಕಾರದ ಸಂಭೋಗಕ್ಕೆ ಎಳಸುತ್ತಾನೆ. ನೋವನ್ನು ಸಹಿಸದ ನಾಗವೇಣಿ ಚೀತ್ಕರಿಸುತ್ತಾಳೆ. ಅಲ್ಲಿಯೇ ಅಲೆಯುತ್ತಿದ್ದ ಚಂದ್ರಯ್ಯ ಚೀರಾಟವನ್ನು ಗಮನಿಸಿ ಅವರ ದಾಂಪತ್ಯದ ಬಗ್ಗೆ ವಿಶ್ಲೇಷಣೆಗೆ ತೊಡಗಿಕೊಳ್ಳುತ್ತಾನೆ. ಇವರು ದಾಂಪತ್ಯದ ಹೊರಗಿನ ಕಾಮವನ್ನು ಬಯಸಿರಬೇಕೆಂದು ಬಗೆಯುತ್ತಾನೆ.

ಮಹಾಸತಿಯ ಪರಿಕಲ್ಪನೆಯಲ್ಲಿ ನೀಲಾಚಲಯ್ಯ ಸತ್ತಾಗ ಅವನ ಹೆಂಡತಿ ಬೆಳ್ಳಕ್ಕನನ್ನು ಅವನೊಂದಿಗೆ ಸುಟ್ಟಿರುತ್ತಾರೆ. ಸತಿಯ ಆರಾಧನೆಯ ನೆಪದಲ್ಲಿ ಸರಸಮ್ಮ ಜನರ ಮನದಲ್ಲಿ ಪವಿತ್ರಳಾಗುತ್ತಾಳೆ. ಆದರೆ ನೀಲಾಚಲಯ್ಯನೊಂದಿಗೆ ತೃಪ್ತ ಲೈಂಗಿಕತೆಯನ್ನು ಪಡೆಯದೆ ಸತ್ತ ಅವಳು ಈಗ ಸಂತೃಪ್ತಿಗೊಳ್ಳಲು ಹವಣಿಸುತ್ತಾಳೆ. ಅದಕ್ಕಾಗಿ ಚಂದ್ರಯ್ಯನನ್ನು ವಿವಾಹವಾಗೆಂದು ಅಶರೀರಿಯಾಗಿಯೇ ಬೇಡಿಕೊಳ್ಳುತ್ತಾಳೆ. ಚಂದ್ರಯ್ಯ ಅಶರೀರಿಯೊಂದಿಗೆ ಹೇಗೆ ಮದುವೆ ಸಾಧ್ಯವೆಂದು ಯೋಚಿಸುತ್ತಾನೆ. ಇಲ್ಲಿ ಕಾಮದಿಂದ ಅತೃಪ್ತಗೊಂಡ ಮನುಷ್ಯ ಸಾವಿನ ನಂತರವೂ ಸಂಪೂರ್ಣಗೊಳಿಸಿಕೊಳ್ಳಲು ಪ್ರಯತ್ನಿಸುತ್ತಾನೆನ್ನುವುದು ಮುಖ್ಯ. ತನಗೆ ಇಷ್ಟವಾದವರ ಜೊತೆ ಸಂಭೋಗ ಹೊಂದಲು ಬೆಳ್ಳಕ್ಕ ಪ್ರಯತ್ನಿಸುತ್ತಾಳೆ. ಅತೃಪ್ತ ಪ್ರೇತಾತ್ಮಗಳೇ ಹೀಗೆ ಪ್ರಯತ್ನದಲ್ಲಿರುವುದು ಜನರ ಪಾಲಿಗೆ ಪಿಶಾಚಿ, ಭೂತ, ದೆವ್ವಗಳಾಗಿ ಮಾರ್ಪಡುತ್ತವೆ. ಫ್ರಾಯ್ಡ್‌ನ ಕನಸಿನ ಸಿದ್ಧಾಂತದ ಮೂಲಕ 'ಮೂಕಜ್ಜಿಯ ಕನಸು'ಗಳಲ್ಲಿನ ಮೂಕಜ್ಜಿ ನಿರ್ಮಾಣಗೊಂಡಿದ್ದಾಳೆ. ಅದೇ ರೀತಿಯ ಫ್ರಾಯ್ಡ್‌ನ ಕನಸಿನ ಸಿದ್ಧಾಂತದ ಇನ್ನೊಂದು ಮುಖವೆಂಬಂತೆ 'ಸರಸಮ್ಮನ ಸಮಾಧಿ'ಯ ಬೆಳ್ಳಕ್ಕ ನಿರ್ಮಾಣಗೊಂಡಿದ್ದಾಳೆ.

ಕಾಮ ಮನುಷ್ಯನ ಪರಿಪೂರ್ಣ ಜೀವನಕ್ಕೆ ಅವಶ್ಯಕ. ಸಂಪೂರ್ಣವಾಗಿದ್ದರೆ ಅವನ ಮಾನವೀಯ ಜೀವನವೂ ಪರಿಪೂರ್ಣವಾಗುತ್ತದೆ. ಕಾಮ ಕೇವಲ ದೇಹಗಳ ತೆವಲಿನ ಪ್ರಶ್ನೆಯಲ್ಲ, ಅದು ಮಾನವ ಲೋಕದ ಸೃಷ್ಟಿ, ಚೈತನ್ಯಗಳ ಪ್ರತೀಕ ಹಾಗೂ ಪರಿಪೂರ್ಣ ಜೀವನದ ಸಂಕೇತ. ಲೈಂಗಿಕ ಸಂಬಂಧಗಳು ವೈವಾಹಿಕವೋ ಅಥವಾ ಮತ್ತೊಂದೋ ಆಗಿರಬಹುದು. ಆದರೆ ಅದು ತೃಪ್ತಿದಾಯಕವಾಗಿರಬೇಕು. ಲೈಂಗಿಕ ತೃಷೆಯಲ್ಲಿ ಬೆಳ್ಳಕ್ಕ ಮದುವೆಯಾಗಿದ್ದೂ ಗಂಡನಿಂದ

ಅತೃಪ್ತಳಾಗಿದ್ದರೆ, ನಾಗವೇಣಿ ಗಂಡನಿಂದಲೇ ಅವಳಿಗಿಷ್ಟವಿಲ್ಲದ ಅತ್ಯಾಚಾರಕೊಳ್ಳಗಾಗಿ ಅತೃಪ್ತಳಾಗಿದ್ದಾಳೆ. ಅಂತೆಯೇ ಸುನಾಲಿನಿ ಗಂಡನಿಂದ ತೃಪ್ತ ಬಯಕೆ ಪಡೆಯಬಹುದಿದ್ದರೂ ಚಂದ್ರಯ್ಯನಲ್ಲಿ ಆಸೆಗೊಳ್ಳುತ್ತಾಳೆ.

ಈ ಮೂರು ಹೆಣ್ಣು ಜೀವಗಳು ಈ ರೀತಿಯ ಲೈಂಗಿಕತೆಯಲ್ಲಿ ತಮ್ಮ ವಾಂಛೆಗಳನ್ನು ಪ್ರಕಟಪಡಿಸಿದರೆ, ಪುರುಷ ಪಾತ್ರಗಳಾದ ೨೪ರ ಹರೆಯದ ಚಂದ್ರಯ್ಯ 'ಅಡಾವುಡಿ'ಯಾಗಿಯೇ ಬೆಳ್ಳಮ್ಮನಲ್ಲಿ ಅನುರಕ್ತನಾಗಲು ಯೋಚಿಸುತ್ತಾನೆ. ಅತೃಪ್ತರಾಗಿ ಸತ್ತ ಹೆಣ್ಣುಗಳು ತೃಪ್ತರಾಗಲು ಗಂಡುಗಳನ್ನು ಅರಸುತ್ತವೆಂಬುದನ್ನು ತಿಳಿದು ಹುಣ್ಣಿಮೆ-ಅಮವಾಸ್ಯೆಗಳಂದೇ ಕಾಡನ್ನು ಅಲೆಯುತ್ತಾ ಭೂತಗಳನ್ನು ಶೋಧಿಸುತ್ತಾನೆ. ಅವನಲ್ಲಿ ಭೂತ ಶೋಧದ ಕುತೂಹಲವೂ ಇರಬಹುದು. ಕೊನೆಗೆ ಬೆಳಕ್ಕನ ಜೊತೆಗೂಡಿ 'ಇಬ್ಬರು ಸರಸಮ್ಮನ ಗುಡಿಯ ಕಡೆ ಕಾಲಿರಿಸಲಿಲ್ಲ' ಎನ್ನುವಾಗ ಅವನ ವಾಂಛೆಯ ಈಡೇರಿಕೆ ಮನದಟ್ಟಾಗುತ್ತದೆ. ಅದೇ ರೀತಿ ನಾಗವೇಣಿಯ ಗಂಡ ಸೀತಾರಾಮ ಮೂರು ಮದುವೆಯಾದರೂ ಅವನ ತಣಿಯದ ಕಾಮನೆ ವಿಚಿತ್ರವೆನಿಸುತ್ತದೆ. ಸುನಾಲಿನಿಯ ಗಂಡ ಹಿರಣ್ಣ ಹೆಂಡತಿಯ ಬಯಕೆ ಅರಿತು ತನ್ನ ದೇಹದ ಕಾಮನೆಯ ಗೀಳಿಗೆ ಹಟಬಿದ್ದು ಮನೆಯವರನ್ನೇ ಧಿಕ್ಕರಿಸಿ ಬರುತ್ತಾನೆ.

ಒಟ್ಟಿನಲ್ಲಿ 'ಸರಸಮ್ಮನ ಸಮಾಧಿ' ಕಾದಂಬರಿಯ ಎಲ್ಲ ಪಾತ್ರಗಳು ಮಾನವ ದೇಹದ ಮೂಲಭೂತ ಸಮಸ್ಯೆಗಳಲ್ಲೊಂದಾದ 'ಲೈಂಗಿಕತೆ'ಗೆ ಒತ್ತುಕೊಟ್ಟಿವೆ. ದೇಹದ ಕಾಮನೆಯಿಂದ ತೃಪ್ತಿಗೊಳ್ಳದಿದ್ದ ಜೀವಗಳು ಮಾನವೀಕರಣಕ್ಕೆ ಸಹಾಯಕವಾಗಲಾರವು ಎಂಬ ಅಂಶದಿಂದಲೂ ಕೃತಿ ರಚಿಸಿದ್ದಾರೆ. ಜಿ.ಎಸ್.ಅಮೂರ ಅವರು "ಸರಸಮ್ಮನ ಸಮಾಧಿಯಲ್ಲಿ ನಿಜವಾದ ಬೆಳವಣಿಗೆಯನ್ನು ನಾವು ನೋಡುವುದು ಚಂದ್ರಯ್ಯನ ವ್ಯಕ್ತಿತ್ವದಲ್ಲಿ. ಈ ಬೆಳವಣಿಗೆಯೆಂದರೆ ಅವನ ಮಾನವೀಯತೆಯ ವಿಕಾಸ. ಅವನ ಮಾನವೀಯತೆ ಸುನಾಲಿನಿ, ಭಾಗೀರಥಿಯರಂಥ ದುಃಖ ಜೀವಿಗಳ ದುಃಖ ಪರಿಮಾರ್ಜನಕ್ಕಾಗಿ ದುಡಿಯುವುದಲ್ಲದೆ ಪ್ರೇತರಾಜ್ಯವನ್ನೂ ಒಳಗೊಳ್ಳುತ್ತದೆ. ಕೊನೆಯಲ್ಲಿ ಅವನು 'ಬೆಳ್ಳಕ್ಕ'ನನ್ನು ಹುಡುಕಿಕೊಂಡು ಹೋಗುವುದು ಅವಳ ರೂಪಕ್ಕಾಗಿ ಇರದೆ, ಅವಳ ದುಃಖವನ್ನು ಕಡಿಮೆ ಮಾಡಬೇಕು ಎಂಬ ಇಚ್ಛೆಯಿಂದ. ಕಾದಂಬರಿಯು ಮುಗಿಯುವ ವೇಳೆಗೆ ಅವನ ಅಡಾವುಡಿತನ, ಪರಕೀಯತೆ ಕಳೆದು ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿಯುವ ಒಬ್ಬ ಹೊಣೆಗಾರ ವ್ಯಕ್ತಿಯಾಗಿ ಬೆಳೆದಿರುತ್ತಾನೆ. ಮಾನವೀಯ ಸಂಬಂಧಗಳತ್ತ ನೋಡುವ ಅವನ ದೃಷ್ಟಿಯಲ್ಲಿಯೂ ಮಹತ್ವದ ಪರಿವರ್ತನೆಯಾಗಿರುತ್ತದೆ. ಇದನ್ನು ಸುನಾಲಿನಿ ಮತ್ತು ತನ್ನ ಸಂಬಂಧದ ಬಗ್ಗೆ ಆತ ಮಾತನಾಡುವ ರೀತಿಯಲ್ಲಿ ನೋಡಬಹುದು. '...ನಾನು ನನ್ನನ್ನು ನಂಬಿದ ಅನಾಥೆಯೊಬ್ಬಳನ್ನು ಪ್ರೀತಿಸುತ್ತಿದ್ದೇನೆ. ಇನ್ನಾವ ಸುಖವೂ ನನಗಿಲ್ಲ. ನಾವಿಬ್ಬರೂ ಒಬ್ಬೊಬ್ಬರ ಗೆಳೆಯರೆಂಬುದು ಮಾತ್ರ'"[೨೫] ಎಂದು ಗುರುತಿಸಿದ್ದಾರೆ.

ಕಾರಂತರ ಬಹು ಮಹತ್ವಾಕಾಂಕ್ಷೆಯ ಕೃತಿ 'ಮರಳಿ ಮಣ್ಣಿಗೆ'. ೧೮೫೦ರಿಂದ ಆರಂಭವಾಗುವ ಈ ಕೃತಿಯ ಕಥಾವಸ್ತು ೧೯೪೦ಕ್ಕೆ ಮುಗಿಯುತ್ತದೆ. ೯೦ವರ್ಷಗಳ ಮೂರು ತಲೆಮಾರುಗಳ, ಜೀವನಾನುಭವ-ಬಡತನದ ಬಾಳಿನ ಅನಾವರಣ ಕೃತಿಯಲ್ಲಿ ವಿಜೃಂಭಿಸುತ್ತದೆ. ಮನುಷ್ಯನ ಬಾಳ್ವೆಯ ಸಾರ್ಥಕತೆ ವ್ಯಕ್ತಿ ಸಾಗುವ ದಾರಿ ಮತ್ತು ತೆಗೆದುಕೊಳ್ಳುವ ನಿರ್ಧಾರಗಳನ್ನವಲಂಬಿಸಿರುತ್ತದೆ. ಸಾಗುವ ದಾರಿಯಲ್ಲಿ ಬರುವ ಕಡುಕಷ್ಟಗಳ ಮೈಲುಗಳು ವ್ಯಕ್ತಿಯ ಜೀವನವನ್ನು ದಾಖಲಿಸುತ್ತವೆ. ಅಷ್ಟೆ ಅಲ್ಲ ಅವನ ವ್ಯಕ್ತಿತ್ವವನ್ನು ಪ್ರಖರಗೊಳಿಸುತ್ತವೆ. 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ರಾಮ ಐತಾಳರು ಅನುಸರಿಸುವ ಜೀವನ ಮಾರ್ಗ ಮತ್ತು ಅವರು ಜೀವನ ಪಥಿಕರೊಂದಿಗೆ ಸಾಗುವ ಹೆಜ್ಜೆಗುರುತುಗಳು ಆದರ್ಶನೀಯವೆನಿಸದಿದ್ದರೂ ಸಮರ್ಥ ತೀರ್ಮಾನಗಳೆನಿಸುತ್ತವೆ. ಪುರೋಹಿತ ಕಾರ್ಯಗಳನ್ನು ಮಾಡುವುದರ ಜೊತೆಗೆ ಇರುವ ಆಸ್ತಿಯ ಹೊಣೆಗಾರಿಕೆಯನ್ನು ಮಾಡುತ್ತಾ ಜೀವನ ಸಾಗಿಸುವ ಐತಾಳರು ಮಾನವೀಯ ಮೌಲ್ಯಗಳನ್ನು ಅನುಷ್ಠಾನಕ್ಕೆ ತರಲು ಯತ್ನಿಸುತ್ತಾರೆ. ಹೆಂಡತಿ ಪಾರ್ವತಿ ಮತ್ತು ತಂಗಿ ಸರಸೋತಿಯರ ಜೊತೆಗೆ ಜೀವನ ನಡೆಸುತ್ತಾರೆ. ಪಾರೋತಿಯ ಹೊಟ್ಟೆಯಲ್ಲಿ ಮಕ್ಕಳಾಗದ್ದರಿಂದ ಎರಡನೆ ಮದುವೆಯಾಗಿ ಸತ್ಯಭಾಮೆಯನ್ನು ಕರೆತಂದರು. ಸತ್ಯಭಾಮೆಯು ಮನೆಗೆ ಬಂದಂದಿನಿಂದ ಸಮಸ್ಯೆಗಳ ಉದ್ಭವ ಉಂಟಾಗುತ್ತದೆ. ಅವಳ ಒಡಲಲ್ಲಿ ಲಚ್ಚ, ಸುಬ್ಬಿ ಎಂಬ ಎರಡು ಮಕ್ಕಳು ಹುಟ್ಟುತ್ತವೆ. ಕಾರಂತರು ಇಲ್ಲಿ ಮೊದಲ ಹೆಂಡತಿಯ ಹೊಟ್ಟೆಯಲ್ಲಿಯೇ ಸಂತಾನವನ್ನು ಬೆಳಸಬಹುದಿತ್ತು. ಅಥವಾ ದತ್ತು ಪುತ್ರನ ಮೂಲಕ ವಂಶೋದ್ಧಾರಕನನ್ನು ಪಡೆಯ ಬಹುದಿತ್ತು. ಇನ್ನೊಂದು ಮದುವೆ ಮಾಡುವ ಪ್ರಯತ್ನ ಏಕೆ ಮಾಡಿದರು? ಎಂಬ ಪ್ರಶ್ನೆಗೆ ಮಲತಾಯಿಯ ಮಮತೆಯನ್ನು, ಸವತಿಯ ಅಕ್ಕರೆಯನ್ನು ಮತ್ತು ಸವತಿ ಮಗನ ಪ್ರೀತಿಯನ್ನು ಮಾನವೀಕರಣದ ಚೌಕಟ್ಟಿನಲ್ಲಿಡಬೇಕಿತ್ತು. ಸಾಹಿತ್ಯ, ಕಲೆಗಳಲ್ಲಿ ಮಲತಾಯಿಯನ್ನು ಕ್ರೂರಳನ್ನಾಗಿಯೂ, ಸವತಿಯನ್ನು ಸೇವಕಿಯೆಂತಲೂ ಚಿತ್ರಿಸಿ-ಗಂಡನನ್ನು ಅಸಹಾಯಕನನ್ನಾಗಿಯೋ ಅಥವಾ ಹೆಂಡತಿಯ ಗುಲಾಮನಂತಾಗಿಯೋ ಚಿತ್ರಿಸಲಾಗಿದೆ. ಈ ಚಿತ್ರಣಗಳಿಗಿಂತಲೂ ಭಿನ್ನತೆಯನ್ನು ಮೆರೆಯಬೇಕಾದದ್ದು ಕಾರಂತರ ವೈಶಿಷ್ಟ್ಯ. ಹಾಗಂತಲೇ ಪಾರೋತಿಯಂತಹ ಪ್ರೀತಿಯ(ಲಚ್ಚನಿಗೆ) ಮಲತಾಯಿಯನ್ನೂ, ಸತ್ಯಭಾಮೆಯಂತಹ ನಿಷ್ಠಾವಂತ(ಪಾರೋತಿಗೆ) ತಂಗಿಯನ್ನೂ, (ಸರಸೋತಿಗೆ) ಅಕ್ಕರೆಯ ನಾದಿನಿಯನ್ನೂ ಸೃಜಿಸಿದ್ದಾರೆ. ದತ್ತು ಪುತ್ರ ವೈಜ್ಞಾನಿಕವಾಗಿ ವಂಶವಾಹಿನಿಯ ವಾಹಕನಾಗಲಾರ ಮತ್ತು ಭಾವನಾತ್ಮಕವಾಗಿ ಬೆಸೆದುಕೊಳ್ಳದೆಯೂ ಇರಬಹುದು. ಆದ್ದರಿಂದ ಕಾರಂತರು ಈ ವಿಷಯದಲ್ಲಿ ಇನ್ನೊಂದು ಮದುವೆಗೆ ಮೊರೆ ಹೋಗುತ್ತಾರೆ.

ರಾಮ ಐತಾಳರು ಕೆಲವೊಮ್ಮೆ ಮನೆಯ ಹೆಣ್ಣುಮಕ್ಕಳನ್ನು ಅಸಡ್ಡೆಯಿಂದ ಕಾಣುತ್ತಾರೆ. ಇದರಿಂದ ಬೇಸತ್ತ ಸರಸೋತಿ ಒಮ್ಮೆ ಮನೆ ಬಿಟ್ಟು ಹೋಗುತ್ತಾಳೆ. ಐತಾಳರು ಇನ್ನೊಂದು ಮದುವೆಯಾಗುವ ಉದ್ದೇಶವನ್ನಿಟ್ಟುಕೊಂಡು ಮನೆಯಲ್ಲಿ ತಂಗಿ ಮತ್ತು ಹೆಂಡತಿಗೆ ತಿಳಿಸದೆ ಹೋದಾಗ, ಮನೆಯಲ್ಲಿ

ಚಪ್ಪರ, ಹಬ್ಬದ ಅಡುಗೆಯ ಸಿದ್ಧತೆ ಏಕೆಂದು ತಿಳಿಸದಿದ್ದಾಗ ಸರಸೋತಿ ಅನಾಥಶ್ರಮಕ್ಕೆ ಹೋಗಿ ನೆಲೆಯೂರುತ್ತಾಳೆ.

''ಆಯ್ಯೋ, ಈ ಅಣ್ಣನಿಗೆ ಮನೆಯ ಹೆಂಗಸರೆಂದರೆ ಕಸಕ್ಕೆ ಸಮ. ಈಗ ಕಳವನ್ನು ಬಳಿದು ಕನ್ನಡಿ ಮಾಡುವುದಕ್ಕೆ ನಾವು ಬೇಕು. ಯಾಕೆ, ಏನು ಎಂದು ಹೇಳುವುದಕ್ಕೆ ಮಾತ್ರ ಯಾರು ಬೇಡ''[೨೨] ಎಂಬ ಬೇಸರದ ಮಾತು ಸರಸೋತಿಯದು. ಹೀಗೆಂದು ಅನಾಥ ಆಶ್ರಮಕ್ಕೆ ಹೋಗಿ ನೆಲೆಯೂರುತ್ತಾಳೆ. ಐತಾಳರ ಕ್ಷಮೆಯ ನಂತರವೇ ಮನೆಗೆ ಬರುತ್ತಾಳೆ. ಸ್ತ್ರೀಪುರುಷರ ಸಮಾನತೆಯ ಧೋರಣೆಯ ಮಾನವೀಕರಣವನ್ನು ಕಾರಂತರು ಇಂತಹ ಸಂದರ್ಭದಲ್ಲಿ ಮರೆಯುತ್ತಾರೆ. ಇದು ಕಥೆಯ ಓಟಕ್ಕೆ ಅನಿವಾರ್ಯವೆಂದು ಬರೆಯುತ್ತಾರೆ. 'ಹೆಣ್ಣು ಮಕ್ಕಳಿಗೆ ಯಾವ ಮಣ್ಣಿಗೆ ಇಂಗ್ಲಿಷ್'[೨೩] ಎಂಬಂತಹ ಸ್ತ್ರೀಯನ್ನು ಶಿಕ್ಷಣದಲ್ಲಿ ಕಡೆಗಣಿಸುವ ಮಾತೂ ಬರುತ್ತದೆ. ಇವು ಅಂದಿನ ಜನ ನಂಬಿದ್ದ ನಂಬಿಕೆಗಳು ಎಂದಷ್ಟೆ ಹೇಳುವುದು ಕಾರಂತರ ಕೆಲಸ.

'ಮರಳಿ ಮಣ್ಣಿಗೆ'ಯಲ್ಲಿ ಅನೇಕ ಕಡೆ ಮಾನವತಾವಾದದ ಲಕ್ಷಣಗಳು ಮರೆಯಾಗುತ್ತವೆ. ಸಂಪ್ರದಾಯದ ಅನುಕರಣೆ, ಜಾತಿಪದ್ಧತಿಯ ತತ್ವಪಾಲನೆ, ಲಿಂಗಭೇದ ಗುರುತಿಸುವಿಕೆ, ಬಡವ-ಬಲ್ಲಿದನೆಂಬ ಭಾವನೆ, ವರ್ಗಗಳ ನಿಯಮ ಬದ್ಧತೆ-ಮೊದಲಾದ ಅಂಶಗಳು ಕೃತಿಯಲ್ಲಿ ಸ್ಥಾನ ಪಡೆಯುವುದರಿಂದ ಅಮಾನವೀಕರಣದತ್ತ ಕೃತಿ ಸಾಗುತ್ತಿದೆಯೇನೋ ಎಂಬ ಅನುಮಾನ ಓದುಗ ಅಥವಾ ವಿಮರ್ಶಕನಿಗೆ ಕಾಡುತ್ತದೆ. ಈ ಅಂಶಗಳ ನೆರವು ಕಾದಂಬರಿಯ ಘಟನಾವಳಿಗಳಿಗೆ ಅವಶ್ಯವಾಗಬೇಕಾಗುತ್ತದೆ. ಐತಾಳರು ಮಗನನ್ನು ಶಾಲೆಗೆ ಸೇರಿಸಬೇಕಾದಂತಹ ಸಂದರ್ಭದಲ್ಲಿ ಅವರು ಸಂಪ್ರದಾಯನಿಷ್ಠವಾದ ವೇದಾಧ್ಯಯನ, ಪೌರೋಹಿತ್ಯಕ್ಕೆ ನೆರವಾಗಬಹುದಾದ ಮಂತ್ರಗಳ ಕಲಿಕೆಗೆ ಮಾನ್ಯತೆ ಕೊಡುತ್ತಾರೆ. ಆಧುನಿಕತೆಯ ಛಾಯೆ ಇಂಗ್ಲಿಷ್ ಮಾಧ್ಯಮ ಕಂಡರೂ ಅದನ್ನು ದೂರೀಕರಿಸುತ್ತಾರೆ. ಇದು ಅವರ ದೇಶಿಯ ಚಿಂತನೆಯ ನೆಲೆಗಟ್ಟಿಗೆ ಪೂರಕವಾದ ಅಂಶವಾಗಿದೆಯಾದರೂ ಸಂಪ್ರದಾಯಕ್ಕೆ ಶರಣು ಹೊಡೆಯುವುದು ಮಾನವತಾವಾದದ ತತ್ತ್ವವಲ್ಲ. ಅದೇ ರೀತಿ ಶೀನಮಯ್ಯನು ಮಗ ನರಸಿಂಹನನ್ನು ಬೆಂಗಳೂರಿನ ಹೋಟೆಲ್‌ಗೆ ಕೆಲಸಕ್ಕೆ ಕಳುಹಿಸುತ್ತೇನೆಂದಾಗ ''ನಿನಗೆ ಮರುಳು ಶೀನ! ಯಾವಾವ ಜಾತಿಯವರು ತಿಂದು ಬಿಟ್ಟ ಎಂಜಲನ್ನು ತೆಗೆಯಲಿಕ್ಕೆ ದೇವರು ನಮಗೆ ಬ್ರಾಹ್ಮಣ ಜನ್ಮ ಕೊಟ್ಟಿದ್ದೇನು! ಹೇರ್ಳೆಯರಿಗೇನು! ಅನ್ನವನ್ನು ಮಾರಿ ಹಣ ಸಂಪಾದಿಸಿದರೂ ಚಿಂತೆಯಿಲ್ಲ. ಒಟ್ಟಿನಿಂದ ಮನೆಗೆ ಉಪ್ಪರಿಗೆ ಬಿದ್ದರಾಯಿತು...''[೨೪] ಎಂಬ ಐತಾಳರ ಮಾತು ತೀರಾ ಜಾತೀಯತೆಯನ್ನು ಗುರುತಿಸುತ್ತದೆ. ನಂತರ ಅವರದೇ ಮುಂದುವರೆದ ಮಾತುಗಳಲ್ಲಿ ''ನಾನು ಚೇಷ್ಟೆಗೆ ಅಂದೆನಷ್ಟೆ. ನೀನು ಮಗನನ್ನು ಬೆಂಗಳೂರಿಗೆ ಕಳುಹಿಸು, ಇಲ್ಲವೆ ಮೈಸೂರಿಗೆ ಕಳುಹಿಸು. ಒಟ್ಟಾರೆ ಒಳ್ಳೆಯದಾಗಿ ಅವು ಬದುಕಿ ಇದ್ದರೆ ಸಾಕು; ನನಗೆ ಅದು ಅನಿಸಿದ್ದಲ್ಲ; ದೂರದ ಊರಿನಲ್ಲಿ ಜಡಜಾಪತ್ತು. ಆದರೆ

ಸಣ್ಣ ಮಕ್ಕಳನ್ನು ನೋಡಿಕೊಳ್ಳುವವರು ಯಾರು ಎಂದು. ಅಂಥಾ ಕಸ್ತು ಕಾಯಿಲೆಯಾದರೆ, ಶಿವಮೊಗ್ಗೆಗೆ ಹೋಗುವಾಗಲೇ ದಿನ ನಾಲ್ಕು ಸಲುತ್ತೆ; ಈ ಎಲ್ಲ ಯೋಚನೆಗಳು ಬಂದುದರಿಂದ ಹೇಳಿದೆ''[೨೫] ಎಂಬಲ್ಲಿ ಜಾತಿಯತೆಯನ್ನು ನಿರಾಕರಿಸುತ್ತಾರೆ. ನೇರವಾಗಿ ಹೀಗೆಯೇ ಹೇಳಿದ್ದರೆ ಸಂಪ್ರದಾಯಸ್ಥರ ಮನಸ್ಸುಗಳು ಸಂಶಯ ಹೊಂದುತ್ತಿದ್ದವು. ಆ ಕಾರಣವಾಗಿ ಕಾರಂತರು ಎರಡೂ ರೀತಿಯ ಮನಸುಗಳನ್ನು ಮಾನವೀಯ ಚೌಕಟ್ಟಿಗೆ ತಂದು ನಿಲ್ಲಿಸಲು ಪ್ರಯತ್ನಿಸುತ್ತಾರೆ. ಅದೇ ರೀತಿ ವಿದ್ಯಾಭ್ಯಾಸದ ವಿಷಯದಲ್ಲಿ ಗಮನಿಸಿದಾಗ ``ಕಾರ್ಕಡದಲ್ಲಿ ಒಂದು ಶಾಲೆಯಿದೆ. ಯಾವ ವಾರ, ಯಾವ ತಿಥಿಯಾದರೂ ಮಕ್ಕಳು ಅಲ್ಲಿಗೆ ಬರಬಹುದು. ಏಕೆಂದರೆ ಅಮಾವಾಸೆಗೂ ಅವರಿಗೆ ಶಾಲೆ ಕುಂದಾಪುರ ಸಂತೆಯ ಹಾಗೆ! ಅವರಿಗೆ ದಿನದ ಲೆಕ್ಕ ಏನು ನಿಮ್ಮ ಮಾಣಿಯನ್ನು ಅಲ್ಲಿಗೆ ಕಳುಹಿಸುವ ಯೋಚನೆಯೋ? ಅಲ್ಲಿ ಎಲ್ಲ ಸಕ್ಕೋಟು ಒಂದು. ಗಾಣಿಗರ ಮಕ್ಕಳೂ, ಬ್ರಾಹ್ಮಣರ ಮಕ್ಕಳೂ ಸಾಲಾ ಸಾಲು ಬೆಂಚು ಮೇಲೆ ಒಟ್ಟಿಗೆ ಒರಗಿರುತ್ತವೆ''[೨೬] ಎಂಬಂತಹ ಮಾತುಗಳು ಮಾನವೀಕರಣಕ್ಕೆ ಸಹಕಾರಿಯಾಗಬಲ್ಲುವೇ?. ಈ ಮಾತು ಸರಸೋತಿಯ ಮನದಲ್ಲಿ ``ಬ್ರಾಹ್ಮಣರ ಕುಲದಲ್ಲಿ ಹುಟ್ಟಿ, ಸರಕಾರಿ ಶಾಲೆಯಲ್ಲಿ ಪಾಠ ಹೇಳಿಸಿಕೊಳ್ಳುವುದೇ-ಎಂಬ ಚಿಂತೆ ಬಲವಾಯಿತು''[೨೭] ಎಂಬಂತಹ ತೀರ್ಮಾನಗಳು ಹುಟ್ಟುತ್ತವೆ. ಅಂತಿಮವಾಗಿ ಸರ್ಕಾರಿ ಶಾಲೆಗೆ ಸೇರಿಸುತ್ತಾರೆ ಐತಾಳರು.

ಮುಂದೆ ಲಚ್ಚ ಸರ್ಕಾರಿ ಶಾಲೆಯ ಅಭ್ಯಾಸ ಮಾಡಿದ. ಉಪನಯನದ ಹೊತ್ತಿಗೆ ಅವನ ಆಚಾರ-ವಿಚಾರಗಳೆಲ್ಲ ಬದಲಾಗಿ, ವೈಭವೀ ಜೀವನಕ್ಕೆ ಮಾರು ಹೋಗಿದ್ದ. ಹೀಗಾದ್ದರಿಂದ ಸರಸೋತಿಯ ಪ್ರತಿಕ್ರಿಯೆ ``ನನಗೇಕೆ, ಹೆಣ್ಣು ಹೆಂಗಸಿಗೆ? ಆ ಸರಕಾರಿ ಶಾಲೆಗೆ ಕಳುಹಿಸಿದಾಗಲೇ, ಇದು ಯಾವ ಯಾವುದೋ ಹಾದಿ ಹಿಡಿಯುತ್ತದೆ-ಎಂಬುದು ಗೊತ್ತಾಗಿತ್ತು, ನಿಮಗೆ ಅವನು ಇಂಗ್ಲಿಷು ಮಾಡುವುದು ಹಿಡಿಸಿದರೆ. ನನಗೇನಂತೆ?''[೨೮] ಎಂಬುದಾಗಿದೆ. ಈ ಮಾತುಗಳು ಲಚ್ಚನು ಬೆಳೆಯಬೇಕಾಗಿದ್ದ ರೀತಿಯನ್ನು ಸರಸೋತಿ ನಿರ್ಧರಿಸಿದ್ದಳು. ಆದರೆ ಪ್ರತಿಯಾಗಿ ಬೆಳೆದು ಮಾನವೀಕರಣವನ್ನು ಸಂಪೂರ್ಣ ಧಿಕ್ಕರಿಸುತ್ತಾನೆ. ಅವನು ಜೀವನಪರ್ಯಂತ ಕಷ್ಟ ಅನುಭವಿಸುವುದರ ಜೊತೆಗೆ ತಾಯಿ, ಹೆಂಡತಿ ಮಕ್ಕಳಿಗೆಲ್ಲ ವಿಲನ್ ಆಗಿ ರೂಪುಗೊಳ್ಳುತ್ತಾನೆ. ಲಚ್ಚ ತನ್ನ ಬಾಲ್ಯದ ಸ್ನೇಹಿತ ನರಸಿಂಹನ ಜೊತೆ ಸೇರಿಕೊಂಡು ತೀರಾ ಉಡಾಳನಾಗುತ್ತಾನೆ. ಸರ್ಕಾರಿ ಶಾಲೆಯಲ್ಲಿ ಲಚ್ಚ ಕಲಿತದ್ದು ಶಿಕ್ಷಣವನ್ನಲ್ಲ. ಗೆಳೆಯರೊಂದಿಗೆ ಕೂಡಿ ಜೂಜು, ಇಸ್ಪೇಟ್ ಮತ್ತು ಸ್ತ್ರೀಸಂಗ ಗಳಿಸುತ್ತಾನೆ. ಅವನ ಅಧೋಗತಿ ಬಾಲ್ಯದಿಂದಲೇ ಆರಂಭವಾಗುತ್ತದೆ. ಸಾಲಗಳ ಶ್ರೀಮಂತನಾಗುತ್ತಾನೆ. ರೋಗಗಳಿಗೆ ಆಶ್ರಯದಾತನಾಗುತ್ತಾನೆ. ಅಮಾನವೀಕರಣದ ಪ್ರತಿಮೂರ್ತಿಯಾಗುತ್ತಾನೆ. ತಾಯಿ, ಹೆಂಡತಿಯನ್ನು ಮೋಸ ಮಾಡಿ ಆಸ್ತಿ-ಮಾರಿ, ಮನೆ ಅಡವಿಟ್ಟು ಸೌಖ್ಯದಿಂದಿರುತ್ತಾನೆ. ಆದರೆ ಕ್ಷಣಿಕ ಸುಖವೇ ಅವನ ಪಾಲಿಗಿರುತ್ತದೆ. ಲಚ್ಚ ಬೆಳೆದಂತೆಲ್ಲಾ ಅನಾಗರಿಕನಂತೆ ವರ್ತಿಸುತ್ತಾನೆ. ತಂದೆ-ತಾಯಿ-ಮನೆ ಯಾವುದೂ ಅವನಿಗೆ ವಿಹಿತವಲ್ಲ.

ಜನ್ನನ ಗೆಳೆತನದಿಂದ ಹೋಟೆಲ್ ಮಾಲೀಕ ಕಿಟ್ಟು ಉಪಾಧ್ಯಾಯನ ಹೆಂಡತಿ ಜಲಜೆಯೊಂದಿಗೆ ಅನೈತಿಕ ಸಂಬಂಧಕ್ಕೆ ನಿಲ್ಲುತ್ತಾನೆ. ಲಚ್ಚ ಮನೆಗೆ ಬಂದಾಗ ಹಣ ಕದಿಯುವುದು, ಮನೆಯವರನ್ನು ಸೇರದೇ ಇರುವುದು-ಹೀಗಾಗಿ ಅವನು ಅಮಾನವೀಯ ವ್ಯಕ್ತಿಯಾಗಿ ವಿಕಾಸ ಹೊಂದುತ್ತಾನೆ. ಅವನ ಬೆಳವಣಿಗೆಯನ್ನು ಗಮನಿಸಿದ ಐತಾಳರು‘‘ನೀನು ಹೀಗೆಯೇ ಇರುವುದಾದರೆ ನನ್ನ ಮನೆಯಲ್ಲಿರಬೇಡ. ನಿನ್ನ ನನ್ನ ಋಣ ಹರಿಯಿತು. ನಾನು ನಿನ್ನ ಅಪ್ಪನಲ್ಲ, ನೀನು ನನ್ನ ಮಗನಲ್ಲ’’[೫೯] ಎಂಬಂತಹ ನಿರ್ಧಾರಕ್ಕೆ ಬರುತ್ತಾರೆ. ಅವನನ್ನು ಸರಿದಾರಿಗೆ ತರಲು ಸಾಕಷ್ಟು ಶ್ರಮವಹಿಸುತ್ತಾರೆ. ಪಾರೋತಿ ಸಹ ಅವನಿಗೆ ಬುದ್ಧಿ ಹೇಳುತ್ತಾಳೆ. ‘ಲಚ್ಚ ಮರ್ಯಾದೆಗಿಂತ ಮನುಷ್ಯನಿಗೆ ದೊಡ್ಡ ಬದುಕುಂಟೇ’[೬೦] ಎನ್ನುವಲ್ಲಿ ಅವಳಲ್ಲಿನ ಮಾನವೀಯ ತುಡಿತ ಪ್ರಕಟವಾಗುತ್ತದೆ. ಲಚ್ಚ ತನ್ನ ಚಟುವಟಿಕೆಗಳನ್ನು ಮದುವೆ ಮಾಡಿದರೆ ಬಿಟ್ಟು ಬಿಡುತ್ತಾನೆಂದು ಬಗೆದು ನಾಗವೇಣಿ ಎಂಬುವಳೊಂದಿಗೆ ಮದುವೆ ಮಾಡುತ್ತಾರೆ. ಆದರೂ ನಾಯಿ ಬಾಲ ಡೊಂಕು ಎಂಬಂತೆ ಅವನ ಚಟುವಟಿಕೆಗಳು ಮುಂದುವರಿಯುತ್ತವೆ. ಒಟ್ಟಿನಲ್ಲಿ ಲಚ್ಚ ಬರುಬರುತ್ತಾ ಅಮಾನುಷ ವ್ಯಕ್ತಿಯಾಗಿ ತಾಯಿ-ತಂದೆ-ಹೆಂಡತಿ-ಮಗ ಎಲ್ಲರಿಗೂ ಮುಳುವಾಗುತ್ತಾನೆ. ಹೆಂಡತಿ ನಾಗವೇಣಿ ಮತ್ತು ಮಗ ರಾಮನನ್ನು ತೀರಾ ಸಂಕಷ್ಟಕೀಡು ಮಾಡುತ್ತಾನೆ. ರಾಮ ಐತಾಳರ ಹೊಟ್ಟೆಯಲ್ಲಿ ಇಂತಹ ಒಬ್ಬ ಮಗನನ್ನು ಹುಟ್ಟಿಸಿದ ಕಾರಂತರು ಕಾದಂಬರಿಯುದ್ದಕ್ಕೂ ಪ್ರತಿ ಪುಟಕ್ಕೂ ಬಡತನದ ಭೀಕರತೆಯನ್ನು ಚಿತ್ರಿಸಿದ್ದಾರೆ. ಗ್ರಾಮ ಜೀವನದ ಸಾರ ‘ಮರಳಿ ಮಣ್ಣಿಗೆ’ಯಲ್ಲಿ ತುಂಬಾ ಯಶಸ್ವಿಯಾಗಿ ದಾಖಲಾಗಿದೆ. ಇದು ಮಲೆನಾಡಿನ ಕಥೆಯಷ್ಟೆ ಅಲ್ಲ, ಬಯಲು ಸೀಮೆಯಲ್ಲೂ ನಡೆಯುತ್ತದೆ, ನಗರ ಪ್ರದೇಶಗಳಲ್ಲೂ ಕಾಣುತ್ತದೆ.

ಕಾದಂಬರಿಯುದ್ಧಕ್ಕೂ ತೀರಾ ಖಳನಾಯಕನಲ್ಲದಿದ್ದರೂ ಅಂತಹ ಲಕ್ಷಣಗಳನ್ನು ಹೇರಿಸಿಕೊಂಡಿರುವ ಶೀನಮಯ್ಯ ಸೂಕ್ಷ್ಮವಾಗಿ ಗಮನಿಸಿದರೆ ಅವನೇ ಮಾನವೀಕರಣದ ವಕ್ತಾರ. ಐತಾಳರೊಂದಿಗಿನ ವೈರ ಸಂಪ್ರದಾಯದ ವಿರುದ್ಧದ ವೈರವಾಗಿದೆ. ಜಾತೀಯತೆಯನ್ನೆಣಿಸುವ ಮೂಲಭೂತವಾದಿಗಳ ವಿರೋಧಿ ನಿಲುವಾಗಿದೆ. ಐತಾಳರು ಮಕ್ಕಳನ್ನು ಹೋಟೆಲ್ ಕೆಲಸಕ್ಕೆ ಬೇಡ, ಅಲ್ಲಿ ಯಾವಾವ ಜಾತಿಯವರು ತಿಂದ ಎಂಜಲನ್ನು ತೊಳೆಯಬೇಕಾಗುತ್ತದೆ ಎಂಬ ನಿಲುವಿಗೆ ಸರಿ ಉತ್ತರಕೊಟ್ಟು ಅವರನ್ನು ತನ್ನತ್ತ ತಿರುಗಿಸಿಕೊಂಡು, ಜಾತಿಯ ಚಿಂತನೆಯನ್ನು ದೂರಮಾಡುತ್ತಾನೆ. ಅದೇ ರೀತಿಯ ಯಾವುದೋ ವಿಷಯದಿಂದ ವೈರ ಕಟ್ಟಿಕೊಂಡು ಐತಾಳರಿಂದ ದೂರವಿದ್ದು ಅವರ ಮಗ ಲಚ್ಚನ ಮೂಲಕ ಏನೆಲ್ಲ ಸಾಧಿಸಲು ತೊಡಗಿದ್ದ ಶೀನಮಯ್ಯ ಐತಾಳರ ಸಾವಿನ ಸಂದರ್ಭದಲ್ಲಿ ಎದುರು ಕುಳಿತುಕೊಂಡು ಹಿಂದಿನ ವೈರ ಮರೆಯುತ್ತಾನೆ. ಐತಾಳರು ‘‘ನಾನು ಸತ್ತ ಮೇಲಾದರೂ ಹಗೆ ಬಿಟ್ಟು, ನನ್ನ ಮಗನಿಗೆ ನಾಲ್ಕು ಬುದ್ಧಿಯ ಮಾತು ಹೇಳುತ್ತಿಯಾ?’ಎಂದದ್ದಕ್ಕೆ ಐತಾಳರ ಕಾಲನ್ನು ಹಿಡಿದು ‘ನಾನೇನು ಆಡಿದ್ದರೂ ಕ್ಷಮಿಸಬೇಕು’ ಎಂದು ಅತ್ತರು’’[೬೧] ಹಾವು-ಮುಂಗಸಿಯಂತಿದ್ದ ಇಬ್ಬರು ಆ

ಕ್ಷಣದಲ್ಲಿ ಸ್ನೇಹಿತರಾದರು. “ಶೀನಮಯ್ಯರೇ ಆ ದಿವಸ ಐತಾಳರ ಹೆಣಕ್ಕೆ ಹೆಗಲು ಕೊಟ್ಟದನ್ನು ಕಂಡು, ಅವರ ಪರಮ ವೈರಿಗಳ ಮನಸ್ಸೂ ಶಾಂತವಾಯಿತು”[೩೨]. ಶೀನಮಯ್ಯ ವೈರಿಯಾಗಿ ನಡೆದುಕೊಂಡರೂ ಸಹ ಅಮಾನುಷ ಕೆಲಸಗಳಿಗೆ ಕೈ ಹಾಕಲಾರದವ. ಆದರೂ ಇವನು ಡಿ.ಎಲ್.ಎನ್.ಹೇಳುವಂತೆ “ಹಳ್ಳಿಯ ತಂಟೆ ತಕರಾರುಗಳಿಗೆ ತತ್ತಿಯ ಕೋಳಿ. ಅವನು ಹಾಕಿದ ಮೊಟ್ಟೆಗಳು ಮರಿಗಳಾಗಿ ಬಲಿತು ಊರನ್ನು ತಿಪ್ಪೆಯಾಗಿ ಕೆದರಬಲ್ಲವು.”[೩೩]

ಲಚ್ಚನ ಹಿತೈಷಿಗಳು. ಶಿನಮಯ್ಯ, ನರಸಿಂಹ, ಒರಟ, ಜನಾರ್ಧನ ಇವರೆಲ್ಲ ಅವನ ಪ್ರತಿಯೊಂದು ಚಟುವಟಿಕೆಗಳ ಮೂಲಬೇರು. ಇವರಲ್ಲಿಂದಲೇ ಆರಂಭವಾಗುತ್ತಿತ್ತು. ಲಚ್ಚನ ಕುಟುಂಬ ಹದಗೆಡಲಿಕ್ಕೆ ಒರಟ ಮುಖ್ಯನಾಗುತ್ತಾನೆ. ನಾಗವೇಣಿಯ ಹೆಸರಿನಲ್ಲಿ ಆಸ್ತಿಯನ್ನು ಐತಾಳರು ಬದಲಾಯಿಸಿದ್ದರು. ಅದನ್ನು ತಿಳಿದು ಲಚ್ಚನಿಗೆ ತನ್ನ ಹೆಸರಿಗೆ ವರ್ಗಾಯಿಸಿಕೊಂಡು ಬರಲು ಪ್ರೇರೇಪಿಸಿದರು. ಈ ನಾಲ್ಕು ಜನರನ್ನು ದುಷ್ಟ ಚತುಷ್ಟಯರಂತೆ ಕಾರಂತರು ಚಿತ್ರಿಸಿದ್ದಾರೆ. ಶೀನಮಯ್ಯನನ್ನು ಮೇಲೆ ಹೇಳಿದ ಸಂದರ್ಭಗಳಲ್ಲಿ ಹೊರತುಪಡಿಸಿದರೆ ದುಷ್ಟ ಚತುಷ್ಟಯರೇ ಸರಿ. ಕುಂದಾಪುರ, ಬೆಂಗಳೂರು, ಮೈಸೂರು-ಮೊದಲಾದ ಊರುಗಳಲ್ಲಿ ಲಚ್ಚನಿಗೆ ಸ್ನೇಹಿತರಾಗಿ ಅವನನ್ನು ಜೂಜು, ರೇಸು, ಕ್ಲಬ್ಬು, ವೇಶ್ಯಗೃಹ ಹೀಗೆಲ್ಲಾ ಸುತ್ತಿಸಿ ಅಧೋಗತಿಗೆ ಕೊಂಡೊಯ್ಯುತ್ತಾರೆ. ಲಚ್ಚನು ತನ್ನ ಹೆಂಡತಿಯನ್ನು ನಂಬಿಸಿ ಮೋಸ ಮಾಡುತ್ತಾನೆ. ಮಗ ರಾಮನನ್ನು ಕೀಳಾಗಿ ಕಾಣುತ್ತಾನೆ. ಹೆತ್ತ ತಾಯಿ ಸತ್ಯಭಾಮೆ, ದೊಡ್ಡಮ್ಮ ಪಾರೋತಿ, ಅತ್ತೆ ಸರಸೋತಿ, ತಂದೆ ಐತಾಳರು, ಸಹೋದರಿ ಸುಬ್ಬಮ್ಮ, ಮಾವ ಐರೋಡಿ ನಾರಾಯಣಯ್ಯ, ಅಜ್ಜ ವಾಸುದೇವಯ್ಯ ಮಗ ರಾಮರಾಯ- ಈ ಎಲ್ಲರ ವೈರವನ್ನು ಕಟ್ಟಿಕೊಳ್ಳುವ ಲಚ್ಚ ನಿಜಕ್ಕೂ ದುರಂತ ವ್ಯಕ್ತಿಯಾಗುತ್ತಾನೆ. ಜೀವನದಲ್ಲಿ ಎಂದೂ ಅನ್ಯರಿಗೆ ಕೇಡನ್ನು ಬಯಸದ ಈ ವ್ಯಕ್ತಿಗಳಿಗೆ ಲಚ್ಚನಿಂದ ಒದಗಿದ ಕಷ್ಟ ಮಾತ್ರ ಅಸಹನೀಯವಾದುದು. ಸಹವಾಸದ ದೋಷದಿಂದಲೇ ಆರಂಭವಾದ ಇವನ ಸಾಹಸ ಕ್ರಿಯೆಗಳು ದುರಂತದ ಮಾಲೆಯನ್ನೇ ಹೊತ್ತು ತರುತ್ತದೆ. ಅವನು ಎಂದೂ ಮಾನವೀಯವಾಗಿ ಬದುಕಲಿಲ್ಲ. ಹಾಗೇನದರೂ ಬದುಕಿದ್ದರೆ ಅದು ನಾಟಕೀಯವಾಗಿ ಮಾತ್ರ. ಅಂತಹ ಸಂದರ್ಭವೂ ಒಮ್ಮೆ ಬಂದಿದೆ. ಬಳ್ಳಾರಿಯಲ್ಲಿದ್ದೆನೆಂದು ಹೇಳುವ ಕೆಲಸದಲ್ಲಿಂದ ಅವನನ್ನು ತೆಗೆದು ಹಾಕಿದಾಗ ಹಳ್ಳಿಗೆ ಬಂದು ಉಳುಮೆ ಮಾಡಲು ತೊಡಗುತ್ತಾನೆ. ಗದ್ದೆಗೆ ಭತ್ತವನ್ನು ಭಿತ್ತಿ ತೀರಾ ನಿಷ್ಠಾವಂತನಾಗಿ ದುಡಿಯುತ್ತಾನೆ. ನಾಗವೇಣಿಯ ಸಹವಾಸ ಬಯಸುತ್ತಾನೆ. ಅವಳು ಗರ್ಭವತಿಯಾಗುತ್ತಾಳೆ ಕೂಡ. ಅವಳ ಹೆಸರಲ್ಲಿದ್ದ ಆಸ್ತಿಯನ್ನು ತನ್ನ ಹೆಸರಿಗೆ ಮಾಡಿಸಿಕೊಳ್ಳಲು ಆಸ್ಪತ್ರೆಗೆ ಕರೆದುಕೊಂಡು ಹೋಗುವ ನೆಪದಲ್ಲಿ ಸಬ್‌ರಿಜಿಸ್ಟ್ರಾರ್ ಕಛೇರಿಗೆ ಹೋಗಿ ಆಸ್ತಿ ಹಕ್ಕು ಬದಲಾವಣೆ ಮಾಡಿಕೊಳ್ಳುತ್ತಾನೆ. ಈ ಕಾರ್ಯಕ್ಕಾಗಿ ಅವನು ಗದ್ದೆಯಲ್ಲಿ ಶ್ರಮವಹಿಸಿ ದುಡಿಯುವ ಕೆಲಸಗಾರನ ಸೋಗು ಹಾಕುತ್ತಾನೆ. ತನ್ನ ಜೀವನಾರ್ಥಕ್ಕೆ ಕಲ್ಲು

ಹಾಕಿಕೊಂಡಿದ್ದಷ್ಟೆ ಅಲ್ಲದೆ ಇನ್ನುಳಿದವರ ಬದುಕಿಗೂ ಖಳನಾಯಕನಾಗಿ ನಿಲ್ಲುವ ಲಚ್ಚ ಕಾದಂಬರಿ ಸಾಹಿತ್ಯದಲ್ಲಿಯೇ ವಿಶಿಷ್ಟ ವ್ಯಕ್ತಿಯಾಗಿದ್ದಾನೆ. ರಾಮ ಐತಾಳರು ಹಾಗೂ ಅಜ್ಜ ವಾಸುದೇವಯ್ಯರು ಲಚ್ಚನನ್ನು ಆದರ್ಶ ವ್ಯಕ್ತಿಯನ್ನಾಗಿ ಬೆಳೆಸಬೇಕೆಂಬ ಕನಸು ನುಚ್ಚು ನೂರಾಗುತ್ತದೆ. ದುರಂತ ನಾಯಕನಾಗಿ, ಯಾರೂ ಪ್ರೀತಿಸದ, ಸದಾ ದೂಷಿಸಿಕೊಳ್ಳುವಂತಹ ವ್ಯಕ್ತಿಯಾಗುತ್ತಾನೆ.

ಮೂರನೇ ತಲೆಮಾರಿನ ವ್ಯಕ್ತಿಯಾಗಿ ರಾಮರಾಯ ಕಾದಂಬರಿಯಲ್ಲಿ ಹೊಸ ಹೆಜ್ಜೆಯೊಂದಿಗೆ ಪ್ರವೇಶ ಮಾಡುತ್ತಾನೆ. ನಾಗವೇಣಿಯಲ್ಲಿ ತುಂಬು ಆಶಾವಾದ ಹುಟ್ಟುತ್ತದೆ. ಮೊದಲ ತಲೆಮಾರಿನ ರಾಮರಾಯ ಐತಾಳರ ಹೆಸರನ್ನೇ ಇವನಿಗೂ ಮುಂದುವರಿಸುತ್ತಾರೆ. ಹೆಸರಷ್ಟೆ ಅಲ್ಲ ಅವರ ದುಡಿಮೆಯನ್ನೂ ಸಹ ಕಾದಂಬರಿಯ ಮೂರು ಭಾಗಗಳಲ್ಲಿ ಕೊನೆಯ ಭಾಗ ಮಾತ್ರ ನಿರಾಳತೆಯನ್ನು ತಂದುಕೊಡುತ್ತದೆ. ಮಂಗಳೂರು-ಮದ್ರಾಸ್‌ಗಳಲ್ಲಿ ಅಭ್ಯಾಸಕ್ಕೆ ತೊಡಗಿದ ರಾಮರಾವ್ ಸ್ವತಂತ್ರ ವ್ಯಕ್ತಿಯಾಗಿ ರೂಪುಗೊಳ್ಳುತ್ತಾನೆ. ತನ್ನ ಓದಿಗೆ ಬೇಕಾದ ಹಣವನ್ನು ತಾನೇ ಗಳಿಸಿ ತಾಯಿಗೂ ಕಳುಹಿಸಿಕೊಡುತ್ತಾನೆ. ಮಂಗಳೂರಿನಲ್ಲಿದ್ದಾಗ ನಾಗವೇಣಿಯ ತಂಗಿ ಲಲಿತೆಯ ಸ್ವಾರ್ಥ ಬುದ್ಧಿ ಅವನಿಗೆ ಹಿಡಿಸುವುದಿಲ್ಲ. ಮದ್ರಾಸ್‌ನಲ್ಲಿಯ ಕೃಷ್ಣೆಯ ಮನೆಗೆ ಹೋಗದೆ ಹೊರಗುಳಿಯಲು ಪ್ರಯತ್ನಿಸುತ್ತಾನೆ. ಆಕಸ್ಮಿಕವಾಗಿ ಕೃಷ್ಣೆಯ ಗಂಡ ಮಾಧವನಿಗೆ ಸಿಕ್ಕಿದ್ದರಿಂದ ಅವರ ಮನೆಗೆ ಹೋಗುತ್ತಾನೆ. ಅಲ್ಲಿಯಾದರೂ ತಿಂಗಳಿಗೆ ಹನ್ನೆರಡು ರೂಪಾಯಿ ಊಟದ ಖರ್ಚನ್ನು ಕೊಟ್ಟು ಓದು-ನೌಕರಿ ಮಾಡಲು ಯೋಚಿಸುತ್ತಾನೆ. ಟ್ಯೂಷನ್ ಮಾಡುವುದರ ಮೂಲಕ, ಸಂಗೀತ ಹೇಳುವುದರ ಮೂಲಕ ಸ್ವತಂತ್ರವಾಗಿ ಜೀವಿಸಲು ತೊಡಗುತ್ತಾನೆ. ೧೯೩೦ರ ಸಂದರ್ಭದ ಉಪ್ಪಿನ ಸತ್ಯಾಗ್ರಹದ ಬಿಸಿಯಿಂದ ರಾಮ ಆವೇಶಗೊಂಡು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸುತ್ತಾನೆ. ಇದರಿಂದ ಪೋಲಿಸರ ಕೈಗೆ ಸಿಕ್ಕಿ ಜೈಲಿಗೂ ಹೋಗುತ್ತಾನೆ. ಹಳ್ಳಿಯಲ್ಲಿ ಅವನಿಗಾಗಿ ಚಾತಕ ಪಕ್ಷಿಯಂತಿರುವ ತಾಯಿಯನ್ನು ಒಂದು ಕ್ಷಣ ಮರೆತಂತಾಗುತ್ತದೆ. ಜೈಲಿಂದ ಹೊರಬಂದ ನಂತರ ಚಳುವಳಿಯಲ್ಲಿ ಭಾಗವಹಿಸದೆ ಇರಲು ನಿರ್ಧರಿಸುತ್ತಾನೆ. ಈ ಎಲ್ಲ ಬೆಳವಣಿಗೆಗಳು ಅವನ ಬಾಳಿನಲ್ಲಿ ಹೊಸ ಪಾಠವನ್ನು ಹೇಳಿಕೊಡುತ್ತವೆ. ನಾಗವೇಣಿಯ ತಂಗಿ ಕೃಷ್ಣೆ ರಾಮನು ಊಟದ ಖರ್ಚೆಂದು ಕೊಡುತ್ತಿದ್ದ ಹನ್ನೆರಡು ರೂಪಾಯಿಗಳನ್ನು ನಾಗವೇಣಿಗೆ ಕಳುಹಿಸಿಕೊಡುತ್ತಿದ್ದಳು. ಆ ಹಣವನ್ನು ನಾಗವೇಣಿ ಎಲ್ಲೆಲ್ಲಿಯೋ ಬಚ್ಚಿಟ್ಟು ರಾಮನ ಆಪತ್ಕಾಲಕ್ಕೆ ನೆರವಾಗುವಂತೆ ಕೊಡುತ್ತಿದ್ದಳು. ಇಲ್ಲಿ ಒಬ್ಬರಿಗಿಂತ ಒಬ್ಬರು ಮಿಗಿಲಾಗಿ ಯೋಚಿಸುತ್ತಿದ್ದರು. ರಾಮ ಯಾರ ಹಂಗೂ ಬೇಡವೆಂದು ಹಣ ಕೊಡುತ್ತಿದ್ದ, ತನ್ನ ಅಕ್ಕನ ಮಗನಾದ ಇವನಲ್ಲಿ ಹಣ ಪಡೆಯುವುದು ಸಮನಲ್ಲವೆಂದು ರಾಮನಿಗೆ ತಿಳಿಯದಂತೆ ನಾಗವೇಣಿಗೆ ಕಳುಹಿಸುತ್ತಿದ್ದಳು. ನಾಗವೇಣಿ ಸಹ ಕಷ್ಟ ಕಾಲದಲ್ಲಿ ನೆರವಾಗಲೆಂದು ಸಂಗ್ರಹಿಸಿ, ಮನೆಯಲ್ಲಿ ಅಜ್ಜ ಇಟ್ಟ ಹಣ ಸಿಕ್ಕಿದೆ ಎಂದು ಸುಳ್ಳು ಹೇಳಿ ರಾಮನಿಗೆ ಕೊಡುತ್ತಿದ್ದಳು. ಈ ಮೂರು ಪಾತ್ರಗಳ ಸಂಚರಣೆ ಮಾತ್ರ ತುಂಬಾ ವಿಶಿಷ್ಟವಾಗಿ ಕಾಣುತ್ತದೆ.

ರಾಮ ಕೆಲಸ ಮಾಡುವ ಸಲುವಾಗಿ ಬೆಂಗಳೂರಿನಲ್ಲಿರುವ ಶೀನಮಯ್ಯರ ಹೋಟೆಲ್‌ಗೆ ಹೋಗುತ್ತಾನೆ. ಅಲ್ಲಿ ತನ್ನ ತಂದೆಯ ಅವಸ್ಥೆಯನ್ನು ಕಂಡು ಮರುಗುತ್ತಾನೆ. ಈ ಭೇಟಿಯಿಂದ ಅವನು ಅಸಹ್ಯಪಟ್ಟುಕೊಳ್ಳುತ್ತಾನೆ. ತನ್ನ ತಂದೆ ಇಲ್ಲವೆಂದು ತಿಳಿದರೇನೆ ಒಳ್ಳೆಯದು ಎಂದು ಭಾವಿಸುವ ಮಟ್ಟಿಗೆ ಯೋಚಿಸುತ್ತಾನೆ. ಲಚ್ಚನು ಸ್ವಲ್ಪವೂ ಮನುಷ್ಯತ್ವ ಇಲ್ಲದಂತೆ ವರ್ತಿಸುತ್ತಾನೆ. ಅವನಿಂದ ಅವಮಾನಿತನಾದ ರಾಮ ತನ್ನ ತಾಯಿಯಲ್ಲಿಗೆ ಮರಳಿ ಬಂದು ಭೂಮಿಯಲ್ಲಿಯೇ ಶ್ರಮವಹಿಸಿ ದುಡಿಯಲು ಪ್ರಯತ್ನಿಸುತ್ತಾನೆ. ಶಾಲೆಯಲ್ಲಿ ಶಿಕ್ಷಕನಾಗಿ ಕೆಲಸಕ್ಕೆ ತೊಡಗುತ್ತಾನೆ. ತಾತನ ಆಸ್ತಿಯಲ್ಲಿ ಲಾಭಗಳಿಸಲು ತೊಡಗುತ್ತಾನೆ. ಸರಸ್ವತಿ ಎಂಬ ಕನ್ಯೆಯನ್ನು ಅವನ ಅತ್ತೆ ಸುಬ್ಬತ್ತೆ ಮತ್ತು ಅಜ್ಜ ಶ್ಯಾನುಭೋಗರ ಸಹಾಯದಿಂದ ನೋಡುತ್ತಾನೆ. ಕಾದಂಬರಿಯ ಕೊನೆಗೆ ರಾಮರಾಯ ಐತಾಳನಾಗಿ ರಾಮನೂ, ಅವನ ಹೆಂಡತಿಯಾಗಿ ಸರಸ್ವತಿಯೂ ಆವಿರ್ಭವಿಸುತ್ತಾರೆ. ರಾಮ ಐತಾಳ-ಪಾರೋತಿಯರಿಂದ ಆರಂಭವಾದ ಕಾದಂಬರಿ ಲಚ್ಚ-ನಾಗವೇಣಿ ಜೀವನದಿಂದ ಸಾಗಿ ಮತ್ತೆ ಮೊಮ್ಮಗ ರಾಮ-ಸರಸ್ವತಿಯರಿಂದಲೇ ಅಂತ್ಯಗೊಳ್ಳುತ್ತದೆ. ತಾಯಿಯ ಧೈರ್ಯ, ಸ್ವಾಭಿಮಾನ, ಪ್ರಾಮಾಣಿಕತೆಗಳನ್ನು ಮೈಗೂಡಿಸಿಕೊಂಡ ರಾಮರಾಯ ಬಡತನದಲ್ಲಿಯೇ ಯಶಸ್ಸಿಗೆ ಶ್ರಮಿಸುತ್ತಾನೆ. ಮದ್ರಾಸ್‌ನಲ್ಲಿ ಸ್ವಂತ ಕಾಲ ಮೇಲೆ ನಿಂತು ನೋವಾಳೊಂದಿಗೆ ಚಿತ್ರ ಬರೆಯುವುದನ್ನು ಕಲಿಯುತ್ತಾನೆ. ಸಂಗೀತ ಮತ್ತು ಚಿತ್ರಕಲೆಯೊಂದಿಗೆ ಊರಿಗೆ ಬಂದ ನಂತರ ಅವುಗಳನ್ನು ಮುಂದುವರಿಸಿ ತಾಯಿಯ ಕಷ್ಟವನ್ನು ನಿವಾರಿಸಲು ಯತ್ನಿಸುತ್ತಾನೆ. ಲಚ್ಚನ ಹಾಗೆ ಹವ್ಯಾಸಗಳಿಗೆ ದಾಸನಾಗದೆ, ಮೋಜು ಮಾಡದೆ ಮನುಷ್ಯನಾಗಿ ಬದುಕಲು ಪ್ರಾಮಾಣಿಕ ಪ್ರಯತ್ನ ಮಾಡುತ್ತಾನೆ. "ನಂಬಿದವರಿಗೆ ವಂಚನೆಯನ್ನು ಉಣಿಸದೆ ವಿದ್ಯಾಭ್ಯಾಸ ಮಾಡಿ ಕೃತಜ್ಞತೆಯ ಮೂರ್ತಿಯಾಗಿ ತಾನು ಮನುಷ್ಯನಾಗುತ್ತಾನೆ. ತನ್ನ ತಾಯಿಯಂತೆಯೇ ಅವನು ಭಾವಜೀವಿ. ಅವನು ತಾಯ ಕೈ ಮೇಲೆ ಬೆಳೆದ ಮಗ. ತಾನು ಪರೋಕ್ಷದಲ್ಲಿದ್ದರೂ ತಾಯಿ ಮಾನಸಿಕ ಪೂಜೆಯಲ್ಲಿ ನಿರತನಾಗಿದ್ದ ಏಕಲವ್ಯ; ವೀರಕುವರ"[೩೪] ಕಾದಂಬರಿಯುದ್ದಕ್ಕೂ ಬಡತನವೇ ಒಡೆತನ ವಹಿಸುತ್ತದೆ. ಇದರ ನೆರಳಲ್ಲಿ ನರಳಿ ಅರಳುವ ನಾಗವೇಣಿ-ರಾಮ ಸದಾ ನೆನಪಿನಲ್ಲುಳಿಯುತ್ತಾರೆ. ಬಡತನವೇ ಶಾಪವೆಂದು ಬಗೆದು ನರಳಿ ನಶಿಸುವ ಲಚ್ಚ ಅಳಿದು ಹೋಗುತ್ತಾನೆ. ರಾಮ ಐತಾಳರಿಂದ ವಿತಂಡತನವನ್ನು ಮೆರೆದ ಬಡತನ ರಾಮನ ಕಾಲಕ್ಕೆ ಮರೆಯಾಗುವ ಲಕ್ಷಣವನ್ನು ತೋರುತ್ತದೆ. ರಾಮ ಶಾಲಾ ಶಿಕ್ಷಕ ಕೆಲಸದಿಂದ ಹಾಗೂ ಊರಲ್ಲಿದ್ದ ಗದ್ದೆಯ ಉಳುಮೆಯ ಕೆಲಸ ಮಾಡುವುದರಿಂದ ಶಾಲಾ ಮಕ್ಕಳಲ್ಲಿ ಹಾಗೂ ಸಮಾಜದಲ್ಲಿ ಮಾನವೀಕರಣವನ್ನು ಬಿತ್ತರಿಸುವ ಆಶಾದಾಯಕ ನಾಯಕನಾಗಿ ಪರಿಣಮಿಸುವುದರಲ್ಲಿ ಸಂಶಯವೇ ಇಲ್ಲವೆಂದು ಕಾದಂಬರಿಯ ಅಂತ್ಯದಲ್ಲಿ ವೇದ್ಯವಾಗುತ್ತದೆ.

ಕಾದಂಬರಿಯಲ್ಲಿನ ಸ್ತ್ರೀಯರು ಮಾನವೀಕರಣಕ್ಕೆ ತುಂಬ ನಿಕಟತೆಯಿಂದ ಕೆಲಸಮಾಡುತ್ತಾರೆ. ಸರಸೋತಿ, ಪಾರೋತಿ ಇಬ್ಬರು ಸಮವಯಸ್ಕರು. ಒಂದೇ ಸಂಸ್ಕೃತಿಯ ವಕ್ತಾರರು. ಸರಸೋತಿಗೆ

ವೈಧವ್ಯ ಅಂಟಿಕೊಂಡಿದೆ. ಪಾರೋತಿಗೆ ಮುತ್ತೈದೆತನವಿದೆ. ಅಣ್ಣನ ಬಗ್ಗೆ ಕಾಳಜಿ ಇಟ್ಟುಕೊಂಡು ದುಡಿಯುತ್ತಿದ್ದ ಸರಸೋತಿ ತುಂಬ ನಿಷ್ಠುರ ವ್ಯಕ್ತಿತ್ವದವಳು. ರಾಮ ಐತಾಳರು ಇನ್ನೊಂದು ಮದುವೆಯಾಗಲು ನಿರ್ಧರಿಸಿ ಇವಳಿಗೆ ಹೇಳದೇ ಇದ್ದಾಗ ಸಿಟ್ಟುಗೊಂಡು ಮಂದರ್ತಿಗೆ ಹೋಗಿದ್ದಳು. ಸರಸೋತಿ-ಪಾರೋತಿಯರು ಒಬ್ಬರನ್ನೊಬ್ಬರು ಸಂಪೂರ್ಣ ಅರ್ಥಮಾಡಿಕೊಂಡು ಬದುಕಿದರು-ಬಾಳಿದರು. ಐತಾಳರ ಎರಡನೇ ಹೆಂಡತಿಯಾಗಿ ಬಂದ ಸತ್ಯಭಾಮೆಯನ್ನು ಸವತಿಯಂತೆ, ಸೇವಕಿಯಂತೆ ಕಾಣದೆ ಅವಳೂ ಒಬ್ಬ ಹೆಣ್ಣು ಎಂದೇ ನಡೆಸಿಕೊಂಡರು. ಸರಸೋತಿ, ಪಾರೋತಿ, ಸತ್ಯಭಾಮೆಯರು ಪುರುಷನ ಸಮನಾದ ಕೆಲಸವನ್ನು ಮಾಡುತ್ತಾರೆ. ಸತ್ಯಭಾಮೆ ಮಗ ಲಚ್ಚನಿಂದ ಮನಸ್ಸನ್ನು ತೀರಾ ಕುಗ್ಗಿಸಿಕೊಳ್ಳುತ್ತಾಳೆ. ಅವನ ಚಿಂತೆಯೇ ಅವಳಿಗೆ ಅವಸಾನವಾಗುತ್ತದೆ. ಲಚ್ಚನ ಹೆಂಡತಿಯಾಗಿ ಬಂದ ನಾಗವೇಣಿ ಮಾತ್ರ ಜಗತ್ತಿನ ಯಾವುದೇ ಹೆಣ್ಣು ಅನುಭವಿಸದಂತಹ ಕಷ್ಟಗಳನ್ನು ಅನುಭವಿಸುತ್ತಾಳೆ. ಗಂಡನಿಲ್ಲದ ವೈಧವ್ಯ ಅನುಭವಿಸುವ ಸರಸೋತಿ ಒಂದೆಡೆಯಾದರೆ, ಗಂಡನಿದ್ದೂ ವೈಧವ್ಯ ಅನುಭವಿಸುವಂತಹ ಸ್ಥಿತಿ ನಾಗವೇಣಿಯದಾಗುತ್ತದೆ. ಕಷ್ಟ-ನಷ್ಟಗಳ ಬೇಗುದಿಯಲ್ಲಿ ಬೆಂದ ನಾಗವೇಣಿ ರಾಮನಂತಹ ಮಗುವಿಗೆ ಜನ್ಮವೀಯುತ್ತಾಳೆ. ಸರಸೋತಿ, ನಾಗವೇಣಿಯರಂತಹ ಸುಸಂಸ್ಕೃತರ ನೆರಳಿನಲ್ಲಿ ಬೆಳೆದ ರಾಮ ಕುಲಕ್ಕೆ ಹೆಸರು ತರುವ ನಿಟ್ಟಿನಲ್ಲಿ ಸಾಗುತ್ತಾನೆ. ನಾಗವೇಣಿಗೆ ಅಕ್ಷರ ಸಂಸ್ಕೃತಿಯ ಅರಿವು ಇರುವುದರಿಂದ ರಾಮನ ಬಗ್ಗೆ ಆಸಕ್ತಿವಹಿಸುತ್ತಾಳೆ. ಗಂಡನ ಚಟಗಳ, ರೋಗಗಳ ಅರಿವು ಇದ್ದಾಗ್ಯೂ ಅವನನ್ನು ನಂಬುತ್ತಾಳೆ. ಆದರೆ ಲಚ್ಚನೇ ಮೋಸ ಮಾಡುತ್ತಾನೆ. "ನಾಗವೇಣಿಯಂತಹ ಪಾತ್ರ ಬದುಕಿನಲ್ಲೂ ಸಾಹಿತ್ಯದಲ್ಲೂ ದೊರೆಯುವುದು ವಿರಳ. ವಾಸ್ತವಿಕ ಲೋಕದಲ್ಲಿ ಶ್ರೀಕಾರಂತರು ಕಂಡಿರಬಹುದಾದ ಒಂದು ವ್ಯಕ್ತಿ ನಾಗವೇಣಿಯ ಪಾತ್ರ ರಚನೆಯಲ್ಲಿ ಆದರ್ಶೀಕೃತವಾಗಿ ಹೃತ್ಸೌಂದರ್ಯದಿಂದ ಬೆಳ್ಳಿಯಂತೆ ಬೆಳಗುತ್ತದೆ"[೩೫]

ರಾಮನ ಅತ್ತೆ, ಲಚ್ಚನ ತಂಗಿ ಸುಬ್ಬಮ್ಮ ಸಹ ಒಳ್ಳೆಯ ಮನಸ್ಸಿನವಳೇ ಆಗಿದ್ದಾಳೆ. ರಾಮನ ಆಶೋತ್ತರಗಳಿಗೆ ಸ್ಪಂದಿಸುವ ಸುಬ್ಬತ್ತೆ ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿಯುತ್ತಾಳೆ. ನಾಗವೇಣಿಗೊದಗಿದ ಕಷ್ಟದ ಸಂದರ್ಭದಲ್ಲಿ ಅವಳಿಗೆ ಕೈಲಾದ ಸಹಾಯ ಮಾಡಿದಳು. ಐರೋಡಿ ನಾರಾಯಣಯ್ಯ, ವಾಸುದೇವಯ್ಯ, ಕೃಷ್ಣ, ಮಾಧವ, ನೋವಾ ಮೊದಲಾದವರು ರಾಮನಿಗೆ ನೆರವಾಗಿ ತಮ್ಮ ಮನುಷ್ಯತ್ವವನ್ನು ಮೆರೆದಿದ್ದಾರೆ. ಈ ವರ್ಗಕ್ಕೆ ಪ್ರತಿಯಾಗಿ ಶೀನಮಯ್ಯ, ಒರಟ, ನರಸಿಂಹ, ಜಲಜಾ, ಲಲಿತೆ ಮೊದಲಾದವರು ಲಚ್ಚನಲ್ಲಿ ಅಮಾನುಷತೆಯನ್ನು ಬೆಳೆಸುತ್ತಾರೆ.

ಮಾನವೀಕರಣವನ್ನು ಸ್ಪಷ್ಟವಾಗಿ ನಿದರ್ಶಿಸುವ ಪಾತ್ರ ಸೂರ. ಐತಾಳರ ಗದ್ದೆಯ ಕೆಲಸ ಮಾಡುತ್ತಿದ್ದ ಸೂರನಿಗೆ ನಾಗವೇಣಿ ಗದ್ದೆಕೆಲಸದ ಕೊಚ್ಚನ್ನು ಕೊಡಲು ೨-೩ ಬಾರಿ ಅವನ ಮನೆಗೆ ಹೋಗಿ ಹೇಳಿದರೂ ಬರಲಿಲ್ಲ. ನಾಗವೇಣಿ ಸೂರನ ಋಣದಲ್ಲಿರಬೇಕಾಗುತ್ತದೆ ಎಂಬ ಆತಂಕ.

ಆದರೆ ಸೂರನಿಗೆ "ಹಿಂದೆ ಆ ಅಮ್ಮ ಉಪ್ಪಿನಕಾಯಿ, ಮತ್ತೊಂದು ಮಗದೊಂದನ್ನು ಕೊಟ್ಟು ನಮ್ಮನ್ನು ಸಾಕಿದರು. ಐತಾಳರು ಇರುವಾಗ, ಗೇಣಿ ಅಕ್ಕಿ ಆಗಲಿಲ್ಲ ಎಂದ ವರ್ಷ ಊರವರು ಅವರನ್ನು ಕಸಿವಿಸಿ ಜನ ಅಂದರೂ, ನನ್ನ ಮಟ್ಟಿಗೆ ಹೋಗಲಿ ಸೂರ, ದೇವರು ನಡೆಯಿಸಿದರೆ ಬರುವ ವರ್ಷ ಕೊಡು-ಎನ್ನುತ್ತಿದ್ದರು. ಅಂಥವರ ಮನೆಗೆ ಬಡತನ ಬಂದಾಗ ಅವರ ಕೊಚ್ಚು ಕೊಟ್ಟರೂ, ಈ ವರ್ಷ ಬೇಡ ನಮಗೆ ಅವರ ಕೊಚ್ಚು' ಎಂದಿದ್ದ.[೩೬] ಆದರೆ ನಾಗವೇಣಿ ಅಕ್ಕಿಮನೆಯಲ್ಲಿ ಇಲ್ಲದಾಗ ಬಂದು ಕೇಳಿದರೆ ಎಲ್ಲಿಂದ ಕೊಡಬೇಕೆಂಬ ಚಿಂತೆ ಕಾಡುತ್ತಿತ್ತು. ಸೂರನು ತನ್ನ ಮಾತನ್ನು ನಾಗವೇಣಿಗೆ ಹೇಳದೆ ಕೊಚ್ಚನ್ನು ಮರೆಸಿದ್ದನು. ನ್ಯಾಯಯುತವಾಗಿ ಬರಬೇಕಾದ ಕೊಚ್ಚನ್ನು ಕೊಡುತ್ತೇನೆಂದರೂ ಪಡೆಯಲಾರದ ಸಂಬಂಧಿಕನಲ್ಲದ ಸೂರ ಒಂದೆಡೆಯಾದರೆ, ದುಡಿಯಲಾರದೆ ಅನ್ಯಾಯವಾಗಿ ಇದ್ದ ಹಣ-ಬಳೆ-ಆಸ್ತಿಯನ್ನು ಕಸಿಯುವ ಸಪ್ತಪದಿ ತುಳಿದ ಗಂಡ ಲಚ್ಚ ಇನ್ನೊಂದೆಡೆ. ಸೂರ ಮಾನವೀಯತೆ ಮೆರೆದರೆ, ಲಚ್ಚ ಅಮಾನವೀಯತೆ ಮೆರೆಯುತ್ತಾನೆ.

ಕಾರಂತರು 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಮಾನವೀಕರಣದ ನಿರ್ವಚನವನ್ನು ಆಂಶಿಕವಾಗಿ ಅಲ್ಲಲ್ಲಿ ಹೇಳದೆ, ಇಡೀ ಕೃತಿಯನ್ನೇ ಮಾನವೀಕರಣಕ್ಕೆ ಅರ್ಪಿಸಿದ್ದಾರೆ. ಪಾರೋತಿ-ರಾಮ ಐತಾಳರ ಜೀವನ ಕ್ರಮದಿಂದಲೇ ಆರಂಭವಾಗುವ ಮಾನವೀಕರಣ ಸರಸೋತಿ, ಸತ್ಯಭಾಮೆ, ಸುಬ್ಬಮ್ಮ, ನಾಗವೇಣಿ, ಸೂರ, ವಾಸುದೇವಯ್ಯ, ನಾರಾಯಣಯ್ಯ, ಕೃಷ್ಣವೇಣಿ, ಮಾಧವ, ರಾಮನ ಮೂಲಕ ಹಾದು ಕೃತಿಯುದ್ದಕ್ಕೂ ಹೆಪ್ಪುಗಟ್ಟಿ ನಿಲ್ಲುತ್ತದೆ. ಪಾರೋತಿ-ರಾಮ ಐತಾಳರ ಮದುವೆಯಿಂದ ಆರಂಭಗೊಂಡ ಕೃತಿ ಮತ್ತೆ ಮೊಮ್ಮಗ ರಾಮು-ಸರಸ್ವತಿಯರ ಮದುವೆ ನಿಶ್ಚಯಕ್ಕೆ ಬಂದು ನಿಲ್ಲುತ್ತದೆ. ಇದೊಂದು ವರ್ತುಲವಾಗಿ ಸಾಗುವ, ಒಂದೇ ಮನೆತನದ ತಲೆಮಾರುಗಳ ಆವರ್ತನ ಕ್ರಮವನ್ನು ನಿರೂಪಿಸುವ ಕಾದಂಬರಿಯಾಗಿದೆ. ಆಧುನಿಕ ಪೂರ್ವ ಚಿತ್ರಣ ಅಂದರೆ ಆಂಗ್ಲ ಮಾಧ್ಯಮ ನಮ್ಮಲ್ಲಿಗೆ ಕಾಲಿರಿಸುವ ಮೊದಲು ಇದ್ದ ಪರಿಸ್ಥಿತಿ ಹಾಗೂ ನಂತರದ ಪರಿಸ್ಥಿತಿ ಎರಡನ್ನೂ ಅರುಹುವ ಕಾದಂಬರಿ ಹೊಸ ಜೀವನದ ಹೊಸ ನೀತಿಯನ್ನು ಪರಿಚಯಿಸುತ್ತದೆ.

'ಬೆಟ್ಟದ ಜೀವ'ಕಾದಂಬರಿಯನ್ನು 'ಪ್ರಾದೇಶಿಕ ಚಿತ್ರ' ಎಂದು ಇದುವರೆವಿಗೆ ಕಾರಂತರೂ ಸೇರಿದಂತೆ ಅನೇಕ ವಿಮರ್ಶಕರು ಗುರುತಿಸಿದ್ದಾರೆ. ಬರೀ ಪ್ರಾದೇಶಿಕ ಕಾದಂಬರಿ ಎಂದರೆ ತೀರಾ Simplify ಮಾಡಿದಂತಾಗುತ್ತದೆ. ಪ್ರಾದೇಶಿಕ ಚಿತ್ರಣವನ್ನೂ ಮೀರಿ ಮಾನವೀಕರಣದ ಆಗುಗಳು ಕಾದಂಬರಿಯ ಆಂತರ್ಯದಲ್ಲಿ ಅಡಗಿವೆ. ಇದುವರೆಗಿನ ಅವರ ಕಾದಂಬರಿಗಳಲ್ಲಿ ನಗರ-ಗ್ರಾಮಗಳ ನಡುವೆ ಪರಿಕ್ರಮಣಗೊಳ್ಳುತ್ತಿದ್ದ ಮಾನವೀಕರಣ 'ಬೆಟ್ಟದ ಜೀವ'ದಲ್ಲಿ ಕಗ್ಗಾಡನ್ನು ಪ್ರವೇಶಿಸಿದೆ. "ಘಟ್ಟದ ಬಳಿಯ ಕಗ್ಗಾಡಿನ ಜೀವನ ಚಿತ್ರವನ್ನು ಕೊಡಲು ಇಲ್ಲಿ ಯತ್ನಿಸಿದ್ದೇನೆ. ನಾಡಿನ ಕಾಡುಗಳೊಡನೆ ಸೆಣಸಾಡಿ ಜೀವನದ ನೆಲೆಯನ್ನು ನಿಲ್ಲಿಸಿದ ಹಳೆಯ ವೀರರ ಕೆಚ್ಚನ್ನೇ ಇಲ್ಲಿ ಇಂದಿನ

ಕಥಾನಾಯಕ ನಾಯಿಕೆಯರಲ್ಲಿ ನೀವು ಕಾಣಬಹುದು''[೩೭] ಎನ್ನುವಲ್ಲಿ ನಾಡು-ಕಾಡುಗಳ ನಡುವೆ ಸಂಚರಿಸುವ, ಜೀವನದ ನೆಲೆಯನ್ನು ಪರಿಶೋಧಿಸುವ ಪಾತ್ರಗಳ ಮಾನವೀಯ ಕೆಲಸ ಅಭಿವ್ಯಕ್ತಗೊಳ್ಳುತ್ತದೆ. ''ಬೆಟ್ಟದ ಜೀವದ ವಸ್ತು ಮಾನವನಷ್ಟೇ ಹಳೆಯದು, ಪ್ರಕೃತಿ ಮನುಷ್ಯನ ಸಜೀವ ಸಂಬಂಧ, ಮನುಷ್ಯ-ಮನುಷ್ಯನ ಸಂಬಂಧ. ಪ್ರಕೃತಿ ಹಿನ್ನೆಲೆ, ಮಾನವ ಜೀವನ ಮುನ್ನೆಲೆ ಎಂದು ಇವೆರಡನ್ನೂ ಪ್ರತ್ಯೇಕವಾಗಿ ನೋಡುವುದೂ ಈ ಕಾದಂಬರಿಯ ಮಟ್ಟಿಗೆ ತಪ್ಪಾದೀತು''[೩೮] ಅಪ್ಪಟವಾಗಿ ಮನುಷ್ಯ ಸಂಬಂಧಗಳ ನೆಲೆಗೆ ಸಾಗುವಾಗ ಮಾನವೀಯ ಕ್ರಿಯೆ ಕಾದಂಬರಿಯಲ್ಲಿ ಗೋಪಾಲಯ್ಯ- ಶಂಕರಿ, ಶಿವರಾಮಯ್ಯ, ನಾರಾಯಣ-ಲಕ್ಷ್ಮಿ, ದೇರಣ್ಣ, ಬಟ್ಯ-ಮೊದಲಾದವರ ಮೂಲಕ ಗೋಚರವಾಗುತ್ತದೆ. ಶಿವರಾಮಯ್ಯ ಕಳೆದ ಹಸುವನ್ನು ಹುಡುಕುತ್ತಾ ದಾರಿತಪ್ಪಿ ದಾರಿಹೋಕ ಒಕ್ಕಲಿಗನ ಮೂಲಕ ಬ್ರಾಹ್ಮಣರಾದ ಗೋಪಾಲಯ್ಯನ ಮನೆಗೆ ಸೇರಿದನು. ಶಿವರಾಮಯ್ಯನನ್ನು ಗೋಪಾಲಯ್ಯ ಮನೆಗೆ ಸೇರಿಸಿಕೊಂಡದ್ದು ಬ್ರಾಹ್ಮಣನೆಂಬುದಕ್ಕಾಗಿ ಅಲ್ಲ ಕಾಡಿನಲ್ಲಿ ಆಶ್ರಯವಿಲ್ಲದ ಮಾನವರಿಗೆ ತಾವೇ ದಾತರು ಎಂದು. ಚಾವಡಿ ಬಳಿ ಹೋಗುತ್ತಿದ್ದಂತೆಯೇ ಪರಿಚಯವಿಲ್ಲದ ''ಪರದೇಶಿಯಾದ ನನ್ನನ್ನು ನಮಸ್ಕರಿಸಿ 'ಬನ್ನಿ'ಎಂದು ಮನೆಯ ಚಾವಡಿಗೆ ಕರೆದೊಯ್ದರು''. ಯಾರು? ಬಂದ ಕಾರಣವೇನು? ಯಾವ ಊರಾಯಿತು? ಇತ್ಯಾದಿ ಪುರಾಣಗಳ ಗೊಡವೆಗೆ ಹೋಗದೆ, ಎಷ್ಟೋ ದಿನದ ಸಂಬಂಧಿಕರಂತೆ ನಡೆದುಕೊಳ್ಳುತ್ತಾರೆ.[೩೯] ಅಷ್ಟೇ ಅಲ್ಲದೆ ಅವಸರದಿಂದ ಚಾಪೆ ಹಾಸಿ, ತೊಳೆದುಕೊಳ್ಳಲು ನೀರು ಕೊಟ್ಟು 'ತೃಷೆಗೆ ಏನು ಮಾಡಿಸಲಿ?' ಎಂದು ಕೇಳುವುದು ತುಂಬಾ ಪರಿಚಿತರಿಗಷ್ಟೆ. ಅಪರಿಚಿತ ಶಿವರಾಮ ಒಂದೇ ಕ್ಷಣದಲ್ಲಿ ಪರಿಚಿತನಾದ ಮನೆಯ ಸದಸ್ಯನಾದ.

''ಬದುಕು ಏನೆಲ್ಲ ನಮಗೆ ಕೊಟ್ಟಿರಲಾರದು, ಏನೆಲ್ಲ ನಮಗೆ ಕೊಡಲಾರದು? ಅನುಭವಿಸುವ ನಮ್ಮ ಶಕ್ತಿಗಳು ಎಷ್ಟು ಸೂಕ್ಷ್ಮವಾಗುತ್ತವೋ, ಪರಿಶೀಲನೆಯ ನಮ್ಮ ಶಕ್ತಿಗಳು ಎಷ್ಟೆಷ್ಟು ಮೊನಚಾಗುತ್ತವೋ, ಇತರರ ಜೀವನದಲ್ಲಿ ನಮ್ಮ ಹೃದಯ ಎಷ್ಟೆಷ್ಟು ವಿಸ್ತೃತವಾಗಿ ಬೆಳೆಯುತ್ತದೋ ಅಷ್ಟಷ್ಟು ಹಿರಿದಾದ ಸುಗ್ಗಿಯು ನಮ್ಮ ಬದುಕಿನ ಬೆಳಗೆ ದೊರೆತೀತು''[೪೦] ಎನ್ನುವ ಹೇಳಿಕೆಯನ್ನು 'ಬೆಟ್ಟದ ಜೀವ' ಕಾದಂಬರಿಗೆ ಅಳವಡಿಸಿ ನೋಡಿದರೆ ಸ್ಪಷ್ಟ ಅರ್ಥ ಹೊರಹೊಮ್ಮುತ್ತದೆ. ಗೋಪಾಲಯ್ಯನ ಹೃದಯ ವೈಶಾಲ್ಯ ಹಾಗೂ ಆತನ ಬದುಕು-ಶಕ್ತಿ-ಅನುಭವಗಳ ಘನೀಕರಣ ಕಾದಂಬರಿಯಲ್ಲಿದೆ. ಆಗಂತುಕನಾದ ಶಿವರಾಮಯ್ಯ ಅನುಭವಿಸುವ ಮಾನವೀ ಸಂಬಂಧ-ಆತಿಥ್ಯ ಮತ್ತು ಕಳಚಿಕೊಳ್ಳಲು ನಡೆಸುವ ಪ್ರಯತ್ನಗಳಿಂದ ಕಾದಂಬರಿಯ ಇನ್ನೊಂದು ಮುಖ ಪರಿಚಯವಾಗುತ್ತದೆ. ಕೊಡು-ಕೊಳ್ಳುವ ಎರಡು ನಿಟ್ಟುಗಳು ಈ ಒಂದೇ ಕಾದಂಬರಿಯಲ್ಲಿ ಪ್ರಕಟಗೊಳ್ಳುತ್ತವೆ. ಒಮ್ಮೆ ಕೊಡುವುದರ ಪ್ರತೀಕವಾಗಿ ಗೋಪಾಲಯ್ಯನೂ ಕೊಳ್ಳುವುದರ ಪ್ರತೀಕವಾಗಿ

ಶಿವರಾಮಯ್ಯನೂ ನಿಂತರೆ, ಇನ್ನೊಮ್ಮೆ ಕೊಡುವುದರ ಪ್ರತಿನಿಧಿಯಾಗಿ ಶಿವರಾಮಯ್ಯನೂ ಕೊಳ್ಳುವುದರ ಪ್ರತಿನಿಧಿಗಳಾಗಿ ಗೋಪಾಲಯ್ಯ-ಶಂಕರಿ ನಿಲ್ಲುತ್ತಾರೆ. ಎರಡೂ ಕಡೆ ಮಾನವೀಕರಣವನ್ನು ಪ್ರವಹಿಸುವ ವಾಹಕಗಳಾಗಿ ಕಾದಂಬರಿಯುದ್ದಕ್ಕೂ ಸಂಚರಿಸುತ್ತಾರೆ. ಇವರಿಗೆ ನಾರಾಯಣಯ್ಯ ಅವರ ಹೆಂಡತಿ, ದೇರಣ್ಣ-ಮೊದಲಾದವರು ಸಹಾಯಕರಾಗುತ್ತಾರೆ.

ತನ್ನೊಡನೆ ಯಾವುದೇ ರಕ್ತಸಂಬಂಧವಿಲ್ಲದ ಅನಾಥನಂತಿದ್ದ ನಾರಾಯಣನನ್ನು "ಎಲ್ಲೋ ಗತಿ ಗೋತ್ರವಿಲ್ಲದೆ ಅಲೆಯುತ್ತಿದ್ದ ಮೊದಲಿಗೆ, ನಾನೇ ಕರೆತಂದು, ತೋಟ ನೋಡಿಕೊಂಡಿರು ಎಂದು ಬಿಟ್ಟೆ. ನನಗೆ ಪ್ರಾಯ ಸಂದಿರುವಾಗ, ನಮ್ಮವರು ಎಂಬುವರು ಒಬ್ಬರಾದರೂ ಹತ್ತಿರವಿರಲಿ"[೪೧] ಎಂದು ಪೋಷಿಸಿ ಮಗನಂತೆ ನೋಡಿಕೊಳ್ಳುತ್ತಾರೆ. ನಾರಾಯಣ ಕೂಡ ತನ್ನ ವರ್ತನೆಯನ್ನು ಎಂದೂ ಮೀರುವುದಿಲ್ಲ. 'ಅಳಿದ ಮೇಲೆ'ಯ ದಾದಾ ಕೂಡ ಅನಾಥನಾಗಿ ಸಿಕ್ಕವನು. ಆದರೆ ಅವನು ಯಶವಂತರ ಸದಿಚ್ಛೆಯಂತೆ ವರ್ತಿಸಿರುವುದು ಕಡಿಮೆ. ಯಶವಂತರಾಯರು-ಗೋಪಾಲಯ್ಯ ಇಬ್ಬರೂ ಈ ವಿಷಯದಲ್ಲಿ ಒಂದೇ ಪಾತಳಿಯ ಮೇಲೆ ನಿಲ್ಲುತ್ತಾರೆ. ಆದರೆ ದಾದಾ-ನಾರಾಯಣ ಒಂದೇ ಪಾತಳಿಯಿಂದ ಬಂದವರಾಗಿದ್ದರೂ ವರ್ತನೆಗಳು ಭಿನ್ನವಾಗಿವೆ.

ಗೋಪಾಲಯ್ಯ-ಶಂಕರಮ್ಮರ ಮಗ ಶಂಭು. ಈತ ಊರುಬಿಟ್ಟು ಕೆಲ ವರ್ಷಗಳೇ ಸಂದಿವೆ. ಮಗ ಈಗ ಬಂದಾನು, ಇಂದು ಬಂದಾನು, ನಾಳೆ ಬಂದಾನು ಎಂದೇ ಕಾಯುತ್ತಿದ್ದಾರೆ. ಶಂಕರಮ್ಮನಂತೂ ಅಪರೂಪಕ್ಕೆ ಬಂದ ಅಪರಿಚಿತರಲ್ಲೂ ತನ್ನ ಮಗನನ್ನು ನಿರೀಕ್ಷಿಸುತ್ತಾಳೆ. ಹಾಗೆಂದು ಶಿವರಾಮಯ್ಯನನ್ನು ನೋಡಿ "ನಮ್ಮ ಶಂಭುವಿಗೂ ಇವರದ್ದೇ ಪ್ರಾಯ, ಇದೇ ಬಣ್ಣ, ಇದೇ ರೂಪ-ಅಲ್ಲವೇ?"[೪೨] ಎಂದು ಉಸುರುತ್ತಾಳೆ. ಮಗನಿಲ್ಲದ್ದಕ್ಕೂ, ಮಗನಂತಿರುವುದಕ್ಕೂ, ಅಪರೂಪದ ಅತಿಥಿಯಾದ್ದರಿಂದಲೂ "ನಿಮಗೆ ಕಷ್ಟವಾದರೂ ಚಿಂತೆಯಿಲ್ಲ; ಎರಡು ದಿವಸ ಇದ್ದು ಹೋಗಬೇಕು"[೪೩] ಎಂದು ಹೇಳುತ್ತಾಳೆ. "ಏನೋ ಮನೆಗೆ ನಾಲ್ಕು ಮಂದಿ ಬಂದು ಇದ್ದರೆ, ನಾವೀ ಕೊಂಪೆಯಲ್ಲಿ ಕೊಗಳು ಕಟ್ಟಿಕೊಂಡು ಕುಳಿತುದೊಂದು ಸಾರ್ಥಕ. ನಮ್ಮ ಹೆತ್ತ ಮಗುವೇ ಮನೆಗೆ ಬಾರದಿರುವಾಗ, ತಮ್ಮಂಥವರು ಯಾರಾದರೂ ಬಂದರೆ, ದೇವರು ಕಳುಹಿಸಿದ್ದು ಎಂದು ಅನಿಸುತ್ತದೆ"[೪೪] ಎನ್ನುವಲ್ಲಿ ಕಾಡಿನಲ್ಲಿರುವ ಜೀವ ಮನುಷ್ಯರ ಸಂಗವನ್ನು ಬಯಸುತ್ತದೆ. ತಮ್ಮ ಮನೆಯಲ್ಲಿ ಆತಿಥ್ಯ ಸ್ವೀಕರಿಸಿದರೆ ಆ ಮನಸ್ಸಿಗೆ ಆನಂದವಾಗುತ್ತದೆ. ಮಗ ಮನೆಗೆ ಬಾರದಿದ್ದರೇನಾಯಿತು, ಮಗನಂತಿರುವ ಶಿವರಾಮಯ್ಯನನ್ನು ದೇವರೇ ಕಳುಹಿಸಿದನೆಂದು ನಂಬುತ್ತಾಳೆ. "ಮಗನಿಂದ ದೂರಳಾದ ಆ ತಾಯಿ, ಮಾನವ ಪ್ರೇಮಕ್ಕಾಗಿ ಎಷ್ಟು ಹಸಿದಿದ್ದಾಳೆಯೋ ಎನಿಸಿತು"[೪೫] ಶಿವರಾಮಯ್ಯನಿಗೆ. ಕಾರಂತರು ಶಂಕರಮ್ಮನಲ್ಲಿ ಕೊರತೆಯಾಗಿರುವ ಮಾನವೀಯ ಪ್ರೀತಿಯನ್ನು ಹಾಗೂ ಆ ಕೊರತೆ ತುಂಬಿಸಲು ಬಂದಿರುವ ಶಿವರಾಮನನ್ನು ಒಂದು ಚೌಕಟ್ಟಿನಲ್ಲಿಡಲು ಪ್ರಯತ್ನಿಸಿದ್ದಾರೆ.

ಕಾರಂತರು ಗೋಪಾಲಯ್ಯ ಮತ್ತು ಶಂಕರಮ್ಮನ ಮದುವೆಯನ್ನು ಮಾಡುವುದು ಶುದ್ಧ ಮಾನವೀಯ ನೆಲೆಯಲ್ಲಿ. ಬಡತನದ ಕುಟುಂಬದಲ್ಲಿ ಹಿರಿಯ ಹೆಣ್ಣಾಗಿ-ಕಿರಿಯವರಿಗೆಲ್ಲ ಅಡ್ಡಿಯಾಗಿದ್ದ ಶಂಕರಿಯನ್ನು ಅನಿಮಿತ್ತವಾಗಿ ಹೋದ ಗೋಪಾಲಯ್ಯ ನೋಡುತ್ತಾನೆ. ತಾನೇ ಮದುವೆಯಾಗುತ್ತೇನೆಂದು ಹೇಳುವುದು ಸಹ್ಯವೂ ಅಲ್ಲ ಸಭ್ಯವೂ ಅಲ್ಲ. ಅಂತಹ ಸಂದರ್ಭದಲ್ಲಿ ತಮ್ಮ ಊರಿನಲ್ಲಿ ಹುಡುಗನಿದ್ದಾನೆಂದು ಹೇಳಿ ನೋಡಲು ಬರುವುದಕ್ಕೆ ತಿಳಿಸುತ್ತಾನೆ. ದಿಗ್ಭ್ರಾಂತರಾದ ಹುಡುಗಿ ತಂದೆ ಪರಮೇಶ್ವರರು ಕನ್ಯಾ ಕೊಡಲು ಒಪ್ಪುತ್ತಾರೆ. ಇದು ಸಾಹಿತ್ಯ ಹಾಗೂ ವಾಸ್ತವದಲ್ಲಿ ನಡೆಯಬಹುದಾದ ವಿರಳ ಘಟನೆ. ಇಂತಹ ಘಟನೆಯನ್ನು ಸೂಕ್ಷ್ಮವಾಗಿ ಮಾನವೀಕರಣದ ತೆಕ್ಕೆಗೆ ತಳ್ಳುವಲ್ಲಿ ಕಾರಂತರು ಯಶಸ್ವಿಯಾಗುತ್ತಾರೆ. ಗೋಪಾಲಯ್ಯ-ಶಂಕರಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಗಳು ಮತ್ತು ಮಗ ಇಬ್ಬರೂ ಇಲ್ಲದೆ, ಬೇರೆಯವರಲ್ಲಿ ಅವರನ್ನು ಕಾಣುವ ತತ್ವ ಬಹುಮುಖ್ಯವಾದುದು. ಮಗಳು ಮದುವೆ ಮಾಡಿಕೊಟ್ಟ ಎರಡು ವರ್ಷದ ನಂತರ ಇಹಲೋಕ ತ್ಯಜಿಸುತ್ತಾಳೆ. ಮಗ ಶಂಭು ನಾರಾಯಣನ ಹೆಂಡತಿಯನ್ನು ಬಯಸಿದ. ಆದರೆ ಅವಳು ತಿರಸ್ಕರಿಸಿದ್ದರಿಂದ ತಂದೆಗೆ ಗೊತ್ತಾದೀತೆಂಬ ಭಯದಿಂದ ಊರನ್ನೇ ಬಿಟ್ಟು ಹೋಗಿರುತ್ತಾನೆ. ಹೀಗೆ ಮಕ್ಕಳಿದ್ದೂ ಇಲ್ಲದಂತಹ ದುಃಖ ಮೌನ ಅನುಭವಿಸುತ್ತಿರುವ ದಂಪತಿಗಳು. ಶಿವರಾಮ, ನಾರಾಯಣರಲ್ಲಿ ಮಗನನ್ನು ಗುರುತಿಸಿಕೊಳ್ಳುತ್ತಿದ್ದಾರೆ. ಅಂತೆಯೇ ಶಿವರಾಮನಿಗೆ ''ಇನ್ನೊಂದು ಜೀವಕ್ಕೆ ನನ್ನಿಂದ ಸ್ವಲ್ಪವಾದರೂ ತೃಪ್ತಿ ಬಂತಲ್ಲ ಎಂಬ ಹಿಗ್ಗುಂಟಾಯಿತು. ಆದರೆ ಆ ಬಗೆಯಲ್ಲಿ ಎಷ್ಟು ದಿನಗಳ ಕಾಲ ಅಲ್ಲಿ ಇರಬಹುದು? ಅವರ ಕಳೆದು ಹೋದ ಮಗನ ಸ್ಥಾನ ವಹಿಸಬಹುದು? ಮಾನವನ ಸ್ನೇಹದ ಅವರ ಬಯಕೆಗೆ ಒಂದು ಗಳಿಗೆಯಾದರೂ ಅವಕಾಶ ಕೊಟ್ಟೆನಲ್ಲ''[೪೬] ಎಂಬ ಭಾವನೆ. ನಾರಾಯಣ ಕೂಡ ಗೋಪಾಲಯ್ಯನಿಗೆ ಮಾವನೆಂದೇ ಸಂಬೋಧಿಸುತ್ತಾನೆ. ಹೆಣ್ಣು ಕೊಟ್ಟ ಮಾವನಲ್ಲ, ಆದರೆ ಹೆಣ್ಣು ಹುಡುಕಿ ಲಗ್ನ ಮಾಡಿ ಬಾಳಲು ಮನೆ-ತೋಟ ಮಾಡಿಕೊಟ್ಟ ಮಾನವಂತ ಮಾವ. ''ನನಗೆ ಅವರು ತಂದೆಗೆ ಸಮಾನರು''[೪೭] ಎಂದೇ ಹೇಳುತ್ತಾನೆ. ಅಲ್ಲದೆ ''ನಿಮಗೆ ಅವರು ಏನಾಗಬೇಕು''[೪೮] ಎಂದರೆ ''ಅವರೇ ನನಗೆ ದೇವರು'', ''ನನಗೆ ಅವರು ಏನಾಗಲೂ ಬೇಡ; ನನಗೆ ಸಮೀಪವೂ ಅಲ್ಲ, ಯಾವ ಸಂಬಂಧವೂ ಅಲ್ಲ. ಅಪ್ಪ ಅಬ್ಬೆ ಇಲ್ಲದಂಥ ನಾನು, ಹುಡುಗನಿರುವಾಗಲೇ ಹೊಳೆಯಲ್ಲಿ ತೇಲುವ ಕಟ್ಟಿಗೆ ಬಡಿದು ದಂಡೆಯನ್ನು ಸೇರುವಂತೆ, ಅವರನ್ನು ಬಂದು ಸೇರಿದೆ. ಅವರಿಂದಲೇ ಈಗ ಹೀಗಿದ್ದೇನೆ. ದುಡಿಯಲು ನೆಲ ತೋರಿಸಿದರು; ಇರಲು ಮನೆಯನ್ನು ಕೊಟ್ಟರು. ಅವರೇ ಮದುವೆಯನ್ನೂ ಮಾಡಿಸಿದರು. ಯಾವ ತಂದೆಯೂ ಕೊಡದ ಸಂಭ್ರಮ ಉಂಟುಮಾಡಿಕೊಟ್ಟರು''[೪೯] ಎನ್ನುವಲ್ಲಿಯ ನಾರಾಯಣನ ಅಂತರಂಗದ ಮಾತುಗಳು ಗೋಪಾಲಯ್ಯನನ್ನು ಮಾನವೀಕರಣದ ರೂವಾರಿಯನ್ನಾಗಿ ಮಾಡುತ್ತವೆ.

ನಾರಾಯಣನ ಹೆಂಡತಿ ಲಕ್ಷ್ಮಿ ''ಅವರಾಗಲಿ, ಮಾವಯ್ಯನಾಗಲಿ ಮನುಷ್ಯರಲ್ಲ, ದೇವರ ಅವತಾರ''[೫೦] ಎಂದೂ ಅವರು ನಮ್ಮ ಮನೆಗೆ ಒಂದು ದೇವರಿದ್ದಂತೆ. ನಾವು ಬೇರೆ ದೇವರನ್ನು

ಪೂಜೆ ಮಾಡದಿದ್ದರೂ ತಪ್ಪಿಲ್ಲ"[೫೧] ಎಂದೂ ಗೋಪಾಲಯ್ಯ-ಶಂಕರಮ್ಮರನ್ನು ದೈವತ್ವಕ್ಕೇರಿಸುತ್ತಾಳೆ. ನಾರಾಯಣ-ಲಕ್ಷ್ಮಿಯರ ಮದುವೆ ನಿಶ್ಚಯಿಸಿ, ಮದುವೆ ಮಾಡಿ, ಮನೆ-ತೋಟ ಮಾಡಿಕೊಟ್ಟಿದ್ದಾರೆ. ಲಕ್ಷ್ಮಿಯ ಬಾಣಂತನವನ್ನು ಇವರೇ ಮಾಡಿದ್ದಾರೆ. ಇವರ ಮಕ್ಕಳನ್ನು ತಮ್ಮ ಮೊಮ್ಮಕ್ಕಳೆಂದೇ ಭಾವಿಸಿದ್ದಾರೆ. ಇಂತಹವರು "ತಮ್ಮ ಮಗನಿಗೇ ಬೇಡವಾದುದನ್ನು ಕಂಡರೆ"[೫೨] ಲಕ್ಷ್ಮಿಗೆ ಆಶ್ಚರ್ಯವಾಗುತ್ತದೆ. ಲಕ್ಷ್ಮಿಯು ತನ್ನ ಬಾಣಂತನದ ಸಂದರ್ಭದಲ್ಲಿ ಶಂಭು ಭಟ್ಟನ ಬೇಸರದ ವರ್ತನೆಯನ್ನು ಕಂಡಿದ್ದಳು. ಮೊದಲಲ್ಲೇ ತುಂಬಾ ಅಕ್ಕರೆಯಿಂದಲೇ ಇದ್ದ ಶಂಭು ಬರುಬರುತ್ತಾ ಲಕ್ಷ್ಮಿ-ನಾರಾಯಣರ ಬಗ್ಗೆ ಬೇಸರಗೊಳ್ಳತೊಡಗಿದ. ಹೀಗಿದ್ದಾಗ್ಯೂ, ಕಾದಂಬರಿಯ ಎಲ್ಲ ಪಾತ್ರಗಳೂ ಶಂಭುಭಟ್ಟನ ಆಗಮನದ ನಿರೀಕ್ಷೆಯನ್ನಿಟ್ಟುಕೊಂಡಿವೆ. ತಾಯಿ-ತಂದೆಯರಿಗೋಸ್ಕರ ಬರಲಿ, ಕನಿಷ್ಠ ತಾಯಿಯನ್ನು ಮಾತನಾಡಿಸಲಿಕ್ಕಾದರೂ ಎಂಬ ತುಡಿತವಿದೆ. ಶಂಕರಮ್ಮ ಅವನಿಗೆ ಅತ್ತೆ. ಗೋಪಾಲಯ್ಯ-ಶಂಕರಮ್ಮನವರು ನಾರಾಯಣನ ಹೆಂಡತಿ ಲಕ್ಷ್ಮಿಗೂ ಅತ್ತೆ-ಮಾವಯ್ಯ, ಮಕ್ಕಳಿಗೆ ಅಜ್ಜ, ಅಜ್ಜಿ.

"ಬದುಕುವುದು ಹೊನ್ನಿಗಾಗಿ ಅಲ್ಲ"[೫೩] ಸಂತೋಷಕ್ಕಾಗಿ, ಮುಂದಿನವರ ಉಪಯೋಗಕ್ಕಾಗಿ ಎಂಬ ತತ್ವದ ಗೋಪಾಲಯ್ಯ ಕಾಡಿನ ಒಂದು ಮೂಲೆಗೆ ಸುರಿದ ಹಣ ಮಾತ್ರ ಯಥೇಚ್ಛ. ಆದ್ದರಿಂದ ಪಡೆಯಬಹುದಾದ ಲಾಭದ ಬಗ್ಗೆ ಕಾರಂತರು ಶಿವರಾಮ ಹಾಗೂ ನಾರಾಯಣರ ಮೂಲಕ "ಈ ಮೂಲೆಯಲ್ಲಿ ಅಷ್ಟೆಲ್ಲ ಹಣವನ್ನು ಸುರಿದರೆ ಅದು ಕೈ ಬರುವುದುಂಟೇ? ನನಗೆ ಆ ಕಾಮಗಾರಿಗಳೆಲ್ಲ ಕೆಚ್ಚೆದೆಯ ಒಬ್ಬ ವ್ಯಕ್ತಿಯ ದುಡುಕುತನದ ಪರಮಾವಧಿ ಎಂದು ಕಾಣುತ್ತದೆ"[೫೪] ಎಂದು ಪ್ರಶ್ನೆ ಹಾಕಿಸಿ, ಅದನ್ನು ಗೋಪಾಲಯ್ಯನ ಮೂಲಕ ಈ ರೀತಿ ಹೇಳುತ್ತಾರೆ. "ದುಡ್ಡನ್ನು ಯಾವ ಮನುಷ್ಯನೂ ಕಟ್ಟಿಕೊಂಡು ಹೋಗುವುದಿಲ್ಲ. ದುಡ್ಡು ಕಳೆದರೇನಾಯಿತಂತೆ? ಈ ತೋಟಕ್ಕಾಗಿ ದುಡಿದವರಿಗೆ ಪ್ರಯೋಜನವಾಗಲಿಲ್ಲವೇ? ನಾನು ಹೋದ ಮೇಲೆಯೂ ಉಳಿಯುವ ಈ ತೋಟ, ಯಾರಿಗೂ ಎಂದಿಗೂ ಕೆಲಸಕ್ಕೆ ಬಾರದೆ ಹೋದೀತೇ? ಅದು ಬರಲಿಲ್ಲವೆಂದೇ ತಿಳಿಯುವ, ಇಲ್ಲಿರುವಷ್ಟು ದಿವಸ ಈ ಸೊಂಪಾದ ಸಸಿಗಳನ್ನು ಕಂಡು ನಾವು ಸಂತೋಷಪಟ್ಟದ್ದು ಸುಳ್ಳಾದೀತೇ? ಹಣ ಹೋಯಿತೆಲ್ಲಿಗೆ? ಅದು ಹಾಳಾಗುವುದು ಹೇಗೆ? ಅದರಿಂದ ನೂರು ಬಾಯಿಗಳು ನಾಲ್ಕೈದು ವರ್ಷ ಅನ್ನ ಉಂಡದ್ದು ಸುಳ್ಳೆ?"[೫೫] ಎನ್ನುವ ಮಾತುಗಳಲ್ಲಿ ಕಾರಂತರು ದುಡ್ಡು ಮತ್ತು ಮನುಷ್ಯನ ನಡುವಿರುವ ನಂಟನ್ನು, ಹಾಕಿದ ದುಡ್ಡಿನಿಂದ ಪಡೆಯುವ ಪ್ರತಿಫಲವನ್ನು ಸಾದರಪಡಿಸುತ್ತಾರೆ. ಭೂಮಿಯ ಉಳುಮೆಗೆ ಹಾಕಿದ ದುಡ್ಡು ಈಗಿನ ನಮ್ಮ ಸುಖ-ಸಂತೋಷ ಮತ್ತು ನಾಳಿನವರ ಸುಖ-ಸಂತೋಷಕ್ಕಾಗಿ ಸಹಾಯವಾಗುತ್ತದೆಂದು ಕೃಷಿಯನ್ನು ಹಾಗೂ ಮುಂದಿನ ಪೀಳಿಗೆಗೆ ನಾವು ಕೊಟ್ಟು ಹೋಗುವ ಕೊಡುಗೆಯನ್ನು ನಿರೂಪಿಸಿದ್ದಾರೆ. ಕಾರಂತರ ಜೀವನ ದರ್ಶನ ಗೋಪಾಲಯ್ಯನ ಅಗಾಧ ವ್ಯಕ್ತಿತ್ವದಲ್ಲಿ ಅಡಕಗೊಂಡಿದೆ.

ಶಿವರಾಮನಿಗೆ ಅಭ್ಯಂಜನ ಸ್ನಾನದ ಸಂದರ್ಭ ಮಾತ್ರ ಗೋಪಾಲಯ್ಯನ ಉತ್ಸಾಹಿತ ಜೀವನವನ್ನು ಪರಿಚಯಿಸುತ್ತದೆ. ಮಕ್ಕಳೊಂದಿಗೆ ಮಕ್ಕಳಂತೆ, ಹಿರಿಯರೊಂದಿಗೆ ಹಿರಿಯರಂತೆ, ಕೆಲಸಗಾರರ ಜೊತೆ ಕೆಲಸಗಾರರಂತೆಯೇ ನಡೆದುಕೊಳ್ಳುವ ಗೋಪಾಲಯ್ಯನ ವ್ಯಕ್ತಿತ್ವ ಸರ್ವರಿಗೂ ಮೆಚ್ಚಿನದಾಗುತ್ತದೆ. 'ವಯಸ್ಸು ಬೆಳೆಯುವುದರ ಜೊತೆಗೆ ಮನಸ್ಸು-ಜ್ಞಾನ ಬೆಳೆಯಬೇಕು. ಆದರೆ ಶೀಲ-ಸ್ವಭಾವ ಎಳತಾಗಿರಬೇಕು ಹಾಗೂ ನಿಷ್ಕಳಂಕವಾಗಿರಬೇಕು' ಎಂಬ ತತ್ವಕ್ಕೆ ಅಂಟಿಕೊಂಡಿರುತ್ತಾರೆ. ಮನುಷ್ಯ ವ್ಯವಹಾರದ ಸಂದರ್ಭದಲ್ಲಿ ನಷ್ಟ ಅನುಭವಿಸುವನಾದರೆ "ಅವನ ಮನಸ್ಸು ಕರಟಿ ಬಿಡುತ್ತದೆ. ಯಾರನ್ನೂ ನಂಬಬಾರದು, ಯಾರಿಗೆ ಏನು ಉಪಕಾರ ಮಾಡಿಯೂ ಫಲವಿಲ್ಲ ಎನ್ನಿಸಿ ಬಿಡುತ್ತದೆ"[೫೬] ಎನ್ನುವ ನಿರಾಶ ಭಾವನೆ ಗೋಪಾಲಯ್ಯನಂತವರಲ್ಲಿ ಬರಲಾರದು. ಅವರು ಎಂತಹ ಸಂದರ್ಭದಲ್ಲೂ ಮಾನವೀಯ ಮೌಲ್ಯ ಮೆರೆಯಬಲ್ಲರು. "ನನಗೆಷ್ಟೋ ಸಾರಿ ಅನಿಸುತ್ತದೆ- ಮನುಷ್ಯ ತನ್ನ ಸುಖವನ್ನು ಉಣ್ಣುವಾಗ ನಾಲ್ವರನ್ನು ಕಂಡು ಹಂಚಬೇಕು; ದುಃಖವನ್ನು ಒಂಟಿಯಾಗಿದ್ದೇ ಅನುಭವಿಸಬೇಕು"[೫೭] ಎಂಬ ಗೋಪಾಲಯ್ಯನವರ ಮಾತು ಮಾನವೀಕರಣದ ಅರ್ಥ ಪಡೆಯಲಾರದು. ಅದಕ್ಕೆಂದೆ ಕಾರಂತರು ಶಿವರಾಮನ ಮೂಲಕ "ಹಾಗೆಂದರೇನು? ಸುಖವು ನಾಲ್ವರೊಡನೆ ಹಂಚಿ ಉಣ್ಣುವಂಥ ವಸ್ತುವಾದರೆ, ದುಃಖವೂ ಅದಕ್ಕೆ ಏಕೆ ಹೊರತಾಗಬೇಕು? ಅದರ ನೀತಿ ಇಷ್ಟೇ, ಮನುಷ್ಯ ಸದಾ ಅನುಕಂಪ ಬೇಡುವ ಜೀವಿ; ಅವನು ಒಂಟಿ ಜೀವಿಯಲ್ಲ; ಗುಂಪಿನ ಮೃಗ. ಅವನು ಪೇಟೆಯಲ್ಲಿರಲಿ, ಹಳ್ಳಿಯಲ್ಲಿರಲಿ, ಅವನ ಸುಖ ದುಃಖಗಳಿಗೆ ಪಾಲುಗಾರರು ಬೇಕೇ ಬೇಕು. ತನ್ನ ದುಃಖವನ್ನು ಇನ್ನೊಬ್ಬರಲ್ಲಿ ಬಿಚ್ಚುವುದರಿಂದ ಮನಸ್ಸು ಹಗುರವಾಗುತ್ತದೆ. ಅದನ್ನು ಕೇಳಿದವನಿಗೂ ಲಾಭವುಂಟು; ಇತರರ ಆಪತ್ತನ್ನು ತಿಳಿಯುವುದರಿಂದ ಬದುಕಿನ ನಿಜತ್ವ ಅವನಿಗೂ ತಿಳಿಯುತ್ತದೆ"[೫೮] ಎಂದು ಅನುಭವದ ಎರಡು ಮುಖಗಳನ್ನು ಸ್ಪಷ್ಟವಾಗಿ ಮಾನವೀಕರಣದ ನೆಲೆಯಲ್ಲಿ ಅನಾವರಣಗೊಳಿಸುತ್ತಾರೆ.

ಅನಾಥನಾಗಿ ಬಂದ ನಾರಾಯಣ ತೋರುವ ಭಕ್ತಿ-ಭಯಗಳು ತುಂಬ ವಿಶೇಷವಾಗಿವೆ. ನಾರಾಯಣನ ಸ್ವಾಮಿ ಭಕ್ತಿಯನ್ನು ಕಂಡ ಗೋಪಾಲಯ್ಯ "ನನಗೆ ಒಂದೊಂದು ಸಾರಿ ಹೀಗೂ ಅನಿಸುತ್ತದೆ. ಹೀಗೆ ಗತಿಯಿಲ್ಲದ ಬಂದವರಿಗೆ ಏನಾದರೊಂದು ಉಪಕಾರ ಮಾಡಿದರೆ ಉಳಿಯುವಷ್ಟು ನೆನಪು, ನಮ್ಮವರಿಗೇನೆ ಉಳಿಯುವುದಿಲ್ಲ-ಅಲ್ಲವೇ? ಈಗ ನಾರಾಯಣ ನಿಜಕ್ಕೂ ಸೋದರಳಿಯನೋ ಮತ್ತೊಬ್ಬನೋ ಆಗಿದ್ದರೆ, ಹೀಗೆ ನಿಮಿಷ ನಿಮಿಷಕ್ಕೂ 'ಮಾವ ಮಾವ' ಅನ್ನುತ್ತಿದ್ದನೆ? ಇಷ್ಟರೊಳಗೆ- ಎಲ್ಲಿನ ಮಾವನೋ. ಎಲ್ಲಿನ ಅಳಿಯನೋ ಆಗುತ್ತಿತ್ತು" ಎಂದುಕೊಂಡಾಗ ಕಾರಂತರು ಶಿವರಾಮನ ಮೂಲಕ "ಇಲ್ಲಿ, ಅನೇಕ ಹೃದಯಗಳಲ್ಲಿ ಪರೋಪಕಾರ ಎಂಬುದು ಮರವೆಯಾಗುವುದಿಲ್ಲ. ಆದರೆ ತಮ್ಮಂಥವರು ಮಾಡಿದ ಉಪಕಾರ, ತೋರಿಸಿದ ಪ್ರೀತಿಗಳನ್ನು ನೆನೆದರೆ ಮನುಷ್ಯ ಮಾತ್ರದವನು

ಮರೆಯಲಾರ ಎನಿಸುತ್ತದೆ. ನಿಜಕ್ಕೂ ನಿಮ್ಮ ಮರ್ಜಿ, ರೀತಿಗಳನ್ನೆಲ್ಲ ನೋಡಿ, ನನಗೇನೆ ಇಲ್ಲಿ ನಿಮ್ಮ ಇನ್ನೊಬ್ಬ ಅಳಿಯನಾಗಿ ಬಂದು ಯಾಕೆ ತಣ್ಣಗೆ ಕುಳಿತಿರಬಾರದು ಎನಿಸುತ್ತದೆ''[೫೯] ನೀವು ಖಂಡಿತವಾಗಿ ನಮ್ಮ ಜತೆಗೆ ಇಲ್ಲಿರುತ್ತೇವೆ ಅನ್ನಿ, ನಾರಾಯಣ ನಿಮ್ಮ ಹತ್ತಿರ 'ಆಗಮೆ, ನೀರಕಟ್ಟೆ, ಬಯಲು' ಎಂದೆನಲ್ಲ-ಅದನ್ನು ನಿಮಗೆ ವೃಂದವನ್ನಾಗಿ ಮಾಡಿಸಿಕೊಡುತ್ತೇನೆ''[೬೦]ಎನ್ನುತ್ತಾರೆ ಗೋಪಾಲಯ್ಯ. ಬರೀ ಮಾತುಗಳಷ್ಟೆ ಅಲ್ಲ ಎನ್ನುವುದಕ್ಕೆ ನಾರಾಯಣನೇ ಸಾಕ್ಷಿ. ಗೋಪಾಲಯ್ಯ-ಶಂಕರಮ್ಮರ ಪ್ರೀತಿ-ಮಮತೆ, ಆದರ-ಆತಿಥ್ಯವನ್ನು ಕಂಡರೆ ಶಿವರಾಮನಿಗಷ್ಟೇ ಅಲ್ಲ ನಾನೂ ಅವರೊಂದಿಗೆ ಇರಬೇಕೆನಿಸುತ್ತದೆ. ಕಾರಂತರ ಕೈ ಇಂತಹ ವಿಷಯಗಳಲ್ಲಿ ಪಳಗಿದ ಕೈ. ಓದುಗರನ್ನು ಗೋಪಾಲಯ್ಯನ ವ್ಯಕ್ತಿತ್ವದಲ್ಲಿ ತಾದಾತ್ಮ್ಯಗೊಳಿಸುತ್ತಾರೆ. ಸಮ್ಮೋಹನ ಕ್ರಿಯೆಯನ್ನು ಕಾರಂತರೋ-ಗೋಪಾಲಯ್ಯನೋ ಓದುಗರ ಮೇಲೆ ಪ್ರಯೋಗ ಮಾಡುತ್ತಾರೆ, ಯಶಸ್ವಿಯಾಗುತ್ತಾರೆ ಕೂಡ.

ದೂರವಾಗಿರುವ ಮಗನ ಮೇಲೆ ಇವರಿಗೆ ಸೂಜಿ ಮೊನೆಯಷ್ಟು ಕೋಪವಿಲ್ಲ. ಅವನು ಯಾವಾಗ ಬಂದರೂ ಸ್ವಾಗತ. ಅವನಿಗೆಂದೇ ಹಿರಿಯರು ದುಡಿದ ಆಸ್ತಿಯನ್ನು ಇಟ್ಟಿದ್ದಾರೆ. ''ಅವನು ಮನೆಗೆ ತಿರುಗಿ ಬರಲಿ, ಬಾರದಿರಲಿ-ದೂರವಿದ್ದುಕೊಂಡು ಮಾರಾಟ ಮಾಡಲಿ ನಾನು, ಶಂಕರಿಯೂ ಇಲ್ಲಿ ಕುಳಿತಿರುಷ್ಟು ದಿನ, ಇದು ನಮ್ಮದು; ಮುಂದೆ ಅವನದ್ದು''[೬೧] ಎನ್ನುವಲ್ಲಿ ತಿಳಿದುಬರುತ್ತದೆ. ಮಗನು ಬರದಿದ್ದರೆ ಎಂಬ ಪ್ರಶ್ನೆಯೂ ಅವರನ್ನು ಕಾಡುತ್ತಿರುವುದರಿಂದ ಅವರು ಸತ್ತಾಗ ಪಿಂಡ ಹಾಕಲಿಕ್ಕೆ ನಾರಾಯಣನೇ ಅರ್ಹ ವ್ಯಕ್ತಿ ಎಂದು ನಿರ್ಧರಿಸಿದ್ದಾರೆ. ಆದರೆ ''ಶಂಭುವಿನ ಹಂಗಿನಿಂದ ದೂರದಲ್ಲಿರಬೇಕು''[೬೨] ಎಂಬ ಮಾತು ನಾರಾಯಣನ ಸ್ವಾಭಿಮಾನವನ್ನು ಅರುಹುತ್ತದೆ. ಸ್ವಾಭಿಮಾನ, ಸ್ವಾರ್ಥ ಎರಡನ್ನು ವ್ಯಕ್ತಿತ್ವಕ್ಕಷ್ಟೆ ಇಟ್ಟುಕೊಂಡ ನಾರಾಯಣನು ಗೋಪಾಲಯ್ಯನವರು ತೀರಿದ ಬಳಿಕ ಸ್ವತಂತ್ರ ಜೀವನವನ್ನು ಬಯಸುತ್ತಾನೆ. ಆದರೆ ರಾಮನ ''ಬಿಟ್ಟು ಹೋಗುವ ಯೋಚನೆ ಮಾಡಬೇಡಿ; ಅದರಿಂದ ನಮಗೆ ವರ್ಷವಾದರೂ ಚಿಂತೆಯಿಲ್ಲ'', ''ಹೌದಲ್ವ-ಅವರಿಬ್ಬರ ಋಣ ತೀರಿಸಲು ನಾವು ಮೂರು ಜನ್ಮದಲ್ಲಿ ದುಡಿದರೂ ಸ್ವಲ್ಪವೇ. ಅತ್ತೆಯೂ ಹಾಗೆ, ಮಾವನೂ ಹಾಗೆ, ದೇವರೇ ನೆಲದ ಮೇಲೆ ಬಂದ ಹಾಗೆ''[೬೩] ಎಂದು ಕೊಂಡಾಡುತ್ತಾನೆ. ಅಲ್ಲದೆ ಸೇವಕ ಬಟ್ಯ ''ನಮ್ಮ ಧನಿಗಳ ಮನಸ್ಸು ಸಣ್ಣದರಿಂದಲೂ ಹೀಗಿಯೇ. ಅವರನ್ನು ಕಂಡರೆ, ನನಗೆ ಇಂಥ ಮನುಷ್ಯರು ಇರುವುದುಂಟೇ-ಅನಿಸುತ್ತದೆ'' ಈ ಮಾತುಗಳ ನಿದರ್ಶನಗಳನ್ನು ಗಮನಿಸಿದಾಗ ಗೋಪಾಲಯ್ಯನವರ ಮೇರು ವ್ಯಕ್ತಿತ್ವ ಓದುಗರಿಗೆ ಪರಿಚಯವಾಗುತ್ತದೆ. ''ನನಗೆ ಗೋಪಾಲಯ್ಯನವರು ಅಪೂರ್ವ ವ್ಯಕ್ತಿಗಳಾಗಿ ಕಾಣಿಸಿದರು. ಆ ಮನುಷ್ಯ ಸುತ್ತಲಿನ ಜೀವವನ್ನು ಸೂಕ್ಷ್ಮವಾಗಿ ಅಳೆಯಬಲ್ಲ ವ್ಯಕ್ತಿಯಾಗಿ ಕಂಡರು. 'ಚಿಂತೆಯಿಲ್ಲ! ಬೆಟ್ಟದ ಹೊಟ್ಟೆಯಲ್ಲಿ ಹುಟ್ಟಿದ ಈ ಮನುಷ್ಯ, ಬೆಟ್ಟದಷ್ಟು ಎತ್ತರಕ್ಕೆ ಬೆಳೆದಿದ್ದಾನೆ. ಮನಸ್ಸು ಹಾಗೆ; ಮಾನವೂ ಹಾಗೆ- ಎಂದು ತೋರಿತು''[೬೪] ಎಂಬ ಶಿವರಾಮನ ಸ್ವಗತವು ಗೋಪಾಲಯ್ಯನ ಇಡೀ

ಮಾನವೀಯ ವ್ಯಕ್ತಿತ್ವವನ್ನು ಪರಿಚಯಿಸುತ್ತದೆ. ‘‘ನಿಸರ್ಗದ ಮಾನದಿಂದ ಜೀವಿಗಳು ಸಣ್ಣವು; ಮನುಷ್ಯನೂ ಸಣ್ಣವನು. ನಿಸರ್ಗದ ಮುಂದೆ ಮನುಷ್ಯ ಸಣ್ಣವನಾಗಿ ಕಾಣಿಸಿದರೂ, ನಿಸರ್ಗದ ಪ್ರೇರಣೆಯಿಂದ ಮನುಷ್ಯ ದೊಡ್ಡವನಾಗಬಲ್ಲ’’[೬೫] ಎನ್ನುವ ಮಾತಿಗೆ ಗೋಪಾಲಯ್ಯನೇ ಸಾಕ್ಷಿ.

ಕಾದಂಬರಿಯ ಕೊನೆ ಮನೆಬಿಟ್ಟು ಹೋದ ಮಗ ಮನೆಗೆ ಬರುತ್ತಾನೆಂಬ ಭರವಸೆಯೊಂದಿಗೆ ನಿಲ್ಲುತ್ತದೆ. ಶಿವರಾಮನ ಮನದಲ್ಲಿ ಆರಂಭದಿಂದಲೂ ಅವನನ್ನು ನೋಡಿದ ಅಳುಕು ಕಾಡುತ್ತಲೇ ಇತ್ತು. ಎಲ್ಲಿ? ಯಾವಾಗ? ಎಂಬುದೇ ನೆನಪಾಗುತ್ತಿರಲಿಲ್ಲ. ಆತನ ಗುಣ ವರ್ಣನೆ ಕೇಳಿದಂತೆಲ್ಲಾ, ಕೊನೆಗೆ ಪೋಟೋ ನೋಡಿದಾಗ ಕೆ.ಎಸ್.ಶರ್ಮನೇ ಶಂಭುಭಟ್ಟ ಎಂದು ಗುರುತಿಸುತ್ತಾನೆ. ಶರ್ಮನನ್ನು ಮನೆಗೆ ಕಳುಹಿಸುವ ಜವಾಬ್ದಾರಿಯನ್ನು ಹೊತ್ತು ತನ್ನ ಮೇಲಿದ್ದ ಋಣವನ್ನು ಇಳಿಸಲು ಅನುಕೂಲ ಮಾಡಿಕೊಳ್ಳುತ್ತಾನೆ.

‘‘ಬಾಳು ನನಗೆ ಮುಖ್ಯ. ಬಾಳನ್ನು ತಿಳಿಯಲು ಬೇಕಾಗುವ ಸಾಧನಗಳೂ ಅಷ್ಟೆ ಪ್ರಾಮುಖ್ಯ’’[೬೬] ಎಂಬ ಶಿವರಾಮ ಕಾರಂತರ ಹೇಳಿಕೆಯನ್ನು ‘ಬೆಟ್ಟದ ಜೀವ’ದ ಗೋಪಾಲಯ್ಯನಿಗೆ ತಾಳೆ ಹಾಕಿ ನೋಡಿದಾಗ ಹೆಚ್ಚು ಸ್ಫುಟತೆ ವ್ಯಕ್ತವಾಗುತ್ತದೆ. ಗೋಪಾಲಯ್ಯನವರ ಪರಿಸರ ಪ್ರಜ್ಞೆ ಮತ್ತು ಮಾನವೀಯ ಕಾಳಜಿಗಳು; ಶಿವರಾಮಯ್ಯನ ನಗರ ಪ್ರಜ್ಞೆ ಮತ್ತು ಮಾನವೀಕರಣದ ಹುಡುಕಾಟ ಕಾಡಿನ ಆವರಣದಲ್ಲೆ ನಡೆಯುತ್ತವೆ. ಕೇವಲ ನಾಲ್ಕು ದಿನಗಳಲ್ಲಿಯೇ ಒಂದು ಸಮೃದ್ಧ ಜೀವನ ಚಿತ್ರಣ ತೆರೆದುಕೊಳ್ಳುತ್ತದೆ. ಶಿವರಾಮಯ್ಯನ ಕಳೆದ ಹಸುವಿನ ಹುಡುಕಾಟವು ಮಾನವೀಕರಣದ ಹುಡುಕಾಟವಾಗುತ್ತದೆ. ಹಸು ಸಿಗುವುದಿಲ್ಲ. ಆದರೆ ಗೋಪಾಲಯ್ಯನವರಂಥ ಮೇರು ವ್ಯಕ್ತಿತ್ವದ ಮಾನವತಾವಾದಿ ದೊರಕುತ್ತಾನೆ. ದೂರವಾದ ಶಂಭು ಹತ್ತಿರವಾಗುವ ಲಕ್ಷಣಗಳನ್ನು ತೋರಿಸುವುದರ ಮೂಲಕ ಗೋಪಾಲಯ್ಯ-ಶಿವರಾಮಯ್ಯ ಅವರ ಮಾನವೀಕರಣಕ್ಕೆ ಯಶಸ್ಸು ದೊರಕಿಸುತ್ತಾರೆ ಕಾರಂತರು.

ಗೋಪಾಲಯ್ಯನು ೧೦ನೆಯ ವಯಸ್ಸಿಗೆ ತಂದೆ-ತಾಯಿ ಇಬ್ಬರನ್ನೂ ಕಳೆದುಕೊಂಡು ಆಶ್ರಯದಲ್ಲಿರುತ್ತಾನೆ. ಆಗ ಮಾವನ ಹೆಂಡತಿಯ ಕಿರುಕುಳ ಮಾತ್ರ ಅಸಹನೀಯವಾಗಿರುತ್ತದೆ. ಅದರಿಂದಲೇ ಮನೆಬಿಟ್ಟು ಹೋಗುತ್ತಾನೆ. ‘ಮಾವನ ಮಡದಿಯ ಅಮಾನವೀಯ ವರ್ತನೆ’ ಕಾದಂಬರಿಯ ನಿರೂಪಣೆಗೆ ಅಗತ್ಯವಾಗಿದ್ದರಿಂದ ಕಾರಂತರು ಇಂತಹ ಅಮಾನವೀಯ ಪಾತ್ರಗಳನ್ನು ಸೃಷ್ಟಿಸಿಕೊಳ್ಳುತ್ತಾರೆ. ಆದರೆ ತತ್‌ಕ್ಷಣವೇ ಮಾನವೀಯ ಎಂಬ ಅರಿವು ಓದುಗನಿಗೆ ಬರುವಂತೆ ನೋಡಿಕೊಳ್ಳುತ್ತಾರೆ.

ಶಂಕರಮ್ಮ-ಗೋಪಾಲಯ್ಯನವರಿಗೆ ‘‘ನಮ್ಮವೇ ನಮಗೆ ಸಿಗದೆ ಹೋದ ಮೇಲೆ, ನಾರಾಯಣನ ಮಕ್ಕಳು ನಮ್ಮವು ಆಗ್ಯಾವೇ?’’[೬೭] ಎಂಬ ಅಳುಕು ಇದ್ದೇ ಇದೆ. ಆದರೆ ಅದನ್ನು ‘‘ದೇವರ

ಆಟವೆಂಬುದು ವಿಚಿತ್ರ ನೋಡಿ; ನನಗೀ ವಿಚಿತ್ರವನ್ನು ನೋಡಿ ಬೆರಗಾಗಿ ಬಿಟ್ಟಿದೆ. ಮನುಷ್ಯನ ಜೀವನ ಎನ್ನುವುದೇ ಒಂದು ವಿಚಿತ್ರವಾಗಿದೆ. ಆದರೆ ನನಗೆ ಮಾತ್ರ ಇದು ಯಾರ ಆಟವೋ, ಯಾವ ಆಟವೋ, ಏನು ಆಟವೋ ತಿಳಿಯದಾಗಿತ್ತು''[೨೮] ಎಂದು ವೈಚಿತ್ರ್ಯದ ಕಡೆಗೆ ಕೈತೋರಿಸುತ್ತಾರೆ.

ಶಂಭು ಮನೆಬಿಟ್ಟು ವಿಷಯ ಲಕ್ಷ್ಮಿಯನ್ನು ಬಯಸಿದ್ದನಾದ್ದರಿಂದ ಇದು ತಂದೆಗೆ ಗೊತ್ತಾದರೆ, ಆತನ ಮಾನವೀಯ ಮನಸ್ಸು ತೀರಾ ವ್ಯಾಕುಲಗೊಳ್ಳುತ್ತದೆ. ಅದನ್ನು ನೋಡಿ ಸಹಿಸಲು ಅಸಾಧ್ಯ. ಇಂತಹ ಸಂಕಷ್ಟವನ್ನು ಅಕ್ಕ ವಾಗ್ದೇವಿ ಸತ್ತಾಗ ಅನುಭವಿಸಿದ ಹಿರಿ ಜೀವಗಳೆರಡನ್ನು ಅವನೇ ಸಮಾಧಾನಪಡಿಸಿದ್ದ. ಈಗ ಈ ವಿಷಯ ತಿಳಿದರೆ ಅವರು ಏನಾಗಬಲ್ಲರು? ಎಂಬುದನ್ನು ಊಹಿಸಿಯೇ ಮನೆ ಬಿಟ್ಟ. ಕಾನೂನು ಮಾಡಿದ ಪದವೀಧರನಾದ್ದರಿಂದ, ನಗರ ಜೀವನದ ಆಕರ್ಷಣೆಯೂ ಕೂಡ ಅವನನ್ನು ಮನೆಬಿಡುವಂತೆ ಮಾಡಿತ್ತು.

ನಿಸರ್ಗದೊಂದಿಗೆ ಮಾನವನ ಒಡನಾಟಗಳನ್ನು ಸೂಕ್ಷ್ಮವಾಗಿ ಅನುಸಂಧಾನಗೊಳಿಸಿರುವ ಕಾರಂತರು ಗೋಪಾಲಯ್ಯ ಹೇಗೆ ಮಾನವೀಯ ಸಂವೇದನೆಗಳ ಮೂಲಕ ದೈವತ್ವಕ್ಕೇರುತ್ತಾರೆಂಬುದನ್ನು ಸೂಚಿಸಿದ್ದಾರೆ. ಆದರೆ ಪೋಲಂಕಿ ರಾಮಮೂರ್ತಿ ಅವರು ''ನಿಸರ್ಗ ಮಾನವನ ಪರಿಕಲ್ಪನೆಯಲ್ಲಿ ತನ್ನ ಸೃಷ್ಟಿ ವಿಶೇಷತೆಯನ್ನು, ವಿಭಿನ್ನತೆಯನ್ನು, ತಾನೆ ತಾನಾಗಿರುವ ಕೇವಲತೆಯನ್ನು ಕಳೆದುಕೊಂಡು ಮಾನವೀ ಪ್ರಜ್ಞೆಯ ಸಂಕುಚಿತತೆಯಲ್ಲಿ ಪತನಗೊಂಡು ಸಾಂಸಾರಿಕ(Domesticate)ವಾಗುತ್ತದೆ''[೨೯] ಎಂಬ ಆಕ್ಷೇಪಣೆಯನ್ನೆತ್ತಿದ್ದಾರೆ. ಇದು ನಿಸರ್ಗದ ಶ್ರೇಷ್ಠತೆಗೆ ಆಕ್ಷೇಪಣೆಯಾದರೆ ಮಾನವೀಯ ಪ್ರಜ್ಞೆಯನ್ನು, ಸಂಬಂಧಗಳನ್ನು ಎತ್ತಿ ಹಿಡಿಯುತ್ತದೆ. ಆದರೂ ನಿಸರ್ಗ ಕೂಡ ಎಲ್ಲೂ ತನ್ನ ಗುಟ್ಟನ್ನು ಬಿಟ್ಟುಕೊಟ್ಟಿಲ್ಲ. ಇದಕ್ಕೆ ಗೋಪಾಲಯ್ಯನವರ ಹಿಮಾಲಯಗಳಾದ ಬೆಟ್ಟಗಳು, ನದಿ ಧುಮುಕುವ ಜಲಪಾತ, ಗುಹೆ-ಮೊದಲಾದವುಗಳೇ ನಿದರ್ಶನವಾಗಿವೆ. 'ಬೆಟ್ಟದ ಜೀವ' ಗೋಪಾಲಯ್ಯನ ವೈಯಕ್ತಿಕ ಜೀವನದ ಕಥೆಯಲ್ಲ, ನಿಸರ್ಗದ ಮಗುವಾಗಿ, ನಿಸರ್ಗದ ಭಾಗವಾಗಿ ಬದುಕುವ ಒಂದು ಜೀವನ ಚಿತ್ರ''[೨೦] ಎನ್ನುವ ಶೇಷಗಿರಿರಾಯರ ಮಾತನ್ನೇ ವಿಸ್ತರಿಸುವುದಾದರೆ 'ಮಾನವನ ನೈಸರ್ಗಿಕ ಭಾವನೆ-ಬದುಕುಗಳ ಸಮ್ಮಿಳಿತ ಚಿತ್ರಣವಾಗಿದೆ.

''ಗ್ರಾಮ ಜೀವನದ ಮೌಲ್ಯಗಳನ್ನು ನಾಗರಿಕ ಸಂವೇದನೆಯ ಬೆಳವಣಿಗೆಗಾಗಿ, ವಿಕಾಸಕ್ಕಾಗಿ ಉಪಯೋಗಿಸುವುದು. ಈ ದೃಷ್ಟಿಯಿಂದ ಶಿವರಾಮಯ್ಯ ಕತೆಯ ಕೇಂದ್ರಪ್ರಜ್ಞೆಯಾದರೆ ಗೋಪಾಲಯ್ಯ ಕತೆಯ ಮೌಲ್ಯಗಳ ಕೇಂದ್ರ ಪ್ರತೀಕ. ಪ್ರಜ್ಞೆ-ಪ್ರತೀಕಗಳೆರಡರ ಸಾಹಿತ್ಯಿಕ ಸೃಷ್ಟಿಯಲ್ಲಿ ಅವುಗಳ ಸಂಬಂಧವನ್ನು ನಾಟಕೀಕರಿಸುವ ಸಂವಿಧಾನದ ರಚನೆಯಲ್ಲಿ ಕಾರಂತರು ಪಡೆದಿರುವ ಯಶಸ್ಸು ಈ ಕಾದಂಬರಿಯ ಸಫಲತೆಗೆ ಕಾರಣವಾಗಿದೆ ಎಂದು ಹೇಳಬಹುದು. ಕಾರಂತರು ಪ್ರಸ್ತಾಪಿಸುವ ಸಾಂಪ್ರದಾಯಿಕ ಮೌಲ್ಯಗಳು ಇಂದಿನ ನವ್ಯಪ್ರಜ್ಞೆಗೆ ಅಗ್ರಾಹ್ಯವೆಂದೆನಿಸಿದರೂ, ಅವರು ಚಿತ್ರಿಸಿದ

ಗ್ರಾಮಜೀವನದ ಸಂಪೂರ್ಣತೆಯನ್ನಾಗಲಿ, ಪ್ರಾತಿನಿಧಿಕ ಸ್ವರೂಪವನ್ನಾಗಲಿ ನಾವು ಒಂದು ವೇಳೆ ಒಪ್ಪದೇ ಹೋದರೂ ಅವರ ಕಾದಂಬರಿಯ ಸಾಹಿತ್ಯಿಕ ಸಾಧನೆಯ ಹಿರಿಮೆಯನ್ನು ನಾವು ಅಲ್ಲಗೆಳೆಯಲಿಕ್ಕಾಗುವುದಿಲ್ಲ. ಒಂದು ವೇಳೆ, 'ಬೆಟ್ಟದ ಜೀವ'ದ ಮಾನವೀಯ ಮೌಲ್ಯಗಳು ಇನ್ನೂ ಸಜೀವ ಮೌಲ್ಯಗಳು, ಅದಕ್ಕೊಂದು ಸಾರ್ವಕಾಲಿಕ ಸತ್ಯತೆಯಿದೆ ಎಂದೆನಿಸಿದರೆ ಈ ಕೃತಿಯ ಘನತೆ ಇನ್ನೂ ಹೆಚ್ಚುತ್ತದೆ"[೨೧] ಎನ್ನುವ ಜಿ. ಎಸ್. ಆಮೂರ ಅವರ ಮಾತುಗಳು 'ಬೆಟ್ಟದ ಜೀವ'ವು ಸಾದರಪಡಿಸುವ ಮಾನವೀಯ ಮೌಲ್ಯಗಳನ್ನು ಸ್ಫುಟಗೊಳಿಸುತ್ತವೆ. ಕಾದಂಬರಿಯು ಎತ್ತಿ ಹಿಡಿಯುವ ಮನುಷ್ಯತ್ವದ ನಿಯಮಗಳು, ಮನುಷ್ಯತ್ವದ ಘಟನೆಗಳು, ಮನುಷ್ಯತ್ವದ ಮಹತ್ವಗಳು ಅದರ ಕ್ರಿಯಾಶೀಲ ಅಂಗಗಳಾಗಿ ಕೆಲಸ ಮಾಡಿವೆ. ಗ್ರಾಮ ಜೀವನದ ಮನುಷ್ಯ-ನಗರ ಜೀವನದ ಮನುಷ್ಯರಲ್ಲಿನ ಭಿನ್ನತೆಯನ್ನು ಗುರುತಿಸುವಲ್ಲಿ ಹವಣಿಸಿದರೂ ಕೊನೆಗೆ ಏಕೀಭವನಗೊಳ್ಳುವ ಸಂದರ್ಭದೊಂದಿಗೆ ನೆಲೆ ನಿಲ್ಲುತ್ತದೆ. ಈ ಮಾತಿನ ಸಂಕೇತಗಳಾಗಿ ಗೋಪಾಲಯ್ಯ-ಶಿವರಾಮಯ್ಯ ಆವಿರ್ಭವಿಸುತ್ತಾರೆ. ಶಂಭು ಈಗಾಗಲೇ ನಗರ-ಗ್ರಾಮಗಳ ಸಮ್ಮಿಲನದ ಸಂಕೇತವಾಗಿ ನಿಂತಿದ್ದಾನೆ. ಶಿವರಾಮಯ್ಯ ನಗರದಿಂದ ಕಾಡಿಗೂ, ಕಾಡಿನಿಂದ-ನಗರಕ್ಕೂ ಮಾನವೀಕರಣವನ್ನು ಪಸರಿಸುತ್ತಾನೆ. ಒಟ್ಟಿನಲ್ಲಿ 'ಬೆಟ್ಟದ ಜೀವ' ಸಾಹಿತ್ಯಿಕ ಮಾನದಂಡಗಳಿಂದ ಮಾತ್ರ ಅಳೆಯಿಸಿಕೊಂಡಾಗ ಅದು ಶ್ರೇಷ್ಠ ಕೃತಿಯಾಗಲಾರದು. ಜೊತೆಗೆ 'ಮಾನವೀಕರಣ'ದಂತಹ ಸಾಹಿತ್ಯೇತರ ಮಾನದಂಡಗಳಿಂದ ಮಾಪಿಸಿಕೊಂಡಾಗ ಅದರ ಮಹತ್ವ ತಿಳಿಯುತ್ತದೆ. ಕೃತಿ ಎತ್ತಿಹಿಡಿಯುವ ಮಾನವೀಯ ಮೌಲ್ಯ ಮತ್ತು ತನ್ನ ಗುರುತ್ವಾಕರ್ಷಣ ಬಲದಿಂದ ಅಮಾನವೀಯ ಗುಣಗಳನ್ನು ಉಚ್ಚಾಟಿಸುವ ಶಕ್ತಿಯನ್ನು ಪರಿಗಣಿಸಬೇಕಾಗುತ್ತದೆ. ಈ ದ್ವಿಮುಖ ಕ್ರಿಯೆಯಲ್ಲಿ ಯಶಸ್ವಿಯಾಗುವ 'ಬೆಟ್ಟದ ಜೀವ' ಉತ್ತಮ ಕೃತಿಯಾಗಿದೆ.

"ನಾನು ೧೯೨೧ರ ಸುಮಾರಿಗೆ ಅಸಹಕಾರ ಚಳವಳಿಗೆ ಧುಮುಕಿ ಸ್ವಾತಂತ್ರ್ಯ ಉದಯದ ತನಕ ಸಾಗಿದ ನನ್ನ ಸ್ವಂತ ಬದುಕಿನ ಮತ್ತು ಅದನ್ನು ಸುತ್ತುವರಿದ ಸಾಮಾಜಿಕ ವ್ಯಕ್ತಿ, ಸಂಸ್ಥೆ, ರೀತಿ-ನೀತಿಗಳ ಅನುಭವಗಳ ಪ್ರತೀಕ ಇದು"[೨೨] ಎಂದು ಮುನ್ನುಡಿಯಲ್ಲಿಯೇ ಹೇಳಿರುವ ಮಾತುಗಳು ಮೂರು ಅಂಶಗಳನ್ನು ಸ್ಪಷ್ಟಪಡಿಸುತ್ತದೆ. ೧. ಸ್ವಾತಂತ್ರ್ಯ ಹೋರಾಟದಲ್ಲಿನ ಸ್ವಂತ ಅನುಭವಗಳು. ೨. ಅವರ ಸುತ್ತಣದ ಅನುಭವಗಳು ೩. ಮಾನವೀಕರಣದ ನಿಯೋಗಗಳ ಅಸ್ತಿತ್ವ. ಈ ಮೂರು ಅಂಶಗಳ ಘನೀಕರಣ 'ಔದಾರ್ಯದ ಉರುಳಲ್ಲಿ'ಎಂಬ ಕಾದಂಬರಿಯಲ್ಲಿ ಅನಾವರಣಗೊಂಡಿದೆ. ಕಾರಂತರು ಸ್ವತಃ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದರು. ಮತ್ತು ಕಾರ್ನಾಡು ಸದಾಶಿವರಾಯರು ಹಾಗೂ ಆ ಕಾಲದ ರಾಜಕಾರಣಿಗಳ ಜೀವನ-ನೀತಿಗಳ ಚಿತ್ರಣ ಕಾದಂಬರಿಯಲ್ಲಿ ಅಭಿವ್ಯಕ್ತಗೊಂಡಿದೆ.

ಗ್ರಾಮ ಜೀವನದಲ್ಲಿ ಅಕ್ಷರ ಜ್ಞಾನ ತೀರಾ ಹಿಂದುಳಿದ ಸಂದರ್ಭದಲ್ಲಿ ಗಾಂಧೀಜಿಯವರು ಶಾಲೆಗಳನ್ನು ತೆರೆಯಲು ಕ್ರಮ ಕೈಗೊಂಡರು. ಆದರೆ ಜಾತಿಯ ಆಚರಣೆ ಅಂದಿನ ಸಮಾಜದಲ್ಲಿ ತಾಂಡವಾಡುತ್ತಿದ್ದುದರಿಂದ ಬ್ರಾಹ್ಮಣರ ಮಕ್ಕಳು ಸರ್ಕಾರಿ ಶಾಲೆಗೆ ಬರುತ್ತಿರಲಿಲ್ಲ. ಹೀಗಾಗಿ ಮಾಸ್ತರರನ್ನೇ ಮನೆಯಲ್ಲಿ ಇರಿಸಿಕೊಂಡು ಪಾಠ ಹೇಳಿಸುತ್ತಿದ್ದರು. ಔದಾರ್ಯದ ಉರುಳಲ್ಲಿ ಕಾದಂಬರಿಯ ನಾಯಕ ರಾಧಕೃಷ್ಣ ಶಾಲೆ ತೆರೆದು ಎಲ್ಲರಿಗೂ ಶಿಕ್ಷಣ ದೊರೆಯುವಂತಹ ಸಲಹೆಯನ್ನು ಆಲೆಮನೆ ಮಂಜಯ್ಯನವರಿಗೆ ಹೇಳುತ್ತಾನೆ. ಮಂಜಯ್ಯನವರಿಗೆ ಸರಿಯೆನಿಸಿದರೂ ಊರಲ್ಲಿರುವ ಬ್ರಾಹ್ಮಣರ ಮಕ್ಕಳು-ಒಕ್ಕಲಿಗರ ಮಕ್ಕಳು ಕೂಡಿ ಓದಿಯಾರೇ? ಎಂಬ ಸಂಶಯ ಕಾಡುತ್ತದೆ. ಒಡೆಯರ ಮನೆಯ ಮಕ್ಕಳೊಂದಿಗೆ ಕುಳಿತು ಓದುವ ಧೈರ್ಯ ಮಕ್ಕಳಿಗೂ ಇಲ್ಲ. ಕಳುಹಿಸುವ ಮನಸ್ಥಿತಿ ಪಾಲಕರಿಗೂ ಇಲ್ಲ ಎಂಬುದು ಅವರ ಆತಂಕವಾಗಿತ್ತು. ''ಆಳು, ಒಕ್ಕಲು, ಧನಿ-ಇವರ ಸ್ಥಾನಮಾನಗಳು ಅವನಿಗೆ ಹೊಸ ಸಂಗತಿಗಳಾಗಿ ಅಲ್ಲ, ತಾನು ಚಿಕ್ಕವನಿದ್ದಾಗ ಒಕ್ಕಲು ಮಕ್ಕಳನ್ನು ಕೂಡಿ ಆಡುತ್ತಿದ್ದುದನ್ನು ಕಂಡರೆ, ತಂದೆ ಗದರಿಸುತ್ತಿದ್ದ ನೆನಪು ಬಂದಿತು. ಈ ಸಮಸ್ಯೆಯನ್ನು ನಿವಾರಿಸಲು ತರುಣರಾದ ತಾವು ಹೊಸ ಹಾದಿ ಹಾಕಬೇಕೆಂದು ತೋರಿತು''[೨೩] ಎಂಬ ಹೊಸ ವಿಚಾರದಿಂದ ಹಳೆಯ ಸಂಪ್ರದಾಯಗಳನ್ನು ನಿವಾರಿಸಿ ಮಕ್ಕಳೆಲ್ಲ ಒಂದೇ ಸೂರಿನಡಿ ವಿದ್ಯಾಭ್ಯಾಸ ಮಾಡುವಂತಹ ವ್ಯವಸ್ಥೆ ಜಾರಿಗೊಳಿಸುವ ಯೋಚನೆ ಮಾಡಿದರು. ಮಕ್ಕಳಿದ್ದಾಗಿನಿಂದಲೇ ಬೇಧ-ಭಾವವನ್ನು ಬೆಳಸಿದರೆ-ಅದು ಸಮಾಜಕ್ಕೆ ಆತಂಕವಾಗಬಹುದೆಂಬ ಮಾನವೀಯ ಯೋಚನೆ ಅವರದಾಗುತ್ತದೆ. ಅದೇ ರೀತಿ ''ದಲಿತಾಶ್ರಮದಲ್ಲಿ ಕನಿಷ್ಠ ಐವತ್ತು ಬಡ ಜನರಿಗೆ ಉದ್ಯೋಗ ಕಲ್ಪಿಸಬೇಕು; ವಿದ್ಯೆ ಒದಗಿಸಬೇಕು''[೨೪] ಎಂಬ ಬಡವರ ಏಳಿಗೆಗೆ ದಯಾನಂದರಾಯರ ಯೋಚನೆ ಅಮೂಲ್ಯವಾಗಿದೆ.

ಸಾಹಿತ್ಯ ಹಾಗೂ ವಾಸ್ತವದಲ್ಲಿ ಘಟಿಸುವುದು ವಿರಳವೆಂಬಂತಹ ಪ್ರವಾಹದ ಘಟನೆ ಕಾದಂಬರಿಯಲ್ಲಿ ದಾಖಲಾಗಿದೆ. ''ನನ್ನ ತಾರುಣ್ಯದಲ್ಲಿ-ಕುಂದಾಪುರ, ಉಡುಪಿ ತಾಲೂಕುಗಳಲ್ಲಿ ಸಂಭವಿಸಿದೊಂದು ನೆರೆಯ ಹಾವಳಿ ಸಾರ್ವಜನಿಕರ ಬದುಕನ್ನು ಕಂಗಾಲುಗೊಳಿಸಿದ ಕತೆ ಇಲ್ಲಿದೆ.''[೨೫] ಕಾದಂಬರಿಯಲ್ಲಿನ ಘಟನೆ ಕಣ್ಮುಂದೆ ಘಟಿಸಿದಂತೆಯೇ ನಿರೂಪಿತವಾಗಿದೆ. ನೆರೆಹಾವಳಿಯಲ್ಲಿ ಸಿಕ್ಕು ಕಷ್ಟ ಅನುಭವಿಸುತ್ತಿರುವ ಮಕ್ಕಳು, ಹೆಂಗಸರು, ವೃದ್ಧರು, ರಾಸುಗಳು ಜಲದೇವತೆಯ ದವಡೆಯಲ್ಲಿ ನಲುಗುತ್ತಾರೆ. ರಾಧಾಕೃಷ್ಣ, ಬಿರುಮ ಮರಕಾಲರ ಶ್ರಮದಿಂದ ಜನತೆ ಬದುಕುಳಿಯುತ್ತಾರೆ. ರಾಧಾಕೃಷ್ಣ ನೂರಾರು ಜನರನ್ನ ತನ್ನ ಶಾಲಾ ಚಾವಣಿಯಲ್ಲಿ ಉಳಿದುಕೊಳ್ಳಲು ವ್ಯವಸ್ಥೆ ಮಾಡಿ, ಮನೆಯಲ್ಲಿದ್ದ ದವಸದಿಂದಲೇ ಅವರಿಗೆ ಗಂಜಿ ಮಾಡಿಸಿ ಹಾಕುತ್ತಾರೆ. ನೆರೆಗೆ ಹೆದರಿ ಗೇರುಮರದ ಆಶ್ರಯ ಪಡೆದ ಒಂದು ದಿನದ ಮಗು, ಬಾಣಂತಿ ಮತ್ತು ಅವಳ ಅತ್ತೆಯ ಪರಿಸ್ಥಿತಿಯನ್ನು ಕಂಡ ರಾಧಾಕೃಷ್ಣನ

ಮಾನವೀಯ ಮನಸ್ಸು ಅವರನ್ನು ತನ್ನ ಶಾಲಾ ಚಾವಣಿಗೆ ಕರೆದೊಯ್ಯುವುದರಲ್ಲಿದ್ದ. ಅವರು ಹೊಲತಿಯರಾದ್ದರಿಂದ ಅಲ್ಲಿ ಉಳಿದ ಜನರು ಇವರನ್ನು ಸೇರಿಸಿಕೊಳ್ಳದೆ ಇರಬಹುದೆಂದು ಬಗೆದು "ಇವರನ್ನು ಮರಕಾಲನ ಮನೆಯಲ್ಲಿ ಬಿಟ್ಟರೆ ಏನು?' ಎಂದು ಯೋಚಿಸಿದನು. ಜತೆಯಲ್ಲಿ ಮರಕಾಲನೂ ಇದ್ದ. ಆತನ ಮುಖವನ್ನು ನೋಡಿದ. ಆತ ಪ್ರತಿಯಾಗಿ "ಎಲ್ಲಿಗೆ, ದೇವರೇ" ಎಂದ "ನಿನಗೇನು ಬುದ್ಧಿ ಇಲ್ಲ. ಹೇಳಿದಷ್ಟು ಕೆಲಸ ಮಾಡು" ಎನ್ನುತ್ತಲೇ, ಆತ "ಶಾಲೆಗೆ ಇವರನ್ನು ಕರೆದು ಕೊಂಡು ಹೋದರೆ ಅವರು ಹೊರಟಾರು" ಎಂದನು. "ಯಾರ ಸುದ್ದಿ ನಿನಗೇಕೆ? ನಿನ್ನ ಮನೆಗೆ ಬಾರದಿದ್ದರೆ ಆಯಿತಲ್ಲ" ಎಂದನು ರಾಧಾಕೃಷ್ಣ. ಆತನ ಮುಖ ಸಪ್ಪಗಾಯಿತು. "ಏನು ಒಡೆಯ, ಎಲ್ಲರೂ ನನ್ನನ್ನು ಸದರ ಎಂದೇ ತಿಳಿದಿದ್ದಾರಲ್ಲ. ನನ್ನ ಮನೆಗೇ ಬರಲಿ ಅವರು; ನಾನೇ ಒಂದೆರಡು ದಿವಸ ಈಚೆ ಇರುತ್ತೇನೆ. ನಾನು ಹಾಗೆ ಯೋಚಿಸಿ ಹೇಳಿದರೆ, ನೀವು ನನ್ನನ್ನು ಕರುಳಿಲ್ಲದ ಮನುಷ್ಯನೆಂದು ತಿಳಿದು ಬಿಟ್ಟಿರಲ್ಲ"[೨೬] ಎನ್ನುವ ಬಿರುಮ-ರಾಧಾಕೃಷ್ಣರ ಸಂಭಾಷಣೆಯಲ್ಲಿ ರಾಧಾಕೃಷ್ಣನಿಗಿಂತಲೂ ಬಿರುಮನೇ ಮಿಗಿಲೆನಿಸುತ್ತಾನೆ. 'ಎಲ್ಲಿಗೆ, ದೇವರೇ' ಎಂಬ ಬಿರುಮನ ಮಾತಿನಲ್ಲಿರುವ ಧ್ವನಿ ತುಂಬ ಅರ್ಥಗರ್ಭಿತವಾಗಿದೆ. ನೆರ ಹಾವಳಿಯಲ್ಲಿ ಜನರನ್ನು ಸಂರಕ್ಷಿಸಲು ಬಂದ 'ದೇವರು'. ಹೊಲತಿಯರಂತಹ ಅಸ್ಪೃಶ್ಯರನ್ನು ಕಂಡು ತನ್ನ ಶಾಲೆಯಲ್ಲಿ ಆಶ್ರಯ ಪಡೆದ ಜನತೆ ಹೊರಟು ಹೋದಾರೆಂದು ಮನೆಗೆ ಕರೆದುಕೊಂಡು ಹೋಗುವಂತಹದ 'ದೇವರು' ಎಂಬ ಅರ್ಥ ಹುಟ್ಟುತ್ತವೆ. ಅಥವಾ ಸುಮ್ಮಸುಮ್ಮನೆ ತೊಂದರೆ ತೆಗೆದುಕೊಂಡು ಹೊಲತಿಯರನ್ನು ಮನೆಗೆ ಕರೆದೊಯ್ಯುವ ಸಲ್ಲದ ನಿರ್ಧಾರ ಮಾಡಿರುವ 'ದೇವರೇ' ಎಂದು ವ್ಯಂಗ್ಯವನ್ನು ಮಾಡುತ್ತಿರಬಹುದು. ಆದರೆ ಬಿರುಮನ ಮುಂದಿನ "ನಾನೇ ಒಂದೆರಡು ದಿನ ಈಚೆ ಇರುತ್ತೇನೆ....ನನ್ನನ್ನು ಕರುಳಿಲ್ಲದ ಮನುಷ್ಯನೆಂದು ತಿಳಿದು ಬಿಟ್ಟಿರಲ್ಲ" ಎಂಬ ಮಾತುಗಳನ್ನು ಗಮನಿಸಿದಾಗ ಮೊದಲಿನ ಅರ್ಥವೇ ಅವನ ಮಾತುಗಳಿಂದ ವೇದ್ಯವಾಗುತ್ತದೆ.

ಇದೇ ನೆರೆಹಾವಳಿಯ ಸಂದರ್ಭದಲ್ಲಿ ನಡೆದ ಇನ್ನೊಂದು ಘಟನೆ ಬಿರುಮನ ವ್ಯಕ್ತಿತ್ವವನ್ನು ಸಾದರ ಪಡಿಸುತ್ತದೆ. ಅದೆಂದರೆ ಬಿರುಮ ರಾಧಾಕೃಷ್ಣರು ನೆರೆ ಹಾವಳಿಯಲ್ಲಿ ಸಿಕ್ಕವರನ್ನು ರಕ್ಷಿಸಲು ಸಾಗಿರುತ್ತಾರೆ. ಹೀಗೆ ಸಾಗಿದಾಗ ಬಿರುಮನ ಕಡುವೈರಿಯಂತಿದ್ದ ಪೂಜಾರಿ ಮನೆಯಲ್ಲಿ ಕೂಡಿಟ್ಟ ಗಂಟಿನೊಂದಿಗೆ ಸಿಕ್ಕಿಕೊಂಡಿರುವಾಗ, ಅವನ ಮಗ ರಾಮಣ್ಣನ ಮೊರೆ ಕೇಳಿ ಮತ್ತು ರಾಧಕೃಷ್ಣನ "ದೊಡ್ಡ ಮನಸ್ಸು ಮಾಡು ಅಂದರೆ ಹೀಗೇನು? ನೀನು ಅವನ ಜೀವ ಕಾಪಾಡಿದರೆ, ಅವನು ಆ ಉಪಕಾರ ಮರೆಯಲಿಕ್ಕಿಲ್ಲ"ಎಂಬ ಮಾತಿಗೆ "....ಹೋಗಲಿ, ನೀವು ಅದಂದ್ದಕ್ಕೆ ಹೋಗುತ್ತೇನೆ. ಕಳ್ಳನಾಗಲಿ, ಸುಳ್ಳನಾಗಲಿ ಜೀವ ಜೀವವೇ"[೨೨] ಎಂದು ಪೂಜಾರಿಯನ್ನು ರಕ್ಷಿಸಲು ತೊಡಗುತ್ತಾನೆ. ಸುರಿಯುತ್ತಿರುವ ಮಳೆಯಲ್ಲಿಯೇ, ಮನೆ-ಮರಗಳ ಮಟ್ಟಕ್ಕೆ ಹರಿಯುತ್ತಿರುವ ನೀರಿನಲ್ಲಿ ದೋಣಿ

ತೆಲಿಸುತ್ತ ಹೋರಟ ಬಿರುಮನಿಗೆ ಪೂಜಾರಿಯ ಮಗ ರಾಮಣ್ಣ ಜೊತೆಯಾಗುತ್ತಾನೆ. "ದೋಣಿ ಅಂಬಿನಂತೆ ಮನೆಯ ಹುಲ್ಲಿನ ಚಾವಣಿಗೆ ಹೋಗಿ ಬಡಿಯಿತು... ಇಬ್ಬರೂ ಕಪಿಗಳಂತೆ ಮಾಡು ಹತ್ತಿದರು. ಮಾಡಿನ ಹುಲ್ಲನ್ನು ತೂತು ಮಾಡಿ ಬಿದಿರ ಎಳೆಗಳನ್ನು ಹಿಗ್ಗಿಸಿ, ಮಹಡಿಯೊಳಕ್ಕೆ ಹಾರಿದರು"[೭೮] ಮೂಲೆಯಲ್ಲಿ ಗಂಟಿನೊಂದಿಗೆ ಕುಳಿತ್ತಿದ್ದ ಪೂಜಾರಿ ಸುಬ್ಬನನ್ನು ಅದೇ ತೂತಿನ ಮೂಲಕ ಹೊರಬಂದು ದೋಣಿ ಏರಿದ ಸ್ವಲ್ಪ ಹೊತ್ತಲ್ಲೆ ಆ ಮನೆ ಕುಸಿದು ಬೀಳುತ್ತದೆ. ಬಿರುಮನ ಸಹಾಸ ಸಿನಿಮೀಯವಾಗಿದ್ದರೂ ವಾಸ್ತವತೆಯನ್ನು ಪಡೆದುಕೊಂಡಿದೆ. ಈ ಘಟನೆಗಳಿಂದ ಬಿರುಮ ಮರಕಾಲನು ರಾಧಾಕೃಷ್ಣನಿಗಿಂತಲೂ ಶ್ರೇಷ್ಠನಾಗುತ್ತಾನೆ. ಬಿರುಮ ಹಾಗೂ ಅವನ ಹೆಂಡತಿಯನ್ನು - ಹೆಂಡತಿಯ ಬಳೆಗಳನ್ನು ಒತ್ತೆಯಿಟ್ಟದ್ದನ್ನು ಹೇಳಿ-ಬೇರೆ ಬೇರೆ ಮಾಡಿ ಸಂಸಾರವನ್ನು ಹಾಳು ಮಾಡಿದ್ದ ಪೂಜಾರಿ ಸುಬ್ಬನನ್ನು ರಾಧಾಕೃಷ್ಣನ ಅಪೇಕ್ಷೆಯಂತೆ ರಕ್ಷಿಸುವುದು ಬಿರುಮನ ಕರ್ತವ್ಯ ಮತ್ತು ಮನುಷ್ಯತ್ವವಾಗುತ್ತದೆ. ರಕ್ಷಿಸಿದ್ದಕ್ಕೆ ಪ್ರತಿಯಾಗಿ ಅಡವಿಟ್ಟುಕೊಂಡಿದ್ದ ಬಳೆಗಳನ್ನು ಹಿಂದಿರುಗಿಸಿ ಸಂಸಾರ ಕೂಡಿಸಬೇಕಾದದ್ದು ಈಗ ಪೂಜಾರಿಯ ಕರ್ತವ್ಯ. ಆದರೆ ರಕ್ಷಿಸಿದ್ದಕ್ಕೆ ಕಳ್ಳು ಕುಡಿಸುತ್ತೇನೆ, ಕಳ್ಳಿನಲ್ಲಿಯೇ ಸ್ನಾನ ಮಾಡಿಸುತ್ತೇನೆ ಎನ್ನುವ ಪೂಜಾರಿಯ ಮಾತು ಕೃತಜ್ಞತೆಯ ಮಾತಾಗುವುದಿಲ್ಲ. ಅದಕ್ಕೆ ಬಿರುಮ "ನೀವು ಕೊಡುವ ಎರಡು ಸೀಸೆ ಹೆಂಡಕ್ಕೆ ಬಂದುದಲ್ಲ ನಾನು. ನಾನು ನಮ್ಮ ಮಾಸ್ತರರ ದಾಕ್ಷಿಣ್ಯಕ್ಕೆ ಬಂದೆ. ನಿಮ್ಮ ಇನಾಮುಗಲ್ಲ"[೭೯] ಎನ್ನುತ್ತಾನೆ. ಕೊನೆಗೆ ಇನ್ನೊಂದು ಸಂದರ್ಭದಲ್ಲಿ ಸುಬ್ಬನ ಮಗ ಪೂಜಾರಿ ರಾಮಣ್ಣ ಬಿರುಮನ ಉಪಕಾರವನ್ನು ಅವನ ಬಳೆ ಹಿಂತಿರುಗಿಸುವುದರ ಮೂಲಕ ತೀರಿಸುತ್ತಾನೆ.

ಬಿರುಮನ ಮನೆಯಲ್ಲಿದ್ದ ಹೊಲತಿಯರಲ್ಲಿ ಬೆಳಿಗ್ಗೆಯ ಹೊತ್ತಿಗೆ ಮುದುಕಿ ಎಲ್ಲೊಹೋಗಿ ಬಾಣಂತಿ ಸತ್ತು, ಮಗು ಅಳುತ್ತಿರುತ್ತದೆ. ಇದನ್ನು ಕಂಡ ರಾಧಾಕೃಷ್ಣ ಮತ್ತು ಬಿರುಮನ ಮನಸ್ಸು ವಿಕಲಿತಗೊಳ್ಳುತ್ತದೆ. ಸತ್ತ ಬಾಣಂತಿಯನ್ನು ಸಾಗಿಸುವ ಸಮಸ್ಯೆ ಒಂದೆಡೆಯಾದರೆ, ಬದುಕಿರುವ ಅನಾಥ ಶಿಶುವನ್ನು ಪಾಲನೆ ಮಡಬೇಕಾದ ಸಮಸ್ಯೆ ಇನ್ನೊಂದೆಡೆ ಕಾಡುತ್ತದೆ. ಬಾಣಂತಿಯನ್ನು ಆಮೇಲೆ ಸಾಗಿಸುವ ಯೋಚನೆ ಮಾಡಿ ಮಗುವನ್ನು ಮನೆಗೆ ಎತ್ತಿಕೊಂಡು ಸಾಗುತ್ತಾರೆ. ಬಿರುಮನ ಯೋಚನೆ ಮಾತ್ರ ಮಕ್ಕಳಿಲ್ಲದ ಹೊಲೆಯರನ್ನು ಹುಡುಕಿ ಕೊಡುವುದು. ಇಲ್ಲದ್ದೆಲ್ಲ ತಾಪತ್ರಯ ಬೇಡ ಎನ್ನುತ್ತಾನೆ. ಅದಕ್ಕೆ ರಾಧಾಕೃಷ್ಣ "ಇದನ್ನೆಲ್ಲ ತಾಪತ್ರಯ ಎಂದು ತಿಳಿಯಬಾರದು; ತಿಳಿದು ಮಾಡಬಾರದು. ಏನು ಮಾಡುವುದಿದ್ದರೂ ಅದನ್ನು ಸಂತೋಷದಿಂದ ಮಾಡಬೇಕು. ಯಾರು ಯಾರಿಗೆ, ಯಾವ ಯಾವ ಗಳಿಗೆಗೆ ಏನೇನು ಕಷ್ಟ ಬಂದೀತು-ಎಂದು ಹೇಳುವುದು ಹೇಗೆ? ನಾಳೆ ನಾನೂ, ನೀನು ಸುದ್ದಿ ಇಲ್ಲದೆ ಕಣ್ಣು ಮುಚ್ಚಬಾರದೆಂದು ಇದೆಯೋ?"[೮೦] ಎನ್ನುವ ಮಾತುಗಳು ಮಾನವೀಕರಣದ ತತ್ವವನ್ನು ಸಾರುತ್ತವೆ. ಹೆಂಡತಿ ಸತ್ಯಭಾಮೆಗೆ ಮಗುವನ್ನು ತೋರಿಸಿ ವಿಷಯ

ಹೇಳುವಾಗ "ನಿಜಕ್ಕೂ ತಂದೆಯು ಮಡಿದ ಆ ದಿನ ಅವನ ಮನಸ್ಸಿನಲ್ಲಿ ಉಂಟಾದ ಬೇಸರದ ನಾಲ್ಕು ಪಾಲು ನೋವು, ಈಗ ಉಂಟಾಗಿದೆ"[೮೧] ಎನ್ನುವ ನಿರೂಪಣೆ ರಾಧಾಕೃಷ್ಣನ ಮನದಾಳದ ನೋವು ಓದುಗರ ಮಾನವೀಕರಣವನ್ನು ಕೆಣಕುತ್ತದೆ. ಸತ್ಯಭಾಮೆಯು ರಾಧಾಕೃಷ್ಣನಿಗೆ ತಕ್ಕ ಹೆಂಡತಿಯೇ ಆದ್ದರಿಂದ "ಆ ಮುಖದ ಇಂಗಿತವನ್ನು ಕ್ಷಣದಲ್ಲೆ ಅರಿತಳು. 'ನಿಮಗೇನು ಬೇಸರ? ನಾನು ಏನಾದರೂ ಅಂದೇನು ಎಂದೇ.! ನನಗೂ ಏನೆಂದು ದಾರಿ ತೋರುವುದಿಲ್ಲ. ಆದರೆ ಆಪತ್ತು ಬಂದಾಗ ಹೊಲೆಯರೂ, ಬ್ರಾಹ್ಮಣರೂ ಒಂದೇ, ಜೀವ ಜೀವವೇ, ಬದುಕು ಬದುಕೇ ಹೀಗೆಂದು ಒಂದು ಮೂಲೆಯಲ್ಲಿ ಚಾಪೆ ಹರಡಿ, ಬಟ್ಟೆ ಹಾಸಿ, ಮಗುವನ್ನು ತಾನೇ ಎತ್ತಿಕೊಂಡು ಹೋಗಿ ಮಲಗಿಸಿದಳು"[೮೨] ಆದರೂ ಬ್ರಾಹ್ಮಣಿ ಸಂಪ್ರದಾಯಸ್ಥ ಕುಟುಂಬದಲ್ಲಿ ಬೆಳೆದವಳಾದ್ದರಿಂದ ಶೂದ್ರಮಗುವನ್ನು ಸಾಕುವ ಮನಸ್ಸು ಮಾಡದೆ, ಯಾರಿಗಾದರೂ ಕೊಟ್ಟು ಮನೆಯನ್ನು ಗೋಮಯ ಗೊಳಿಸಬೇಕು ಎನ್ನುತ್ತಾಳೆ.

ಬಿರುಮ ಮೂಲತಃ ನಿಷ್ಠುರವಾದಿ ಇನ್ನೊಬ್ಬರ ಸಹವಾಸ ನಮಗೇಕೆ ಎನ್ನುವವನು. ರಾಧಾಕೃಷ್ಣನ ಮನಸ್ಸು ನೋಯಬಾರದೆಂದು ಕೂಸು-ಹೊಲತಿಯರ ವಿಷಯದಲ್ಲಿ ಅನುಕೂಲರವಾಗಿ ನಡೆದು ಕೊಳ್ಳುತ್ತಾನೆ. ಕೂಸನ್ನು ತಂದೆಗೆ ಒಪ್ಪಿಸುವಲ್ಲಿ ಬಿರುಮ-ರಾಧಾಕೃಷ್ಣ ಶ್ರಮಪಡುತ್ತಾರೆ. ಆದರೆ ಮಗುವಿನ ತಂದೆ ಇನ್ನೊಂದು ಮದುವೆಯಾಗಿ ಮಗು ನೋಡದೆಯೇ ಎಲ್ಲೋ ಹೋಗಿರುತ್ತಾನೆ. ಇದನ್ನು ತಿಳಿದು ಬಿರುಮ 'ಅವನಿಗೆ ಬೇಡದ ಮಗುವನ್ನು ನೀವು ಏನೆಂದು ಸಾಕುವುದು? ಸತ್ತರೆ ಸಾಯುತ್ತದೆ; ಬದುಕಿದರೆ ಬದುಕುತ್ತದೆ. ಯಾರಿಗಾದರೂ ಕೊಟ್ಟು ಬಿಡಿ. ನಾನಾದರೆ ಮೂರು ದಾರಿ ಸೇರುವಲ್ಲಿ ಅದನ್ನು ಬಿಟ್ಟು ಬರುತ್ತಿದ್ದೆ....."[೮೩] ಎಂದು ಕೋಪಿಸಿಕೊಂಡೇ ಹೇಳುತ್ತಿದ್ದ. ಆದರೆ ಮಾನವೀಯ ಮನಸ್ಸುಳ್ಳ ರಾಧಾಕೃಷ್ಣ ಮಾತ್ರ "ತಂದೆಗೆ ಬೇಡಾದ ಮಕ್ಕಳು, ಮಕ್ಕಳಿಗೆ ಬೇಡವಾದ ತಂದೆ ಊರಲ್ಲಿ ಸಾವಿರಾರು ಇರುತ್ತವೆ....ಅವನು ಮನುಷ್ಯನಾಗಿದ್ದರೆ ಕೂಸನ್ನು ನೋಡುವುದಕ್ಕಾದರೂ ಬರುತ್ತಿದ್ದ"[೮೪] ಎಂದು ತಂದೆಗೆ ಬೇಡಾದ ಮಗುವನ್ನು ತನ್ನ ದಲಿತಾಶ್ರಮದಲ್ಲಿ ಪೋಷಿಸಲು ನಿರ್ಧರಿಸುತ್ತಾನೆ. ಮಗುವಿಗೆ ಜ್ವರಬಂದು ಆಸ್ಪತ್ರೆಗೆ ಹೋದಾಗ ಹೊಲೆಯರ ಮಗುವೆಂದು ಗೊತ್ತಾಗಿ ಶೂಶ್ರುಷೆ ನಿಧಾನವಾಗಿ ಮಗು ಅಲ್ಲಿಯೇ ಶವವಾಗುತ್ತದೆ. ಮನೆಗೆ ತಂದು ಸ್ವತಃ ಮಗನು ಸತ್ತಾಗ ಆಗುವ ದುಃಖವು ರಾಧಾಕೃಷ್ಣನಿಗಾಗುತ್ತದೆ.

ದಲಿತಾಶ್ರಮದಲ್ಲಿ ಸ್ವಾತಂತ್ರ್ಯ ಹೋರಾಟಕ್ಕೆ ತೊಡಗಿದವರ ಮಕ್ಕಳನ್ನು ಪೋಷಿಸುವ ಕಾಯಕ ನಡೆಯ ತೊಡಗಿತು. ರಾಧಾಕೃಷ್ಣನೂ ಹೋರಾಟದಲ್ಲಿ ಪಾಲ್ಗೊಂಡಿದ್ದರಿಂದ ಸತ್ಯಳಿಗೆ ಆ ಹೊರೆ ಬಿದ್ದಿತು. ಅನಾಥ ಶಿಶುವಾಗಿಯೇ ಬಂದು ಅವರಲ್ಲಿಯೇ ಮಗನಂತಿರುವ ಶ್ಯಾಮನು ಸತ್ಯಳಿಗೆ ನೆರವಾಗುತ್ತಾನೆ. ಉಡುಪಿ ಕಡೆಯ ಮಕ್ಕಳಾದ ನಾಗಪ್ಪ, ಕಿಟ್ಟಣ, ಮಹಾದೇವ, ಶಾರದೆ,

ಗಂಗೆಯರನ್ನು ರಾಧಾಕೃಷ್ಣ ಆಶ್ರಮಕ್ಕೆ ಕಳುಹಿಸುತ್ತಾನೆ. ಇವರು ಸತ್ಯಳೊಂದಿಗೆ ಹೊಂದಿಕೊಂಡೇ ಜೀವಿಸುತ್ತಾರೆ. ಮಕ್ಕಳನ್ನು ಪಾಲಿಸುವ ಮಾನವೀಯ ಕರ್ತವ್ಯ ಸತ್ಯಳದಾಗಿತ್ತು.

ಸತ್ಯಳಿಗೆ ಮಕ್ಕಳ ಹೊರೆ ಹೆಚ್ಚಿದಂತೆಲ್ಲ ಆಹಾರದ ಸಮಸ್ಯೆ ಉಲ್ಬಣಗೊಳ್ಳತೊಡಗಿತು. ಇದರ ನಿವಾರಣೆಗಾಗಿ ಮಕ್ಕಳು ಬಿಕ್ಷಾಟನೆಗೆ ತೊಡಗುವುದು ಅನಿವಾರ್ಯವಾಗುತ್ತದೆ. ಶ್ಯಾಮ, ಸತ್ಯರ ಸ್ವಾಭಿಮಾನದಿಂದ ಎಮ್ಮೆಗಳನ್ನು ಸಾಕಿ ಹಾಲು ಮಾರುವುದಾಗಿ ತೀರ್ಮಾನಿಸಿ, ರಾಮಣ್ಣನ ಸಹಾಯದಿಂದ ಎರಡು ಎಮ್ಮೆಗಳನ್ನು ಸಾಕುತ್ತಾಳೆ. ರಾಮಣ್ಣನ ಔದರ್ಯದಿಂದ ಎಮ್ಮೆಗಳ ಹಣವನ್ನು ಅವನೇ ಒದಗಿಸುತ್ತಾನೆ. ರಾಮಣ್ಣ ತಂದೆಯಂತಲ್ಲ. ತಂದೆ ಸುಬ್ಬ ಮಹಾಲೋಬಿ, ಅಷ್ಟೇ ಉದಾರಿ ಮಗ ರಾಮಣ್ಣ.

ಸತ್ಯಭಾಮೆ ರಾಧಾಕೃಷ್ಣನೊಂದಿಗೆ ಸುಖಜೀವನ ಅನುಭವಿಸುವ ಆಸೆ ಹೊತ್ತು ಅವನ ಕೈಹಿಡಿದವಳು. ಗಾಂಧೀವಾದದ ನೆರಳನ್ನಾಶ್ರಯಿಸಿದ ರಾಧಾಕೃಷ್ಣ ನಿಂತಲ್ಲಿ ನಿಲ್ಲಲಾರದೆ ಊರೂರು ಸುತ್ತುತ್ತಾ ದಲಿತಾಶ್ರಮ, ರಾಷ್ಟ್ರೀಯ ವಿದ್ಯಾಪೀಠ, ಉದ್ಯೋಗಮಂದಿರ ಎಂಬ ಸಂಸ್ಥೆಗಳನ್ನು ಕಟ್ಟಿ ರಾಷ್ಟ್ರ ನಿರ್ಮಾಣದ ಕನಸು ಹೊತ್ತಿದ್ದಾನೆ. ಈ ನಿಟ್ಟಿನಲ್ಲಿ ಸ್ಥಾಪಿಸಿದ ರಾಷ್ಟ್ರೀಯ ವಿದ್ಯಾಪೀಠ ಮತ್ತು ದಲಿತಾಶ್ರಮಗಳು ಬಹುದಿನ ಬಾಳದೆ ಹೋದವು. ಕೊನೆಗೆ ಗೆಳೆಯ ಪ್ರಭುದೇವ, ಸಾಣೇಕಲ್, ನಿವೃತ್ತ ಐ.ಪಿ.ಎಸ್. ಅಧಿಕಾರಿ ಪುರುಷೋತ್ತಮ ಮೊದಲಾದವರೊಂದಿಗೆ ಆರಂಭಿಸಿದ ಉದ್ಯೋಗ ಮಂದಿರ ಉತ್ತಮ ಕಾರ್ಯಕ್ಕೆ ಅಣಿಯಾಯಿತು. ಇವರ ಕೆಲಸಗಳಿಗೆ ಸಹಾಯಕಳಾಗಿ ಸತ್ಯ ಕೆಲಸಮಾಡ ತೊಡಗಿದಳು. ಉದ್ಯೋಗ ಮಂದಿರದ ಭಾಗವಾದ ಗೋಶಾಲೆ ಮತ್ತು ಕೃಷಿಯ ವಿಭಾಗದ ಮೇಲ್ವಿಚಾರಣೆ ಸತ್ಯ ಮತ್ತು ಶ್ಯಾಮರ ಪಾಲಿಗೆ ಬರುತ್ತವೆ. ಸತ್ಯ ರಾಧಾಕೃಷ್ಣನ ಕೈ ಹಿಡಿದಾಗಿನಿಂದಲೂ ಕಷ್ಟದ ಕಣ್ಣೀರನ್ನು ಸುರಿಸುತ್ತಲೇ ಬಾಳಿದಳು. ತುಂಬಾ ಧೈರ್ಯವಂತೆಯಾದ್ದರಿಂದ ರಾಧಾಕೃಷ್ಣನ ಎಲ್ಲ ಸಾಹಸಗಳಿಗೂ ಹೆಗಲು ಕೊಟ್ಟು ನಿಲ್ಲುತ್ತಿದ್ದಳು. ಅವಳ ಜನನದ ಮೂಲ ನಕ್ಷತ್ರದ ದೋಷವೋ ರಾಧಾಕೃಷ್ಣನ ಗಾಂಧೀತತ್ವದ ಫಲವೋ ಜೀವನದುದ್ದಕ್ಕೂ ಸುಖ ಎಂಬುದೇ ಇಲ್ಲವಾಗುತ್ತದೆ. ಅವಳ ಸಹಾಯಕ್ಕೆ ನಿಂತ ಶ್ಯಾಮ ಅನಾಥನಾಗಿ ಬಂದವನು. ತಮ್ಮನ ಹಾಗೆಯೇ ಎಲ್ಲ ಕಷ್ಟಗಳಿಗೂ ಹೆಗಲು ಕೊಟ್ಟು ಬಾಳುತ್ತಾನೆ. ಸತ್ಯ-ರಾಧಾಕೃಷ್ಣ-ಶ್ಯಾಮ ಬಹು ಶ್ರಮವಹಿಸಿ ದುಡಿದವರು. ಸತ್ಯ ಸಂಪ್ರದಾಯಸ್ಥ ಕುಟುಂಬದಿಂದ ಬಂದವಳಾದ್ದರಿಂದ ಕೆಲವೊಮ್ಮೆ ಜಾತಿಯತೆಯ ಭಾವನೆ ಅವಳ ಮನದಲ್ಲಿ ಮೂಡುತ್ತದೆ. ಸತ್ಯ ಒಬ್ಬ ಆದರ್ಶ ಮಹಿಳೆಯಾಗಿ ರಾಧಾಕೃಷ್ಣನೊಂದಿಗೆ ಜೀವನ ಸಾಗಿಸುತ್ತಾಳೆ. ಮಾನವೀಕರಣದ ಪರಿಕ್ರಮಣದಲ್ಲಿ ಸತ್ಯಳಂಥ ಪಾತ್ರ ಮುಖ್ಯವಾಗುತ್ತದೆ. ಚಳುವಳಿಯ ಸಂದರ್ಭದಲ್ಲಿ ಅನಾಥರಾಗಿದ್ದ ಮಕ್ಕಳಿಗೆ ಆಶ್ರಯಕೊಟ್ಟು, ಜೀವನ ತತ್ವವನ್ನು ಬೋಧಿಸಿದ ಸತ್ಯ ನಿಜಕ್ಕೂ ಮಾನವೀಯ ಮೌಲ್ಯಗಳ ಪಾಲಕಳು. ಶ್ಯಾಮ ಇವಳ ಬಲಗೈ. ಅವನೂ

ಕೂಡ ಈ ಮಾನವೀಕರಣದ ಪ್ರಕ್ರಿಯೆಯಲ್ಲಿ ಮುಖ್ಯ ಪಾತ್ರವಹಿಸುತ್ತಾನೆ. ಬಾಲಕನಾಗಿದ್ದಗಿನಿಂದಲೂ ರಾಧಾಕೃಷ್ಣ ಸತ್ಯರ ಜೊತೆಗೆ ದುಡಿಯುತ್ತ ಬಾಳು ಸವೆಸಿದವನು. ಕಲ್ಯಾಣಿ ಎಂಬುವಳನ್ನು ಮದುವೆಯಾಗಿ 'ಔದ್ಯೋಗಿಕ ಮಂದಿರ'ದಲ್ಲಿ ಉಪನ್ಯಾಸಕನಾಗಿ ಕೆಲಸ ಮಾಡ ತೊಡಗಿದನು.

ಔದ್ಯೋಗಿಕ ಮಂದಿರವು ಪ್ರಭುದೇವನ ಹಣಕಾಸಿನ ಸಹಾಯದಿಂದ, ರಾಧಕೃಷ್ಣ, ಶ್ಯಾಮ, ರಾಮಕೃಷ್ಣಯ್ಯನವರ ಬೌದ್ಧಿಕ ಶ್ರಮದಿಂದ ತುಂಬ ಚೆನ್ನಾಗಿ ನಡೆಯತೊಡಗಿತು. ಪ್ರಭುದೇವನ ಹಣಕಾಸಿನ ಮೂಲದ ಬಗ್ಗೆ ರಾಧಾಕೃಷ್ಣನಿಗೆ ಸಂಶಯ ಬಂದಿದ್ದರಿಂದ ಹಣ ಒದಗಿಸುವವರ ವಿಳಾಸ ಹಿಡಿದುಕೊಂಡು ಉತ್ತರ ಭಾರತದ ಪ್ರವಾಸ ಮಾಡಿದಾಗ, ಪ್ರಭುದೇವನ ಅನೇಕ ಅವ್ಯವಹಾರಗಳು ಕಣ್ಣಿಗೆ ಬೀಳುತ್ತವೆ. ಪಟ್ಟಿಯಲ್ಲಿರುವ ವಿಳಾಸದ ವ್ಯಕ್ತಿಗಳು ಒಬ್ಬರು ಸಿಗದೆ, ಒಂದಂಕಿ ಲಾಟರಿ, ಜಾಹೀರಾತುಗಳ ಮೂಲಕ ಹಣ ಸಂಗ್ರಹಣೆ ಮಾಡುವ ಕುತಂತ್ರ ಬೆಳಕಿಗೆ ಬರುತ್ತದೆ. ಇದರಿಂದ ವ್ಯಾಕುಲಗೊಂಡ "ರಾಧಕೃಷ್ಣ ಶಿರ್ಸಿಯಲ್ಲಿ ಬಸ್ಸನ್ನೇರಿ ಕುಳಿತವನು ಸಿದ್ಧಾಪುರದ ತನಕವೂ ಮೂಕನಂತಿದ್ದ. ಆಚೀಚೆ ಕುಳಿತವರೊಡನೆ ಮಾತೆಂಬುದಿಲ್ಲ. ಆ ಅಪರಿಚಿತ ಜಗತ್ತು ಅವನಿಗೆ ಬೇಡವಾಗಿತ್ತು. ಪರಿಚಿತವಾದ ಜಗತ್ತಿನಲ್ಲಿ ಇನ್ನಷ್ಟು ಅಸಹ್ಯ ಹುಟ್ಟಿತ್ತು. ರೈಲಿನಲ್ಲಿ ಕುಳಿತಿದ್ದಾಗಲೂ ಸರಿಯೇ, ಈಗಲಾದರೂ ಸರಿಯೇ, ತನ್ನೆದುರಿಗೆ ಸಾಗುತ್ತಿದ್ದ ಗಿಡಮರಗಳು ತನ್ನನ್ನು ಮೂದಲಿಸಲು ಬಂದಂತೆ, ತನ್ನನ್ನೇ ಕೈಮಾಡುವಂತೆ, ತನ್ನ ಹಿಡಿತದಿಂದ ಸಿಕ್ಕಿಯೂ ಓಡುವ ನಿಸರ್ಗದ ಅಣಕಾಟದಂತೆ ಕಾಣುತ್ತಿತ್ತು. ಆ ಗಿಡಮರಗಳಂತೆಯೇ ಮಾನವೀ ಜಗತ್ತು ತನ್ನನ್ನು ಅಪಹಾಸ್ಯಕ್ಕೆ ಗುರಿಮಾಡುತ್ತಿದೆ ಅನಿಸುತ್ತಿತ್ತು. ಆಚೀಚೆ ಜನರೊಡನೆ ಕುಳಿತಿದ್ದರೂ ತಾನಾರು, ಅವರಾರು ಎಂಬ ಭೇದ ಚೆನ್ನಾಗಿ ಕಾಣುತ್ತಿತ್ತು. ಪ್ರಪಂಚದಲ್ಲಿ ಮಿತ್ರ ಶತ್ರುಗಳೊಳಗಿನ ಭೇದವೆಂಬುದು ಅವನ ಪಾಲಿಗೆ ಮಾಯವಾಗಿದೆ."[೮೫] ಪ್ರಭುದೇವ ಮಿತ್ರನೆಂದು ನಂಬಿ ತನ್ನ ಸಂಸ್ಥೆಯ ಹಣಕಾಸಿನ ನಿಭಾವಣೆ ವಹಿಸಿದ್ದ ರಾಧಾಕೃಷ್ಣ. ಆದರೆ ಪ್ರಭುದೇವ ಅನೈತಿಕ ಮಾರ್ಗದಿಂದ ಹಣ ಸಂಗ್ರಹಿಸಿ ಸಂಸ್ಥೆಗೆ ನೀಡುತ್ತಿದ್ದ. ಇದನ್ನು ತಿಳಿದ ರಾಧಾಕೃಷ್ಣ ಈ ಲೋಕ ತನ್ನನ್ನು ಕ್ಷಮಿಸಲಾರದು. ಔಪಚಾರಿಕ ಶಿಕ್ಷಣ ಸಂಸ್ಥೆಗಳಿಗೆ ಅನೈತಿಕ ಮಾರ್ಗದ ಹಣದ ಬಳಕೆ ಸಲ್ಲದೆಂದು ಮೂಕನಾಗಿದ್ದ. ಆದಷ್ಟು ಬೇಗ ಪರಿಹಾರ ಕಂಡುಕೊಂಡು ಪ್ರಭುದೇವನನ್ನು ದೂರವಿರಿಸಲು ಯೋಚಿಸುತ್ತಿದ್ದ. ಶ್ಯಾಮ, ರಾಮಕೃಷ್ಣಯ್ಯರೊಂದಿಗೆ ಚರ್ಚಿಸಿ, ಪ್ರಭುದೇವನನ್ನು ದೂರವಿರಿಸಿದ. 'ಶಾಲೆಯ ವಿಷಯದಲ್ಲಿ ನಿಮ್ಮ ಸಂಬಂಧ ಇರಿಸಿಕೊಳ್ಳಲು ಸಾಧ್ಯವಿಲ್ಲ'[೮೬] ಎಂದು ನಿಷ್ಠುರವಾಗಿಯೇ ತಿಳಿಸಿದ. ಶಾಲೆಯ ಹೆಸರಿನಲ್ಲಿ ನಡೆಯುತ್ತಿರುವ ಸುಲಿಗೆಯಿಂದ ಜೈಲು ಸೇರಬಹುದೆಂಬ ಹೆದರಿಕೆಗಿಂತ "ನನಗೆ ನೀತಿಯ ಹೆದರಿಕೆ ಇನ್ನು ಉಳಿದಿದೆ. ಹೇಗಾದರೂ ಮಾಡಿ ಬದುಕಬೇಕು. ಸಂಸ್ಥೆ ನಡೆಯಿಸಬೇಕೆಂಬ ಹಟ ಇಲ್ಲ. ಯಾಕೆ ನನ್ನನ್ನು ನೋಯಿಸುತ್ತೀರಿ?"[೮೭] ಎಂದು ನೈತಿಕ ಮೌಲ್ಯಕ್ಕೆ ಕಟ್ಟು ಬೀಳುತ್ತಾನೆ. ಪ್ರಭುದೇವನನ್ನು ಹತ್ತಿರವಿಟ್ಟುಕೊಂಡರೆ ನೈತಿಕ ಮಟ್ಟ

ಇನ್ನೂ ಕುಸಿಯುವುದೆಂಬ ಉದ್ದೇಶದಿಂದ ಅವನನ್ನು ದೂರವಿರಿಸಿದ. ನಂತರ ತನ್ನ 'ಔದ್ಯೋಗಿಕ ಮಂದಿರ'ದ ವಿತ್ತ ನಿರ್ವಹಣೆಗಾಗಿ ಡಾ.ನಂದಾ, ಪುರುಷೋತ್ತಮರಲ್ಲಿ ಹಾಗೂ ಜನತೆಯ ಮೂಲಕ ಚಂದಾವನ್ನು ಸಂಗ್ರಹಿಸ ತೊಡಗಿದನು. ಉದ್ಯೋಗ ಮಂದಿರದಲ್ಲಿನ ಶಿಕ್ಷಣಾರ್ಥಿಗಳಿಗೆ ತಮ್ಮ ಸ್ವಂತ ಕಾಲಿನ ಮೇಲೆ ನಿಲ್ಲುವಂತಹ ಸಾಮರ್ಥ್ಯವನ್ನು ಬೆಳೆಸುತ್ತಿತ್ತು. ಗಾಂಧೀಜಿಯವರು ಹೇಳುತ್ತಿದ್ದ ವೃತ್ತಿ ಶಿಕ್ಷಣವನ್ನು ಅನುಷ್ಠಾನಕ್ಕೆ ತರುವುದು ರಾಧಾಕೃಷ್ಣನ ಧ್ಯೇಯವಾಗಿತ್ತು. ಶಿಕ್ಷಣವು ಜ್ಞಾನ ಮತ್ತು ವೃತ್ತಿಯನ್ನು ನೀಡಬೇಕೆ ಹೊರತು ಅವಜ್ಞೆ ಮತ್ತು ಸೋಮಾರಿತನವನ್ನಲ್ಲ ಎಂಬ ನಿಟ್ಟಿನಲ್ಲಿ ರಾಧಾಕೃಷ್ಣನ ಉದ್ಯೋಗಮಂದಿರ ಕಾರ್ಯತತ್ಪರವಾಗಿತ್ತು. ಕೃಷಿ, ವೃತ್ತಿ ಕಸಬು, ಗೋಪಾಲನೆ, ಹೈನುಗಾರಿಕೆ-ಮೊದಲಾದ ಕಿರುಬಂಡವಾಳದ ವೃತ್ತಿಗಳನ್ನು ಪ್ರೋತ್ಸಾಹಿಸಿ, ತರಬೇತಿ ನೀಡುತ್ತಿದ್ದ ರಾಧಾಕೃಷ್ಣ ನಿರುದ್ಯೋಗವನ್ನು ನಿರ್ಮೂಲನ ಮಾಡುವ, ಮಾನವೀಕರಣವನ್ನು ಪ್ರಚುರಪಡಿಸುವ ಕಾಯಕದಲ್ಲಿ ತೊಡಗಿದ್ದನು.

ಡಾ.ನಂದ, ಪುರುಷೋತ್ತಮರು ಕೆಲಸ ಮಾಡದೆ, ಉದ್ಯೋಗ ಮಂದಿರದಿಂದ ಕೀರ್ತಿಗೆ ಮಾತ್ರ ಭಾಗವಹಿಸುತ್ತಿದ್ದರು. ಇಂತಹದನ್ನು ಸಹಿಸದ ರಾಧಾಕೃಷ್ಣ ಶಾಲೆಯನ್ನು ವಿಸರ್ಜಿಸಿ ಬಿಡುತ್ತಾನೆ. ಕೆಲಸ ಮಾಡದಿರುವುದು ಅಪಮಾನ. ಸೋಲುವುದು ಅಪಮಾನವಲ್ಲ'[೮೮] ಎಂಬ ತತ್ವದ ಮೇಲೆ ನಂಬಿಕೆಯನ್ನು ಅವರನ್ನೂ ದೂರವಿಟ್ಟು ಮಂದಿರವನ್ನು ಮುಚ್ಚಿ ಹಾಕಿ ವಿಶ್ರಾಂತಿಗಾಗಿ ತನ್ನ ಹಳೆಯ ಗೆಳೆಯ ಮುಂಬೈಯ ಸುಖಾರಾಮನಲ್ಲಿಗೆ ಹೋಗುತ್ತಾನೆ. ಅಲ್ಲಿಯ ಚಳುವಳಿಯ ಕಾವಿನಿಂದಾಗಿ ತಾನೂ ಭಾಗವಹಿಸುತ್ತಾನೆ. ಅಲ್ಲಿ ಹಲವಾರು ಆದರ್ಶ ದಂಪತಿಗಳನ್ನು, ಸಮಾಜ ಸೇವಕರನ್ನು, ಹೋರಾಟಗಾರರನ್ನು ಸುಖಾರಾಮ ಪರಿಚಯಿಸಿಕೊಡುತ್ತಾನೆ. ನಿರಾಶೆಗೊಂಡಿದ್ದ ರಾಧಾಕೃಷ್ಣ ಮತ್ತೆ ಆಶಾಭಾವ ಹೊಂದುತ್ತಾನೆ. ''ತಾನು ಅವರಿಗಿಂತ ಏನಾದರೂ ಹೆಚ್ಚಿನ ಹಾನಿ ಹೊಂದಿದ್ದೇನೆಯೇ? ಊರು ಭದ್ರವಾಗಿದೆ. ದೇಶ ಭ್ರಷ್ಟನಾಗಿಲ್ಲ. ಹೊಟ್ಟೆಯ ಚಿಂತೆಯೂ ಕಾಡುತ್ತಲಿಲ್ಲ. ಅದರಿಂದ ತನ್ನ ಆಸೆಗಳು ಬತ್ತಬೇಕೇಕೆ? ಎಷ್ಟೋ ಕೆಲಸಗಳು, ಅದರಲ್ಲಿಯೂ ಸಾಮಾಜಿಕವಾದುವುಗಳು ಹಲವರನ್ನು ಬೆದರಿಸಿವೆ ನಿಜ. ಆ ಹಲವಾರು ಕೈ ಬಿಟ್ಟರೂ ತನ್ನೊಬ್ಬನಿಂದ ಆಗಬಹುದಾದ ಕೆಲಸಗಳೇ ಇಲ್ಲವೇನು- ಎನಿಸಿತು. ಏನಿಲ್ಲ, ತಾನೊಬ್ಬ ವಿಚಾರ ಶಾಲಿಯಾಗಿ ಸುತ್ತಲಿನ ಪ್ರಪಂಚದ ಆಯ ಆಳತೆಗಳನ್ನರಿತು ಬದುಕಿದುದ್ದಾದರೆ ಅದೇನೇ ಸಮಾಜಕ್ಕೊಂದು ಕಾಣಿಕೆ- ಎಂದು ತೋರಿತು.''[೮೯] ಹೀಗೆ ಯೋಚಿಸಿ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಲು ಅನುವಾದ. ಊರಿಂದೂರಿಗೆ ನಡೆದಾಡುತ್ತಾ ವಸ್ತುಗಳನ್ನು ಮಾರಾಟ ಮಾಡುವ ನೆಪದಲ್ಲಿ ಗಾಂಧೀಜಿಯವರ ವಿಚಾರಗಳನ್ನು ಚಳುವಳಿಯ ಬೀಜವನ್ನು ಬಿತ್ತ ತೊಡಗಿದನು. ಸ್ವಾತಂತ್ರ್ಯ ಸಂಗ್ರಾಮದ ಬಿಸಿ ಏರುತ್ತಿದ್ದಂತೆ ರಾಧಾಕೃಷ್ಣನ ಮನೆಯಲ್ಲಿ ಮಗನಿಗೆ ಟೈಫಾಯಿಡ್ ಜ್ವರದ ಕಾವು ಏರಿತ್ತು. ಅವನಿಗೆ ಎಷ್ಟು ಶುಶ್ರೂಷೆ ಮಾಡಿದರು ನಿಯಂತ್ರಣಕ್ಕೆ

ಬರುತ್ತಿಲ್ಲ. ಬ್ರಿಟಿಷರ ಬಿಗಿ ನೀತಿಯಿಂದ ಔಷಧಿ ಸರಿಯಾಗಿ ದೊರಕುತ್ತಿಲ್ಲ. ಗ್ಲುಕೋಸ್ ಸಿಗುತ್ತಿಲ್ಲ. ಕಾಳಸಂತೆಯಲ್ಲಿ ಸಿಕ್ಕರೂ ಅದು ಉತ್ತಮ ದರ್ಜೆಯದಲ್ಲ. ಹೀಗಾಗಿ ಪರಿಸ್ಥಿತಿಯು ವಿಕೋಪಕ್ಕೆ ತಿರುಗುತ್ತದೆ. ರಾಧಾಕೃಷ್ಣನಿಗೆ ತಂತಿ ಮೂಲಕ ಸುದ್ದಿ ತಿಳಿದಾಗ ಮನೆಗೆ ಹಿಂತಿರುಗುತ್ತಾನೆ. ಗ್ಲುಕೋಸ್‌ಗೆ ತುಂಬಾ ಪರಿತಪಿಸುತ್ತಾನೆ. ಸಿಗುತಿಲ್ಲ. ಹಿಂದಿನ ಶಾಲೆಯ ಆಡಳಿತದಲ್ಲಿ ಭಾಗಿಯಾಗಿದ್ದ ಡಾ. ನಂದ ಅವರ ಔಷಧಿ ಅಂಗಡಿಯಲ್ಲಿ ರಾಧಾಕೃಷ್ಣನಿಗೆ ಗ್ಲುಕೋಸ್ ಸಿಗುವ ನಂಬಿಕೆಯಿಲ್ಲದಾಗ ಹಳೆಯ ಶಿಷ್ಯ ರಾಮಣ್ಣನಿಂದ ತರಿಸಿಕೊಂಡು ಮಗುವನನ್ನು ಬದುಕಿಸಿಕೊಳ್ಳುತ್ತಾನೆ. ನಂದ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸುವ ನೆಪವೊಡ್ಡಿ, ಜೈಲು ಸೇರಿ-ಬರಿ ಬಾಯಿ ಮಾತಿನ ಮೂಲಕ ಗಾಂಧಿತತ್ವ ಉಸುರುತ್ತಾನೆ. ಪ್ರಜೆಗಳಿಗೆ ಔಷಧಿ ಮಾರುವುದು ಮಾತ್ರ ಒಂದಕ್ಕೆ ಎರಡರ ಧರದಂತೆ ಅದೂ ಕೀಳು ದರ್ಜೆಯ ಔಷಧಿಯನ್ನ. ಒಂದು ವೇಳೆ ''ನಾನೇ ಕಾಯಿಲೆ ಬಿದ್ದಿದ್ದರೆ, ನಂದರಂಥವರಿಗೆ ಕಾಳಸಂತೆಯಲ್ಲಿ ದುಡ್ಡು ತಿನ್ನಿಸುವ ಬದಲು, ಪ್ರಾಣವನ್ನಾದರೂ ತೆರುತ್ತಿದ್ದೆ. ಆದರೆ ನನ್ನ ತತ್ವದ ದೃಷ್ಟಿಯಿಂದ ಆ ಮಗುವಿನ ಪ್ರಾಣಕ್ಕೆ ಅಪಾಯ ಬರಬಾರದಲ್ಲ''[೯೦] ಎಂದು ರಾಧಾಕೃಷ್ಣ ಕಾಳಸಂತೆಯಲ್ಲಿ ಗ್ಲುಕೋಸ್ ಖರೀದಿಸಿ ಮಗುವನ್ನು ಬದುಕಿಸುತ್ತಾನೆ. ಪರೋಪಕಾರದ ನೆಪದಲ್ಲಿ ಹಣ ಮಾಡುವ ಅವರನ್ನು ಮನುಷ್ಯರೆಂದು ತಿಳಿಯಬೇಕೆ?''[೯೧] ಎಂಬ ರಾಮಕೃಷ್ಣಯ್ಯನವರ ಮಾತು ಮುಖ್ಯವಾಗಿದೆ. ಮನುಷ್ಯ ಸಣ್ಣವನಾದಷ್ಟು ಹೆಚ್ಚು ಶ್ರೀಮಂತನಾಗಬಹುದು. ಈ ಮಾತು ೨ನೇ ಮಹಾಯುದ್ಧ, ಬಂಗಾಲದ ಪ್ರವಾಹ ಪ್ರಕೋಪ, ಬರಗಾಲದ ಸಂದರ್ಭದಲ್ಲಿ ವ್ಯಾಪಾರಸ್ಥರು ತಮ್ಮ ಸಣ್ಣ ಬುದ್ಧಿಯಿಂದ ಹೆಚ್ಚು ಬೆಲೆಗೆ ಕಡಿಮೆ-ಕೀಳು-ವಸ್ತುಗಳನ್ನು ಮಾರಿರುವುದನ್ನು ನೆನಪಿಸುತ್ತದೆ. ಕಾರಂತರ ಇನ್ನೆರಡು ಕಾದಂಬರಿಗಳಾದ 'ಮುಗಿದ ಯುದ್ಧ', 'ಸಮೀಕ್ಷೆ'ಯಲ್ಲಿ ಇಂತಹುದೇ ಚಿತ್ರಣಗಳು ಕಂಡುಬರುತ್ತವೆ. ಇದು ಮನುಷ್ಯ ತೀರ ನೀಚತನಕೆ ಇಳಿದರೆ ಎಷ್ಟರ ತನಕ ಇಳಿಯಬಹುದು'[೯೨] ಎಂಬುದನ್ನು ತೋರಿಸಿ ಕೊಡುತ್ತದೆ.

ರಾಧಾಕೃಷ್ಣ ಜೀವನದಲ್ಲಿ ಸಾಕಷ್ಟು ಕನಸುಗಳನ್ನು ಹೊತ್ತಿದ್ದ. ಆದರೆ ಡಾ.ನಂದ, ಪ್ರಭುದೇವ, ಬನ್ನಟ್ಟಿಯವರಂತಹ ದ್ವಿಮುಖ ನೀತಿಯ ಮನುಷ್ಯರನ್ನು ಕಂಡು ತೀರಾ ಜರ್ಜರಿತನಾದ. ಕೊನೆ ಕೊನೆಗೆ ನಿರಾಶನಾಗುತ್ತ ನಡೆದು ಕೈಲಾಗದೆ ಅಸಹಾಯಕನಾಗುತ್ತಾನೆ. ಮಗನನ್ನು ಸಾವಿನಿಂದ ಪಾರುಮಾಡಿದ್ದೇ ದೊಡ್ಡ ಸಾಹಸವಾಗುತ್ತದೆ. ಜೀವನದಲ್ಲಿ ಹಾದು ಹೋದ ವ್ಯಕ್ತಿಗಳ ಚರಿತ್ರೆಯನ್ನು ನೆನೆದು ಹಾಗೂ ಸತ್ಯ, ಶ್ಯಾಮ ಮತ್ತು ಮಗ ಚಂದ್ರ ಇವರೊಂದಿಗೆ ಇರಲು ನಿರ್ಧರಿಸಿ ''ಇನ್ನು ಮಹಾಭಾರತದ ಭೀಷ್ಮಾಚಾರ್ಯರ ಹಾಗೆ ನಾನು; ಶರ ಇಳಿಸಿ ಕುಳಿತು ಬಿಡುತ್ತೇನೆ. ಸಾಕು; ನಮ್ಮ ಪಾಡಿಗೆ ನಾವು ಸುಖವಾಗಿದ್ದರೆ ಸಾಕು''[೯೩] ಜೀವಿತಾವಧಿಯುದ್ದಕ್ಕೂ ಪರೋಪಕಾರದ ಗೀಳಿಗೆ ಅಂಟಿಕೊಂಡಿದ್ದ ರಾಧಾಕೃಷ್ಣ ಅದನ್ನು ತ್ಯಜಿಸಿದ್ದು ಅಸಹಾಯಕತನದೊಂದಿಗೆ ರಾಜಿ ಮಾಡಿಕೊಳ್ಳು

ವುದಾಗುತ್ತದೆ. ಅಂತೆಯೇ ರಾಮಣ್ಣ ಕೂಡ ಮೊದಲೆಲ್ಲ ಪರೋಪಕಾರಿ ಜೀವಿಯಾಗಿ ಬಾಳಿದವನು ಕೊನೆಗೆ "ಈ ಕಲಿಕಾಲದಲ್ಲಿ ಪರೋಪಕಾರ ಗಿರೋಪಕಾರ ನಮಗೆ ಹೇಳಿದ್ದಲ್ಲ"[೬೪] ಎಂದು ತೀರ್ಮಾನಿಸುತ್ತಾನೆ.

'ಔದಾರ್ಯದ ಉರುಳಲ್ಲಿ'ಯ ನಾಯಕ ರಾಧಾಕೃಷ್ಣ ವ್ಯಕ್ತಿತ್ವದ ದೃಷ್ಟಿಯಲ್ಲಿ 'ಕಾನೂರು ಹೆಗ್ಗಡತಿ'ಯ ಹೂವಯ್ಯನನ್ನು ಹೋಲುತ್ತಾನೆ. ಆರಂಭದಿಂದಲೂ ಹೊಸ ಬದಲಾವಣೆಗಳನ್ನು ಮಾಡಬೇಕೆಂಬ ಸುದುದ್ದೇಶ ಇಬ್ಬರಲ್ಲೂ ಇದೆ. ಹೂವಯ್ಯ ಗ್ರಾಮೀಣ ಪರಿಸರದ ಬದಲಾವಣೆಗೆ ತೊಡಗಿದರೆ, ರಾಧಾಕೃಷ್ಣ ಶಿಕ್ಷಣ ಕ್ಷೇತ್ರದ ರಾಷ್ಟ್ರ ನಿರ್ಮಾಣದ ಕಾರ್ಯಕ್ಕೆ ತೊಡಗುತ್ತಾನೆ. ಕೊನೆಗೆ ಇಬ್ಬರೂ ತಮ್ಮ ಕುಟುಂಬದ ಪಾಲನೆಗೆ ತಮ್ಮ ಕುಟುಂಬದ ಪಾಲನೆಗೆ ಮಾತ್ರ ಸೀಮಿತರಾಗಿ ಬಿಡುತ್ತಾರೆ. ಎರಡೂ ಕಾದಂಬರಿಗಳ ಕೊನೆಗೆ ನಾಯಕರು ಅಸಹಾಯಕರಲ್ಲದಿದ್ದರೂ ಅಸಹಾಯಕರಂತೆ ಕೈಕಟ್ಟಿ ಕುಳಿತುಕೊಳ್ಳುತ್ತಾರೆ. 'ಔದಾರ್ಯದ ಉರುಳಲ್ಲಿ'ನ ರಾಧಾಕೃಷ್ಣ ಕೊನೆಗೆ ಗಾಂಧೀ ತತ್ವ ಮತ್ತು ಜವಾಹರ ನೆಹರೂ ಅವರ ತತ್ವ ಎರಡನ್ನೂ ಒಪ್ಪಿಕೊಳ್ಳುವ ದ್ವಿನೀತಿಯ ಬನ್ನಟ್ಟಿಯವರನ್ನು ನೇರವಾಗಿ ಟೀಕಿಸದೆ, ಅವರ ಹೇಳಿಕೆಯಿರುವ "ಪತ್ರಿಕೆಯ ಚೂರುಗಳನ್ನು ರಾಶಿ ಮಾಡಿ ಕಡ್ಡಿ ಗೀರಿ, ಬೆಂಕಿ ಕೊಟ್ಟು-ನೋಡುತ್ತ ಕುಳಿತ ಬನ್ನಟ್ಟಿಯವರ ಶವ ಸಂಸ್ಕಾರ ಮಾಡುತ್ತಿರುವನೆಂಬ ಭ್ರಮೆ ಆತನಿಗೆ."[೬೫] ಇದರಿಂದ ಕಾರಂತರ ಮಾನವೀಕರಣದ ಹೆಜ್ಜೆ ಸ್ವಲ್ಪಮಟ್ಟಿಗೆ ದಾರಿ ತಪ್ಪುತ್ತದೆ ಎಂಬುದೇ ನನ್ನ ಅಭಿಪ್ರಾಯ.

ರಾಧಾಕೃಷ್ಣ ನೆರೆಹಾವಳಿಯ ಸಂದರ್ಭದಲ್ಲಿ 'ತಾಯಿ ಇಲ್ಲದ ಹೊಲೆಯರ ಕೂಸನ್ನು'[೬೬] ಆಸ್ಪತ್ರೆಗೆ ತಂದಾಗ ಅಲ್ಲಿನ ದಾದಿ ಮತ್ತು ವೈದ್ಯರು ತೋರು ನೀತಿ; ಹಾಲು ಮಾರಲು ಮಂಗಳೂರಿ ಹೋಗಿದ್ದ ಶ್ಯಾಮನ ಮೇಲೆ ಪೋಲೀಸರು ಅನವಶ್ಯಕವಾಗಿ ದಂಡನೆ ಹೇರುವ ನೀತಿ;[೬೭]ನಾಗೇನಹಳ್ಳಿಯಲ್ಲಿ ತಮಗೆ ಆಗದವರ ಹೊಲದಲ್ಲಿನ ಹುಲ್ಲು ಬಣವೆಗೆ ಬೆಂಕಿ ಹಾಕುವ ಸಂದರ್ಭ; ಕಾರ್ಮಿಕರಿಗೆ ಸರಿಯಾದ ವ್ಯವಸ್ಥೆ ಮಾಡದೆ, ನಿರ್ದಿಷ್ಟ ಕೂಲಿ ಕೊಡದೆ ದುಡಿಸಿಕೊಳ್ಳುವ ಮಾಲೀಕರ ಶೋಷಣೆಯ ನೀತಿ[೬೮] ಗ್ರಾಮಗಳಲ್ಲಿನ ಪುರುಷರನ್ನು ಸರ್ಕಾರದ ವಿರೋಧಿಗಳೆಂದು ಬಂಧಿಸಿ ಅವರ ಮನೆಗಳ ಮೇಲೆ-ಮಹಿಳೆಯರ ಮೇಲೆ ದಾಳಿ ಮಾಡುವ ಪೋಲೀಸರ ದೌರ್ಜನ್ಯದ್[೬] ನೀತಿಗಳು ಅಮಾನವೀಕರಣವನ್ನ ಸಾರುತ್ತವೆ. ಆದರೆ ಇವುಗಳನ್ನು ತತ್‌ಕ್ಷಣವೇ ಅನೀತಿಯುತವಾದ ಮಾರ್ಗಗಳೆಂದು ಸಾದರಪಡಿಸುವ ಮೂಲಕ ಕಾರಂತರು ಶ್ರೇಷ್ಠತೆಯನ್ನು ಮೆರೆಯುತ್ತಾರೆ.

ಡಾ. ನಂದ, ಸಾಣೇಕಲ್, ಪ್ರಭುದೇವ ಮತ್ತು ಪುರಷೋತ್ತಮರು ಮನುಷ್ಯರಲ್ಲಿರಬೇಕಾದ ಕನಿಷ್ಠ ಮಾನವೀಯತೆಯನ್ನು ಗಳಸಿದವರು. ನಂದ ವೈದ್ಯರಾಗಿಯೂ ಮಾನವೀಯತೆ ಮೆರೆಯದೆ,

ದೇಶಭಕ್ತರಾಗಿಯೂ ನಡೆದುಕೊಳ್ಳದೆ-ಯುದ್ಧ, ಚಳುವಳಿಯ ಸಂದರ್ಭದಲ್ಲಿ ಜನತೆಗೆ ಔಷಧಿಯನ್ನು ಹೆಚ್ಚು ಬೆಲೆಗೆ ಕಾಳಸಂತೆಯಲ್ಲಿ ಮಾರುತ್ತಾನೆ. ಪ್ರಭುದೇವ ಸಮತವಾದದ ಧೋರಣೆಗಳು ಬರೀ ತೋರಿಕೆಗಳಾಗಿ ಕಾಣುತ್ತವೆ. ಕಾರ್ಮಿಕರ ಸಂದರ್ಭದಲ್ಲಿ, ನಂದ ಅವರ ವಿರುದ್ಧ ಹೂಡುವ ಸಂಚಿನಲ್ಲಿ, ರಾಧಾಕೃಷ್ಣನ ಉದ್ಯೋಗ ಮಂದಿರ ಸಂಸ್ಥೆಗೆ ಹಣ ಸಂಗ್ರಹಿಸುವ ಮಾರ್ಗಗಳಲ್ಲಿ ಅವನ ಸಮತಾವಾದ ನೆಲಕಚ್ಚುತ್ತದೆ. ಅದೇ ರೀತಿ ಸಾಣೇಕಲ್ 'ನಂಬಿದವರನ್ನು ನೀರು ನೆರಳು ಇಲ್ಲದ ಜಾಗದಲ್ಲಿ ಕೊಲ್ಲುವ' ಪ್ರವೃತ್ತಿಯವನು. ಪುರುಷೋತ್ತಮ, ನಂದ ಅವರ ಹಿಂಬಾಲಕನಂತೆ ಕೆಲಸ ಮಾಡುತ್ತಾನೆ. ಅಧಿಕಾರಿಯಾದರೂ ಸ್ವತಂತ್ರ ವಿಚಾರಿಯಲ್ಲದಿರುವುದು ದುರದೃಷ್ಟಕರ. ಈ ನಾಲ್ವರು ಒಬ್ಬರಿಗೊಬ್ಬರು ಕತ್ತಿ ಮಸೆಯುವವರೇ. ಕೀರ್ತಿಗಾಗಿ ಹೋರಾಡುವವರು. ಸಮಾಜ ಸುಧಾರಣೆ, ಶಿಕ್ಷಣದ ಪ್ರಸಾರ, ರಾಷ್ಟ್ರಭಕ್ತಿ- ಎಂಬ ಮಹತ್ವದ ಸ್ಲೋಗನ್ನುಗಳನ್ನು ತಮ್ಮ ಮುಖದ ಸೋಗುಗಳನ್ನಾಗಿ ಮಾರ್ಪಡಿಸಿಕೊಳ್ಳುತ್ತಾರೆ. ಕಾರಂತರು ಈ ನಾಲ್ವರನ್ನು ರಾಧಾಕೃಷ್ಣನ ವಿರುದ್ಧ ಒಂದಲ್ಲ ಒಂದು ಸಂದರ್ಭದಲ್ಲಿ ನಿಲ್ಲಿಸಿ ಅವನಿಂದ ಆದರ್ಶೀಯ ಗುಣಗಳ ಮೂಲಕ ಸೋಲಿಸಿ ಹಿಂದೆ ಸರಿಸುತ್ತಾರೆ. ಅವರ ದೃಷ್ಟಿಕೋನ ಪೂರ್ತಿ ರಾಧಾಕೃಷ್ಣನಲ್ಲಿ ತಾದಾತ್ಮ್ಯ ಹೊಂದಿದೆ. ಜೊತೆಗೆ ದಯಾನಂದ ಪಾತ್ರವನ್ನು- ಆ ಪಾತ್ರ ಕಾರ್ನಾಡು ಸದಶಿವರಾಯರನ್ನು ಹೋಲುತ್ತಿದ್ದರೂ- ಸಹ ರಾಧಕೃಷ್ಣನಿಗಿಂತಲೂ ಶ್ರೇಷ್ಟ ಮಟ್ಟಕ್ಕೆ ತರಿಸಿಲ್ಲ.

ಒಟ್ಟಿನಲ್ಲಿ ಈ ಕಾದಂಬರಿಯು ರಾಧಾಕೃಷ್ಣ, ಸತ್ಯ, ರಾಮಕೃಷ್ಣಯ್ಯ, ಶ್ಯಾಮ, ಬಿರುಮ ಮರಕಾಲ, ರಾಮಣ್ಣ, ದಯಾನಂದ ಮೊದಲಾದವರ ಮೂಲಕ ಮಾನವೀಕರಣವನ್ನು ಪರಿಚಲನೆಗೊಳಿಸುತ್ತದೆ. ಮೂವರು ಆತ್ಮೀಯ ಗೆಳೆಯರಾಗಿದ್ದ ರಾಧಾಕೃಷ್ಣ, ಸದಾನಂದ, ಸುಖರಾಮರು ರಾಷ್ಟ್ರಸೇವೆಯ ಸದೀಚ್ಛೆಯನ್ನು ಹೊಂದಿದ್ದವರು. ರಾಧಾಕೃಷ್ಣ ಶಿಕ್ಷಣ ಪ್ರಸಾರ, ಸ್ವ-ಉದ್ಯೋಗ ನಿರ್ಮಿತಿಯಂತಹ ಕಾರ್ಯಗಳ ಜೊತೆಗೆ ಸ್ವಾತಂತ್ರ್ಯ ಹೋರಾಟದಲ್ಲಿ ನಿರತನಾಗುತ್ತಾನೆ. ಸದಾನಂದ ಡಾ. ನಂದ ಆಗಿ ಸಮಾಜದ ಆರೋಗ್ಯಕ್ಕೆ ಕೊಳ್ಳಿ ಇಡುವ ಗೋಮುಖ ವ್ಯಾಘ್ರುವಾಗಿ ವೈದ್ಯ ಪದವಿಯಲ್ಲಿ ಸುಖ ಜೀವನ ಅನುಭವಿಸುತ್ತಾನೆ. ಸುಖರಾಮ ಮುಂಬೈಯಲ್ಲಿ ಪ್ರತಿಕೋದ್ಯಮಿಯಾಗಿ ಕಾರ್ಯನಿರ್ವಹಿಸುತ್ತ ದೇಶ ಸೇವೆಗೆ ನಾಗರೀಕರನ್ನು ಅಣಿಗೊಳಿಸುತ್ತಾನೆ. ಮೂವರು ಹೊಂದಿದ್ದ ದೃಷ್ಟಿಕೋನ ಒಂದೇ ಆದರೆ ಮಾರ್ಗಗಳು ಮಾತ್ರ ಬೇರೆ ಬೇರೆಯಾಗಿದ್ದವು.

ಕಾರಂತರು ರಾಧಾಕೃಷ್ಣನು ಮಾನವೀಕರಣದ ನಿರ್ಮಾಪಕನನ್ನಾಗಿ ಕಾದಂಬರಿಯುದ್ದಕ್ಕೂ ಚಿತ್ರಿಸುತ್ತಾ ಬಂದಿದ್ದಾರೆ. "ಅಯ್ಯಾ, ನನ್ನ ಮಗುವನ್ನು ಜೋಪಾನ ಮಾಡಿ ಮನುಷ್ಯನನ್ನಾಗಿ ಮಾಡಿದಿರಿ"[೧೦೦] ಎಂದು ಪ್ರಶಂಸೆಗೆ ಬಾಜನನಾದ ರಾಧಾಕೃಷ್ಣ ಕೊನೆ ಕೊನೆಗೆ ಅವನ ಕೈಗಳನ್ನು ಸಂಸಾರದ ಸಂಕಷ್ಟಗಳಿಂದ ಅಸಹಾಯಕತೆಯ ಕೈಗೆ ಒಪ್ಪಿಸುತ್ತಾರೆ. ಜೀವನದಲ್ಲಿ ನೊಂದು-ಬೆಂದ ಜೀವ ಕೊನೆಗೆ

ನಿರಾಶನಾಗುವುದು ಸಹಜವಾದರೂ 'ಪರರ ಚಿಂತೆ ಬೇಡವೇ ಬೇಡ ಎಂದು ಬೆನ್ನಿನಲ್ಲಿರುವ ಭತ್ತಳಿಕೆಯನ್ನೂ, ಕೈಯಲ್ಲಿರುವ ಬಿಲ್ಲನ್ನೂ ಕೆಳಗೆ ಹಾಕಿ ಕುಳಿತುಕೊಳ್ಳುವುದು ಸಲ್ಲದು'. ಅದೇರೀತಿ ರಾಧಾಕೃಷ್ಣನ ಪ್ರತಿ ಹೆಜ್ಜೆಗೂ ಸಮಾನಾಗಿಯೇ ಹೆಜ್ಜೆ ಹಾಕಿದ ಸತ್ಯ ಪ್ರತಿಹಂತದಲ್ಲೂ ಮಾನವೀಕರಣವನ್ನು ಮೆರೆಯುತ್ತಾಳೆ. ಸಂಪ್ರದಾಯಸ್ಥ ಮನಸ್ಸು ಮಾತ್ರ ಕೆಲವೊಮ್ಮೆ ಅವಳನ್ನು ವಿಮುಖಳನ್ನಾಗಿ ಮಾಡುತ್ತದೆ. ಶ್ಯಾಮ ರಾಧಕೃಷ್ಣನಿಗೆ ತಮ್ಮನಂತೆಯೇ ನಡೆದುಕೊಳ್ಳುತ್ತಾನೆ. ರಾಧಾಕೃಷ್ಣ, ಸತ್ಯ, ಶ್ಯಾಮ - ಇವರ ಬಾಂಧವ್ಯ ಹಾಗೂ ನಾಗೇನಹಳ್ಳಿಯಿಂದ ಬಂದಿದ್ದ ಮಕ್ಕಳ ನಡುವಿದ್ದ ಇವರ ಸಂಬಂಧ ಎಂಥಹ ರಕ್ತ ಸಂಬಂಧವನ್ನು ನಾಚಿಸುವಂತಹ ಮಾನವೀಯ ಸಂಬಂಧವಾಗಿದೆ.

## ಸ್ವಾತಂತ್ರ್ಯೋತ್ತರ ಕಾದಂಬರಿಗಳು

ಕಾರಂತರ ಕಾದಂಬರಿಗಳಲ್ಲಿ ಮಾನವೀಕರಣದ ಶೋಧನೆ ಹಾಗೂ ಅನುಷ್ಠಾನದಲ್ಲಿ ತೊಡಗಿರುವ ಬಹುಮುಖ್ಯ ಕಾದಂಬರಿಗಳೆಂದರೆ 'ಸಮೀಕ್ಷೆ' ಮತ್ತು 'ಅಳಿದ ಮೇಲೆ'. 'ಅಳಿದ ಮೇಲೆ' ಕಾದಂಬರಿಯಲ್ಲಿ ಯಶವಂತರಾಯರು ಸತ್ತ ಮೇಲೆ ಕಾರಂತರು ತೊಡಗುವ ಮಾನವೀಯ ಶೋಧ ಪರರ ಒಳಿತಿಗೆ ಪ್ರತಿನಿಧಿಯಾಗಿ ನಿಲ್ಲುವುದು ಒಂದೆಡೆಯಾದರೆ, 'ಸಮೀಕ್ಷೆ'ಯ ಶ್ರೀನಿವಾಸ ತನ್ನ ವ್ಯಕ್ತಿತ್ವವನ್ನೇ ಧಾರೆ ಎರೆಯುವುದು ಮುಖ್ಯವಾಗಿದೆ. ಶ್ರೀನಿವಾಸ ಪದವೀಧರ ನಾಯಕ. ಅವನು ರಾಷ್ಟ್ರೀಯ ಮತ್ತು ಸಾಮಾಜಿಕ ಕಳಕಳಿಯ ಅನೇಕ ವಿಚಾರಗಳನ್ನು ಹೊತ್ತ ತರುಣ ವಿಚಾರವಾದಿ. ಗೆಳೆಯರೆಲ್ಲ ಓದು ಮುಗಿದ ತಕ್ಷಣ ಗೃಹಸ್ಥಾಶ್ರಮಕ್ಕೆ ಸೇರುತ್ತಿದ್ದುದನ್ನು ವಿರೋಧಿಸುತ್ತಿದ್ದ. ತಾನು ಮದುವೆಯನ್ನು ಮುಂದೂಡುತ್ತಾ ತನ್ನ ಮಟ್ಟಿಗಿದ್ದ ಆದರ್ಶ ವಿಚಾರಗಳನ್ನು ಪಾಲಿಸುತ್ತಿದ್ದ. ಆದರ್ಶವಾದಕ್ಕೆ 'ಮದುವೆಯೆಂಬುದು ಮಹಾವಿಘ್ನ' ಎಂದೇ ಬಗೆದಿದ್ದ- ಉಪಾಧ್ಯಾಯನಾದರೂ ಮದುವೆ ಮಾಡಿಕೊಳ್ಳಲಿಲ್ಲ. ಮನೆಯಲ್ಲಿನ ಕಿರಿಯರು ಅಣ್ಣನ ಈ ನಿರ್ಧಾರಕ್ಕೆ ಬೇಸತ್ತು ತಾವು ಮದುವೆಯಾಗುತ್ತಾರೆ. ಶ್ರೀನಿವಾಸ ತನ್ನ ಗೆಳೆಯರ ಪೈಕಿ ಕಾರ್ಕಳದ ಭೋಜ, ಹೊಸನಗರದ ನರಸಿಂಹ, ತಿರುಮಲೇಶ್ವರ ಮೊದಲಾದವರ ವೈವಾಹಿಕ ಜೀವನ ನೆನೆದುಕೊಳ್ಳುತ್ತಾನೆ. ಒಮ್ಮೆ ಅವರನ್ನು ಸಂಧಿಸಬೇಕೆಂದು ಯೋಚಿಸಿ-ಅವರಲ್ಲಿ ಗೆದ್ದವರೆಷ್ಟು? ಸೋತವರೆಷ್ಟು? ತಿದ್ದಿದವರೆಷ್ಟು? ತೇಲಿದವರೆಷ್ಟು-ಎಂಬುದನ್ನು ಗಮನಿಸಿ ಅವರ ಜೀವನದ ಆಯವ್ಯಯವನ್ನು ನೋಡುವ ಕುತೂಹಲ ಉಂಟಾಗುತ್ತದೆ. ಅವನ ಇನ್ನೊಬ್ಬ ಗೆಳೆಯ ರಾಮಚಂದ್ರ ಸನ್ನಿಪಾತ ಜ್ವರದಿಂದ ನರಳುವುದನ್ನು ತಿಳಿದು ಅವನನ್ನು ಕಾಣಲು ತೆರಳುತ್ತಾನೆ. ರಾಮಚಂದ್ರ ಶ್ರೀನಿವಾಸನ ಬರವಿಗಾಗಿ ಕಾತರಿಸುತ್ತಿರುತ್ತಾನೆ. ತಾನೇ ಎರಡು ಮೂರಾವೃತ್ತಿ ಅವನ ಬಳಿಗೆ ಹೋಗಿಯೂ ತನ್ನ ಸಹೋದರಿಯನ್ನು ಮದುವೆ ಮಾಡಿಕೊಳ್ಳಬೇಕೆಂದು ತಂದೆಯ ಇಂಗಿತವನ್ನು ಹೇಳುವ ಧೈರ್ಯ ಸಾಲದೆ ಹಿಂದಿರುಗಿರುತ್ತಾನೆ. ಮರಣೋನುಮ್ಮುಖನಾಗಿದ್ದ ರಾಮಚಂದ್ರ ಸಹೋದರಿ ಶಾರದೆಗೆ ವರಾನ್ವೇಷಣೆ ಮಾಡಿ ಸುಸ್ತಾಗಿ

ಈಗ ಶ್ರೀನಿವಾಸನ ಬಳಿ ವಿಷಯವನ್ನು ಹೇಳಿ ಮನದ ಭಾರ ಇಳಿಸಿಕೊಳ್ಳುತ್ತಾನೆ. ಶ್ರೀನಿವಾಸ ಅದನ್ನೇ ಯೋಚಿಸಿದ್ದನೇನೋ ಎನ್ನುವ ಹಾಗೆ ಶಾರದೆಯನ್ನು ವಿವಾಹವಾಗಲು; ತನ್ನ ಗೆಳೆಯನಿಗೋಸ್ಕರ ತನ್ನ ಆದರ್ಶ ಜೀವನವನ್ನು ತ್ಯಾಗ ಮಾಡಿ ಒಪ್ಪಿಗೆ ಕೊಡುತ್ತಾನೆ. ಮದುವೆಯ ನಂತರ ರಾಮಚಂದ್ರ ಚೇತರಿಸಿಕೊಂಡು ಗುಣಮುಖನಾಗುತ್ತಾನೆ. ಮತ್ತೆ ಕಳೆಗುಂದುತ್ತಾನೆ. ಶಾರದೆ ಶ್ರೀಮಂತ ಮನೆತನದಲ್ಲಿ ಬೆಳೆದವಳಾದ್ದರಿಂದ ಶ್ರೀನಿವಾಸನ ಬಡಮನೆತನಕ್ಕೆ ಬೇಗ ಹೊಂದಿಕೊಳ್ಳುವುದಿಲ್ಲ. ಅವಳಿಗೆ ಶ್ರೀನಿವಾಸನಿಂದ ಮೈಮನದ ಬಯಕೆಗಳನ್ನು ಈಡೇರಿಸಲು ಸಾಧ್ಯವಾಗುತ್ತಿಲ್ಲ. "ತಾನಂತು ಹುಟ್ಟಿದ್ದೇನೆ, ಯಾಕೋ ತಿಳಿಯೆ. ಆ ಪಶ್ನೆ ಮಾಡುವುದೇ ದುಡುಕುತನವಿರಬಹುದು. ಆದರೆ ತಾನು ಹುಟ್ಟಿ ಸಾಯುವಾಗ ಯಾರಿಗೂ ಋಣಿಯಾಗಿರಬಾರದು. ಕೊಳ್ಳುವುದು ಕಡಿಮೆಯಾಗಿ, ಕೊಡುವುದು ಹೆಚ್ಚಾದರೆ, ತನ್ನ ಬದುಕು ಸಾರ್ಥಕ"[೧೦೧]ಎಂಬ ಅಭೀಪ್ಸೆ ಅವನ ಜೀವನದ್ದಾಗಿದೆ. ಹೀಗಾಗಿ ಅವನು ರಾಮಚಂದ್ರನ ಒಂದೇ ಮಾತಿಗೆ ಶಾರದೆಯನ್ನು ಮದುವೆಯಾಗಲು ಒಪ್ಪಿದ, ಗಂಗತ್ತೆಗೆ ರಾಮೇಶ್ವರನ ಯಾತ್ರೆ ಮಾಡಲು ಹಣ ಒದಗಿಸಿಕೊಟ್ಟ. ಸ್ವಾತಂತ್ರ್ಯ ಸಂಗ್ರಾಮದ ಸಂದರ್ಭದಲ್ಲಿನ ಭೀಕರ ದಿನಗಳಲ್ಲಿ ಸಮಾಜದ ಜನತೆಗೆ ಅನೇಕ ಸಹಾಯ ಒದಗಿಸಿದ. ತನ್ನಿಂದ ಇಷ್ಟು ಸಾಧ್ಯವಿದ್ದಾಗ್ಯೂ "ದೇವರನ್ನು ತನಗಾಗಿ ಭಿಕ್ಷಾಮಯವಾಗಿ ಬೇಡುವುದರಲ್ಲಿ ಅರ್ಥವಿಲ್ಲ. ಅಂತಹ ಯಾಚನೆಯಿಂದ ಏನೂ ಉಪಯೋಗವಿಲ್ಲ" ಎನ್ನುತ್ತಾನೆ. ತನಗೆ ಮಕ್ಕಳಿಲ್ಲದ ಕೊರಗು ಕಾಡುತ್ತಿದೆ. ಹಾಗಿರುವ ಕೊರಗಿಗೆ ಪರಿಹಾರವೆಂದರೆ "ಸಾಕಲಾರದವರ ಮಕ್ಕಳನ್ನು ಕೊಂಡು ಸಾಕಿದರಾಯಿತಲ್ಲ. ಪ್ರೀತಿಸುವುದಕ್ಕಲ್ಲವೇ ಮಕ್ಕಳಿರುವುದು?"[೧೦೨] ಎಂದು ಸಮಾಧಾನ ಹೇಳಿಕೊಂಡಿರುತ್ತಿದ್ದ. ಶಾರದೆಗೂ ಈ ಕೊರಗಿದೆ. ಅದಕ್ಕಾಗಿ ಅವಳು ಶ್ರೀನಿವಾಸನೊಂದಿಗೆ ನಿರ್ಲಿಪ್ತಳು. ಅಣ್ಣ ರಾಮಚಂದ್ರನ ಮನೆಗೆ ಹೋಗಲಾರಳು.

ಶ್ರೀನಿವಾಸ ತನ್ನ ವೈವಾಹಿಕ ಜೀವನದಲ್ಲಿ ಈ ರೀತಿಯ ತ್ಯಾಗಕ್ಕೆ ಹೆಸರಾಗಿದ್ದರೆ, ಬ್ರಹ್ಮಾವರದ ವಾಸುದೇವ ಶ್ರೀನಿವಾಸನ ಇನ್ನೊಬ್ಬ ಗೆಳೆಯ- ಪದವಿಯ ನಂತರ ತಾಯಿ-ತಮ್ಮರನ್ನು ಬಿಟ್ಟು ಅಂಕೋಲೆಯಲ್ಲಿ ರಾಷ್ಟ್ರೀಯ ಚಳುವಳಿಯಲ್ಲಿ ನಿರತನಾಗಿರುತ್ತಾನೆ. ಗಾಂಧೀಜಿಯವರ ವಿಚಾರಗಳಿಗೆ ಒತ್ತುಕೊಟ್ಟು ಸಾಂಬಾಗುರೂಜಿಯ ಜೊತೆಗೆ ಕುಮಟಾದ ರಾಷ್ಟ್ರೀಯ ಶಾಲೆಯಲ್ಲಿ ಅಧ್ಯಾಪಕನಾಗಿರುತ್ತಾನೆ. ಬ್ರಹ್ಮಚರ್ಯೆ ಜೀವನವನ್ನು ಪಾಲಿಸುವುದು ಆ ಆಶ್ರಮದ ನಿಯಮವಾಗಿರುತ್ತದೆ. ಅದರಂತೆ ಪಾಲಿಸುತ್ತಾನೆ ಕೂಡ. ಆ ಶಾಲೆಗೆ ಬರುತ್ತಿದ್ದ ವೇಶ್ಯಾಕುಲದ ಕುಸುಮೆ ಅವಳ ತಾಯಿ ಯಾರಿಗೋ ಮಾರುತ್ತಿದ್ದ ಸುದ್ದಿಯನ್ನು ವಾಸುದೇವನಿಗೆ ಗಾಬರಿಯಿಂದ ತಿಳಿಸುತ್ತಾಳೆ. ವಿಷಯವನ್ನು ಗುರುಗಳಿಗೆ ತಿಳಿಸಿ ಅವಳನ್ನು ಮದುವೆಯಾಗಬಹುದೇ ಎಂದು ಕೇಳುತ್ತಾನೆ. ಅದು ಗಾಂಧೀಜಿಯವರ ತತ್ವಕ್ಕೆ ವಿರುದ್ಧವಾದುದ್ದರಿಂದ ಕೂಡದೆಂದು ಹೇಳಿ ಅವನನ್ನು ಆಶ್ರಮದಿಂದ ಹೊರ ಹಾಕುತ್ತಾರೆ.[೧೦೩]

ಇದರಿಂದ ಧೈರ್ಯವಾಗಿಯೇ ಕುಸುಮೆಯನ್ನು ವಾಸುದೇವ ಲಗ್ನವಾಗುತ್ತಾನೆ. ಅವಳಿಂದ ಸುವಾಸಿನಿಯೆಂಬ ಮಗಳನ್ನು ಪಡೆಯುತ್ತಾನೆ. ಗುರೂಜಿ ಆಶ್ರಮದಿಂದ ಹೊರ ಹಾಕಲ್ಪಟ್ಟರೂ ದೇಶಸೇವಾ ಚಳುವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಾನೆ. ಭೂಗತನಾಗಿ ಪೋಲಿಸರ ಕಾರ್ಯಗಳಿಗೆ ಅಡ್ಡಿಯಾಗುತ್ತಾನೆ. ಇವನ ಶೋಧನೆಗೆ ತೊಡಗಿದ ಪೋಲಿಸರು ಕುಸುಮೆಯ ಮೇಲೆ ಅತ್ಯಾಚಾರವೆಸಗುತ್ತಾರೆ. ಹಿಂಸೆಯಿಂದ ನೊಂದ ಅವಳನ್ನು ಮತ್ತು ಮಗಳನ್ನು ಅವಳ ಅತ್ತೆ (ವಾಸುದೇವನ ತಾಯಿ)ಯ ಹತ್ತಿರ ತಿಳಿದವರು ತಂದು ಬಿಡುತ್ತಾರೆ. ಜಾತಿವಂತಳಲ್ಲದ ಕುಸುಮೆಯನ್ನು ಸೇರಿಸಿಕೊಳ್ಳಲು ಇಚ್ಛಿಸದ ನರಸಜ್ಜಿ ಶ್ರೀನಿವಾಸನ ಉಪದೇಶದಿಂದ ಇರಿಸಿಕೊಳ್ಳಲು ಒಪ್ಪುತ್ತಾಳೆಯಾದರೂ ಬಹಳ ಕಾಲ ನಿಲ್ಲಿಸಿಕೊಳ್ಳಲಿಲ್ಲ. ಕೊನೆಗೆ ಶ್ರೀನಿವಾಸನೇ ತನ್ನ ಮನೆಯಲ್ಲಿ ಆಶ್ರಯ ಕೊಡುತ್ತಾನೆ. "ಅವನ ಜಾತಿ, ನನ್ನ ಜಾತಿ, ನಿನ್ನ ಜಾತಿ-ಬೇರೆ ಬೇರೆಯಿರಬಹುದು. ಆದರೆ ದೇವರ ಎದುರಿನಲ್ಲಿ ನಾವೆಲ್ಲರೂ ಒಂದೇ ಜಾತಿ ಎಂದು ತಿಳಿಯುವವನು ನಾನು. ಈ ನಿಮ್ಮ ಅತ್ತೆಗೆ ನಿಮ್ಮ ಮೇಲೆ ಪ್ರೀತಿಯಿಲ್ಲ; ನೀವು ಬೇಡವಾಗಿದ್ದೀರಿ ಎಂಬುದಾಗಿ ತಿಳಿಯಬೇಡಿ. ನಾಲ್ಕು ಸುತ್ತಲೂ ಇರುವ ಜಾತ್ಯಸ್ಥರ ಭಯ ಅವರಿಗಿರುವುದು ಸಹಜ"[೧೦೪] ಎಂದು ಸಮಾಧಾನ ಹೇಳಿ ತನ್ನ ಮನೆಗೆ ಕರೆದುಕೊಂಡು ಹೋಗಿ ಶಾರದೆಯ ಜೊತೆಗೆ ಇರಲು ತಿಳಿಸುತ್ತಾನೆ. ವೇಶ್ಯಾಕುಲದ ಕುಸುಮೆಯನ್ನು ಲಗ್ನವಾಗಿ ತನ್ನ ನಿಷ್ಠಾವಂತ ಮಾನವೀಯತೆ ಮೆರೆದ ವಾಸುದೇವ ಕೊನೆಗೆ ಒಂದು ಸಣ್ಣ ತಪ್ಪೆಸಗುತ್ತಾನೆ. ಪೋಲಿಸರಿಂದ ಅತ್ಯಾಚಾರಕ್ಕೊಳಗಾಗಿದ್ದ ಕುಸುಮೆಗೆ ಬದುಕಿರುವುದಕ್ಕಿಂತ ಸಾಯುವುದೇ ಮೇಲು ಎಂದು ಪತ್ರ ಬರೆದಿರುತ್ತಾನೆ. ಇದರಿಂದ ಜಿಗುಪ್ಸೆಗೊಂಡ ಕುಸುಮೆ ತಾನು ಬದುಕಿರುವುದೇ ವಾಸುದೇವನಿಗೋಸ್ಕರ ಅವನೇ ಹೀಗೆಂದ ಮೇಲೆ ಹೇಗೆ? ಎಂದು ತಿಳಿದು ಬಾವಿಗೆ ಹಾರಿ ಸಾವನ್ನಪ್ಪುತ್ತಾಳೆ.

ತಾಯಿ ಕಳೆದುಕೊಂಡ ಸುವಾಸಿನಿಯನ್ನು ದತ್ತುಪುತ್ರಿಯನ್ನಾಗಿ ಮಾಡಿಕೊಂಡು ತಮ್ಮ ಮಗಳಂತೆಯೇ ಶ್ರೀನಿವಾಸ-ಶಾರದೆಯರು ಸಾಕುತ್ತಾರೆ. ಬ್ರಹ್ಮಾವರದಲ್ಲಿದ್ದರೆ ಜನರ ಪೀಡನೆಗೆ ಒಳಗಾಗಬೇಕಾಗುತ್ತದೆಂದು ನುಗ್ಗೇಹಳ್ಳಿಗೆ ತನ್ನ ಸಂಸಾರವನ್ನು ಶ್ರೀನಿವಾಸ ವರ್ಗಾಯಿಸುತ್ತಾನೆ. ಈ ಪರಿಸರ ಅವನಿಗೆ, ಶಾರದೆ ಹಾಗೂ ಸುವಾಸಿನಿಗೆ ಹೊಸ ದಿಗಂತವನ್ನು ಮೂಡಿಸುತ್ತದೆ. ಸುವಾಸಿನಿಗೆ ವಿದ್ಯಾಭ್ಯಾಸ ಆರಂಭವಾಗುತ್ತದೆ. ಸುಸಂಸ್ಕೃತವಾದ ಮನಸ್ಸುಗಳ ಮಧ್ಯೆ ಬೆಳೆಯುತ್ತಾಳೆ. ತನ್ನ ಊರಿನವರೇ ಆದ ಹೆಬ್ಬಾರರ ಮಗ ಗೋಪಾಲಕೃಷ್ಣ ಸುವಾಸಿನಿಯನ್ನು ಮದುವೆಯಾಗಲು ಒಪ್ಪುತ್ತಾನೆ. ಶ್ರೀನಿವಾಸನಿಗೆ ಅವನ ತಂದೆ ತಾಯಿಯರ ವಿರೋಧ ಕಟ್ಟಿಕೊಂಡು ಮದುವೆ ಮಾಡುವ ಇಷ್ಟವಿಲ್ಲದಿದ್ದರೂ ಉಪನ್ಯಾಸಕನಾಗಿದ್ದ ಗೋಪಾಲಕೃಷ್ಣನ ಹಟದಿಂದ ಒಪ್ಪಲೇಬೇಕಾಗುತ್ತದೆ. ಅತ್ತೆ ಮನೆ ಸೇರಿದ ಸುವಾಸಿನಿ ಕೆಲ ಸಮಯದಲ್ಲಿಯೇ ಮನೆಯವರೆಲ್ಲರ ಮನಗೆದ್ದು ಅನ್ಯ ಜಾತಿಯವಳೆಂಬ ದುಗುಡವನ್ನು ದೂರಮಾಡುತ್ತಾಳೆ. ಮಾನವೀಯ ಸಂಬಂಧವನ್ನು ಗಟ್ಟಿಗೊಳಿಸುತ್ತಾಳೆ.

ಶ್ರೀನಿವಾಸನ ಇನ್ನೊಬ್ಬ ಮಿತ್ರ ನರಸಿಂಹ. ಚಿಕ್ಕವರಿದ್ದಾಗ ಇಬ್ಬರೂ ಒಂದೇ ಆದರ್ಶಗಳಲ್ಲಿ ಬೆಳೆದವರು. ಒಮ್ಮೆ ನರಸಿಂಹನ ಮನೆಗೆ ಹೋಗಿ ಅವನನ್ನು ಭೇಟಿಯಾದಾಗ ತಾನಾರೆಂದು ಗುರುತಿಸದೆಯೇ, ಗುರುತಿಸಿದರೂ ಅನಾಧಾರಣೆಯ ಮನೋಭಾವದಿಂದ ವರ್ತಿಸಿದ್ದರಿಂದ ಶ್ರೀನಿವಾಸನಿಗೆ ಕೋಪಬರುತ್ತದೆ. ಚಿಕ್ಕಂದಿನಲ್ಲಿ ಇದ್ದ ಹಾಗೆ ಈಗ ಇಲ್ಲವಲ್ಲ ಎಂಬ ಕಳವಳ "ಮನುಷ್ಯನಂತೆ ಕಾಣಿಸಬೇಕಾದವನು, ಮೃಗದಂತೆ ಕಾಣಿಸಿದುದು"[೧೦೫] ಅವನಿಗೆ ಆಶ್ಚರ್ಯವನ್ನುಂಟುಮಾಡುತ್ತದೆ. ಇದು ತಾನು ತನ್ನ ಬಂಧುಗಳಿಂದ ಆಸ್ತಿಯನ್ನು ಮರಳಿ ಕೊಡಿಸಬೇಕೆಂದು ಶ್ರೀನಿವಾಸ ಕೋರ್ಟಿಗೆ ಹೋಗಿರುವ ವಿಷಯವಾಗಿ ಅವನ ಮೇಲೆ ಕುಪಿತನಾಗಲು ಕಾರಣವಾಗುತ್ತದೆ. ಅನ್ಯಾಯದ ಆಸ್ತಿಯನ್ನು ಅನುಭವಿಸುತ್ತಿರುವ ನರಸಿಂಹ ಮೊದಲಿದ್ದ ಆದರ್ಶಗಳನ್ನು ಗಾಳಿಗೆ ತೂರಿರುತ್ತಾನೆ. ಶ್ರೀನಿವಾಸ ಎದೆಗುಂದದೆ ನರಸಿಂಹನ ವಿರುದ್ಧ ಸಾಗಿದಾಗ, ಅನ್ಯದಾರಿ ಕಾಣದೆ ಶ್ರೀನಿವಾಸನೊಂದಿಗೆ ರಾಜಿ ಮಾಡಿಕೊಳ್ಳಲು ಯತ್ನಿಸುತ್ತಾನೆ. ನರಸಿಂಹನ ನಯವಂಚಕತೆ, ಸಮಯ ಸಾಧಕತನಗಳು ಶ್ರೀನಿವಾಸನ ಪ್ರಾಮಾಣಿಕತೆಯ ಮುಂದೆ ಹಲ್ಲುಕಿತ್ತ ಹಾವಾಗುತ್ತವೆ.

ಶ್ರೀನಿವಾಸನ ಮನೆಗೆ ಭಿಕ್ಷೆಗಾಗಿ ಬರುತ್ತಿದ್ದ ಸೂರ-ಕಾಳಿ ಎಂಬ ವಯೋವೃದ್ಧರ ಜೀವನ ಕಾದಂಬರಿಯಲ್ಲಿ ಮಾನವೀಕರಣವನ್ನು ಕೆನೆಗಟ್ಟಿಸುತ್ತದೆ. ಕಾರಂತರು ಕೆಳವರ್ಗದ ಅತಿ ಸಣ್ಣಪಾತ್ರಗಳಿಂದ ಮಾನವೀಕರಣವನ್ನು ಸಾಧಿಸುತ್ತಾರೆ ಎಂಬ ಅಂಶವನ್ನು ಈಗಾಗಲೇ ಗಮನಿಸಿದ್ದೇವೆ. ಇದಕ್ಕೆ ಸ್ಪಷ್ಟಸಾಕ್ಷಿಯಾಗಿ ಸೂರ-ಕಾಳಿಯರು ನಿಲ್ಲುತ್ತಾರೆ. ಅವರ ಅನ್ಯೋನ್ಯ ದಾಂಪತ್ಯ ಮೈಮನಗಳ ಸುಳಿಯಲ್ಲಿನ ಪಮ್ಮ-ದುಗ್ಗಿಯರನ್ನು ಮತ್ತೊಮ್ಮೆ ನೆನಪಿಸುತ್ತದೆ. ಶ್ರೀನಿವಾಸ-ಶಾರದೆಯರು ಆ ದಾಂಪತ್ಯಕ್ಕೆ ನಿಬ್ಬೆರಗಾಗುತ್ತಾರೆ. ಕಡುಬಡತನ ಅವರನ್ನು ಕಿತ್ತು ತಿನ್ನುತ್ತಿರುತ್ತದೆ. ಅದನ್ನು ಕಂಡ ಶ್ರೀನಿವಾಸ ಸೂರನಿಗೆ ಹರಿದ ಬಟ್ಟೆ ತೆಗೆದು ಹಾಕಲು ಹೇಳಿ ಹೊಸ ಪಂಚೆಯನ್ನು ಕೊಟ್ಟಿರುತ್ತಾನೆ. ಆ ಪಂಚೆಗಳೆರಡನ್ನು ಹಾಗೆ ತೆಗೆದಿಟ್ಟಿರುತ್ತಾನೆ. ಕೆಲ ಕಾಲದ ನಂತರ ಕಾಳಿ ಸತ್ತಾಗ ಅವಳ ಸತ್ತ ದೇಹಕ್ಕೊಂದು ಪಂಚೆಯನ್ನು ಹೊದಿಸಿ ಕಳುಹಿಸಿರುತ್ತಾನೆ. "ನೀವು ಕೊಟ್ಟ ಅರಿವೆ, ಸಮಯಕ್ಕೆ ಸರಿಯಾಗಿ ಒದಗಿತು, ಧನಿಯೆ. ಇನ್ನೊಂದಿದೆ; ಅದು ನನಗೆ ಬೇಕಲ್ಲ"[೧೦೬]ಎಂದು ಶ್ರೀನಿವಾಸ ಕೊಟ್ಟ ಬಟ್ಟೆ ಬಗೆಗೆ ತಿಳಿಸಿದಾಗ ಶ್ರೀನಿವಾಸನ ಕರುಳು ಚುರ್ ಗುಟ್ಟುತ್ತದೆ. ಒಂದೆಡೆ ಸೂರನ ದೊಡ್ಡಸ್ತಿಕೆಯು ಕಂಡರೆ ಇನ್ನೊಂದೆಡೆ ತನ್ನ ಹೊಸ ಬಟ್ಟೆಯ ಪವಾಡವನ್ನು ಅರಿಯುತ್ತಾನೆ.

ಕೊನೆಗೆ ಸೂರ ಸತ್ತದಿನ ಮೊಮ್ಮಗಳ ಬಳಿ 'ಸೂರ ಕಂತಿದ' ಎಂದು ಹೇಳಲು ತಿಳಿಸಿರುತ್ತಾನೆ. ಸೂರನ ದೊಡ್ಡಗುಣವು ವ್ಯಕ್ತವಾಗಿರುವುದು ತುಂಬಾ ಮನೋಜ್ಞವಾಗಿದೆ. ಅದೇ ರೀತಿ 'ಬಡೆಯ' ಎಂಬ ಇನ್ನೊಂದು ಕಿರಿ ಪಾತ್ರ ಸಹ ಶ್ರೀನಿವಾಸನ ಜೊತೆಯಲ್ಲಿಯೇ ಮಾನವೀಕರಣದ ವಕ್ತಾರವಾಗಿದೆ. ಬಡೆಯ ತನ್ನ ತಂದೆಯ ಮಾತನ್ನು ಸದಾ ಅನುಪಾಲಿಸುತ್ತಾನೆ. ಅವನೆಂದೂ ಇತರರಿಗೆ ದ್ರೋಹ

ಬಗೆಯಲಾರ. ''ಮಗನೇ ಹೊಟ್ಟೆಗಿಲ್ಲದಿದ್ದರೂ ಚಿಂತೆಯಿಲ್ಲ; ಮಾನಗೆಟ್ಟ ಬಾಳು ಬಾಳಬೇಡ''[೧೦೭] ಎಂಬ ತಂದೆಯ ವಾಕ್ಯವೇ ಧ್ಯೇಯವಾಕ್ಯವಾಗಿ ಕೆಲಸ ಮಾಡುತ್ತದೆ. ಶ್ರೀನಿವಾಸನಿಗೆ ತಾನು ಕಲಿತಿದ್ದ ಔಷಧಿಯನ್ನು ತಿಳಿಸಿ ಕೊನೆಗೆ ಸಾಯುತ್ತಾನೆ. ಔಷಧಿಯ ಉಪಯೋಗ ಹಲವರಿಗಾಗಲಿ ತನ್ನೊಂದಿಗೆ ಅದೂ ಸಾಯುವುದು ಬೇಡ ಎಂಬುದು ಅವನ ಆಶಯ. ಒಮ್ಮೆ ಬಡೆಯನಿಗೆ ಶ್ರೀನಿವಾಸ ಕಾಲಾಣೆಯನ್ನು ಕೊಡುವ ಬದಲು ಪಾವಾಣೆಯನ್ನು ಕೊಟ್ಟಿರುತ್ತಾನೆ. ಅಂಗಡಿಗೆ ಹೋಗಿ ನೋಡಿ ಹಿಂತಿರುಗಿ ಬಂದು ''ಒಡೆಯ ಪಾವಾಣೆಯನ್ನು ಕೊಟ್ಟಿರಲ್ಲ? ನೋಡಲೇ ಇಲ್ಲಾಂತ ಕಾಣುತ್ತದೆ''[೧೦೮]ಎನ್ನುತ್ತಾನೆ. ಶ್ರೀನಿವಾಸ ಚಿಲ್ಲರೆ ಇಲ್ಲದ್ದರಿಂದಲೇ ಅದನ್ನು ಕೊಟ್ಟಿರುತ್ತಾನೆ. ಬಡೆಯನ ಪ್ರಾಮಾಣಿಕತೆ ಕಂಡು ಶ್ರೀನಿವಾಸ ದಿಗ್ಭ್ರಮೆಗೊಳ್ಳುತ್ತಾನೆ. ಅದಕ್ಕಾಗಿ ಮೆಚ್ಚಿಕೆಯಾಗುತ್ತಾನೆ. ಆತ್ಮೀಯ ಗೆಳೆಯರಾಗಿದ್ದ ನರಸಿಂಹ, ತಿರುಮಲೇಶ್ವರ ಮತ್ತು ಭೋಜ ಒಂದೊಂದು ನಿಟ್ಟಿನಲ್ಲಿ ಹಣವನ್ನು ಕೊಳ್ಳೆ ಹೊಡೆಯುತ್ತಲೇ ಇರುತ್ತಾರೆ. ನರಸಿಂಹ ತನ್ನವರ ಆಸ್ತಿಯನ್ನೇ ಲಪಟಾಯಿಸಿ ನಿಂತಿರುತ್ತಾನೆ. ತಿರುಮಲೇಶ್ವರ ವಕೀಲನಾಗಿ, ಮಾಸ್ತರನಾಗಿ ಕೆಲಸ ಮಾಡಿ ಕೊನೆಗೆ ವ್ಯಾಪಾರೋದ್ಯಮಿಯಾಗಿ ಸಾಕಷ್ಟು ಹಣಗಳಿಸುತ್ತಾನೆ. ಅದೇ ರೀತಿ ಕಾರ್ಕಳದ ಭೋಜ ತಾನು ಬ್ರಾಹ್ಮಣನೆಂದು ಸುಳ್ಳು ಹೇಳಿ ಆಶ್ರಮ ಕಟ್ಟಿ ಅನೇಕ ಜನತೆಗೆ ಮೋಸ ಮಾಡುತ್ತಿರುತ್ತಾನೆ. ಈ ಮೂರು ವ್ಯಕ್ತಿಗಳು ಸೂರ-ಬಡೆಯರ ಒಂದೇ ಒಂದು ಅಂಶಕ್ಕೂ ಸಮನಾಗುವುದಿಲ್ಲ. ಸೂರ-ಕಾಳಿಯರು ರಾಮಾಯಣದ ರಾಮಸೀತೆಯರನ್ನು ನಾಚಿಸಿದರೆ ಬಡೆಯನ ಪಾತ್ರವು ಹನುಮಂತನ ಪಾತ್ರವನ್ನೇ ನಾಚಿಸುತ್ತದೆ.

ಶ್ರೀನಿವಾಸ ಸೂರನ ಸಾವನ್ನು ನೆನೆದುಕೊಳ್ಳುತ್ತಲೇ ಹಗಲುಗನಸೊಂದನ್ನು ಕಾಣುತ್ತಾನೆ. ಆ ಕನಸಿನಲ್ಲಿ ಹೊಳೆಯ ಪ್ರವಾಹ ಉಕ್ಕಿಹರಿಯುತ್ತಿರುತ್ತದೆ. ಬಾನಂಗಣದಲ್ಲಿ ಮೋಡಗಳ ಆರ್ಭಟದೊಂದಿಗೆ ಬಾರಿ ಮಳೆ ಬರತೊಡಗುತ್ತದೆ. ಶ್ರೀನಿವಾಸ ಎತ್ತರದ ಜಾಗವೊಂದರಲ್ಲಿ ಕುಳಿತಿದ್ದಾನೆ. ಹೊಳೆಯ ಜಾಗವಾಗಿದೆ. ಅಲ್ಲಿ ಹೊಳೆ ದಾಟಿಸಲು ಅಂಬಿಗನೂ ಇಲ್ಲ, ದೋಣಿಯೂ ಇಲ್ಲ. ಆದರೆ ಹೊಳೆ ದಾಟಲು ಪೈಪೋಟಿ ನಡೆದಿದೆ. ''ಅಯ್ಯೋ ದಾಟಬೇಡಿ; ತುಂಬಿದ ನೆರೆ; ನೆರೆ ಇಳಿದ ಮೇಲೆ ಹೋಗಬಹುದು''[೧೦೯] ಎಂದು ಕಿರುಚುತ್ತಲೇ ಇದ್ದರೂ-ಹೋಗುತ್ತಲೇ ಇದ್ದಾರೆ. ಅವರಲ್ಲಿ ರಾಮಚಂದ್ರ ಪ್ರವಾಹಕ್ಕೆ ಸಿಕ್ಕು ಆಚೆಯ ದಂಡೆಗೆ ಎಸೆಯಲ್ಪಟ್ಟು ಪಾರಾಗುತ್ತಾನೆ. ಅವನ ಹಿಂದೆಯೇ ನಾಲ್ವರು ಕೈಕೈ ಹಿಡಿದು ಸಾಗುತ್ತಾರೆ. ನಾಯಕ ಸ್ಥಾನವನ್ನು ಭೋಜ ವಹಿಸಿದ್ದಾನೆ. ಅವರು ದಡ ತಲುಪುವುದೇ ಕಾಣಸಲಿಲ್ಲ. ನೀರು ಪಾಲಾಗಿದ್ದರು. ನಂತರ ಅವರ ಹಿಂದೆ ಗಂಡ-ಹೆಂಡತಿಯರ ಪಯಣ ಸಾಗಿತ್ತು. ಹೊಲೆಯ ಸೂರ ಮತ್ತು ಅವನ ಹೆಂಡತಿ ಕಾಳಿಯರಾಗಿದ್ದರವರು. ಪ್ರವಾಹದ ಭೀತಿಯಿಲ್ಲದೆ ಸಾಗುತ್ತಿದ್ದಾನೆ ಸೂರ. ನೀರಿನ ಮಟ್ಟ ಕಾಲುಗಂಟಿನಲ್ಲೆ ಇದೆ. ಸುರಕ್ಷಿತವಾಗಿ ತಲುಪಿದ್ದಾರೆ.

ಹಿಂದೆಯೇ ಹೆಣ್ಣು ಜೀವವೊಂದು ತೆರೆಗಳನ್ನು ಲೆಕ್ಕಿಸದೆ ಸಾಗಿತ್ತು. ನೀರಿನ ಪಾಲಾಗಿತ್ತು. ಆ ಜೀವ ಎನ್ನುವಷ್ಟರಲ್ಲೆ ಪಾರಾಗಿದ್ದಳು ಗಂಗತ್ತೆ. ಗಂಗತ್ತೆ, ಸೂರ, ಕಾಳಿಯರು ಸುರಕ್ಷಿತವಾಗಿದ್ದುದನ್ನು ಕಂಡು ತಾನು ಪ್ರವಾಹ ದಾಟಲು ತೊಡಗುತ್ತಾನೆ. ಅದಕ್ಕೆ ಸೂರ ‘‘ಒಡೆಯ, ನನ್ನ ಜಂಬರ ಮುಗಿಯಿತು; ಬಂದೆ ನಿಮಗೇಕೆ ಅವಸರ ನೀವು ಬನ್ನಿ ಮೆಲ್ಲಗೆ’’ ಎಂದು ಒದರಿ ಹೇಳುತ್ತಿದ್ದ.[೧೧೦] ಈ ಕನಸಿನಲ್ಲಿ ಶ್ರೀನಿವಾಸ ಬಾಳ ‘ಸಮೀಕ್ಷೆ’ ನಡೆಸಿದ್ದಾನೆ. ತುಂಬಾ ಅರ್ಥವತ್ತಾದ ಉಪಮೆಯ ಮೂಲಕ ಕಾರಂತರು ಚಿತ್ರಿಸಿದ್ದಾರೆ. ಬಾಳು ಒಂದು ಪ್ರವಾಹ, ಅದನ್ನು ದಾಟುವುದಕ್ಕೆ ತುಂಬಾ ಸೂಕ್ಷ್ಮ ಹಾಗೂ ಜಾಣತನ ಮುಖ್ಯ. ಸೂಕ್ಷ್ಮತೆ ಮತ್ತು ಜಾಣತನದ ಮೂಲಕ ರಾಮಚಂದ್ರ, ಸೂರ, ಕಾಳಿ, ಗಂಗತ್ತೆ ಸಾಗಿದ್ದಾರೆ. ಆದರೆ ಬಾಳಿನ ಪರಿವೆಯಿಲ್ಲದ ಭೋಜ, ತಿರುಮಲ, ನರಸಿಂಹ ಈ ಮೂವರು ಬಾಳ ಪ್ರವಾಹದಲ್ಲಿ ಸಿಕ್ಕಿ ನಲುಗುತ್ತಾರೆ. ಅವರು ದಡಸೇರುವುದೇ ಇಲ್ಲ. ಮಾನವೀಕರಣದ ಪಾತಳಿಗೆ ನಿಲ್ಲುವುದೇ ಇಲ್ಲ. ಕೊನೆಗೆ ಸೂರನ ಮಾತು ತುಂಬಾ ಅರ್ಥಗರ್ಭಿತವಾಗಿದೆ. ‘ನನ್ನ ಜಂಬರ ಮುಗಿದಿದೆ’ ಎನ್ನುವಲ್ಲಿ ತಾನು ಮಾನವೀಕರಣಕ್ಕಾಗಿ ನಿರ್ವಹಿಸಬೇಕಾದ ಕರ್ತವ್ಯವನ್ನು ನಿರ್ವಹಿಸಿದ್ದೇನೆ. ‘ನೀವು ಇನ್ನೂ ಎಳಬರಾದ್ದರಿಂದ ನಿರ್ವಹಿಸಬೇಕು ಬನ್ನಿ ಮೆಲ್ಲನೆ’ಎನ್ನುವಲ್ಲಿ ಶ್ರೀನಿವಾಸನ ಕರ್ತವ್ಯ ಪ್ರಜ್ಞೆಯನ್ನು ಎಚ್ಚರಿಸುತ್ತಾನೆ. ಈ ಬಾಳ ಸಮೀಕ್ಷೆಯನ್ನು ಗಮನಿಸಿದಾಗ ಕಾರಂತರು ಕಾದಂಬರಿಯ ಆರಂಭದಲ್ಲಿ ಹೇಳಿರುವ ‘‘ಈ ಬರಹ, ಕೆಲವು ವ್ಯಕ್ತಿಗಳನ್ನು ತನ್ನ ಮುಂದಕ್ಕಿರಿಸಿಕೊಂಡು, ಅವರ ಬಾಳಿನ ಸಮೀಕ್ಷೆ ನಡೆಯಿಸಲೆತ್ನಿಸುತ್ತದೆ. ಯಾವುದು ಸಾರ್ಥಕ, ಯಾವುದು ನಿರರ್ಥಕ? ಈ ‘ಅರ್ಥ’ ಯಶಸ್ಸಿನ ದೃಷ್ಟಿಯಿಂದಲ್ಲ- ಜೀವನ ಅರ್ಥವತ್ತಾಗಿ, ರಸವತ್ತಾಗಿ, ಸಹ್ಯವಾಗಿ ಕಾಣಿಸಬೇಕೆಂಬ ದೃಷ್ಟಿಯಿಂದ’’[೧೧೧] ಎಂಬ ಮಾತು ಮಾನವೀಕರಣದ ಸಂದರ್ಭದಲ್ಲಿ ಮುಖ್ಯವಾಗುತ್ತದೆ. ಸೂರ್ಯಕಾಂತಿ, ನೈದಿಲೆಗಳನ್ನು ಸಂಕೇತವಾಗಿ ಹೇಳಿ, ಅವೆರಡರಲ್ಲಿ ಯಾವುದರ ಬಾಳು ಅರ್ಥವತ್ತಾದಾದು ಎಂದು ಕೇಳಿಕೊಂಡಿದ್ದಾರೆ. ನೈದಿಲೆಯದೇ ಎಂದು ಸಾಧಿಸುವುದು ಕಾದಂಬರಿಯ ಉದ್ದೇಶವಾಗಿದೆ. ಶ್ರೀನಿವಾಸನ ತಾಳ್ಮೆ, ಪರೋಪಕಾರಿ ಗುಣ, ಮಮತೆಯ ಮನಸ್ಸು, ಹೃದಯ ವೈಶಾಲ್ಯತೆ, ಆದರಣೀಯ ವ್ಯಕ್ತಿತ್ವ, ಆದರ್ಶನೀಯ ಮನೋಭಾವಗಳು ಮಾನವೀಕರಣವನ್ನು ಪ್ರಚುರಪಡಿಸುವಲ್ಲಿ ಯಶಸ್ವಿಯಾಗುತ್ತವೆ. ಇದೇ ರೀತಿಯ ಗುಣವನ್ನು ಹೊಂದಿ ಶ್ರೀನಿವಾಸನನ್ನೆ ಮೀರಿಸುವ ವ್ಯಕ್ತಿತ್ವ ಹೊಂದಿದ್ದ ವಾಸುದೇವ ಒಂದು ಹಂತದಲ್ಲಿ ತಪ್ಪು ಮಾಡಿದ್ದರಿಂದ ಚೇತರಿಸಿಕೊಳ್ಳದಂತಹ ಸ್ಥಿತಿ ತಲುಪುತ್ತಾನೆ.

ಕಾರಂತರು ವಾಸುದೇವನ ಮೂಲಕ ತಮ್ಮ ಜೀವನದಲ್ಲಿ ಎದುರಾಗಿದ್ದ ವೇಶ್ಯೆಯರ ಮಕ್ಕಳ ಭವಿಷ್ಯವನ್ನು ಉತ್ತಮಗೊಳಿಸುವ ಪ್ರಯತ್ನವನ್ನು ಮುಂದುವರಿಸಿದ್ದಾರೆ. ತಾವೇ ವೇಶ್ಯೆಯೊಬ್ಬಳ ಮಗಳನ್ನು ಮದುವೆಯಾಗಲು ನಿರ್ಧರಿಸಿದ್ದರು. ಅವರ ಬ್ರಹ್ಮಚರ್ಯೆ ವ್ರತದಿಂದಾಗಿ, ಗಾಂಧೀಜಿಯವರ ತತ್ವದಿಂದಾಗಿ ಕೈ ಬಿಟ್ಟಿದ್ದರು. ನಂತರ ಗಾಂಧೀಜಿಯವರ ಒಂದು ಮಾತಿನಿಂದ ಬೇಸರಗೊಂಡು ತಮ್ಮ

ಸ್ನೇಹಿತನ ಸಹೋದರಿಯೊಬ್ಬಳನ್ನು ಯೋಗ್ಯ ವರನೊಬ್ಬನಿಗೆ ಮದುವೆ ಮಾಡಿದ್ದರು. ಅದರ ಯಥಾವತ್ ಚಿತ್ರಣ 'ಸಮೀಕ್ಷೆ'ಯಲ್ಲಿದೆ[೧೧೨] ಈ ವಿಷಯದಲ್ಲಿ ಕಾರಂತರ ಬರಹ-ಬದುಕು ಒಂದೇ ಆಗಿತ್ತು. ವೇಶ್ಯೆಯರ ವಿಷಯದಲ್ಲಿ ಅವರ ಮಾನವೀಕರಣ ಎಂದೂ ಮುಕ್ತವಾಗಿಯೇ ಸಾಗಿದೆ.

ವಾಸುದೇವ ತನ್ನ ಹೆಂಡತಿ ಕುಸುಮೆ ಮಗು ಸುವಾಸಿನಿಯನ್ನು ಬಿಟ್ಟು ಹೋದಂದಿನಿಂದ ಕೆಲ ಕಾಲ ರಾಷ್ಟ್ರ ಚಳುವಳಿಯಲ್ಲಿ ಭಾಗವಹಿಸುತ್ತಾನೆ. 'ಅತ್ಯಾಚಾರಕ್ಕೊಳಗಾಗಿ ಜೀವಿಸುವುದಕ್ಕಿಂತ ಆತ್ಮಹತ್ಯೆ ಲೇಸು' ಎಂದು ಅವನು ಬರೆದ ಪತ್ರದಿಂದ ಶ್ರೀನಿವಾಸನ ಆಶ್ರಯದಲ್ಲಿದ್ದ ಕುಸುಮೆ ಸಾವನ್ನಪ್ಪುತ್ತಾಳೆ. ಅನಂತರ ತೀರಾ ಹುಚ್ಚನಾಗಿ ಊರೂರು ಸುತ್ತುತ್ತಾ, ಶ್ರೀನಿವಾಸನು ತನ್ನ ಹೆಂಡತಿಯನ್ನು ಕದ್ದ ರಾವಣನೆಂದು ಭಾವಿಸಿ ಅವನನ್ನು ದೂಷಿಸ ತೊಡಗುತ್ತಾನೆ. ಕೊನೆಗೆ ಸುವಾಸಿನಿ ಶಾರದೆ ಗುಡಿಗೆ ಹೋದಾಗ ಹುಚ್ಚನನ್ನು ಕಂಡು ಬೆರಗಾಗುತ್ತಾರೆ. ಅವನಿಂದ ಅಪಹಾಸ್ಯಕ್ಕಿಡಾಗುತ್ತಾರೆ. ಇವನೇ ವಾಸು ಎಂದು ತಿಳಿದ ಶ್ರೀನಿವಾಸ ಸುವಾಸಿನಿಯ ಮೂಲಕ ಅವನ ಕಳೆದ ಪ್ರಜ್ಞೆಯನ್ನು ಮತ್ತೆ ಮರಳಿಸುತ್ತಾನೆ. ಪ್ರಜ್ಞೆ ಪಡೆದ ವಾಸುದೇವ "ಶೀನ, ಎಷ್ಟು ದಿನ ನಾನು ನಿನಗೆ ಹೊರೆಯಾಗಿರುವುದು? ನೀನು ಮಾಡುವುದನ್ನೆಲ್ಲ ಮಾಡಿದೆ. ನನಗೀಗ ಆರೋಗ್ಯವಾಗಿದೆ. ನಾನಿನ್ನು ಬ್ರಹ್ಮಾವರಕ್ಕೋ, ಇನ್ನೆಲ್ಲಿಯೋ ಹೋಗುತ್ತೇನೆ" ಎಂದಾಗ ಶ್ರೀನಿವಾಸನು "ನನಗೆ ನೀನು ಹೊರೆಯಲ್ಲ; ನಿನಗೆ ನಾನು ಹೊರೆಯಲ್ಲ. ಹಾಗೆ ಹೊರೆಯೆಂಬುದು ನಿಜವಾದರೆ-ನಾವಿಬ್ಬರೂ ಈ ಭೂಮಿಗೆ ಹೊರೆ. ಹಡೆದ ಭೂಮಿಯಿದೆಯಲ್ಲ; ಅದು ಇಬ್ಬರನ್ನೂ ಹೊರಲಿ. ಹೆತ್ತವರು ಹೊರದೆ ಇನ್ನಾರು ಹೊರಬೇಕು?" ಎಂದು ಹೇಳಿ ತನ್ನ ಮಾನವೀಯತೆ ಮೆರೆದು ತನ್ನಲ್ಲಿಯೇ ಉಳಿಸಿಕೊಳ್ಳುತ್ತಾನೆ.

'ಸಮೀಕ್ಷೆ'ಯ ಶ್ರೀನಿವಾಸ ಮತ್ತು 'ಅಳಿದ ಮೇಲೆ'ಯ ಯಶವಂತ ತೀರಾ ವಿಭಿನ್ನ ಪಾತ್ರಗಳು. ಈ ಎರಡೂ ಕಾದಂಬರಿಗಳು ಮಾನವೀಕರಣದ ಸ್ಪಷ್ಟ ನಿದರ್ಶನಗಳು. ಶ್ರೀನಿವಾಸ, ವಾಸುದೇವ, ಸೂರ, ಕಾಳಿ, ಗಂಗತ್ತೆ, ಶಾರದೆಯರು ಒಂದು ನಿಟ್ಟಿನ ಮಾನವೀಯ ರೂವಾರಿಗಳಾದರೆ, ಯಶವಂತ, ನಿರೂಪಕ(ಕಾರಂತರು), ಪಾರ್ವತಮ್ಮ, ಮಂಜಯ್ಯ-ಮೊದಲಾದವರು ಇನ್ನೊಂದು ಪರಿಕ್ರಮವಾಗುತ್ತಾರೆ.

"ಅವರು ನನಗೆ ಒದಗಿಸಿಕೊಟ್ಟಿರುವ ನಾಲ್ಕಾರು ವಿಳಾಸಗಳಿಂದ, ಆ ವಾಕ್ಯಗಳನ್ನು ಸಂಧಿಸಿ, ಅವರ ಪೂರ್ಣ ಜೀವನದ ಇತಿಹಾಸವನ್ನು ತಿಳಿಯಬೇಕೆಂದು ಕುತೂಹಲ ನನಗಿದ್ದೇ ಇತ್ತು'[೧೧೩] ಇಂತಹ ಸುಳಿವುಗಳನ್ನು ಬೆನ್ನು ಹತ್ತಿ ಮಾನವೀಕರಣದ ಶೋಧನೆಯಲ್ಲಿ ತೊಡಗುತ್ತಾರೆ. ಕೇವಲ ವಿಳಾಸಗಳೇ ಮೂಲ ಆಕರಗಳಾಗಿವೆ. ಪಾರ್ವತಮ್ಮನನ್ನು ನೋಡಲಿಕ್ಕೆ ಹೋದ ಕಾರಂತರು "ಮನುಷ್ಯ ಸ್ವಭಾವವನ್ನು ತಿಳಿಯುವ ಸುಂದರ ಅವಕಾಶಗಳನ್ನೇ"[೧೧೪]ಪಡೆದುಕೊಂಡರು.

ಯಶವಂತರ ಮಗ ಸೀತಾರಾಮ ಹೆಗ್ಗಡೆ ತಂದೆಯ ಹಣ ಕಾರಂತರ (ನಿರೂಪಕ) ಬಳಿ ಉಳಿದಿರಬೇಕೆಂದು, ಅದನ್ನು ಕಸಿಯುವ ಉದ್ದೇಶದಿಂದ 'ತಂದೆಗೆ ಪಿಂಡ ಹಾಕುವ' ನೆಪದಲ್ಲಿ ಪತ್ರ

ಬರೆಯುತ್ತಾನೆ. ಇಂತವರನ್ನು ಗಮನಿಸಿಯೇ ಯಶವಂತರು ತಮ್ಮ ಸ್ಮರಣ ಗ್ರಂಥದ ಮೊದಲಲ್ಲೇ "ಸತ್ತ ಮೇಲೆ ಉಳಿಯುವುದು ನನ್ನ ನಡವಳಿಕೆಯ ನೆನಪು ; ನಾನಲ್ಲ. ಇಲ್ಲದ ಆ ನನಗಾಗಿ ನಡೆಸುವ ಶ್ರಾದ್ಧಾದಿ ಕ್ರಮಗಳು ನನಗೆ ಸಮ್ಮತವಲ್ಲ. ನನಗೆ ಸಲ್ಲಿಸುವ ಶ್ರದ್ಧೆ ನನ್ನಲ್ಲಿ ಕಂಡ ಯಾವುದೇ ಒಳಿತು ಗುಣ ಇದ್ದರೆ, ಅದನ್ನು ತಮ್ಮ ಬಾಳಲ್ಲಿ ತರುವುದು. ಅಂಥ ಶ್ರಾದ್ಧ ಯಾರು ಯಾರಿಗೂ ಮಾಡಬಹುದು. ನಾವು ನಾಲ್ಕು ದಿನಗಳ ಒಂದು ದೃಶ್ಯ"[೧೧೫] ಎಂದು ತಮ್ಮ ಕಾಲಾನಂತರ ಆಸ್ತಿಗಾಗಿ ಹೊಂಚುಹಾಕುವುದನ್ನು ತಪ್ಪಿಸಿದ್ದಾರೆ. ಒಂದು ಕಡೆ ದುಡ್ಡು ಕೊಟ್ಟರೂ ಬೇಡವೆನ್ನುತ್ತಿರುವ ಪಾರ್ವತಮ್ಮ, ಇನ್ನೊಂದೆಡೆ ದುಡ್ಡನ್ನು ಹೆಚ್ಚು ಕೇಳು ಎನ್ನುವ ರಾಮಹೆಗ್ಗಡೆ, ಗುರುತಿಲ್ಲದೆ ಹಣ ಕೇಳುವ ಸೀತಾರಾಮ ಹೆಗ್ಗಡೆ ತೀರಾ ವಿಭಿನ್ನ ವ್ಯಕ್ತಿಗಳು.

"ಯಶವಂತರಾಯರ ಸ್ವಭಾವ, ಅನ್ಯಾಯ ಮಾಡಿದರೂ ತಿರುಗಿ ಮಾಡುವಂಥದ್ದಲ್ಲ ಎಂಬುದು ನನಗೆ ಎಂದೋ ತಿಳಿದಿತ್ತು."[೧೧೬] ಯಶವಂತರ ಗೆಳೆಯ ಜೇಮ್ ಶೇಟ್ಜಿ ಅವರ ಮಾತುಗಳು ಸೀತಾರಾಮನು ಮಾಡಿದ ಆಪಾದನೆಗಳಿಗೆ ಉತ್ತರವಾಗುತ್ತದೆ.

'ಎಷ್ಟೋ ಸಮಯದಿಂದ ಈ ವಿಷಯವನ್ನು ನಿಮ್ಮೊಡನೆ ಚರ್ಚಿಸಬೇಕೆಂದಿದ್ದೆ. ಯಾಕೆ ನಿಮಗೆ ತೊಂದರೆಯನ್ನು ಕೊಡಬೇಕು - ಎಂಬುದರಿಂದ ನೀವು ಇಲ್ಲಿಗೆ ಬಂದಾಗಲೂ ಆ ವಿಚಾರದಲ್ಲಿ ನಿಮ್ಮೊಡನೆ ತರ್ಕಿಸಲು ಹಿಂಜರಿದಿದ್ದೆ. ಮೊನ್ನೆ ದಿನ, ಇದ್ದಕ್ಕಿದ್ದಂತೆ ನನ್ನ ಮನಸ್ಸಿನಲ್ಲಿ, ನಾನು ಬಹುಕಾಲ ಉಳಿಯಲಾರೆ. ಬಹುಕಾಲವಲ್ಲ, ಬಹುದಿನ - ಎಂಬೊಂದು ಭಾವನೆ ಬಂದಿತು. ಇನ್ನು ಬರಿಯ ಕೆಲವೇ ದಿನ ಉಳಿಯಬಹುದು - ಎನಿಸತೊಡಗಿತು. ಸಾವಿನ ಭಯ ನನಗಿಲ್ಲವೇ ಇಲ್ಲ. ಆದರೆ ನಾನು ಬದುಕಿ ಯಾರಿಗೆ ಏನು ಪ್ರಯೋಜನವಾಯಿತು ಎಂಬ ಲೆಕ್ಕಾಚಾರ ನನಗೆ ಕಷ್ಟವಾಗಿ ಕಾಣಿಸಿದ ವಿಷಯ. ಒಟ್ಟಿನಿಂದ ನನ್ನ ಮನಸ್ಸನ್ನು ಈ ಕೆಲವು ಸಮಯದಿಂದ ಕಾಡುತ್ತಿದ್ದ ಒಂದೇ ಒಂದು ಸಂಗತಿಯೆಂದರೆ - ಬದುಕಿನ ಲೆಕ್ಕಾಚಾರದಲ್ಲಿ ನಾನು ಕೊಂಡುದುದಕ್ಕಿಂತಲೂ ಕೊಟ್ಟದ್ದು ಕಡಿಮೆಯಾಗಬಾರದು ಎಂಬ ಭಾವನೆ. ಇದು ಬರಿಯ ಹಣದ ಲೆಕ್ಕಾಚಾರವಲ್ಲ. ಮಾನವ ಜೀವನದ ಲೆಕ್ಕಾಚಾರ. ಮನುಷ್ಯ ಸಮಾಜದ ಋಣವನ್ನು ಹೊತ್ತುಕೊಂಡು ಬಂದಿದ್ದಾನೆ. ಅದರ ಋಣದಿಂದಲೇ ಬೆಳೆಯುತ್ತಾನೆ. ನಾಳೆ ದಿನ ಸಾಯುವಾಗ ತಾನು ಪಡೆದುದಕ್ಕಿಂತಲೂ ಹೆಚ್ಚಿನ ಋಣವನ್ನು ಸಲ್ಲಿಸಿಹೋದರೆ ಆತ ಹುಟ್ಟಿದ್ದಕ್ಕೊಂದು ಸಾರ್ಥಕ, ಇಲ್ಲವಾದರೆ? ಅವನ ಜನ್ಮದಿಂದ ಸಮಾಜಕ್ಕೆ ನಷ್ಟ - ಎಂಬ ಭಾವನೆ ನನಗೆ, ಹಣಕಾಸು ಮೊದಲಾದವುಗಳು ಈ ದೃಷ್ಟಿಯಿಂದ ಅಲ್ಪ ಪದಾರ್ಥಗಳು. ಅದರೂ ಬಾಳನ್ನು ಸಾಗಿಸಲು ಬೇಕೇ ಆದ ವಸ್ತುಗಳಷ್ಟೆ.....[೧೧೭]

ಚಹಾ ಅಂಗಡಿ ಮುಂದೆ ಅನಾಥನಾಗಿ ಬಿದ್ದಿದ್ದ ಹುಡುಗನನ್ನು (ಗಣಪತ್) ಅಂಗಡಿ ಮಾಲಿಕ 'ಹೊಡೆದು -ಬೈದು' ಮಾಡುತ್ತಿದ್ದುದನ್ನು ಗಮನಿಸಿದ ಯಶವಂತರು *'ನಮಗೂ ಒಂದು ದಿವಸ*

*ಹಾಗಾಗುವುದಿಲ್ಲವೆಂದು'* [೧೧೮] ಎಂದು ಅಂಗಡಿಯವರಿಗೆ ಕೇಳುತ್ತಾರೆ. ಅವರಲ್ಲಿದ್ದ ಅನುಕಂಪ - ಮಾನವತೆ ಅಂಗಡಿಯವನಿಗಿಲ್ಲ; ಅಂತೆಯೇ ''ಹಾಗಿದ್ದರೆ ನೀವೇ ಅವನನ್ನು ಮೇಲಕ್ಕೆ ತಂದು ಸಾಕಿ''[೧೧೯] ಎಂದಾಗ ಹಿಂದು ಮುಂದು ನೋಡದೆ ಅವನನ್ನು ಎತ್ತಿಕೊಂಡು ಬಂದು ತಮ್ಮ ಹಾಸಿಗೆಯಲ್ಲಿ ಮಲಗಿಸಿ ವೈದ್ಯರನ್ನು ಕರೆಯಿಸಿ ಶುಶ್ರೂಷೆ ಮಾಡಿಸುತ್ತಾರೆ. ಉಪಚಾರ ಮಾಡಿ ಬದುಕಿಸಿ, ಅವನನ್ನು ತಮ್ಮಲ್ಲೆ ಜೀತಕ್ಕಿರಿಸಿಕೊಳ್ಳಬೇಕೆಂಬ ಕಿಂಚಿತ್ತೂ ಭಾವನೆಯಿಲ್ಲದೆ, ಅವನಿಗೆ ಆರೈಕೆ ಮಾಡುತ್ತಾರೆ. ಆದರೆ ಅವನು ಬಂಧುಗಳ ಬಳಿ ಆಗಾಗ ಹೋಗಿ ಬರುತ್ತಾ ಯಶವಂತರಲ್ಲೇ ಉಳಿದುಬಿಟ್ಟ. ದಾದಾನನ್ನು ಒಂದು ಗಿಳಿಯಂತೆ ಸಾಕಿದರು - ಸಲಹುವಿದರು. ಗಿಳಿಯ ಉಪಮೆಯನ್ನೇ ಕೊಟ್ಟು ಬರೆದಿದ್ದಾರೆ. 'ಒಳ್ಳೆಯ - ಕೆಟ್ಟ ಗುಣಗಳಿರುದ ಗಿಳಿಯದು. ಬದುಕಿರುವಷ್ಟು ಕಾಲ ಬದುಕಿರಲಿ ನನ್ನ ಬಳ್ಳಿಯಲ್ಲಿ' ಎಂದು ಪೋಷಿಸಿದ್ದಾರೆ. ''ಕೆಟ್ಟದ್ದು, ಒಳ್ಳೆಯದು ಕೂಡಿಯೇ ಮನುಷ್ಯನೆನಿಸುತ್ತಾನೆ. ಮನುಷ್ಯ ಕುಟುಂಬದಲ್ಲಿ ಬದುಕಿರುವ ತನಕ, ಮನುಷ್ಯ ಮನುಷ್ಯನಿಗೆ ನಂಟು. ನಮ್ಮ ಸ್ವಾರ್ಥಕ್ಕಾಗಿ, ಬೇಸರ ಪರಿಹಾರಕ್ಕಾಗಿ ಇತರರು ಬೇಕು. ನಾವು ಒಂಟಿ ಜೀವನ ನಡೆಸಲಾರೆವು - ಎಂಬುದರಿಂದಲೂ ಮನುಷ್ಯ ಮನುಷ್ಯನಿಗೆ ನಂಟು.''[೧೨೦] ಮನುಷ್ಯ ಸ್ವಾವಲಂಬಿ ಅಲ್ಲ, ಪರಾವಲಂಬಿ, ಇತರರಿಗೆ ಒಳಿತನ್ನು ಮಾಡುವಾಗ ಅಲ್ಲದಿದ್ದರೂ, ಸ್ವಾರ್ಥಕ್ಕಾಗಿ ಬೇಸರ - ಕಳೆಯುವುದಕ್ಕಾಗಿ ಸಂಗಾತಿ ಬೇಕಾಗುತ್ತದೆ. ಹೀಗಾಗಿ ಮನುಷ್ಯ ಮನುಷ್ಯರ ನಡುವಿನ ಸಂಬಂಧ ಆರೋಗ್ಯಕರವಾಗಿರಬೇಕು. ಮತ್ತು ಪರಸ್ಪರ ಅರ್ಥಮಾಡಿಕೊಂಡು ಸ್ಪಂದಿಸಬೇಕು.

ಯಶವಂತರಾಯರು ಮದುವೆಯಾದವರು. ಕಮಲ ಎಂಬ ಹೆಂಡತಿ ಇದ್ದಾಳೆ. ಅವಳಿಂದ ಮಕ್ಕಳನ್ನೂ ಪಡೆದಿದ್ದಾರೆ. ಆದರೂ ಸರಸಿ ಎಂಬ ವೇಶ್ಯೆಯ ಸಂಗವನ್ನು ಬಯಸಿದ್ದಾರೆ. ಇದು ಆ ಕಾಲದ ಪ್ರತಿಷ್ಠೆಯ ಪ್ರಶ್ನೆ ಅಲ್ಲದೆ ಕಮಲ ಮತ್ತು ಅವಳ ಮಕ್ಕಳಿಂದ ಅನಾದರಕ್ಕೆ ಈಡಾದ್ದರಿಂದ ಸರಸಿಯನ್ನು ಕೂಡಿದ್ದಾರೆ. ಸರಸಿಯಿಂದಲೂ ಇಬ್ಬರು ಮಕ್ಕಳನ್ನು ಪಡೆದಿದ್ದಾರೆ. ಅಲ್ಲದೆ ರೀಮಾ (ಮೇರಿ) ಎಂಬ ನರ್ಸ್‌ಳನ್ನು ಪ್ರೇಮಿಸಿದ್ದಾರೆ. ಮಾನವೀಕರಣದ ಸಂದರ್ಭದಲ್ಲಿ ಮಹತ್ವದ ಪ್ರಶ್ನೆಯೊಂದು ಉದ್ಭವವಾಗುತ್ತದೆ. ಅದೆಂದರೆ ಮದುವೆಯಾದ ಹೆಂಡತಿಯಿಂದ, ಅವಳಿಂದ ಜನಿಸಿದ ಮಕ್ಕಳಿಂದ ದೂರ ಉಳಿಯುವುದು. ಅವರಿದ್ದಾಗ್ಯೂ ಇನ್ನೊಬ್ಬಳಲ್ಲಿ ಅನುರಕ್ತನಾಗುವುದು. ಇಂತಹ ವಿಷಯವನ್ನು ಕಾದಂಬರಿಕಾರರು ಅನೈತಿಕವೆಂದಾಗಲೀ, ಅಮಾನವೀಯವೆಂದಾಗಲೀ ಹೇಳುವುದಿಲ್ಲ. ಹೆಂಡತಿಯಾದವಳು ಗಂಡನನ್ನು ತೀರಾ ಕೀಳಾಗಿ ಕಂಡ ಸಂದರ್ಭದಲ್ಲಿ ಇಂತಹ ಘಟನೆಗಳು ಜರುಗುತ್ತವೆ. ಹೆಂಡತಿ - ಮಕ್ಕಳು ತಂದೆಯನ್ನು ದೂರ ಮಾಡಲು ಪ್ರಯತ್ನಿಸಿದರೆ. ಅವರಿಂದ ಮುಕ್ತಿ ಪಡೆಯುವುದು ಅವನ ಮನಸ್ಸಿನ ಹೇಳಿಕೆಯಾಗಿರುತ್ತದೆ. ಅಂತಹ ಸಂದರ್ಭವು ಮಾನವೀಕರಣವಾಗುತ್ತದೆ. ಹೀಗಾಗಿ ಯಶವಂತರಾಯರು ಮಾನವೀಯ ಮೌಲ್ಯಗಳಿಗೆ ಕಟ್ಟು ಬಿದ್ದು ಸರಸಿಯಂತಹ ಸ್ವಾಮಿನಿಷ್ಠ

ಬದುಕಿನ ವೇಶ್ಯೆಯನ್ನು ಪಡೆಯುತ್ತಾರೆ. ಅಂತೆಯೇ ಇಂದುಮತಿಯಂತಹ ಮಗಳು ನೆನಪಿನಲ್ಲುಳಿಯುತ್ತಾರೆ. ಜೀವನದ ಕೊನೆಗೆ ಪ್ರೇಮಿಸಿದ ನರ್ಸ್ ರೀಮಾ ಯಶವಂತರಾಯರಿಗೆ 'Orchid' ಆಗಿ ಬೆಳಯುತ್ತಾಳೆ. 'ರೀಮಾ' ಎಂಬುದು ಮೇರಿ ಎಂಬ ಹೆಸರಿಗೆ ಇಟ್ಟ ಸಂಕೇತ. ಅದೇ ಹೆಸರನ್ನೇ ಉಲ್ಲಾ ಕರೆದಿದ್ದಾರೆ. ಯಶವಂತರ ಜೀವನದಲ್ಲಿ ರೀಮಾಳು ಕಾಡು ಹಕ್ಕಿಯಂತೆ ಪ್ರವೇಶಿಸಿದ್ದಾಳೆ. ಇವರಿಬ್ಬರ ಸ್ನೇಹತ್ವ ಕಾಡುಹಕ್ಕಿ ಮತ್ತು ಪಶುಗಳ ನಡುವಿನಂತಹದು. ಪಶುವಿನಿಂದ ಹಾಲನ್ನಷ್ಟೇ ಅಲ್ಲದೆ ರಕ್ತವನ್ನು ಪಡೆಯಬಹುದು. ಹಾಲು ಪಡೆಯುವುದು ಸ್ನೇಹವಾಗುತ್ತದೆ. ರಕ್ತ ಪಡೆಯುವುದು ದ್ರೋಹವಾಗುತ್ತದೆ.

ಮಾನವೀ ಜೀವನದ ಒಂದು ಅಗಾಧ ಸಮಸ್ಯೆಯನ್ನು, ಗೆಳೆತನದ ಮಹತ್ವವನ್ನು ಯಶವಂತರ ಮೂಲಕ ಕಾರಂತರು ಕಾಡು ಮೈನಾ ಮತ್ತು ಪಶುಗಳ ಸ್ನೇಹತ್ವದ ನಿದರ್ಶನದಿಂದ ಹೇಳಿಸುತ್ತಾರೆ. ಕಾಡು ಹಕ್ಕಿಗಳಿಗೆ ಪಶುಗಳ ಮೈಮೇಲಿನ ಉಣ್ಣೆ ಆಹಾರವಾದರೆ ಪಶುಗಳಿಗೆ ಹುಲ್ಲು ಆಹಾರ. ಹುಲ್ಲು ಮೇಯಲು ಬರುವ ದನಕರುಗಳೊಂದಿಗೆ ಗೆಳೆತನ ಬಯಸಿ ಅಥವಾ ತಮಗೆ ಆಹಾರವನ್ನು ಕಿತ್ತು ತಿನ್ನುವ ಆಸೆಯಿಂದ ಬರುತ್ತವೆ. ಕಾಡು ಮೈನಾ ಹಕ್ಕಿಗಳು ಉಣ್ಣೆ ಸಿಗದಿದ್ದಾಗ ಗಾಯವನ್ನೇ ಕಿತ್ತು ತಿನ್ನುವ ಸಾಹಸವನ್ನು ಮಾಡುತ್ತಿವೆ. ಗೆಳೆತನವನ್ನು ಮರೆತು ಕಚ್ಚಿ ರಕ್ತಹೀರುವ ಮೈನಾಗಳಂತಹ ಸ್ನೇಹವನ್ನು ಕಾರಂತರು ದೂರೀಕರಿಸುತ್ತಾರೆ. ಯಶವಂತರು ಪಶುವಾಗಿಯೂ ರೀಮಾ ಎನ್ನುವವಳು ಕಾಡು ಮೈನಾ ಹಕ್ಕಿಯಾಗಿ ಪ್ರತಿಬಿಂಬಿಸುವಂತಹ ಚಿತ್ರಣವನ್ನು ವಿವರಿಸಿದ್ದಾರೆ. ತನ್ನ ತಾಯಿಯನ್ನೆ ಮರೆಯುವಂತಹ ರೀಮಾಳ ಸ್ನೇಹತ್ವಕ್ಕಾಗಿ ನೂರಾ ರೂ.ಗಳ ಬೆಲೆ ತೆತ್ತಬೇಕಾಗುತ್ತದೆ ಯಶವಂತರಾಯರು. ಆರೋಗ್ಯವಾಗಿರುವ ತಾಯಿಯ ಬಗ್ಗೆ ಅನಾರೋಗ್ಯಳಾಗಿದ್ದಾಳೆಂದು, ಔಷಧಿ ಖರ್ಚಿಗೆಂದು ೧೦೦ ರೂ.ಗಳನ್ನು ಪಡೆದುಕೊಂಡವಳು ಹಿಂತಿರುಗದೆ ಹೋಗುತ್ತಾಳೆ. ಇಂತಹ ಕಪಟಿಗಳನ್ನು ಯಶವಂತರು ಖಂಡಿಸುತ್ತಾರೆ. ರೀಮಾಳ ತಾಯಿ ಲೂಸಿಯ ಧೈರ್ಯ ಮತ್ತು ರೀಮಾಳ ನಯವಂಚಕತೆ ಎರಡು ಮುಖಗಳು ತಾಯಿ ಮಗಳಲ್ಲೇ ಕಾಣುತ್ತವೆ. ಬಡತನವನ್ನು ಕಂಡು ಯಶವಂತರು ಲೂಸಿಗೆ ೫ ರೂ ಕೊಡಲು ಹೋದರೆ "ನಾನದಕ್ಕೆ ಬಂದಿಲ್ಲ. ನಾನು ಬಂದದ್ದು ತಾಯಿಯನ್ನು ಮರೆತ ರೀಮಾಳನ್ನು ನಂಬಬೇಡಿ ಎನ್ನುವುದಕ್ಕೆ"[೧೨] ಎಂದು ತಿಳಿಸುತ್ತಾಳೆ. ಈ ಅಭಿಮಾನ ರೀಮಾಳಿಗೂ ಇದ್ದುದ್ದಾರೆ, ಅವಳೂ ಒಬ್ಬ ಮನುಷ್ಯಳಾಗಿ ಬಾಳುತ್ತಿದ್ದಳು. ತಾಯಿಯೇ ಬೇಡವಾದ ಮೇಲೆ ಯಶವಂತರು ಇನ್ನಾವ ಲೆಕ್ಕ ಅವಳಿಗೆ.

ದಾರಿ ಗೊತ್ತಿಲ್ಲದೆ ಬಂದ ಅಪರಿಚಿತರನ್ನು ತೀರಾ ಕೀಳಾಗಿ ಕಾಣದೆ ಅವರಿಗೆ ಸರಿಯಾದ ಮಾರ್ಗದರ್ಶನ ಮಾಡಬೇಕಾದುದು ಮಾನವನ ಕರ್ತವ್ಯ. ಅಪರಿಚಿತತೆಯು ಸಹ ಸ್ನೇಹವನ್ನು ಹೊಂದಿಸುತ್ತದೆ. ಕಾರಂತರು ಪಾರ್ವತಮ್ಮ (ಯಶವಂತರ ಅಜ್ಜಿ)ನನ್ನು ನೋಡಲು ಹೋದಾಗ ಶಂಭು

ಹೆಗ್ಗಡೆ ನಡೆದುಕೊಂಡ ರೀತಿ ಅಮಾನವೀಯವೆನಿಸುತ್ತದೆ. ಶಂಭು ಹೆಗ್ಗಡೆ ತಾನು ಶಂಭು ಭಟ್ಟನೆಂದು ಸಹಿಮಾಡಿ ಪಾರ್ವತಮ್ಮನಿಗೆ ಬರುತ್ತಿದ್ದ ಎಂ.ಓ. ಹಣವನ್ನೆಲ್ಲಾ ಲಪಟಾಯಿಸಿದ ತನ್ನ ತಪ್ಪನ್ನು ಮುಚ್ಚಿಕೊಳ್ಳಲು ಆ ರೀತಿ ವರ್ತಿಸಿರಬಹುದು. ಅದರೆ ಅವನ ಹಿಂದಿನ ಇತಿಹಾಸವೆಲ್ಲ ಅದೇ ರೀತಿ ಇದೆ. ಶಂಭು ಹೆಗ್ಗಡೆಯ ತಂದೆ ಶಂಕರ ಹೆಗ್ಗಡೆ ಮಾತ್ರ, ಹಾಗೆಯೇ ಹಿಂದೆ ಕಳುಹಿಸುತ್ತಿದ್ದ ಶಂಭುನನ್ನು ಬೈದು ಪರವೂರಿನವರು ದಾರಿ ಕೇಳಿಕೊಂಡು ಬಂದರೆ ಕರೆದುಕೂಡಿಸಿ ಸರಿಯಾದ ಮಾಹಿತಿ ಕೊಡಬೇಕು ಎಂದು ತಿಳಿಸುತ್ತಾರೆ. ಇಂತಹ ಸಭ್ಯತನವನ್ನು ಪ್ರತಿಯೊಬ್ಬ ಮಾನವನೂ ರೂಢಿಸಿಕೊಳ್ಳಬೇಕಾಗಿದೆ. ಕಾರಂತರ ಪ್ರಭಾವದಿಂದ ಶಂಭು ಹೆಗ್ಗಡೆಯ ತನ್ನ ಜೀವನದಲ್ಲಿ ಪೂರ್ಣ ಬದಲಾದನು. ಮಾಡಿದ ತಪ್ಪುಗಳ ಪ್ರಾಯಶ್ಚಿತ್ತಕ್ಕೆ ಬೆನಕನ ಗುಡಿಯ ದುರಸ್ತಿಯ ಸಾರಥ್ಯವನ್ನು ತಾನೇ ವಹಿಸಿಕೊಂಡನು. ಮತ್ತು ಯಶಸ್ವಿಯಾಗಿ ನಿರ್ವಹಿಸಿದನು.

ಹಿಂದೆ 'ಸಂಸ್ಕಾರ' ಕಾದಂಬರಿಯನ್ನು ವಿಶ್ಲೇಷಿಸುವ ಸಂದರ್ಭದಲ್ಲಿ ಧರ್ಮ ಮಾನವೀಕರಣಕ್ಕೆ ಅಡ್ಡಿ ಬರುತ್ತದೆ ಎನ್ನುವ ಅರ್ಥದ ಮಾತನ್ನು ಹೇಳಿದ್ದೆ. ಅದು 'ಅಳಿದ ಮೇಲೆ' ಕಾದಂಬರಿಯ ಸಂದರ್ಭದಲ್ಲೂ ನಿಜವಾಗುತ್ತದೆ. ಯಶವಂತರು ನಿಧನರಾದ ಸುದ್ದಿಯನ್ನು ಶಂಕರ ಹೆಗ್ಗಡೆಯವರ ಮನೆಯಲ್ಲಿ ಹೇಳಿದಾಗ, ಅವರ ಮನೆಯಲ್ಲಿ 'ಸೂತಕ'ವಾಗುತ್ತದೆ. ಅದನ್ನು ಆಚರಿಸಲು ತೊಡಗುತ್ತಾರೆ. ಆದರೆ ಪಾರ್ವತಮ್ಮ ಇದನ್ನು ಆಚರಿಸುವುದಿಲ್ಲ. ಸೂತಕವು ಮನುಷ್ಯರ ನಡುವಿನ ಸಂಪರ್ಕವನ್ನು ಕಡಿಯುತ್ತದೆ. ಆ ಸಂದರ್ಭದಲ್ಲಿ ಮನುಷ್ಯನಲ್ಲದ ರೀತಿಯಲ್ಲಿ ವರ್ತಿಸುತ್ತಾರೆ. ಅಸ್ಪೃಶ್ಯತೆಯು ಆಚರಣೆಗೆ ಬರುತ್ತದೆ. ಹೀಗಾಗಿ ಧರ್ಮ ಅಡ್ಡಿ ಎಂದು ಹೇಳಿದ್ದು.

ಯಶವಂತರು ಬಾಲಕರಿದ್ದಾಗಲೇ ಅವರ ತಾಯಿ ತೀರಿಕೊಂಡಳು. ಅವರ ತಂದೆ ಸಾವಿತ್ರಿಯನ್ನು ಎರಡನೇ ಮದುವೆಯಾದರು. ಯಶವಂತನನ್ನು ಮಲತಾಯಿ ಸಾವಿತ್ರಿ ನೋಡಿಕೊಳ್ಳುತ್ತಿದ್ದ ರೀತಿ ದೇವರಿಗೆ ಪ್ರೀತಿಯಾಗಿತ್ತು. ಅಜ್ಜಿ, ಪಾರ್ವತಮ್ಮ ಮಾತ್ರ ತುಂಬಾ ಆದರದಿಂದ ಮಗು ಯಶವಂತನನ್ನು ಜೋಪಾನಮಾಡಿ ಬೆಳೆಸಿದಳು. ಸಾವಿತ್ರಿ ಮತ್ತು ಪಾರ್ವತಮ್ಮ ಇಬ್ಬರೂ ಮಗುವನ್ನು ಹೆತ್ತವರಲ್ಲ. ಒಬ್ಬಳು ಮಲತಾಯಿ ಇನ್ನೊಬ್ಬಳು ಸಾಕುತಾಯಿ (ಅಜ್ಜಿ). ಇವರಿಬ್ಬರಲ್ಲಿಯೇ ಸಾಕಷ್ಟು ಭಿನ್ನತೆ. ಪಾರ್ವತಮ್ಮ ಮಗುವಿನ ಲಾಲನೆ ಪಾಲನೆ ಅರಿತವಳು - ಮನುಷ್ಯತ್ವವನ್ನು ಕಲಿಸಿದಳು. ಸಾವಿತ್ರಿಗೆ ಅದರ ಅವಶ್ಯಕತೆಯಾಗಲೀ - ಅನಿವಾರ್ಯತೆಯಾಗಲೀ ಇರಲಿಲ್ಲ.

ಕಾರಂತರಿಗೆ ಕುಮಟೆಯ ಮಂಜಯ್ಯನವರ ಮನೆಯಲ್ಲಿ ನುಚ್ಚಕ್ಕಿಯ ಉಪ್ಪಿಟ್ಟಿನ ಆತಿಥ್ಯವನ್ನು ಕೊಟ್ಟಾಗ ಹೃದಯಪೂರ್ವಕವಾಗಿ ಪಡೆದುಕೊಳ್ಳುತ್ತಾರೆ. "ಉಪಚಾರ ಎಂಬುದು ಅಕ್ಕಿ, ರವೆ, ಚಾ, ಕಾಫಿ; ಎಂಬುದರಲ್ಲಿ ಅದಿರುವುದು ನಮ್ಮ ನಮ್ಮ ಹೃದಯದಲ್ಲಿ"[೨೨] ಬಡವನ ಮನೆಯ ನುಚ್ಚಕ್ಕಿಯೂ ಮೃಷ್ಟಾನ್ನವಾಗುತ್ತದೆ. ಶ್ರೀಮಂತರ ಗರ್ವದ ಮೃಷ್ಟಾನ್ನವು ನುಚ್ಚಕ್ಕಿಯ ಉಪ್ಪಿಟ್ಟಿಗಿಂತಲೂ ಕೀಳಾಗುತ್ತದೆ.

ಕೊಡುವ ಮನ ಶುದ್ಧವಾಗಿರಬೇಕಷ್ಟೆ. ಮಂಜಯ್ಯನವರು ಹೆಂಡತಿ, ಮಗ ಯಶವಂತ ಈ ಎಲ್ಲರೂ ತುಂಬಾ ನಯವಾಗಿ ನಡೆದುಕೊಳ್ಳುತ್ತಾರೆ. ಮಂಜಯ್ಯನವರು ಮಾವ ಯಶವಂತರ ಹೆಸರನ್ನೇ ಮಗನಿಗೆ ಇಟ್ಟು ಕರೆದಿದ್ದಾರೆ. ಆ ಮಗು ಯಶವಂತರಂತೆಯೇ ಗುಣಗಳನ್ನು ಹೊಂದಿದೆ. ಗಂಡನ ಮನೆಯ ಹಿರಿಯರ ಹೆಸರುಗಳನ್ನು ಮಕ್ಕಳಿಗಿಡುವುದು ವಾಡಿಕೆ. ಅದು ವಂಶೋದ್ಧಾರಕರ ಪ್ರತೀಕವಾಗಿರುವುದರಿಂದ ಅದರಲ್ಲಿ ಹೆಂಡತಿಯ ತಂದೆಯ ಹೆಸರನ್ನು ಇಟ್ಟಿದ್ದಾರೆ ಕಾರಂತರು. ಒಳ್ಳೆ ಗುಣಗಳಿರುವ ವ್ಯಕ್ತಿ ಯಾವ ವಂಶದವರಾದರೇನು? ಅವರ ಹೆಸರನ್ನು ಮಕ್ಕಳಿಗಿಡುವುದು ತಪ್ಪೇನಲ್ಲ.

“ನಾನು ಅವರಿಗೆ ತಮ್ಮ ಮಾವನ ಇಡುಗಂಟಿನ ವಿಚಾರ ತಿಳಿಸಿದರೂ ಈ ಮಂಜಯ್ಯನವರು ಮಾತ್ರ ಅದರ ವಿಷಯದ ಆಸಕ್ತಿಯನ್ನು ತೋರಿಸಿದಂತೆ ಕಾಣಲಿಲ್ಲ”[೧೨೩] ಮಂಜಯ್ಯನವರು ಸ್ವಂತಿಕೆಯಲ್ಲಿ ಬಾಳಿ ಬದುಕಿದವರು. ಇನ್ನೊಬ್ಬರ ಆಸ್ತಿಗೆ ಆಸೆ ಪಟ್ಟವರಲ್ಲ. ಮಾವನ ಹಣದ ಬಗ್ಗೆ ಆಸಕ್ತಿ ಇಲ್ಲವೆಂದಲ್ಲ. ಅದಕ್ಕಿರುವ ಕೆಲಸಗಳನ್ನು ಅರಿತವರು. ಕಾರಂತರಂತಹ ಸಮರ್ಥರಲ್ಲಿ ಹಣದ ಸದುಪಯೋಗವನ್ನು ಬಲ್ಲವರು. ‘ಸತ್ಪಾತ್ರಕ್ಕೆ ಸಲ್ಲಲಿ’ ಎಂದೇ ಸುಮ್ಮನಿರುವಂತೆ ಕಾಣುತ್ತದೆ.

ಯಾವ ವ್ಯಕ್ತಿಯೂ ಸರ್ವರಿಗೂ ಒಳ್ಳೆಯವನಾಗಿ ಬದುಕಲಾರ. ಆದರೆ ಸಮಾಜಕ್ಕೆ ತನ್ನಿಂದ ಎಷ್ಟು ಸಾಧ್ಯವೋ ಅಷ್ಟು ಒಳ್ಳೆಯವನಾಗಿರಲು ಪ್ರಯತ್ನಿಸಬೇಕು. ಒಳ್ಳೆಯವನಾಗದಿದ್ದರೂ ಸಹ ಕೆಟ್ಟವನಾಗದೆ ಇರುವುದು ಬಹುಮುಖ್ಯ. ಯಶವಂತರು ಮುರ್ಡೇಶ್ವರ ವಕೀಲರ ದೃಷ್ಟಿಯಲ್ಲಿ ಕಡು ಕ್ರೂರಿ. ನಿರೂಪಕ ಕಾರಂತರ ದೃಷ್ಟಿಯಲ್ಲಿ ಒಬ್ಬ ಯೋಗ್ಯ ಮನುಷ್ಯ. ವಕೀಲರು ಹೇಳಿರುವುದು ಹೆಂಡತಿ - ಮಕ್ಕಳನ್ನು ಬಿಟ್ಟು ವೇಶ್ಯೆಯ ಜೊತೆಗಿದ್ದುದು ಮತ್ತು ಆಸ್ತಿಯನ್ನು ಸಿಕ್ಕಾಪಟ್ಟೆ ಅಪವ್ಯಯ ಮಾಡಿರುವುದರಿಂದ ಆದರೆ ಕಾರಂತರು ಅವರು “ದೇವರಲ್ಲ, ನೀವೆನ್ನುವಂತೆ ರಾಕ್ಷಸರೂ ಅಲ್ಲ. ಒಬ್ಬ ಯಗ್ಯ ಮನುಷ್ಯ. ಇಷ್ಟಾದರೂ ನನಗೆ ತಿಳಿದಿದೆ”[೧೨೪] ಎಂದು ಹೇಳಿದ್ದಾರೆ. ಕಾರಂತರು ಯಶವಂತರ ವಿರೋಧಿ ಮಾತುಗಳನ್ನು ಸಹಿಸುವುದಿಲ್ಲ. ಮುರ್ಡೇಶ್ವರರು ಪಕ್ಕಾ ಯಶವಂತರ ವಿರೋಧಿ.

‘ಯಾರು ಏನೂ ಹೇಳಲಿ, ನಾನು ಹೇಳುತ್ತೇನಲ್ಲ - ಯಶವಂತ ಹೆಗ್ಗಡೆಯವರು ಚಿನ್ನದಂಥ ಮನುಷ್ಯರು. ನನಗೂ ಅವರಿಗೂ ಹೊಕ್ಕು ಬಳಕೆಯಲ್ಲದಿದ್ದರೂ ಅವರ ವಿಚಾರ ತಿಳಿದವನು, ಕಂಡವನು ನಾನು”[೧೨೫] ಎಂಬ ಸಭಾಹಿತರ ಮಾತು. ಹಾಗೂ ‘ಅಭಿಪ್ರಾಯ ಏನಿದ್ದರೇನು? ನಾವಿಬ್ಬರೂ ಭಿನ್ನ ಸಂಸ್ಕಾರ ಪಡೆದವರು. ಅಭಿಪ್ರಾಯದಲ್ಲಿ ಭಿನ್ನತೆ ಕಾಣಿಸುವುದು ಸಹಜ. ಆದರೆ ಅವರ ಮಾನವತೆ ದೊಡ್ಡದಾದುರಿಂದಲೇ ನನಗೆ ಇಷ್ಟೆಲ್ಲ ಸಹಾಯ ಕೊಟ್ಟರು. ನಿಮ್ಮ ದಾರಿಯಲ್ಲಿ ನೀವು ಹೋಗಕ್ಕದ್ದು ಎಂದು ನನಗೆ ಬೆಂಬಲವನ್ನಿತ್ತರು, ಬಾಳಿನಲ್ಲಿ ಪ್ರಾಮಾಣಿಕತೆ ಎಂದರೆ ಇದೇ ಅಲ್ಲವೆ?”[೧೨೬] ಎನ್ನುವ ವಿಷ್ಣುಪಂತರ ಅಭಿಪ್ರಾಯಗಳು ಯಶವಂತರ ವ್ಯಕ್ತಿತ್ವವನ್ನು ಪರಿಚಯಿಸುತ್ತವೆ.

ಸೀತಾರಾಮ ಹೆಗ್ಗಡೆ ಮತ್ತು ಕಾರಂತರ ನಡುವೆ ವಿವಾದ ಉದ್ಭವಿಸಿರುವುದು ಯಶವಂತರ ಹಣ ಕಾರಂತರ ಕಡೆಗಿರುವುದರಿಂದ ಯಶವಂತ ಸಾಯುವಾಗ ಪತ್ರ ಬರೆದಿದ್ದಾರಷ್ಟೇ - ಅದು ಉಯಿಲು ಅಲ್ಲ. ಹೀಗಾಗಿ ವಕೀಲ ಮುರ್ಡೇಶ್ವರರು ಇಬ್ಬರೂ ರಾಜಿ ಮಾಡಿಕೊಂಡು ಖರ್ಚಾದ ಹಣವನ್ನು ಮುಜರೆ ಮಾಡಿ ಉಳಿದ ಹಣವನ್ನು ಸೀತಾರಾಮನಿಗೆ ಕೊಡಲು ಹೇಳುತ್ತಾರೆ. ಇದು ವಕೀಲರ ದೃಷ್ಟಿಯಲ್ಲಿ ಸರಿಯಿರಬಹುದು. ಆದರೆ ಯಶವಂತ - ಕಾರಂತರ ದೃಷ್ಟಿಯಲ್ಲಿ ತಪ್ಪು. ಯಶವಂತರ ಮಾನವೀಯ ಮನಸ್ಸು ಅಭಾಗ್ಯರಿಗೆ ಹಣ ತಲುಪಬೇಕು ಎನ್ನುತ್ತದೆ.

ಯಶವಂತರು ಹೆಂಡತಿ ಕಮಲಳನ್ನು ಅಸಡ್ಡೆಯಿಂದ ಕಾಣಲು ಇರುವ ಮತ್ತೊಂದು ಬಲವಾದ ಕಾರಣವೆಂದರೆ ಮುರ್ಡೇಶ್ವರ ವಕೀಲರಿಗೂ ಆಕೆಗೂ ಇರುವ ನಂಟುತನ. ಇದು ಕಾದಂಬರಿಯಲ್ಲಿ ತಕ್ಷಣಕ್ಕೆ ಅರಿವಿಗೆ ಬರಲಾರದು. ಸಭಾಹಿತರು ಮುರ್ಡೇಶ್ವರನನ್ನು ಕುರಿತು ಹೇಳುವಾಗ 'ನಮ್ಮ ಮುರ್ಡೇಶ್ವರ ವಕೀಲರು ಕಾಣುವ ಹಾಗಿಲ್ಲ; ಅವರ ಕತೆ ನಮಗೇನೂ ತಿಳಿಯದ್ದಲ್ಲ. ಆ ಹೆಂಗಸಿಗೂ ಅವರಿಗೂ ನಂಟುತನ ಪ್ರಾಕಿನಿಂದಲೇ ನಡೆದು ಬಂದದ್ದು''[೧೨೭] ಎಂಬುದು ತಿಳಿಯುತ್ತದೆ.

ಮಾನವತಾವಾದದ ತಿರುಳು ಅದ್ವೈತ ಸಿದ್ಧಾಂತವನ್ನು ಒಪ್ಪುತ್ತದೆ. ಮಾನವತಾವಾದಿಗಳು ಜಗತ್ತಿನ ಜೀವಿಗಳೆಲ್ಲ ಒಂದೇ, ಭಿನ್ನ - ಭಾವವಿಲ್ಲ ಎಂದು ನಂಬಿದವರು. ಯಶವಂತರು ಸಹ ಅಷ್ಟೆ ''ಹಾಗೆಂದರೆ ಅವರು ನಾಸ್ತಿಕರೇ - ಎಂದು ನೀವು ನನ್ನನ್ನು ಪ್ರಶ್ನಿಸಬಹುದು. ಯಾವತ್ತೂ ಜಗತ್ತು ಜೀವ ತಾಳಿರುವಷ್ಟು ಮಮತೆಯಿಂದ ಅದನ್ನು ನೋಡಿದ್ದಾರೆ; ಅವರ ಮನಸ್ಸಿನಲ್ಲಿ ಹರಹಿನಲ್ಲಿ ಎಲ್ಲ ಜೀವನಗಳೂ ಅವರಿಗೆ ಒಂದೇ ಸಮ. ಅಂಥ ಜೀವನದಲ್ಲಿ, ಜೀವನದಲ್ಲಿ ಇಂದಿಗೂ, ನಾಳಿಗೂ ಭೇದವನ್ನು ಕಾಣದಂಥ ಒಂದು ಬಗೆಯ ಅದ್ವೈತ ವಿಚಾರ ಸರಣಿ ಅವರದ್ದು. ಅದ್ವೈತ ಎಂಬುದು ಇದಕ್ಕೆ; ಅದು ಅವರದ್ದೇ ಆದೊಂದು ಬಗೆಯ ಅದ್ವೈತ; ಅದು ಸಾಂಪ್ರದಾಯಿಕ ವಿಚಾರಸರಣಿಯಂತು ಅಲ್ಲವೇ ಅಲ್ಲ.''[೧೨೮] ''ಪದ್ಮ ಪತ್ರದ ಮೇಲೆ ನಿಂತ ನೀರಿನ ಬಿಂದುವಿನಂತೆ ಮನುಷ್ಯ ಯಾವುದಕ್ಕೂ ಅಂಟದೆ ಇರಬೇಕಂತೆ ಆಸರೆ ಕೊಟ್ಟವರಿಗೂ ಅಂಟಿಸಬಾರದು ನಮ್ಮ ಮನಸ್ಸು''[೧೨೯] ಎಂದು ಯಾರಿಗೂ ಹೊರೆಯಾಗದೆ ಬಾಳಿದವರು. ''ಒಟ್ಟಿನಿಂದ ಲೆಕ್ಕಚಾರ ಹಾಕಿ ನೋಡುತ್ತಿದ್ದೇನೆ- ನನ್ನ ಲೆಕ್ಕಾಚಾರವಲ್ಲ; ನನಗೆ ತಿಳಿದಂತೆ ಬಾಲಿ ಬದುಕಿದ ಯಶವಂತರ ಲೆಕ್ಕಾಚಾರವನ್ನು ಅವರ ಸಿದ್ಧಾಂತದಂತೆ - ತಾವು ಸಂಸಾರದಿಂದ, ಸಮಾಜದಿಂದ, ಪಡೆದುದಕ್ಕಿಂತ ಕಡಿಮೆ ಸಲ್ಲಿಸಿದರೇ?- ಹೆಚ್ಚು? ಸಲ್ಲಿಸಿದರೆ ಎಂಬ ಲೆಕ್ಕಾಚಾರವನ್ನು ಋಣ ಸಂದಾಯದ ಲೆಕ್ಕಾಚಾರದಲ್ಲಿ, ಯಾರು ಯಾರಿಗೆ ಋಣಿ? ಯಶವಂತರು ಎಲ್ಲ ವಿಧದಲ್ಲೂ ತಾವು ಕೋಡುವುದಕ್ಕಿಂತ ಕೊಟ್ಟದು ಕಡಿಮೆಯಾಗಿತ್ತೇ? ಎಂದೂ ಇಲ್ಲ ಅನಿಸುತ್ತದೆ ನನಗೆ''[೧೩೦]ಎಂಬ ಕಾರಂತರ ಮಾತೇ ಸಾಕ್ಷಿಯಾಗುತ್ತದೆ.

ಜಿ. ಎಸ್.ಆಮೂರ ಅವರು “ಅಳಿದ ಮೇಲೆ' ಹೊರನೋಟಕ್ಕೆ ಜೀವನ ಚರಿತ್ರೆಯಂತೆ ಕಂಡುಬಂದರೂ ಅದರ ನಿಜವಾದ ವಸ್ತು ಮನುಷ್ಯತ್ವ; ಮನುಷ್ಯ ಮನುಷ್ಯನಾಗಿ ಬಾಳಬಲ್ಲ ಸಾಧ್ಯಾಸಾಧ್ಯತೆಗಳು, ಮಾನವ ಜೀವನಕ್ಕೆ ಮೂಲಭೂತವಾಗಿ ಸಂಬಂಧಿಸಿದ ಈ ಪ್ರಶ್ನೆಯನ್ನು ಸಮಕಾಲೀನ ಸಾಂಸ್ಕೃತಿಕ ಮತ್ತು ಸಾಮಾಜಿಕ ಸಂದರ್ಭದಲ್ಲಿ ಪರೀಕ್ಷಿಸುವುದರ ಮೂಲಕ ಕಾದಂಬರಿ ತನ್ನ ವೈಶಿಷ್ಟ್ಯವನ್ನು ಪಡೆಯುತ್ತದೆ”[೧೩೧]ಎಂದು ಹೇಳಿದ್ದಾರೆ. ನಿಜಕ್ಕೂ ಕಾರಂತರು ಯಶವಂತರಾಯರ ಜೀವನ ಚರಿತ್ರೆಯನ್ನು ಮಾನವೀಯ ನೆಲೆಯಲ್ಲಿಟ್ಟು ಮನುಷ್ಯನ ಸರ್ವಕಲೀನ ಬದುಕಿನ ಚಿತ್ರಣವನ್ನು ಅನಾವರಣಗೊಳಿಸಲು ಪ್ರಯತ್ನಿಸಿದ್ದಾರೆ. ಯಶವಂತರಾಯರು ಮನುಷ್ಯತ್ವವನ್ನು ಬೋಧಿಸುವ ಮಾರ್ಗದರ್ಶಕರಾದರೆ, ಕಾರಂತರು ಅದರ ಅನುಪಾಲಕರು. ಯಶವಂತರಾಯರು ಯಾಕೆ ಕಾರಂತರಿಗೆ ಮುಖ್ಯರಾಗುತ್ತಾರೆ, ಉಳಿದ ಪಾತ್ರಗಳೇಕೆ ಅಮುಖ್ಯರಾಗುತ್ತಾರೆಂದರೆ-ಯಶವಂತರ ತಾತ್ವಿಕ ತಿಳಿವು ಮತ್ತು ಅದರ ಅನುಷ್ಠಾನದಿಂದ ಪಾರ್ವತಮ್ಮ, ಮಂಜಯ್ಯನಂತಹ ಪಾತ್ರಗಳಲ್ಲಿ ಮನುಷ್ಯತ್ವದ ತಾತ್ವಿಕ ವಿಚಾರ ನಿಲುವುಗೊಳುತ್ತದೆ. ಪಾರ್ವತಮ್ಮನ ಧಾರ್ಮಿಕ ಶ್ರದ್ಧೆ, ಯಶವಂತರ ವೈಚಾರಿಕ ನಿಲುಮೆಗಳ ಸಂಘರ್ಷದ ನಡುವೆ ಮಾನವೀಯ ಮೌಲ್ಯಗಳನ್ನು ಪ್ರಸ್ತುತಪಡಿಸುತ್ತಾರೆ. ವ್ಯಕ್ತಿಯು ಸಮಾಜದಿಂದ ಪಡೆದದ್ದೆಷ್ಟು ಮತ್ತು ಪ್ರತಿಯಾಗಿ ಕೊಟ್ಟಿದ್ದೆಷ್ಟು ಎಂಬ ಸರಳ ತೀರ್ಮಾನವೊಂದರಿಂದ ತಾನು ತನ್ನ ಸಮಾಜದ ಋಣವನ್ನು ಮಾನವೀಯ ಮೌಲ್ಯಗಳ ರೂಪದಲ್ಲಿ ತೀರಿಸಲು ತಿಳಿಸಿದ್ದಾರೆ. ಪಾರ್ವತಮ್ಮ ಮತ್ತು ಮಂಜಯ್ಯನವರು ಕಾದಂಬರಿಯಲ್ಲಿ ಅಸಹಾಯಕರು. ಹೀಗಿರುವ ವ್ಯಕ್ತಿಗಳು ಸಮಾಜಕ್ಕೆ ಸಲ್ಲಿಸುವ ಋಣ ಅಷ್ಟಕಷ್ಟೆ ಆಗಿರುತ್ತದೆ ಎಂಬ ಸಂಶಯ ಹುಟ್ಟುತ್ತವೆ. ಪಾರ್ವತಮ್ಮ ಕಾರಂತರ ಮೂಲಕ ಬೆನಕನ ದೇವಾಲಯವನ್ನು ಪುನರುಜ್ಜೀವನಗೊಳಿಸುವ ಕಾರ್ಯ ಈ ಸಂಶಯವನ್ನು ನಿವಾರಿಸುತ್ತದೆ. ಮಂಜಯ್ಯನು ಸಹ ತನ್ನ ಮಕ್ಕಳಾದ ಯಶವಂತ, ಜಯವಂತ, ಭಗವಂತರಿಗೆ ಮಾನವೀಯತೆಯ ಶಿಸ್ತನ್ನು ಕಲಿಸುತ್ತಾನೆ. ಪಾರ್ವತಮ್ಮ ಧರ್ಮದ ನೆಲೆಗೆ ಸಾಗಿ ಹೇಳಿದರೆ, ಮಂಜಯ್ಯ ನಡವಳಿಕೆಯ ಮೂಲಕ ಹೇಳುತ್ತಾನೆ.

ಪ್ರೀತಿ, ಪ್ರೇಮ, ಪ್ರಾಮಾಣಿಕತೆ, ಪರೋಪಕಾರಿ, ನಿಸ್ವಾರ್ಥತೆ, ಔದಾರ್ಯ, ಸಹಾನುಭೂತಿ, ಕೃತಜ್ಞತೆ, ಅನುಕಂಪ-ಮೊದಲಾದ ಮಾನವೀಯ ಗುಣಗಳು ಕಾರಂತರಿಗೆ ಬಹಳ ಇಷ್ಟವಾದವುಗಳು. ಅವರ ಕಾದಂಬರಿಗಳ ನಾಯಕ ಪಾತ್ರಗಳಲ್ಲಿ ಒಂದಿಲ್ಲೊಂದು ಸಂದರ್ಭದಲ್ಲಿ ಈ ಮೌಲ್ಯಗಳೇ ಮನುಷ್ಯ-ಮನುಷ್ಯರ ನಡುವಿನ ಸಂಬಂಧವನ್ನು ಉತ್ತಮಗೊಳಿಸುತ್ತವೆ. ಅಂತೆಯೇ ಮಾನವೀಯ ಸಂಬಂಧವು ರಕ್ತಸಂಬಂಧ ಮತ್ತು ಶಾಸ್ತ್ರಸಂಬಂಧಗಳಿಗಿಂತಲೂ ಈ ಮೇಲಿನ ಮೌಲ್ಯಗಳಿಂದ ಶ್ರೇಷ್ಠವಾಗುತ್ತದೆ. ಅಪರಿಚಿತರ ನಡುವೆ ಸ್ನೇಹ ಬೆಳೆದು ಸಂಬಂಧಕ್ಕೆ ತಿರುಗಿದರೆ ಅದು ಕಾರಂತರು ನಂಬಿದ ಮೌಲ್ಯಕ್ಕೆ ಸಂದ ಗೌರವ. 'ಅಳಿದ ಮೇಲೆ'ಯಲ್ಲಿ (ನಿರೀಕ್ಷಕ) ಕಾರಂತ-ಯಶವಂತರ

ಸಂಬಂಧ ಹಾಗೂ ಯಶವಂತ-ಪಾರ್ವತಮ್ಮ ಅವರ ಸಂಬಂಧ. ಈ ಎರಡೂ ಸಂಬಂಧಗಳೂ ರಕ್ತ ಸಂಬಂಧದಾಚೆ ಇವೆ. ಕಾರಂತರು ಕೇವಲ ಪರಿಚಯದಿಂದ ಸ್ನೇಹಿತರಾದವರು. ಯಶವಂತರ ಡೈರಿಯ ನಿರ್ದೇಶನದಂತೆ ಸಂಬಂಧಿಗಳು ಮಾಡದಿರುವ ಅನೇಕ ಕೆಲಸಗಳನ್ನು ಮಾಡುತ್ತಾರೆ. ಯಶವಂತ-ಪಾರ್ವತಮ್ಮನ ಸಾಕುಮಗ, ಹಾಗಿದ್ದರೂ ಇಡೀ ಕಾದಂಬರಿಯಲ್ಲಿಯೇ ಅಂತಹ ಉನ್ನತ ಮಟ್ಟದ ಸಂಬಂಧ ಇನ್ನೊಂದಿಲ್ಲ. ಯಶವಂತ-ಸರಸಿಯರ ಸಂಬಂಧ ಮತ್ತು ಯಶವಂತ-ಕಮಲರ ಸಂಬಂಧ ನಿಗೂಢವಾಗುತ್ತವೆಯಾದರೂ ಶಾಸ್ತ್ರಬದ್ಧವಾದ ಮತ್ತು ಶಾಸ್ತ್ರಬದ್ಧವಲ್ಲದ ಸಂಬಂಧಗಳ ನಡುವಿನ ಮೌಲಿಕತೆಯನ್ನು ಎತ್ತಿ ಹಿಡಿಯುತ್ತವೆ. ಇಡೀ ಜಗತ್ತು ಶಾಸ್ತ್ರಬದ್ಧವಾದ ಸಂಬಂಧಕ್ಕೆ ಮಾನ್ಯತೆ ಕೊಟ್ಟಿದೆ. ಕಾರಂತರೂ ಕೊಟ್ಟಿದ್ದಾರೆ. ಶಾಸ್ತ್ರೀಯ ಸಂಬಂಧದಲ್ಲಿ ಸಂಬಂಧಿಗಳಿಬ್ಬರೂ ಅರ್ಥಮಾಡಿಕೊಂಡು ಜೀವನ ಸಾಗಿಸಬೇಕಾದದ್ದು ನಿಯಮ ಮತ್ತು ಕರ್ತವ್ಯ. ಸ್ವಲ್ಪ ಯಡವಟ್ಟಾದರೂ ಅದು ಅರ್ಥಹೀನವಾಗುತ್ತದೆ. ಯಶವಂತ ಕಮಲೆಯರಲ್ಲಾದದ್ದು ಇದುವೇ. ಕಮಲೆಯ ಚಾರಿತ್ರ್ಯ ಸರಿಯಲ್ಲವೆಂದು ಯಶವಂತರು ಸರಸಿಯನ್ನಾಶ್ರಯಿಸಿದರು. ಸರಸಿಯಾದರೂ ಶಾಸ್ತ್ರಸಮ್ಮತವಾಗಿ ಕಟ್ಟಿಕೊಂಡ ಗಂಡನಿಗಿಂತಲೂ ಹೆಚ್ಚಾಗಿ ಪ್ರೀತಿಸಿದಳು-ಬಾಳಿದಳು. ಈ ಸಂಬಂಧಗಳು ಅಮೂರ್ತವಾದ ಮಾನವೀಯ ಶ್ರದ್ಧೆಯನ್ನು ಪ್ರತಿಪಾದಿಸುತ್ತವೆ. ಯಶವಂತ-ರೀಮಾಳ ಸಂಬಂಧ ಕೂಡ ಅಶಾಸ್ತ್ರೀಯವೇ. ಅವಳು ಸಹ ಯಶವಂತ ಮತ್ತು ತನ್ನ ತಾಯಿಯನ್ನೇ ವಂಚಿಸಿದವಳಾದ್ದರಿಂದ ಕಾರಂತರ ದೃಷ್ಟಿಯಲ್ಲಿ ಅವಳು ಕೃತಘ್ನಳು.

''ಮಾನವ ಜೀವನದಲ್ಲಿ ರಕ್ತ ಸಂಬಂಧದ ಉತ್ತಾರಾಧಿಕಾರಕ್ಕಿಂತ ಮಾನವೀ ಮೌಲ್ಯಗಳನ್ನಾಧರಿಸಿದ ಸಹೃದಯತೆಯ ಉತ್ತರಾಧಿಕಾರ ಹೆಚ್ಚು ಸಾರ್ಥಕವಾದುದು, ಹೆಚ್ಚು ಉದಾತ್ತವಾದುದು''[೧೩೨] ಇಂತಹ ಉತ್ತರಾಧಿಕಾರವನ್ನು ಯಶವಂತರಿಂದ ಕಾರಂತರು ಧಾರೆ ಎರೆಸಿಕೊಳ್ಳುತ್ತಾರೆ. ಬೆನಕನಹಳ್ಳಿಯಲ್ಲಿ ಪಾರ್ವತಮ್ಮನ ಇಚ್ಛೆಯಂತೆ ಬೆನಕನ ಗುಡಿ ನಿರ್ಮಿಸುವುದು ಮತ್ತು ವಿಷ್ಣುಪಂತ ಘಾಟೀಯವರ 'ನಮ್ಮ ಧರ್ಮ ಶಾಸ್ತ್ರಗಳು' ಎಂಬ ಗ್ರಂಥವನ್ನು ಪ್ರಕಟಿಸುವುದು. ಈ ಎರಡು ಕಾರ್ಯಗಳನ್ನು ಯಶವಂತರ ಉತ್ತರಾಧಿಕಾರಿಯಾಗಿ, ಕಾರಂತರು ಮಾನವೀಯ ಮೌಲ್ಯಗಳ ಆಧಾರದ ಮೆಲೆ ನೆರವೇರಿಸುತ್ತಾರೆ. ಕಾರಂತರ ಮತ್ತು ಯಶವಂತರಿಬ್ಬರೂ ನಾಸ್ತಿಕರೆಂಬ ಅಂಶ ಗಮನಾರ್ಹವಾದುದು. ಈ ನಾಸ್ತಿಕರು ಅಸ್ತಿಕರ ಕಾರ್ಯಗಳನ್ನು ಮಾನವೀಯ ಮನಸ್ಸುಗಳನ್ನು ಸಂತೃಪ್ತಿಗೊಳಿಸುವುದು ಮುಖ್ಯವಾಗಿದೆ. ಅಷ್ಟೆ ಅಲ್ಲದೆ ''ನಿಜವಾದ ಮಾನವೀಯ ಮೌಲ್ಯಗಳಿಗೂ ದೇವರಲ್ಲಿಯ ವಿಶ್ವಾಸ ಅಥವಾ ಅವಿಶ್ವಾಸಕ್ಕೂ ಸಂಬಂಧವಿಲ್ಲ, ಹಾಗೂ ದೇವರಲ್ಲಿ ವಿಶ್ವಾಸವಿಲ್ಲದೆಯೂ ಮನುಷ್ಯ ಉತ್ತಮನಾಗಿರಬಲ್ಲ, ಶ್ರೇಷ್ಠತೆಯನ್ನು ಪಡೆಯಬಲ್ಲ ಎಂದು ಕಾರಂತರಿಗೆ ತೋರಿಸಬೇಕಾಗಿದೆ. ಅಷ್ಟೇ ಅಲ್ಲದೆ, ಜೀವನದಲ್ಲಿ ಮನುಷ್ಯನಿಗೆ ಸಿಗುವ ಸತ್ಯ ಯಾವಾಗಲೂ ಮಿತಸತ್ಯವಾದದ್ದು; ಮನುಷ್ಯ

ಇದನ್ನರಿತು, 'ನನ್ನ ದಾರಿ ನನಗೆ, ನಿನ್ನ ದಾರಿ ನಿನಗೆ... ಆದರೆ ನಿನಗೆ ನಿನ್ನ ಜೀವನ ಸಾಫಲ್ಯವನ್ನು ಪಡೆಯಲು ಅಡ್ಡಿ ಉಂಟಾದರೆ ನಾನು ನಿನಗೆ ಸಹಾಯ ಮಾಡಬೇಕು... ಇದು ನನ್ನ ಮಾನವೀ ಕರ್ತವ್ಯ' ಎಂಬ ದೃಷ್ಟಿಕೋನವನ್ನು ಗಳಿಸಬೇಕು. ಜೀವನದಲ್ಲಿ ಶ್ರದ್ಧೆ ಮುಖ್ಯ. ಮಾನವೀಯತೆಯಲ್ಲಿ ಶ್ರದ್ಧೆ ಮುಖ್ಯ. ಈ ಶ್ರದ್ಧೆಯೊಂದಿದ್ದರೆ ಸಾಕು-ಮನುಷ್ಯ-ಮನುಷ್ಯರ ಸಂಬಂಧ ಅರ್ಥಪೂರ್ಣವಾಗುವುದು, ಮಾನವ ಜೀವನ ಸಾರ್ಥಕವಾಗುವುದು"[೧೩೩]

ಕಾರಂತರು 'ಅಳಿದ ಮೇಲೆ'ಯಲ್ಲಿ ಯಶವಂತರ ಜೀವನ ಗಾಥೆಯನ್ನು ಹೇಳುವುದರ ಮೂಲಕ ಕೆಲವು ಸತ್ಕೃತಿಗಳನ್ನು ಮೌಲಿಕ ವಿಚಾರಗಳನ್ನು ಪ್ರತಿಪಾದಿಸುತ್ತಾರೆ. ಅವರ ಒಂದು ಮುಖ್ಯ ವಿಚಾರವೆಂದರೆ "ಜೀವನದಲ್ಲಿ ಎಷ್ಟೇ ದುಃಖ-ಆಪತ್ತು ಬಂದರೂ, ಮತ್ಸರ, ದ್ವೇಷ, ದ್ರೋಹ, ಕೃತಘ್ನತೆಗಳಂಥ ಆಸುರೀ ಶಕ್ತಿಗಳಿಗೆ ಬಲಿಯಾಗಿಯೂ, ದೇವರಲ್ಲಿ ವಿಶ್ವಾಸವಿಲ್ಲದೆಯೂ, ಮನುಷ್ಯ ಮಾನವೀಯ ಮೌಲ್ಯಗಳಲ್ಲಿ ವಿಶ್ವಾಸ ಕಳೆದುಕೊಳ್ಳದೆ ಮನುಷ್ಯನಾಗಿ ಬಾಳುವುದು ಶಕ್ಯ ಹಾಗೂ ಮನುಷ್ಯನ ಮಾನವೀಯತೆ ಮೃತ್ಯುವಿನ ಗೆರೆಯನ್ನು ದಾಟಿ ತನ್ನ "ಚಿರಂತನ" ಪ್ರಪಂಚವನ್ನು ಮುಂದುವರೆಸುವುದೂ ಶಕ್ಯ"[೧೩೪] ಈ ರೀತಿಯ ವಿಚಾರ ಪರತೆಯನ್ನಿಟ್ಟುಕೊಂಡ ಕಾರಂತರ ಮಾನವೀಯ ತತ್ವ ಎಂದಿಗೂ ಶಾಶ್ವತತೆಯನ್ನು ಪಡೆಯುತ್ತದೆ. ಮನುಷ್ಯ ರಾಕ್ಷಸನಾಗಿ ಬಾಳಬಾರದು. ರಾಕ್ಷಸನನ್ನು ಮನುಷ್ಯನನ್ನಾಗಿ ಪರಿವರ್ತಿಸುವ ಕೆಲಸ ಮಾಡಬೇಕು. ಇದು ಗುಣಗಳನ್ನವಲಂಬಿಸಿ ಹೇಳಿದ ಮಾತು. ಯಶವಂತರು ದಾದಾನಂತರ ಹಟವಾದಿಯನ್ನು, ಲೂಸಿಯಂತಹ ಕೃತಘ್ನಳನ್ನು ಮರೆಯಬಹುದಿತ್ತು. ಆದರೆ ಅವರನ್ನು ಮರೆತರೆ ಮಾನವೀಯ ಮೌಲ್ಯಕ್ಕೆ ಬೆಲೆ ಪಡೆಯಲಾರದು. ಅವರೂ ಸಹ ಮಾನವೀಯ ವ್ಯಕ್ತಿಗಳಾಗಿ ಬಾಳಿದಾಗ ಮಾತ್ರ ಸಾಧ್ಯ.

ಕಾರಂತರ ತಾದಾತ್ಮ ಯಶವಂತರಾಯರ ಮೇಲಿದ್ದಷ್ಟು ಅವರ ಹೆಂಡತಿ ಕಮಲೆಯ ಮೆಲೆ ಏಕಿಲ್ಲ? ಎಂಬ ಪ್ರಶ್ನೆಗೆ "ಯಶವಂತನನ್ನ ಯಾರಿಂದ ನಾನು ಪ್ರೇರಣೆಗೊಂಡೆ, ಅವನ ಹೆಂಡತಿ ನನ್ನ ಕಣ್ಣಿಗೆ ಯಾರಾಗಿ ನಿಲ್ತಿದ್ಲು, ನಾನು ಬರೆಯುವಾಗ-ಅನ್ನೊದು. ಇವರೆಲ್ಲ Know objects. ಅವರ ಹೆಂಡತಿ ಯಾರಾಗಿದ್ರು ಅಂತ ಕೇಳಿದ್ರೆ - ಅದೊಂದು ಹೆಂಗಸು. ಒಬ್ಬ - ಇಬ್ಬರು ಅಣ್ಣ ತಮ್ಮಂದಿರಲ್ಲಿ, ತಮ್ಮನ ಹೆಂಡತಿ ಅಣ್ಣನೊಟ್ಟಿಗೆ ಓಡಿ ಹೋದ ಯಾವ ಯಾವ ತರದೋ ವ್ಯಕ್ತಿ. ಅದನ್ನ ನಾನು ಜೀವನದಲ್ಲಿ ಕಂಡಿದ್ದೇನೆ. ಹಾಗೇ ಜೀವನದಲ್ಲಿ ಕಂಡಂತಹ ವ್ಯಕ್ತಿ ನನ್ನ ಕಣ್ಣು ಮುಂದೆ ಬರ್ತಾಳೆ. ಅವಳಲ್ಲಿ ಒಂದೇ ಒಂದು -ದೇಹದ ಒಂದು Lust ಬಿಟ್ಟರೆ ಎರಡನೇ ಗುಣವನ್ನೇ ನಾನು ಕಾಣಲಾಗಲಿಲ್ಲ... ನೂರು ಜನ ಹೆಂಗಸರ ಮೇಲೆ ಅನುಕಂಪ ಬಂದು ಬರ್ದಿದ್ದೇನೆ. ಈ ವ್ಯಕ್ತಿ ಮೇಲೆ ಅನುಕಂಪ ಪಡಲಿಕ್ಕೆ ನನಗೆ ಸಾಧ್ಯವಾಗಲಿಲ್ಲ. ಯಾಕೆಂದ್ರೆ ಆ ವ್ಯಕ್ತಿ ನನಗೆ ಗೊತ್ತಿತ್ತು. ಅದನ್ನೇ ಬರ್ಯೋದಾದ್ರೆ ಒಂದು ಘೋರ ಶೂರ್ಪನಖಿಯನ್ನೇ ನಾನು ಬರೀಬಹುದು. ಇವರು ನಾನು ಕಲ್ಪಿಸಿದ

ವ್ಯಕ್ತಿಗಳಲ್ಲ. ನಾನು ಸಂದರ್ಭಕ್ಕೆ ತಕ್ಕೊಂಡ ವ್ಯಕ್ತಿಗಳು. ಪೂರಾ ಒಂದೇ ವ್ಯಕ್ತಿಯದಲ್ಲ. ಆದರೆ ಇಂಥ ವ್ಯಕ್ತಿಗಳು ನನ್ನ ಬದುಕಿನ ನಿಕಟ ಸಂಬಂಧದಿಂದ ಹುಟ್ಟಿಕೊಂಡ, ಕಂಡುಕೊಂಡ ವ್ಯಕ್ತಿಗಳಾದ್ದರಿಂದ ಕೆಲವು ವ್ಯಕ್ತಿಗಳಲ್ಲಿ ಅನುಕಂಪನ್ನ ನಾನು ಏನು ಮಾಡಿದ್ರೂ ಹಂಚಲಾರೆ''[೧೩೫] ಎಂಬ ಕಾರಂತರ ಮಾತೇ ಅವರ ಮಾನವತಾವಾದವನ್ನು ಮತ್ತು ಅನುಭವಸಾರವನ್ನು ಸ್ಪಷ್ಟಪಡಿಸುತ್ತದೆ.

ಬಿ. ದಾಮೋದರರಾವ್ ಅವರ ಕೆಲವು ಆಕ್ಷೇಪಗಳಿಗೆ(೧೯೬೮ರ ಜುಲೈ ತಿಂಗಳ 'ಸಾಕ್ಷಿ') ಸುಮತೀಂದ್ರ ನಾಡಿಗ ಅವರು ಸಮರ್ಥವಾಗಿ ಉತ್ತರಿಸಿದ್ದಾರೆ.[೧೩೬] 'ಶಿವರಾಮ ಕಾರಂತರ ಲೋಕ ದೃಷ್ಟಿಗೊಂದು ಆಕರ' ಎಂಬ ಲೇಖನದಲ್ಲಿ ಡಿ.ವಿ.ಕೆ.ಮೂರ್ತಿ ಅವರು[೧೩೭] ಕಾರಂತರ 'ಅಳಿದ ಮೇಲೆ'ಯಲ್ಲಿನ ಧೋರಣೆಗಳನ್ನು ಎತ್ತಿ ಹಿಡಿದಿದ್ದಾರೆ. ಮಾನವತಾವಾದವನ್ನು ಹೇಳುತ್ತಿರುವಾಗಲೇ ಅಮಾನವೀಯತೆಯನ್ನು ಪ್ರಚೋದಿಸುತ್ತಾರೆ ಅಥವಾ ಮಾನವತಾವಾದದ ಕೆಲ ನಿಯಮಗಳನ್ನು ಸಡಿಲಗೊಳಿಸುತ್ತಾರೆ ಎಂದಿದ್ದಾರೆ.[೧೩೮]

ಒಟ್ಟಿನಲ್ಲಿ 'ಅಳಿದ ಮೇಲೆ' ಕೃತಿಯು ಕಾರಂತರ ಜೀವನ ದೃಷ್ಟಿಯನ್ನು ಅನಾವರಣಗೊಳಿಸುವ, ಮಹತ್ವದ ಕಾದಂಬರಿ. 'ಸಾಹಿತ್ಯ ಕೃತಿ ಮೌಲ್ಯ ವಿವೇಚನೆ ಮಾಡಬೇಕೆಂಬ ವಾದ'ವನ್ನು ಬಲವಾಗಿ ಸಮರ್ಥಿಸುತ್ತದೆ. ಕಥನಿಸುವ ತಂತ್ರ, ಸರಾಗವಾಗಿ ಹೇಳುವ ಸಹಾನುಭೂತಿಯ ನಿರೂಪಣೆ, ಜೀವನ ಮೌಲ್ಯಗಳ ತಾತ್ವಿಕ ಚಿಂತನೆ, ಪದ-ಪದಾರ್ಥ ಮತ್ತು ಸಂಕೇತಗಳ ಮೂಲಕ ಅನುಕರಣೆಸುವ ಮಾನವೀಯತೆ ಆದರ್ಶನೀಯವಾಗಿದೆ. ಇಲ್ಲಿ ಹೊಸ ಮೌಲ್ಯಗಳ ಹುಡುಕಾಟ ಇವರ ಕೆಲಸವಾಗಿಲ್ಲ. ಪರ್ಯಾಯವಾಗಿ ಮೊದಲೇ ಗೊತ್ತುಪಡಿಸಿಕೊಂಡ ಮೌಲ್ಯಗಳಿಗೆ ಕಥಾಹಂದರವನ್ನು ನಿರ್ಮಿಸಿ ಸಾದರಪಡಿಸಿದ್ದಾರೆ.

''ಕಾರಂತರ ಕಾದಂಬರಿಗಳನ್ನು ನಾವು ಅವರು ಏನು ಹೇಳುತ್ತಿದ್ದಾರೆ ಎಂಬುದಕ್ಕಾಗಿ ಓದಬೇಕೇ ಹೊರತು ಹೇಗೆ ಹೇಳುತ್ತಿದ್ದಾರೆ ಎಂಬುದಕ್ಕಲ್ಲ; ಮತ್ತು ಅವರು ಹೇಳುವುದು ಯಾವಾಗಲೂ ಜೀವನವನ್ನು ಕುರಿತು, ಮನುಷ್ಯನನ್ನು ಕುರಿತು, ಮನುಷ್ಯ ಮೌಲ್ಯಗಳನ್ನು ಕುರಿತು. ಅವರು ಕಲೆಯಿಂದ ರಾಜಕೀಯದವರೆಗೆ ಸಾಮಾಜಿಕ ಸಮಸ್ಯೆಗಳಿಂದ ಆರ್ಥಿಕ ಪ್ರಶ್ನೆಗಳವರೆಗೆ ಅನೇಕಾನೇಕ ವಸ್ತು ವೈವಿಧ್ಯವನ್ನು ಕಾದಂಬರಿಗಳ ಉಪಕರಣವಾಗಿ ಬಳಸಿಕೊಂಡಿದ್ದಾರೆ. ಎಲ್ಲವುಗಳಲ್ಲಿಯೂ ಅವರ ಚಿಂತೆ ಬಾಳಿನ ಮೌಲ್ಯಗಳನ್ನು ಕುರಿತದ್ದೇ''[೧೩೯]

'ಸ್ವಪ್ನದ ಹೊಳೆ' ಕಾದಂಬರಿ ಕಾರಂತರ ಇನ್ನೊಂದು ಬಗೆಯ ಅನುಭವವನ್ನು ನಿರೂಪಿಸುತ್ತದೆ. ಸ್ವಾತಂತ್ರ್ಯಾನಂತರದ ಕಾಲದಲ್ಲಿ (೧೯೬೭) ಹುಟ್ಟಿದ ಈ ಕಾದಂಬರಿಗೆ ರಾಜಕೀಯ ಹಾಗೂ ಬ್ರಿಟಿಷ್ ಗುಲಾಮತನದ ಸಮಸ್ಯೆಗಳಿಗಿಂತಲೂ-ಸಾಮಾಜಿಕ ಸಮಸ್ಯೆ, ಕೌಟುಂಬಿಕ ಸಮಸ್ಯೆ ಮತ್ತು ವ್ಯಕ್ತಿಯ

ಸಮಸ್ಯೆ ಕಡೆ ಗಮನಕೊಟ್ಟಿತು. 'ಕಿಟ್ಟ'ನ ಬಾಲ್ಯತನದಿಂದಲೇ ಆರಂಭವಾಗುವ ಕೃತಿ ಪ್ರಾಧ್ಯಾಪಕ ಕೃಷ್ಣರಾಯರಾಗಿ ಬೆಳೆಯುವವರೆಗೂ ಸಾಗುತ್ತದೆ. ಕೃಷ್ಣರಾಯರ ಅನೇಕ ಸಾಮಾಜಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಯಿಂದ ರಾಷ್ಟ್ರದ ಯುವ ಪೀಳಿಕೆಯು ನವ ಕನಸುಗಳನ್ನು ಪರಿಭಾವಿಸಿಕೊಳ್ಳುತ್ತದೆ. ನಾಟಕ, ಕಲೆ, ಸಂಗೀತ ಹಾಗೂ ಇತರೆ ಸಾಂಸ್ಕೃತಿಕ ಚಟುವಟಿಕೆಗಳ ಮೂಲಕ ಕಾಲೇಜು ವಿದ್ಯಾರ್ಥಿಗಳನ್ನು ಕಂದಾಚಾರ ಹಾಗೂ ಅನೀತಿಗಳ ವಿರುದ್ಧ ಪ್ರಚೋದಿಸುತ್ತಾರೆ. 'ವೈರಿಗಳನ್ನು ಪ್ರೀತಿಸುವಂತೆ' ಸಲಹೆ ಮಾಡುತ್ತಾರೆ.

ಸಣ್ಣಪ್ಪನೆಂಬ ಗೆಳೆಯನೊಂದಿಗೆ ಒಂದೇ ತರಗತಿಯಲ್ಲಿ ಓದುತ್ತಿರುವ ಸಂದರ್ಭದಲ್ಲಿ ಸಣ್ಣಪ್ಪ ಕಿಟ್ಟಪ್ಪನನ್ನು ದ್ವೇಷಿಸುತ್ತಾನೆ. ದ್ವೇಷಕ್ಕೆ ಕಾರಣ ಕಿಟ್ಟಪ್ಪನ ಬುದ್ಧಿವಂತಿಕೆ, ಉತ್ತಮ ಓದು ಹಾಗೂ ಕ್ರಿಯಾಶೀಲತೆಯೇ ಆಗಿರುತ್ತದೆ. ಸಣ್ಣತನದಿಂದಲೇ ವರ್ತಿಸುತ್ತಿದ್ದ ಸಣ್ಣಪ್ಪ ವಿನಾಕಾರಣ ಕಿಟ್ಟಪ್ಪನನ್ನು ಕಾಲೇಜಿನಲ್ಲಿ ಎದುರು ಹಾಕಿಕೊಂಡು ಚಿತ್ರಹಿಂಸೆ ಕೊಡುತ್ತಾನೆ. ಅವರಿಬ್ಬರ ಹುಟ್ಟೂರಾದ ಸೊಪ್ಪಿನ ಹಳ್ಳಿಯಲ್ಲೂ ಸಣ್ಣಪ್ಪ ಸಲ್ಲದ ಅಪಪ್ರಚಾರ ಮಾಡಿರುತ್ತಾನೆ. ಸಣ್ಣಪ್ಪನ ಬಗ್ಗೆ ಅನಾಸಕ್ತಿ ತೋರಿದ ಕಿಟ್ಟಪ್ಪ ತನ್ನ ಪಾಡಿಗೆ ತಾನು ಇರಲು ಬಯಸುತ್ತಾನೆ. ಆಕಸ್ಮಿಕವಾಗಿ ಸಣ್ಣಪ್ಪ ಸನ್ನಿಪಾತ ಕಾಯಿಲೆಯಿಂದ ಹಾಸಿಗೆ ಹಿಡಿದು ಹಾಸ್ಟೆಲಿನಲ್ಲಿ ಮಲಗಿದಾಗ, ಅವನ ಗೆಳೆಯರಾರು ಬಳಿಗೆ ಬರುವುದಿಲ್ಲ. ಎಲ್ಲರೂ ಆತನ ಅಸಹ್ಯಕ್ಕೆ ಮೂಗುಮುರಿಯುತ್ತಾರೆ. ಆದರೆ ಕಿಟ್ಟಣ್ಣ ಮಾತ್ರ ಹಿಂಜರಿಯದೆ "ನನಗೀಗ ಪರೀಕ್ಷೆ ಮುಗಿಯಿತು. ಇವತ್ತು ಕಡೆಯ ದಿವಸ. ನಾನು ಅವನ ಜತೆಯಲ್ಲಿರುತ್ತೇನೆ. ಅವನಿಗೆ ಗುಣವಾಗುವ ತನಕವೂ ಇರುತ್ತೇನೆ. ಆಸ್ಪತ್ರೆಗೆ ಒಯ್ಯುವುದು ಬೇಡ"[೧೪೦] ಎಂದು ಹೇಳುತ್ತಾನೆ. ಅಲ್ಲದೆ ನಮ್ಮ ಮನೆಯಲ್ಲಿ ಯಾರಾದರೂ ಕಾಯಿಲೆ ಬಿದ್ದರೆ ಮಲಮೂತ್ರ ತೆಗೆಯುವ ಕೆಲಸ ಮಾಡುವುದಿಲ್ಲವೇ? ಎಂದು ಗೆಳೆಯನ ಶುಶ್ರೂಷೆಗೆ ತೊಡಗುತ್ತಾನೆ. ವೈರಿಯಂತಲೇ Treat ಮಾಡಿದ್ದ ಸಣ್ಣಪ್ಪನಿಗೆ "....ನೀನೇನೂ ಗಾಬರಿಯಾಗಬೇಡ; ನಿನ್ನ ಚಾಕರಿ ನಾನು ಮಾಡುತ್ತೇನೆ! ನಿನ್ನ ಪರೀಕ್ಷೆ ತಪ್ಪಿದಕ್ಕೆ ನನಗೆ ದುಃಖವಾಗುತ್ತದೆ. ಈಗ ನೀನು ಕಷ್ಟದಲ್ಲಿರುವಾಗ ಬಿಟ್ಟು ಹೋಗುವುದೇ? ನಾನು ನಿನ್ನ ಕಾವಲಿಗಿದ್ದೇನೆ' ಎಂದು ಕೈಹಿಡಿದು ಕಿಟ್ಟಣ್ಣ ಮಾತನಾಡಿಸಿದಾಗ ಸಣ್ಣಪ್ಪನ ಕಣ್ಣಿಂದ ಧಾರಾವಾಹಿಯಾಗಿ ನೀರು ಸುರಿಯಿತು."[೧೪೧] ಕಷ್ಟದ, ನೋವಿನ ಸಂದರ್ಭದಲ್ಲಿ ಧೈರ್ಯ ತುಂಬಬೇಕಾದ ಆತ್ಮೀಯ ಗೆಳೆಯರೇ ದೂರವಿದ್ದುದರಿಂದ; ತಾನು ಸಹಿಸದಿದ್ದ ವ್ಯಕ್ತಿ ಶುಶ್ರೂಷೆ ಮಾಡಲು ಮುಂದಾದಾಗ ಸಣ್ಣಪ್ಪನ ಮನಸ್ಸು ಸಣ್ಣದಾಗುತ್ತದೆ. ಕಿಟ್ಟಣ್ಣನ ಹೃದಯ ವೈಶಾಲ್ಯತೆಗೆ ಮಾರು ಹೋಗುತ್ತಾನೆ.

ಅತಿ ಬಡತನದಲ್ಲಿ ಓದು ಮುಂದುವರಿಸಿದ ಕಿಟ್ಟಣ್ಣ ಓದುತ್ತಲೇ ಗಳಿಕೆಯ ಮಾರ್ಗವನ್ನು ಕಂಡುಕೊಳ್ಳುತ್ತಾನೆ. ತಂದೆ ಪರಮೇಶ್ವರಯ್ಯ ಮತ್ತು ತಾಯಿ ತುಂಗಮ್ಮನವರು ಮಗನ ವ್ಯಾಸಂಗಕ್ಕೆ

ತೀರ ಸಂಕಷ್ಟವನ್ನೆದುರಿಸುತ್ತಾರೆ. ಅಂತಹ ಕಷ್ಟಗಳ ನಡುವೆ ಅವನನ್ನು ಉತ್ತಮ ನಾಗರಿಕನನ್ನಾಗಿ ರೂಪಿಸುತ್ತಾರೆ. ಕಿಟ್ಟಣ್ಣ ಸಹ ತನ್ನ ಕರ್ತವ್ಯ ಮರೆಯದೆ ಅಭ್ಯಾಸ, ಸಂಗೀತ, ನಾಟಕಗಳಲ್ಲಿ ಸಮರ್ಥವಾಗಿ ತೊಡಗಿಸಿಕೊಳ್ಳುತ್ತಾನೆ. ಕಿಟ್ಟಣ್ಣ ಊಟಕ್ಕೆ ಹೋಗುತ್ತಿದ್ದ ವಕೀಲ ರಾಮರಾಯರ ಮಗಳು ಲಲಿತೆಯ ಮೋಹಕ್ಕೆ ಬಲಿಯಾಗುತ್ತಾನೆ. ಕಿಟ್ಟಣ್ಣ ಮೊದಲು ತಾತ್ಸಾರ ಮಾಡಿದರೂ ಅವಳ ಮೇಲೆ ಒಲವು ತೋರಿಸುತ್ತಾನೆ. ಅವರಿಬ್ಬರ ಪ್ರೀತಿ ತಂದೆ-ತಾಯಿಯರಿಗೆ ಗೊತ್ತಿಲ್ಲದಂತೆ ಸಾಗುತ್ತದೆ. ಆದರೆ ಲಲಿತೆ ಕೊನೆಗೆ ಕಿಟ್ಟಣ್ಣನಿಗೆ ಕೈಕೊಟ್ಟು ಬೇರೊಬ್ಬ ಶ್ರೀಮಂತನನ್ನು ಮದುವೆಯಾಗುತ್ತಾಳೆ. ಇದನ್ನು ತಿಳಿದ ಅವನ ಮನಸ್ಸು ನೊಂದುಕೊಳ್ಳುತ್ತದೆ. ಲಲಿತೆಯ ಮಾರ್ಗವನ್ನು ಅವನು ಸಹಿಸುವುದಿಲ್ಲ. ಅಮಾನವೀಯವಾಗುವಂತಹ ಕೆಲಸವನ್ನು ಲಲಿತೆ ಮಾಡುತ್ತಾಳೆ.

ಕಿಟ್ಟಣ್ಣನಿಗೂ ಮತ್ತು ಲಿಂಗರೂಪಿ ಭೂತನಿಗೂ ನಡೆಯುವ ಸಂವಾದದಲ್ಲಿ ಕಾರಂತರು ಕಾಮದ ಪ್ರಾಧಾನ್ಯತೆಯನ್ನು ಚರ್ಚಿಸುತ್ತಾರೆ. ಕಾಮವು ಅಸಹ್ಯವಲ್ಲ ಅದೊಂದು ಸೃಷ್ಟಿಕ್ರಿಯೆ; ಪ್ರತಿಯೊಬ್ಬ ಮನುಷ್ಯನಲ್ಲಿಯ ಚೈತನ್ಯದ ಸಂಕೇತ; ಶಕ್ತಿ ಎಂದೆಲ್ಲಾ ಹೇಳುತ್ತಾರೆ. ಅದು ಮನುಷ್ಯನನ್ನು ಭೂತದಂತೆ ಕಾಡುತ್ತದೆಯಷ್ಟೆ. ''ಗಂಡು ಹೆಣ್ಣುಗಳ ಭಾವಜೀವನ ನನ್ನ ಅಧೀನ-ನನ್ನನ್ನು ಯಾರೂ ಅಮಾನ್ಯಮಾಡುವಂತಿಲ್ಲ. ಜೀವ ಸಂಕುಲ ಮುಂದುವರಿಯಲು ನಾನೇ ಕಾರಣ''. ''.....ನೀನಿಲ್ಲದೆ ಬದುಕು ಸಾಧ್ಯವಿಲ್ಲವೇ?''. ''ಅದೇನು ಬದುಕಂತೆ! ಬದುಕಿನ ವೈವಿಧ್ಯವೇ ನನ್ನಿಂದ. ಅದರ ವಿಕಾಸ ನಾನು ಇರುವುದರಿಂದ. ಆ ವಿಕಾಸದಿಂದ ಜೀವಕುಲ ಮುಂದುವರಿಯಬೇಕು ಎಂಬುದೇ ನನ್ನ ಉದ್ದೇಶ.''[೧೪೨] ಇನ್ನೂ ಮುಂದುವರಿದು ''ನಾನಿರುವುದು ಜೀವಕುಲವನ್ನು ಉಳಿಸಲು ಮನುಷ್ಯ ಅಮರನಾಗಲು. ಒಂದೇ ದೇಹ ಅಮರವಾಗಲಾರದು. ಅದು ನಾಶವಾಗಲೇ ಬೇಕು. ಅದು ಅಮರವಾಗುವ ರೀತಿಯೇ ಗರ್ಭಪ್ರಧಾನದಿಂದ....'' ''ನಿನ್ನ ಸಮಾಜದ ಅವಿವೇಕಿ ಜೀವನದ ಅಪೂರ್ಣ ಚಿಂತನೆಗಾಗಿ ನನ್ನನ್ನು ದೂರಬೇಡ. ನೀನೇನೆ ಹೇಳು. ನಾನು ಹಳೆಯ ಭೂತ; ಸದಾ ಗಂಡು ಹೆಣ್ಣುಗಳನ್ನು ಕಾಡುತ್ತಿರುವವನು. ಆದರೂ ನಾನು ಕಾಡುತ್ತಿರುವುದು ನಿನ್ನ ಶ್ರೇಯಸ್ಸಿಗಾಗಿ; ನಿನ್ನ ಎಂದರೆ ನಿನ್ನೊಬ್ಬನ ಅಲ್ಲ,- ಯಾವತ್ತು ಜೀವ ಸಂಕುಲದ ಶ್ರೇಯಸ್ಸಿಗಾಗಿ''[೧೪೩] ಎಂದು ಲಿಂಗ ಅಥವಾ ಪಶುಪತಿ ಅಥವಾ ಭೂತ ಎಂದು ಕರೆಯಿಸಿಕೊಳ್ಳುವ ಕಾಮ ಹೇಳುತ್ತದೆ. ಮನುಷ್ಯನ ಆವಿರ್ಭಾವಕ್ಕೆ ತಾನು ಕಾರಣ ಹಾಗೂ ಅವನಲ್ಲಿಯ ನಾಗರಿಕತೆಯ ಬೆಳವಣಿಗೆಯು ಅವನ ಬುದ್ಧಿವಂತಿಕೆಯಿಂದಾದರೂ ಅದರ ಮೂಲ ತಾನೆಂದು ಸಾರುತ್ತದೆ. ಕಾರಂತರ ಕಾಮದ ಬಗೆಗಿನ ದೃಷ್ಟಿಕೋನ ಸಂಪೂರ್ಣ ಮಾನವ ದೇಹಗಳ ಸೃಷ್ಟಿ ಹಾಗೂ ಮಾನವೀಯ ಮನಸ್ಸುಗಳ ರೂಪಿಸುವಿಕೆಯ ಕಡೆಗೆ ಸಾಗಿದೆ.

ಕಿಟ್ಟಣ್ಣ ಪ್ರಾಧ್ಯಾಪಕನಾಗಿ ಕೆಲಸ ಮಾಡಲು ಸೇರಿದ ಮೇಲೆ ಅವನ ವಿದ್ಯಾರ್ಥಿನಿಯರು ಮನೆಗೆ ಟ್ಯೂಶನ್‌ಗೆ ಬರತೊಡಗಿದರು. ಕಾಲೇಜಿನಲ್ಲಿ ಮೆಚ್ಚಿನ ಪ್ರಾಧ್ಯಾಪಕನಾದ ಇವನಿಂದ ಬನ್ನಿ ಮತ್ತು ಇಂದುಮತಿಯರೆಂಬ ಇಬ್ಬರು ಮಾತ್ರ ಕಾಲೇಜಿನಲ್ಲಿ ಸರಿಯಾಗಿ ಅರ್ಥವಾಗದ್ದರಿಂದ ಅವನ ಮನೆಗೆ ಬಂದು ಪಾಠ ಹೇಳಿಸಿಕೊಳ್ಳುತ್ತಿದ್ದರು. ಹುಡುಗಿಯರು ಮಾತ್ರ ಬರುವುದರಿಂದ ಜನತೆ ತನ್ನ ಮತ್ತು ಹುಡುಗಿಯರ ನಡುವೆ ಕಟ್ಟುವ ಅಪಕಲ್ಪನೆಯನ್ನು ಯೋಚಿಸಿ ಬೇಡವೆಂದಿದ್ದ. ಆದರೆ ಅವರ ತಂದೆತಾಯಿಗಳ ಒತ್ತಾಯಕ್ಕೆ ಹೇಳತೊಡಗಿದ. ಕಾಲೇಜಿನಲ್ಲಿ ಪ್ರತಿವರ್ಷ ವಿದ್ಯಾರ್ಥಿಗಳಿಂದ ನಾಟಕ, ಸ್ಪರ್ಧಾತ್ಮಕ ಚಟುವಟಿಕೆಗಳನ್ನು ಹಮ್ಮಿಕೊಳ್ಳುತ್ತಿದ್ದ. ಕೃಷ್ಣರಾವ್ ಆಡಿಸುವ ನಾಟಕದಲ್ಲಿ ಬನ್ನಿಯೂ ಪಾತ್ರ ಮಾಡುತ್ತಿದ್ದಳು. ಬನ್ನಿಯು ಕಾಲೇಜಿನ ಇನ್ನೊಬ್ಬ ಪ್ರಾಧ್ಯಾಪಕ ಮಡಗಾಂವ್‌ಕರ್ ನನ್ನು ಪ್ರೀತಿಸುತ್ತಾಳೆ. ಮದುವೆಯಾಗಿಲ್ಲವೆಂದು ಸುಳ್ಳು ಹೇಳಿದ ವ್ಯಕ್ತಿ ಬನ್ನಿ ಗರ್ಭಧರಿಸಲು ಕಾರಣನಾಗುತ್ತಾನೆ. ಮದುವೆಯಾಗಿದೆಯೆಂದು ತಿಳಿದ ಮೇಲೆ ಬನ್ನಿ ಸಾಯುವ ತೀರ್ಮಾನ ಮಾಡುತ್ತಾಳೆ. ಕೃಷ್ಣರಾವ್ ಯಾರಿಗೂ ತಿಳಿಯದಂತೆ ಅವಳ ಗರ್ಭಪಾತವನ್ನು ಮಾಡಿಸಿ ಹಾಯಾಗಿರಲು ಹೇಳುತ್ತಾನೆ. ಮನೆಯಲ್ಲಿ ಅವಳ ಮದುವೆಯಾಗದೆ, ತಂಗಿಯ ಮದುವೆ ನಡೆಯುತ್ತದೆ. ಇದರಿಂದ ಅವಳ ದುಃಖ ಇಮ್ಮಡಿಗೊಳ್ಳುತ್ತದೆ. ಮಡಗಾಂವಕರ್ ವರ್ಗಾವಣೆಯಾಗಿ ಬೇರೆ ಕಡೆ ಹೋಗುತ್ತಾನೆ. ಬನ್ನಿಯ ಮನಸ್ಥಿತಿಯನ್ನರಿತ ಕೃಷ್ಣರಾವ್ ಕೊನೆಗೆ ತಾನೇ ಮದುವೆಯಾಗಲು ತೀರ್ಮಾನಿಸುತ್ತಾನೆ. ಕೃಷ್ಣರಾವ್‌ನ ಈ ತೀರ್ಮಾನವನ್ನು ಜಾತೀಯತೆಯನ್ನವಲಂಬಿಸಿದ ಅವಳ ತಂದೆ ತಾಯಿಯರು ಇತ್ತಕಡೆ ಒಪ್ಪದೆಯೂ, ಅತ್ತ ಕಡೆ ಒಪ್ಪಿಗೆ ಕೊಡದೆಯೂ ನಿರ್ಲಿಪ್ತರಾಗುತ್ತಾರೆ. ಅವಳ ತಂಗಿ ನಳಿನಿ ಮಾತ್ರ ಧೈರ್ಯ ಹೇಳಿ, ಬನ್ನಿಯ ಪರವಾಗಿ ನಿಲ್ಲುತ್ತಾಳೆ. ರಿಜಿಸ್ಟರ್ಡ್ ಮದುವೆಯಾಗುವುದರ ಮೂಲಕ ಬೇರೆ ಎಲ್ಲೋ ಸೇರಬೇಕಾಗಿದ್ದ, ಯಾರಿಗು ಬೇಡವಾಗುವಂತಹ ಹೂವೊಂದನ್ನು ಎತ್ತಿಕೊಳ್ಳುತ್ತಾನೆ. ಕಾರಂತರು ತಮ್ಮ 'ಹುಚ್ಚು ಮನಸ್ಸಿನ ಹತ್ತು ಮುಖಗಳು' ಕೃತಿಯಲ್ಲಿ ವಿಧವೆಯರ, ವೇಶ್ಯೆಯರ ಮದುವೆಯನ್ನು ಪ್ರೋತ್ಸಾಹಿಸಿದ್ದಾರೆ. ಅದರಂತೆಯೇ ಹರೆಯದ ಅಮಲಿನಲ್ಲಿ ಮಾಡಿದ ತಪ್ಪಿಗೆ ಜೀವನದುದ್ದಕ್ಕೂ ಶಿಕ್ಷೆ ಅನುಭವಿಸುವ ಹೆಣ್ಣಿನ ಸ್ಥಿತಿಯನ್ನು ಅರಿತಿದ್ದಾರೆ. ಅವಳನ್ನು ಸಮಾಜ ನೋಡುವ ದೃಷ್ಟಿಕೋನವು ವಿಚಿತ್ರವಾಗಿರುತ್ತದೆ. ಕೃಷ್ಣರಾವ್ ಅಂತಹವೊಬ್ಬಳನ್ನು ಮದುವೆಯಾಗುವುದರ ಮೂಲಕ ಅವಳಿಗೆ ಹೊಸಬಾಳು ಕೊಡುವಂತಹ ಮಾನವೀಕರಣವನ್ನು ಮೆರೆಯುತ್ತಾನೆ.

'ಮೂಕಜ್ಜಿಯ ಕನಸುಗಳು' ಕಾದಂಬರಿಯು ಮಾನವಶಾಸ್ತ್ರ, ಅತಿ ಮಾನುಷತೆ, ಮನುಕುಲದ ಇತಿಹಾಸದ ಮೊದಲಾದ ಶಿಸ್ತುಗಳನ್ನೊಳಗೊಂಡಂತೆ ಮಾನವತಾವಾದೀಯ ನೆಲೆಯ ಶಿಸ್ತಿಗೂ ಒಳಗೊಂಡಿದೆ. ಮೂಕಜ್ಜಿಯ ಮೌನದೊಳಗೆ ಮಾನವೀಕರಣ ಅಡಗಿದೆ. ಸುಬ್ರಾಯ ಅದರ ವಕ್ತಾರನಾಗಿ ನಿಂತರೆ, ನಾಗಿ ವಸ್ತುವಾಗಿ ಕಾರ್ಯನಿರ್ವಹಿಸುತ್ತಾಳೆ. ಕನಸು ಮತ್ತು ಮೌನಗಳ

ಅರ್ಥವನ್ನರಿಯುವುದು ತುಂಬ ಕಠಿಣವಾದ ಕೆಲಸ. ಇಂತಹ ಕಠಿಣಗಳಲ್ಲಿ ಮಾನವೀಕರಣವೂ ಒಂದು ಪ್ರಮುಖ ಅರ್ಥವಾಗಿ ಹೊರಹೊಮ್ಮುತ್ತದೆ. ಸುಬ್ರಾಯನ ತಂದೆ ತೀರಿದಾಗ ಅವನು ಅಸಹಾಯಕನಾಗಿ ಕುಳಿತಿದ್ದಾಗ ಧೈರ್ಯ ಹೇಳಿ ಕಾರ್ಯ ಪ್ರವೃತ್ತನನ್ನಾಗಿ ಮಾಡುತ್ತಾಳೆ. ಮೊದಲು ಮೂಕಿಯಾಗಿದ್ದ ಮೂಕಜ್ಜಿ ತಾನೂ ಕಾರ್ಯಪ್ರವೃತ್ತಳಾಗುತ್ತಾಳೆ. 'ಜೀವನದ ವಿಮುಖತೆಯನ್ನು ತೊರೆದು ಸಾರ್ಥಕ ಜೀವನ ನಡೆಸಬೇಕೆಂದು' ಸಂಕಲ್ಪ ಮಾಡಿ ತಾನು ಕಾರ್ಯೋನ್ಮುಖಳಾಗಿ ಹಾಗೂ ಸುಬ್ರಾಯನನ್ನೂ ತೊಡಗಿಸುತ್ತಾಳೆ. ಮಾನವೀಕರಣದ ಪ್ರಕ್ರಿಯೆಯಲ್ಲಿ ನಾಯಕ ಸ್ಥಾನವನ್ನು ವಹಿಸುವ ಗುಣ 'ನಡೆದು ತೋರಿಸಬೇಕು' ಎಂಬುದು. ಈ ತತ್ವಕ್ಕೆ ಮೂಕಜ್ಜಿ ಮೌನವನ್ನು ಮುರಿಯುವುದರ ಮೂಲಕ ಮಾನ್ಯತೆ ಕೊಡುತ್ತಾಳೆ. "ಇದೇಯೇನು ನಿನ್ನ ಗಂಡುಸುತನ? ನೀನೇನು, ನಾನೇನು, ಯಾರೇನು? ಯಾರು ಶಾಶ್ವತ? ಹೋಗಿ ಕೊಳ್ಳಿ ಇಟ್ಟು ಉರಿಸಿ ಬಾ. ಇದು ಒಂದು ಆಟ. ……[೧೪೪] ಎಂದು ಸುಬ್ರಾಯನನ್ನು ಕಾರ್ಯ ಪ್ರವೃತ್ತಗೊಳಿಸುತ್ತಾಳೆ. ಇಂತಹದೇ ಇನ್ನೊಂದು ಸಂದರ್ಭ ತಿಪ್ಪಜ್ಜಿ ತೀರಿಕೊಂಡಾಗ ಅವಳ ಸಂಸ್ಕಾರಕ್ಕಾಗಿ ಸುಬ್ರಾಯನಿಗೆ "ನೀನೀಗ ಅವರಿಗೆ ಮೊಮ್ಮಗ, ಆಚೀಚೆ ಯಾರಿದ್ದಾರೆ ನೋಡು. ನಾಲ್ಕು ಮಂದಿ ಗಂಡಸರಿಗೆ ಬರಲಿಕ್ಕೆ ಹೇಳು"[೧೪೫] ಎಂದು ಸೂಚಿಸಿ - ಭೇದ ಭಾವ, ಜಾತಿ ಸಂಪ್ರದಾಯಗಳನ್ನು ಗಾಳಿಗೆ ತೂರಿ ಮಾನವೀಕರಣ ಸಂಚಾಲಕಳಾಗುತ್ತಾಳೆ.

ನಾಗಿ - ರಾಮಣ್ಣರ ವಿಚಾರದಲ್ಲಿ ಮೂಕಜ್ಜಿ ವಹಿಸುವ ಪಾತ್ರ ಬಹು ಮುಖ್ಯವಾಗುತ್ತದೆ. ಹರೆಯದ ತಪ್ಪಿನಿಂದಲೋ, ಅಮರ ಪ್ರೇಮದ ತತ್ವದಿಂದಲೋ ರಾಮಣ್ಣ ನಾಗಿಯನ್ನು ನಾಗಿ ಶೀನಪ್ಪವಿಗೆ ಬಲಿಯಾದ್ದರಿಂದ ದೂರೀಕರಿಸುತ್ತಾನೆ. ಕಾಲಾನಂತರದಲ್ಲಿ ನಾಗಿ ಬೇಟಿಯಾದ ನಂತರ ಅವಳಿಗೆ ತಿಳಿಸಿ ಮತ್ತು ರಾಮಣ್ಣನಿಗೂ ಬುದ್ಧಿವಾದ ಹೇಳಿ ಅವರಿಬ್ಬರೂ ಮತ್ತೆ ಸಂಸಾರದ ರಥ ಸಾಗಿಸುವಂತೆ ಸಂಧಾನಕಾರತ್ವವನ್ನು ವಹಿಸುತ್ತಾಳೆ. ಈ ಪ್ರಕ್ರಿಯೆ ಒಂಟಿಯಾಗಿದ್ದ ನಾಗಿ ಮತ್ತು ಅವಳ ಮಕ್ಕಳಿಗೆ ತುಂಬಾ ಉಪಕಾರಿಯಾಗುತ್ತದೆ. ಒಡೆದು ಹೋದ ಮನಸ್ಸುಗಳ - ಸಂಸಾರಗಳ ಒಗ್ಗೂಡುವಿಕೆಯ ಪ್ರಕ್ರಿಯೆಯು ಮಾನವೀಕರಣದ ನೆಲೆಯಲ್ಲಿ ಸಾಂಘೀಕೃತಗೊಂಡಿದೆ.

ಬಾಲವಿಧವೆಯಾದ ಮೂಕಜ್ಜಿಯಲ್ಲಿ ಅನೈತಿಕ ಸಂಬಂಧಗಳಿಗೆ ಮಾನ್ಯತೆಯಿಲ್ಲ. ನಾಗಿ - ಶೀನಪ್ಪನ ಸಂಬಂಧ ಅನಂತರಾಯ ಮತ್ತು ರಾಮದಾಸರ ಸಲಿಂಗೀ ಸಂಬಂಧಗಳು ಮೂಕಜ್ಜಿಯಿಂದ ತಿರಸ್ಕಾರಕ್ಕೆ ಒಳಗಾಗುತ್ತವೆ. ಮೂಕಜ್ಜಿಯ ಹೆಣ್ಣು ಜೀವಕ್ಕೆ ಲೈಂಗಿಕತೆಯ ಬಾಧೆಯಿಲ್ಲ. ಅದೊಂದು ಸೃಷ್ಟಿಕ್ರಿಯೆ ಮಾತ್ರ. ಪ್ರದರ್ಶನ ಯೋಗ್ಯವಲ್ಲ. ಆದರೆ ಅವಳು ಕೋಟಳಮ್ಮನ ಹೆಸರಿನಲ್ಲಿ ಮಾಡುವ ನಗ್ನ ಕುಣಿತ ದೈವತ್ವದ ನೆಲೆಗೆ ಸೇರುತ್ತದೆ. ಈ ವಿತರ್ಕಕ್ಕೆ ಮೂಕಜ್ಜಿಯ ಮನಸ್ಸಿನಲ್ಲಿ ಸಮರ್ಥ ಉತ್ತರ ದೊರೆಯಲಾರದು. ಇದಕ್ಕೆ ಅವಳು ಬಾಲವಿಧವೆಯಾಗಿ - ಲೈಂಗಿಕ ಮನಸ್ಸು ಅತೃಪ್ತವಾಗಿರುವುದೇ ಕಾರಣವಾಗಿರಬಹುದು. ಅಂತಹ ನಗ್ನ ಕುಣಿತ ಕೋಟಳಮ್ಮನ ಹೆಸರು ಮಾತ್ರ ನೆಪಮಾತ್ರವಾಗಿದೆ.

ಧಾರ್ಮಿಕ ಕ್ರಿಯೆಗಳನ್ನು ಮಾಡುತ್ತಾ ಹಮ್ಮಿನಿಂದಲೇ ಬೀಗುವ ಮಂಜುನಾಥ, ಕಂಡವರ ಹೆಣ್ಣುಮಕ್ಕಳನ್ನು ನೋಡುತ್ತಾ ಅಲೆಯುವ ಜನ್ನ, ವಿಧವೆಯ ದುಡ್ಡನ್ನು ಲಪಟಾಯಿಸಿ ಶ್ರೀಮಂತನಾಗಿರುವ ತಿಪ್ಪಯ್ಯ, ನಾಗಿಗೆ ಪ್ರೀತಿಸಿ ಕೈಕೊಟ್ಟ ಸುಬ್ರಾಯನ ಸಂಬಂಧಿಕ ಶೀನಪ್ಪ- ಮೊದಲಾದವರ ಮೇಲೆ ಮೂಕಜ್ಜಿಯ ಆಕ್ರೋಶವಿದೆ. ಅವಳು ಇಂತಹ ಚಟುವಟಿಕೆಗಳನ್ನು ಬೆಂಬಲಿಸದೆ ಮಾನವೀಕರಣದ ಪರವಾಗಿ ನಿಲ್ಲುತ್ತಾಳೆ. ಮೂಕಜ್ಜಿಯು ಮಾನವೀಕರಣದ ಸಾಂಕೇತಿಕ ಪ್ರತಿನಿಧಿಯಾಗಿ ಸ್ವೀಕರಿಸುವ ಮೌಲ್ಯಗಳು ಅಪಾರ ಬೆಲೆಯುಳ್ಳವುಗಳು. ಕಾರಂತರು ತಮ್ಮ ಜೀವನದಲ್ಲಿ ಅನುಸರಿಸಿದ ಮೌಲ್ಯಗಳ ಪ್ರತಿಪಾದೀಕರಣ ಈ ಕಾದಂಬರಿಯಲ್ಲಿ ನಡೆಯುತ್ತದೆ. ಅವರು ನಂಬಿದ್ದ 'ಬಾಲವಿಧವೆಯ ಪುನರ್ ವಿವಾಹ'ವೊಂದನ್ನು ಬಿಟ್ಟು ಉಳಿದ ಕ್ರಿಯೆಗಳು ಸಾಂಗೋಪಾಂಗವಾಗಿ ನಡೆದಿವೆ. ಆ ತತ್ವವನ್ನು ಅಂದರೆ ಮೂಕಜ್ಜಿಗೆ ಒಂದು ವೇಳೆ ಮರು ಮದುವೆ ಮಾಡಿದ್ದಿದ್ದರೆ ಘಟಿಸುತ್ತಿದ್ದ ಕ್ರಿಯೆಗಳೇ ಬೇರೆಯಾಗುತ್ತವೆ. ಅದು ಬೇರೆ ಚರ್ಚೆಗೆ ದಾರಿ ಮಾಡುತ್ತದೆ.

''ಮೂಕಜ್ಜಿ ತನ್ನ ಮಾನವೀಯತೆಯಿಂದ, ಒಳಗಣ್ಣಿನ ಕಲ್ಪನಾವಿಲಾಸದಿಂದ, ಪ್ರಜ್ಞೆಯ ವಿಸ್ತಾರದಿಂದ ಕನ್ನಡ ಕಾದಂಬರಿಗಳಲ್ಲಿಯೇ ಒಂದು ಅಭಿನವ ಸೃಷ್ಟಿಯಾಗಿದ್ದಾಳೆ.''[೧೪೬] ಎನ್ನುವ ಕುರ್ತುಕೋಟಿ ಅವರ ಮಾತು ಸತ್ಯವಾಗಿದೆ. ನೇರ - ನಿಷ್ಠುರವಾದ ವ್ಯಕ್ತಿತ್ವವನ್ನು ರೂಪಿಸಿಕೊಂಡಿರುವ ಮೂಕಜ್ಜಿ ಎಂತಹ ಸಂದರ್ಭಗಳಲ್ಲೂ ರಾಜಿಗೆ ಒಪ್ಪುವುದಿಲ್ಲ. ರಾಜೀ ಮನೋಭಾವದವರು ಸ್ಪಷ್ಟವಾದ ಮಾನವೀಕರಣಕ್ಕೆ ಸಮರ್ಥವಲ್ಲ. ಅವರ ಮನಸ್ಸು ತೂಗುಯ್ಯಾಲೆಯಾಗಿರುತ್ತದೆ.

ಬಾಲ್ಯದಲ್ಲಿ ಕೇಶಮುಂಡನದ ಅವಮಾನ, ಗಂಡನಿಲ್ಲದ ವೈಧವ್ಯದ ಬಾಳು, ಯೌವನದ ನೂರಾರು ಕನಸುಗಳ ಭಗ್ನತೆ, ಮನೆಯವರೇ ಕಟ್ಟಿದ ಹುಚ್ಚುತನದ ಪಟ್ಟ, ಸಾಮಾಜಿಕರೆದುರು ನಗ್ನತೆಯ ಪ್ರದರ್ಶನ (ಅವಮಾನಿತಳಾದರೂ ಗೌರವವಿದೆ) - ಮೊದಲಾದ ಅಮಾನವೀಯವೆನ್ನಬಹುದಾದ ಘಟನೆಗಳನ್ನ ಅನುಭವಿಸಿಯೂ ಮಾನವೀಯ ನೆಲೆಗಟ್ಟನ್ನು ಸಂಸ್ಥಾಪಿಸಿದ ಮೂಕಜ್ಜಿ ಶ್ರೇಷ್ಠ ಚಿಂತಕಿಯಾಗುತ್ತಾಳೆ.

ಇಡೀ ಜಗತ್ತೆ ದೇವರನ್ನು ಮಾಯೆ ಎನ್ನುವುದು ನಿಜ. ಆದರೆ ಮೂಕಜ್ಜಿ 'ಗಂಡು - ಹೆಣ್ಣಿನಿಂದಲೇ ಈ ಜಗತ್ತು' ಎಂದು ವಾದಿಸುತ್ತಾಳೆ. ''ಅವು ಎರಡು ಇಲ್ಲದೆ ಹೋಗಿದ್ದರೆ ಜಗತ್ತೆಂಬುದು ಬರಡು. ಏನುಂಟಂತೆ ಅದರಲ್ಲಿ ಅವನ್ನು ಮಾಡಿದ್ದರಿಂದಲೇ ಸಾವಿರ ಸುಖ, ಸಾವಿರ ದುಃಖ ಹುಟ್ಟಿಕೊಂಡಿತು. ಇರಬೇಕು, ಈಜಬೇಕು ಇದ್ದು ಜಯಿಸಬೇಕು.''[೧೪೭] ಇಲ್ಲಿ ಗಂಡು ಹೆಣ್ಣುಗಳು ಇರಬೇಕು ಎನ್ನುತ್ತಾಳೆ. ಆದರೆ ಅವರ ನಡುವಿನ ಮಾನಸಿಕ, ಆರ್ಥಿಕ ಭೇದಗಳು ನಿವಾರ್ಯವಾಗಿವೆ. ಮಾನವೀಕರಣವು ಗಂಡು - ಹೆಣ್ಣನ್ನು ಪ್ರತ್ಯೇಕವಾಗಿ ಅಳೆಯುವಂತಿಲ್ಲ. ಇಬ್ಬರಿಗೂ ಒಂದೇ ಮಾನದಂಡವನ್ನು ಬಳಸುತ್ತದೆ. ಇಲ್ಲಿ ಕಾರಂತರು ಹೇಳುತ್ತಿರುವುದು ಕೂಡ ಅದನ್ನೇ ಸೃಷ್ಟಿಕ್ರಿಯೆ

ಸಂದರ್ಭಕ್ಕೆ, ಜಗತ್ತಿನ ಸುಂದರ ಕನಸು- ನನಸುಗಳಿಗೆ ಹೆಣ್ಣು - ಗಂಡು ಅಗತ್ಯವೆಂದೂ, ದೇವರ ಮೇಲಿನ ಪ್ರಾಬಲ್ಯವನ್ನು ತೆಗೆದು ಮಾನವರ ಮೇಲೆ ಆ ಪ್ರಾಬಲ್ಯವನ್ನು ಹೇರುತ್ತಾರೆ. ಮಾನವನೇ ಪ್ರತಿ ಚಟುವಟಿಕೆಗೂ ಅಗತ್ಯ - ಅನಿವಾರ್ಯವಾಗುತ್ತಾನೆ. ದೇವರಲ್ಲಿ ಗಂಡು - ಹೆಣ್ಣು ಮಾತ್ರ ಜಗತ್ತಿನಲ್ಲಿ ಜಾತಿಗಳಾಗಿರುವುದು. ಜಾತಿಯೆನ್ನುವುದು ಮಾನವ ನಿರ್ಮಿತ ದೇವರದ್ದಲ್ಲ ಎಂದು ಹೇಳುವ ಮೂಕಜ್ಜಿ ..'' ಕರ್ಮದ ಬಗ್ಗೆ ನಡೆದ ಜಿಜ್ಞಾಸೆಯಲ್ಲಿ ಮೂಕಜ್ಜಿ ಭೂಮಿಯ ಮೇಲಿನ ಪ್ರತಿಜೀವಿಯೂ ಕರ್ಮದಲ್ಲಿ ಪಾಲ್ಗೊಳ್ಳಲೇಬೇಕು. ''ಕರ್ಮ ಬಿಟ್ಟು ಜೀವಿಗಳೇ ಇಲ್ಲ''[೧೪೮] ಎನ್ನುತ್ತಾಳೆ. ಇನ್ನೂ ಮುಂದುವರಿದು ''ನನ್ನ ಲೆಕ್ಕಾಚಾರ ಇದು ಹುಟ್ಟಿದ್ದೇವೆ? ನಾವು ಬದುಕಿದ್ದೇವೆ, ಯಾಕೆ ಅಂತ ನಮಗೆ ಗೊತ್ತಿಲ್ಲ. **ಇರುವಷ್ಟು ದಿವಸ ನನಗೂ ಹಿತವಾಗಿ, ನಾಲ್ಕು ಜನರಿಗೂ ಹಿತವಾಗುವ ಹಾಗೆ ಬಾಳುವುದಷ್ಟು. ಜನರಿಗೆ ಅಂದರೆ - ಬರಿ ಮನುಷ್ಯರಿಗಷ್ಟೇ ಅಲ್ಲ, ಆಚೀಚಿನ ಎಲ್ಲ ಜೀವಿಗಳಿಗೂ ಹಿತವಾಗುವ ಹಾಗೆ ಇರಬೇಕು, ಹಾಗೆ ಇರುವುದು ಕಷ್ಟವಾಗಬಹುದು. ಇನ್ನೊಬ್ಬರಿಗೆ ಹಿತವನ್ನು ಮಾಡಲು ನಮ್ಮಲ್ಲಿ ತ್ರಾಣವಿಲ್ಲದೆ ಹೋಗಬಹುದು. ನೂರಾರು ಜನರಿಗೆ, ತಮ್ಮ ಹೊಟ್ಟೆಯನ್ನು** ತುಂಬಿಸಿಕೊಳ್ಳುವುದು ದೊಡ್ಡ ಕೆಲಸವಾಗುತ್ತದೆ. ಅಂಥದರಲ್ಲಿ ಹೊರಗಿನವರ ಹಿತದ ಮಾತೇನು ಬಂತು? ಆಗ ಇಷ್ಟವನ್ನಾದರೂ ಮಾಡಬಹುದು. ''ಇಷ್ಟನ್ನು - ಎಂದರೆ ? '' ಇನ್ನೊಬ್ಬರಿಗೆ ಅನ್ಯಾಯವಾಗದ ರೀತಿಯಲ್ಲಿ ಬದುಕುವುದು ಪರರಿಗೆ ಸುಖಕೊಡಲು ಬಾರದೆ ಹೋದರೆ, ದುಃಖಕೊಡದೆ ಇರುವುದಷ್ಟು''[೧೪೯] ಎನ್ನುವ ಕಾರಂತರ ಮೂಕಜ್ಜಿಯ ಮಾತುಗಳಲ್ಲಿ ಮಾನವೀಕರಣ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಇಲ್ಲಿನ ಪ್ರತಿ ಸಾಲು ಮಾನವೀಯ ನೆಲೆಗೆ ಸಾಗುತ್ತವೆ. ಎಂಥಹ ಕಷ್ಟ - ಸುಖಕ್ಕೂ ಮನುಷ್ಯನಿಗೆ ಮನುಷ್ಯನೇ ಆಸರೆ. ಕಷ್ಟಗಳು ಮನುಷ್ಯರಿಗೆ ಬರದೆ ಮರಕ್ಕೆ ಬರಲು ಸಾಧ್ಯವೇ. ಅಂತೆಯೇ ಮೂಕಜ್ಜಿ ''ಮನುಷ್ಯರು ಮನುಷ್ಯರನ್ನು ಮಾತನಾಡಿಸಬೇಕಲ್ಲ, ಸುಖಕ್ಕಾಗಲೀ ದುಃಖಕ್ಕಾಗಲೀ[೧೫೦] ಎನ್ನುವಳು. ಹೀಗೆ ಮನುಷ್ಯ ಮನುಷ್ಯ ಸಹಕಾರಿಯಾಗಿರುವುದರಿಂದ ಲೋಕದಲ್ಲಿರುವ ಜಾತಿ - ಮತಗಳು ಅಮಾನವೀಯ. ಅಂತಹ ಜಾತಿಯತೆಯ ಪ್ರಶ್ನೆ ಬಂದಾಗ ಮೂಕಜ್ಜಿ ''ನೀನು ಮರುಳ! ದೇವರು ಮಾಡಿಟ್ಟ ಜಾತಿ ಎರಡೇ ಎರಡು. ಗಂಡು; ಹೆಣ್ಣು. ನಾವು ನೀವು ಮಾಡಿಕೊಂಡಿದ್ದು ನೂರು, ಸಾವಿರ ಈ ಪಾಟಿ ಜಾತಿ ಯಾವ ಜೀವಿಗಳಲ್ಲೂ ಇಲ್ಲ. ಗಂಡು ಗಂಡನ್ನು ಮದುವೆಯಾಗುವುದಿಲ್ಲ. ಆ ಎರಡು ಜಾತಿಗಳ ಕೂಡಿಕೆ ಹುಟ್ಟಿಸಿದ ದೇವರಿಗೆ ಇಷ್ಟದ್ದೇ.''[೧೫೧] ಎಂದು ಹೇಳುತ್ತಾಳೆ. ವಿಜಾತಿಯಿರುವುದು ಕೇವಲ ದೈಹಿಕ ಬದಲಾವಣೆಗಳಲ್ಲಿ ಮತ್ತು ಸೃಷ್ಟಿಕ್ರಿಯೆಗೆ ಸಂಬಂಧಿಸಿರುವುದು.

ಕಾರಂತರು ಮಾನವೀಕರಣದ ಅನೇಕ ಸಂದರ್ಭಗಳನ್ನು ಕೆಳವರ್ಗದ ಪಾತ್ರಗಳ ಮೂಲಕ ನಿರೂಪಿಸುತ್ತಾರೆ. ಈ ಕ್ರಿಯೆಗೆ ತುಂಬ ಸಮರ್ಥವಾಗಿ ಅವರನ್ನು ಬಳಸಿಕೊಳ್ಳುತ್ತಾರೆ. 'ಮೂಕಜ್ಜಿಯ

ಕನಸುಗಳ'ಲ್ಲಿ ಬರುವ ನಾಗಿ ಮತ್ತು ಅವಳ ಮಕ್ಕಳಿಗೆ ಸುಬ್ರಾಯನ ಹೆಂಡತಿ ಸೀತೆ ಅನ್ನ ಮಾಡಿ ಹಾಕಿದ್ದಕ್ಕೆ ಪ್ರತಿಯಾಗಿ ನಾಗಿ ಒಂದು ಬೆತ್ತದ ಸಂದೂಕ ತಂದುಕೊಡುತ್ತಾಳೆ. ಅದಕ್ಕೆ ಹಣ ಪಡೆಯದೆ ''ಒಬ್ಬಳಿಗಲ್ಲ- ಮೂರು ಜನಕ್ಕೆ ಗಡದ್ದಾಗಿ ಊಟ ಹಾಕಿದಿರಿ. ಆ ಋಣವನ್ನು ನಾನು ಎಂದು ತೀರಿಸುವುದು.?'', ''.....ಅಜ್ಜಮ್ಮನನ್ನು ಮಾತನಾಡಿಸಿ ಹೋಗೋಣ ಎಂದು ಬಂದೆ. ಬರಿಗೈಯಲ್ಲಿ ದೊಡ್ಡವರನ್ನು ಕಾಣಬಾರದು ಎಂಬುದರಿಂದ ಇದನ್ನು ತಂದೆ. ಬೆತ್ತಕ್ಕೂ ದುಡ್ಡು ಕೊಟ್ಟವಳಲ್ಲ; ಇದಕ್ಕೂ ಕೇಳುವವಳಲ್ಲ. ಈ ಬುಟ್ಟಿಯಿರುವ ತನಕ 'ನಾಗಿ' ಎಂಬುವವಳು ಒಬ್ಬಳು ಇದ್ದಳು ಎಂಬ ನೆನಪು ಉಳಿದರೆ ಮಸ್ತಾಯಿತು ನನಗೆ''[೧೫೨] ಈ ಮಾತುಗಳಲ್ಲಿ ವ್ಯಕ್ತವಾಗುವ ಋಣ ತೀರಿಸುವಿಕೆ, ಹಿರಿಯರ ಕಾಣಲು ಹೋಗುವ ರೀತಿ, ಹೆಸರು ಶಾಶ್ವತವಾಗಿ ನೆನಪಿರುವ ಕೊಡುಗೆಗಳನ್ನು ಗಮನಿಸಬಹುದು. ಇಂತಹ ಗುಣಗಳನ್ನು ಒಂದು ಚಿಕ್ಕ ಪಾತ್ರದ ಮೂಲಕ ಕಾರಂತರು ಅನಾವರಣಗೊಳಿಸುತ್ತಾರೆ. ಇದೇ ರೀತಿ 'ಮೈಮನಗಳ ಸುಳಿಯಲ್ಲಿ'ನ ಪಮ್ಮ - ದುಗ್ಗಿಯರ ಪಾತ್ರಗಳ ಮೂಲಕ ಮಾನವೀಕರಣವನ್ನು ಮಂಜುಳೆ ಮತ್ತು ಓದುಗ ವರ್ಗಕ್ಕೆ ತೋರಿಸಿಕೊಡುತ್ತಾರೆ. ಕುರುಡಿಯಾದ ದುಗ್ಗಿಯನ್ನು ಸಾಯುವ ತನಕವೂ ಕೈಬಿಡದೆ ಪೋಷಿಸುತ್ತಾನೆ ಪಮ್ಮ. ಈ ಪಾತ್ರಗಳು ಸಪ್ತಪದಿ ತುಳಿದ ದಂಪತಿಗಳನ್ನು ನಾಚಿಸುತ್ತವೆ' ಎಂಬುದನ್ನು ಮಂಜುಳೆ ಕಂಡುಕೊಳ್ಳುತ್ತಾಳೆ. ಕಷ್ಟ - ಸುಖ, ನೋವು - ನಲಿವು, ಬಿಸಿಲು - ಗಾಳಿ ಎಂತಹ ಸಂದರ್ಭದಲ್ಲೂ ಹೆಂಡತಿಯನ್ನು ಕೈಬಿಡದೆ ಮುನ್ನಡೆಯುವ ಪಮ್ಮ ಆದರ್ಶನೀಯನಾಗುತ್ತಾನೆ.

ಡಾ.ಜಿ.ಎಸ್.ಆಮೂರ ಅವರು ''ಮೂಕಜ್ಜಿಯನ್ನು ಒಂದು ಸಂಭಾವ್ಯ ಮಾನವೀಯ ಪ್ರತಿಮೆಯೆಂದು ಸ್ವೀಕರಿಸುವುದು ಸುಲಭವಲ್ಲ.''[೧೫೩] ಎಂಬ ವಿಚಾರಕ್ಕೆ ಸ್ಪಷ್ಟ ನಿದರ್ಶನಗಳಿಲ್ಲ. ನನ್ನ ಮೇಲಿನ ನಿದರ್ಶನಗಳಿಂದ 'ಮೂಕಜ್ಜಿ ಸಂಭಾವ್ಯ ಪ್ರತಿಮೆಯಷ್ಟೆ ಅಲ್ಲ, ಅವಳೊಂದು ಜೀವಂತ ಪಾತ್ರ. ಮಾನವೀಕರಣದ ಶಿಕ್ಷಕಿ, ರೂವಾರಿ' ಎಂದು ಹೇಳಲು ಇಚ್ಛಿಸಿದ್ದೇವೆ. ಆಮೂರ ಅವರೇ ಮುಂದುವರಿದು ಹೇಳುವ ''ಮೂಕಜ್ಜಿಯನ್ನು ಮೀರಿದ ಮಾನವೀಯ ಅಂಶಗಳು ಕಾದಂಬರಿಗೆ ಸಮೃದ್ಧಿಯನ್ನೊದಗಿಸುತ್ತವೆ. ...ರಾಮಣ್ಣ ಹಾಗೂ ನಾಗಿಯರ ಸಂಬಂಧ ಸಾಕ್ಷಿ''[೧೫೪] ಮೂಕಜ್ಜಿ ನಿಲ್ಲುವ ಪಾತಳಿಯನ್ನು ಈ ಎರಡು ವಿಚಾರಗಳು ಮಂಡಿಸುತ್ತವೆ. ನಾಗಿ - ರಾಮಣ್ಣರ ಒಗ್ಗೂಡುವಿಕೆಗೆ ಮೂಕಜ್ಜಿಯ ಮಾನವೀಯ ಅಂಶ ಕಾರಣವೇ ಹೊರತು, ರಾಮಣ್ಣನದೂ ಅಲ್ಲ ನಾಗಿಯದೂ ಅಲ್ಲ. Of course ಇಬ್ಬರ ಮನಸ್ಸು ಆ ನಿಟ್ಟಿನಲ್ಲಿ ಯೋಚಿಸಿರಬಹುದು. ಪ್ರಕ್ರಿಯೆಗೆ ಚಾಲನೆ ದೊರಕಿದ್ದು ಮೂಕಜ್ಜಿಯಿಂದಲೇ. ಹೀಗಾಗಿ ಮೂಕಜ್ಜಿಯನ್ನು Secondary ಸ್ಥಾನಕ್ಕೆ ನಿಲ್ಲಿಸುವ ಆಮೂರರ ಮಾತುಗಳನ್ನು ಒಪ್ಪದೆ, ನಾಗಿ - ರಾಮಣ್ಣರನ್ನು ಮೊದಲ ಸಾಲಿಗೆ ಕೊಂಡೊಯ್ಯುವುದನ್ನು ಒಪ್ಪುವೆ. ಅಂದರೆ ಮೂಕಜ್ಜಿ ಮತ್ತು ನಾಗಿ ರಾಮಣ್ಣರು ಸಮಾನ ಪಾತಳಿಯಲ್ಲಿ ನೆಲೆಗೊಂಡರೆ ತಪ್ಪೇನಿಲ್ಲ. ಅದುವೇ ಮಾನವೀಕರಣ.

ಮಾನವೀಕರಣದ ಹೊಳಪನ್ನು ಹೆಚ್ಚಿಸುವುದಕ್ಕಾಗಿ ಅಥವಾ ಅದನ್ನು ಅಲ್ಲಗಳೆಯುವುದಕ್ಕಾಗಿ ಎಂಬಂತೆ ಸುಬ್ರಾಯ ಅಜ್ಜಮ್ಮನಿಗೆ ಅನೇಕ ಸಮಸ್ಯೆಗಳನ್ನು ಒಡ್ಡುತ್ತಾನೆ. ಅವುಗಳಲ್ಲಿ ಜಾತಿ, ವರ್ಗ, ಲಿಂಗಗಳಂತಹ ಪ್ರಶ್ನೆಗಳೂ ಸೇರಿವೆ. ಒಂದೊಮ್ಮೆ ಧರ್ಮದ ಪ್ರಶ್ನೆ ಎತ್ತಿ "ತಂತಮ್ಮ ಮತವೇ ಮೇಲು; ಇನ್ನೊಬ್ಬರದ್ದು - ಕಡಿಮೆ ಎಂದು ತೋರಿಸುವುದಕ್ಕೆ ಪ್ರತಿಯೊಬ್ಬರು ಪುರಾಣಗಳನ್ನು ಬರೆದವರೇ. ಜೈನರೂ ಬರೆದರು; ಬೌದ್ಧರೂ ಬರೆದರು; ಬ್ರಾಹ್ಮಣರೂ ಬೇಕಷ್ಟು ಬರೆದರು. ತಮ್ಮ ದೇವರುಗಳಿಂದ ಬೇಕಾದ ಕೆಲಸಗಳನ್ನು ಮಾಡಿಸಿದರು; ಬೇಡದಿದ್ದ ಕೆಲಸಗಳನ್ನೂ ಮಾಡಿಸಿದರು. ತಮ್ಮ ದೇವರನ್ನು ಮೇಲಕ್ಕೆ ಎತ್ತಿದರು; ಇನ್ನೊಬ್ಬರ ದೇವರನ್ನು ಕೆಳಕ್ಕೆ ನೂಕಿದರು. ಅದು ಸಾಧ್ಯವಾಗದಾದಾಗ ತಮ್ಮ ದೇವರುಗಳ ಬಾಗಿಲನ್ನು ಕಾಯುವ ಯಕ್ಷ, ಯಕ್ಷಿಯರನ್ನಾಗಿ ಮಾಡಿದರು. ಅದನ್ನೆಲ್ಲ ಓದಿದರಂತು - ನಂಬುವುದು ಯಾವುದನ್ನು, ಬಿಡುವುದು ಯಾವುದನ್ನು - ಎಂಬುದೇ ಗೊತ್ತಾಗುವುದಿಲ್ಲ."[೧೫೪] ಎಂದಾಗ, ಮೂಕಜ್ಜಿ "ಆ ಮಾತನ್ನಾದರೆ ಹೇಳು, ನಾನೂ ಅಂಥ ಸಂಕಟ ಪಟ್ಟವಳೇ. ಎಷ್ಟು ಕತೆ, ಎಷ್ಟು ಪುರಾಣ? ಎಷ್ಟು ದೇವರು, ಎಷ್ಟು ಅವತಾರ? ಎಷ್ಟು ಕಲ್ಪನೆ; ಎಷ್ಟು ವಿಕಲ್ಪನೆ? ಅವುಗಳಲ್ಲಿ ಕಸ ಯಾವುದು; ರಸ ಯಾವುದು; ಸತ್ಯ ಯಾವುದು, ಸುಳ್ಳು ಯಾವುದು ಎಂಬುದನ್ನೇ ತಿಳಿಯುವುದು ಕಷ್ಟ"[೧೫೫] ಎಂದು ಒಂದು ಸ್ಪಷ್ಟ ತೀರ್ಮಾನಕ್ಕೆ ಬರಲು ಅಸಹಾಯಕಳಾಗುತ್ತಾಳೆ. ಇಲ್ಲಿ ಕಾರಂತರು ಒಂದು ಸಮಾಜದ ಕಡೆಗೆ ಅಥವಾ ಒಂದು ಧರ್ಮದ ಕಡೆಗೆ ವಾಲುವುದಿಲ್ಲ. ಹಾಗೂ ಇಲ್ಲಿ ಮೂಕಜ್ಜಿಯ ನಿಷ್ಠುರತೆ ಬಾಗುತ್ತದೆ. ಆದರೆ ಧರ್ಮ ನಿರಪೇಕ್ಷ ಮಾನವತಾವಾದದ ಪ್ರತಿಪಾದಕಗಳಾಗುತ್ತಾಳೆ ಮೂಕಜ್ಜಿ. "ಕಾರಂತರಿಗೆ ಹೇಗೋ ಹಾಗೆ ಈ ಮೂಕಜ್ಜಿಗೂ 'ಬಾಳ್ವೆಯೇ ಆದಿ; ಅಂತ್ಯ'. ಅದರಲ್ಲೇ ಅವರಿಗೆ ಅಗಾಧ ಹಿತವಾಗಿ ಬಾಳುವುದು ಅವರ ಧ್ಯೇಯ ಮಾನವನ ಮಾನವೀಯತೆಯೇ ಅವರಿಗೆ ಪರಮ ಮೌಲ್ಯ"[೧೫೬]

'ಮೈಮನಗಳ ಸುಳಿ'ಯಲ್ಲಿ ಕಾರಂತರು ಪ್ರಾಮಾಣಿಕ ಮನೋಭಾವವನ್ನು ಮಂಜುಳೆಯ ಪಾತ್ರದಲ್ಲಿ ಹೆಣೆದಿದ್ದಾರೆ. ಮಗುವಿನ ಅಪೇಕ್ಷೆಗೆ ಕಂಟ್ರಾಕ್ಟರ್ ನಂಜಪ್ಪನಿಗೆ ಮೈಯೊಡ್ಡಿ ಬಸಿರಾದಳು. ಆದರೆ ಆತ ಕೊಟ್ಟ ವಜ್ರದುಂಗುರ ನಕಲಿಯೆಂದು ತಿಳಿದಾಗ ಆತನ ಅಪ್ರಮಾಣಿಕತನಕ್ಕೆ ಮನನೊಂದು ಬೆಂದಳು. ಮೈಯ್ಯಿಳಿದು ಮಗು ಸತ್ತಾಗ ಅಪ್ರಮಾಣಿಕರ ಸಂತಾನ ಉಳಿಯುವುದಕ್ಕಿಂತ ಅಳಿಯುವುದೇ ಲೇಸು ಎಂಬ ಮನೋಪ್ರವೃತ್ತಿ ತಾಳಿದಳು. ಈ ಸಂತಾನವನ್ನು ಕಾರಂತರು ಅಳಿಯುವುದರ ಮೂಲಕ ಮಾನವೀಕರಣವನ್ನು ಮುನ್ನಡೆಸಿದ್ದಾರೆ. ಒಂದು ವೇಳೆ ಬೆಳೆಸಿದ್ದರೆ ಅಪ್ರಾಮಾಣಿಕತೆಯ ಕೂಸು ಮಾನವೀಯತೆಗೆ ಸಮಸ್ಯೆಯಾಗುತ್ತಿತ್ತು. ಮಂಜುಳೆಯ ದೇಹ ಸಿರಿಯನ್ನುಂಡ ಕಂ.ವಾ.ಪೈಗಳು, ಸುಬ್ರಾಯ ಉಳ್ಳೂರರು, ಕಂಟ್ರಾಕ್ಟರ್ ನಂಜಪ್ಪ, ಮೆಕ್ಕೆಮನೆ ಸುಬ್ರಾಯ, ವೇಷಧಾರಿ ಶೀನಪ್ಪ, ಸ್ವಾಮಿ ಲಕ್ಷಣ ತೀರ್ಥರು ಅವಳಿಗೆ ಕೊಟ್ಟಿದ್ದಕ್ಕಿಂತಲೂ ಅವಳಿಂದ ಪಡೆದಿದ್ದು ಹೆಚ್ಚು. ಮಂಜುಳೆ

ಒಬ್ಬೊಬ್ಬರ ಸಹವಾಸದಲ್ಲಿಯೂ ಪಡೆದ ಅನುಭವದ ಮೊತ್ತವೇ ಕಾರಂತರು ಸಾದರಪಡಿಸುವ ಮಾನವಂತ ಲೈಂಗಿಕ ಮೌಲ್ಯಗಳಾಗಿವೆ. ಮಂಜುಳೆಯ ತಾಯಿ 'ಮೈ ಮಾರಬೇಕು, ಮನವನ್ನಲ್ಲ. ಅಂಥ ಕಸುಬು ನಮ್ಮದು' ಎನ್ನುತ್ತಿದ್ದಳು. ಈ ಮಾತು ಮಂಜುಳೆಗೆ ಇಷ್ಟವಿರಲಿಲ್ಲ. 'ಸುದೈವಕ್ಕೆ ಆ ಕಸುಬು ನನಗೆ ಬೇಡವಾಗಿತ್ತು. ಮೈ ಬೇರೆಯೇ ಮನ ಬೇರೆಯೇ ಎಂಬ ಗಳಿಗೆ ಬಾರದಿರಲಿ ಎಂಬ ಪ್ರಾರ್ಥನೆ ನನ್ನದು.'[೧೫೭] ಎಂದುಕೊಂಡು ತನ್ನ ಮೈ ಮಾರುವುದರೊಂದಿಗೆ ಮನವನ್ನು ಕೊಟ್ಟಿದ್ದಳು. ಲಕ್ಷ್ಮಣಸ್ವಾಮಿಯ ವೇಷದಲ್ಲಿದ್ದ ಆನಂದ ಮೂರ್ತಿಗೆ ತನ್ನ ಮೈ - ಮನಗಳನ್ನು ಅರ್ಪಿಸಿದ್ದಳು. ಅವನಿಂದ ಅವಳು ಹೆಚ್ಚಿನ ಸುಖ ಪಡೆದಿದ್ದಳು. ವೇಶ್ಯೆಯರು ಕೇವಲ ಮೈಮಾರಿ ಜೀವಿಸುವ ಕೈಂಕರ್ಯದವರು. ಆದರೆ ಮಂಜುಳೆ ಲಕ್ಷ್ಮಣಸ್ವಾಮಿ ಮತ್ತು ಮೆಕ್ಕೆಮನೆ ಸುಬ್ರಾಯರಿಗೆ ಮನವನ್ನು ಅರ್ಪಿಸಿದ್ದಳು. ಮೆಕ್ಕೆಮನೆ ಸುಬ್ರಾಯರ ಮಡದಿಯಂತೆಯೇ ನಡೆದುಕೊಂಡಳು. ಅವರ ಮಡದಿಯ ಸಹೋದರಿಯಾಗಿ, ಮಕ್ಕಳಿಗೆ ತಾಯಿಯಾಗಿ ವರ್ತಿಸಿದ ಅವಳ ರೀತಿ ಮೌಲ್ಯಾಧಾರಿತ ವೇಶ್ಯೆಯತ್ವವನ್ನು ಪ್ರಕಟಿಸುತ್ತದೆ. ಕಾಮ ಬರೀ ಕಾಮವಾದರೆ ಅಸಹ್ಯೆಯಾಗುತ್ತದೆ. ಕಾಮದೊಂದಿಗೆ ಪ್ರೇಮ ಸೇರಿದಾಗ ಮಾತ್ರ ಅದು ಜೀವನದ ಜೋಡಿ ಗಾಲಿಗಳಾಗುತ್ತವೆ. ಕಾಮ - ಪ್ರೇಮಗಳು ಜೊತೆಯಲ್ಲಿದ್ದರೆ ಮಾನವನ ಬಾಳು ಹಸನುಗೊಳ್ಳುತ್ತದೆ. ಮಂಜುಳೆಯು ಕಾಣುವ ಪಮ್ಮ - ದುಗ್ಗಿಯರ ಬಾಳು ಕಾಮ-ಪ್ರೇಮದ ಸಂಕೇತವಾಗುತ್ತದೆ. ಕುರುಡಿ ದುಗ್ಗಿ - ಮುದಿ ಪಮ್ಮ ಜೀವನದಲ್ಲಿ ಅನೇಕ ಕಷ್ಟಗಳನ್ನು ಅನುಭವಿಸಿಯೂ ಜೀವನದ ಸಂಧ್ಯಾ ಕಾಲದಲ್ಲಿಯೂ ಜೋಡಿಯಾಗಿರುತ್ತಾರೆ. ಸಾವಿನಲ್ಲೂ ದುಗ್ಗಿ ಸತ್ತ ಮರುದಿನವೇ ಪಮ್ಮನೂ ಸಾಯುತ್ತಾನೆ. ದೊರೆತ ಗಂಜಿಯಲ್ಲೆ ಇಬ್ಬರೂ ಹಸಿವನ್ನು ಹಿಂಗಿಸಿಕೊಳ್ಳುವ ರೀತಿ ಮಾನವೀಯತೆಯನ್ನು ಪಡೆಯುತ್ತದೆ. ಸಪ್ತಪದಿ ತುಳಿದು ಮದುವೆಯಾದ ಸತಿ - ಪತಿಗಳೂ ಈ ರೀತಿಯಿರಲು ಸಾಧ್ಯವಿಲ್ಲ. ಇಂತಹ ಜೋಡಿಯನ್ನು ನಿರ್ಮಿಸುವ ಅವರ ಮೂಲಕ ಮಾನವೀಕರಣವನ್ನು ಸಕ್ರಿಯಗೊಳಿಸುವ ಕಾರಂತರು ನಿಜಕ್ಕೂ ಮಹತ್ವದ ಲೇಖಕರಾಗುತ್ತಾರೆ.

ವೇಶ್ಯಾಸಮಸ್ಯೆ ಸಮಾಜಕ್ಕೆ ಅಂಟಿಕೊಂಡ ಶಾಪ, ಜನತೆಗೆ ವಿವಿಧ ರೋಗಗಳನ್ನು ಪಸರಿಸುವ ತಾಣ ಎಂದೆಲ್ಲಾ ಕರೆಯುವಾಗ, ಅದನ್ನು ಒಂದು ಮಾನವೀಯ ಅಂತಃಕರಣದ ನೆಲೆಯಲ್ಲಿಟ್ಟು, ವೇಶ್ಯೆಯರು ಎಲ್ಲರಂತೆಯೇ ಮಾನವರು, ಅವರಿಗೂ ಆಸೆ - ಆಕಾಂಕ್ಷೆಗಳಿರುತ್ತವೆ. ಅವರು ಮೈ ಮಾರುವುದಷ್ಟೇ ಮಾಡಲಾರರು ತಮ್ಮ ಮನವನ್ನು ಕೊಟ್ಟು ನಿಯತ್ತನ್ನು ಪ್ರದರ್ಶಿಸಬಲ್ಲರು. 'ಗರತಿ'ಯರನ್ನೂ ನಾಚುವಂತೆ ಮಾಡಬಲ್ಲ ಪತಿ ಭಕ್ತಿ ಕೆಲವೇ ವೇಶ್ಯೆಯರಲ್ಲಿದೆ. ಮಂಜುಳೆಯ ಅಜ್ಜಿ ಭವಾನಿಯ ಬಗ್ಗೆ ಅವರ ಅಕ್ಕಪಕ್ಕದವರು "ಭವಾನಿಯ ಯೋಗ್ಯತೆ ಯಾವ ಗರತಿಯಲ್ಲೂ ಕಾಣಲಿಕ್ಕಿಲ್ಲ"[೧೫೮] ಎನ್ನುವಲ್ಲಿಯೂ ಮಾತು ಸ್ಪಷ್ಟಪಡಿಸುತ್ತದೆ. ಮೋಜು, ಕಾಲಹರಣ, ಹುಚ್ಚು ಚಟಕ್ಕಾಗಿ ಕಾದಂಬರಿಯಲ್ಲಿ ಲೈಂಗಿಕತೆಯನ್ನು, ವೇಶ್ಯಾ ಪದ್ಧತಿಯನ್ನು ಅಳವಡಿಸುವುದು ಲೇಖಕನಿಗೂ

- ಓದುಗನಿಗೂ- ಸಮಾಜಕ್ಕೂ ಆರೋಗ್ಯಯುಕ್ತವಾದುದಲ್ಲ. ವೇಶ್ಯಾ ಸಮಸ್ಯೆಯನ್ನು ಮುಂದಿಟ್ಟುಕೊಂಡು ಅನೇಕ ಕಾದಂಬರಿಗಳು ಕನ್ನಡದಲ್ಲಿ ಹೊರಬಂದಿವೆ. 'ಮನುಷ್ಯ ಬರಿಯ ಪಶುವಲ್ಲವಷ್ಟೆ ! ಆತ ಮನೋದೇಹಿ' ಎಂಬಂತಹ ಮಾತು ಕಾರಂತರ ಕಾದಂಬರಿಯಲ್ಲಿದೆ. ಗಂಡು - ಹೆಣ್ಣುಗಳ ಲೈಂಗಿಕ ಸಂಬಂಧದ, ಮಾನವ ಜೀವನದ ಪ್ರಬಲ ಶಕ್ತಿಯಾದ ಈ ಲೈಂಗಿಕತೆಯು ಮಾನವನ ಮೂಲಭೂತ ಕ್ರಿಯೆಗಳಲ್ಲೊಂದು. ತೀರಾ ಅಶ್ಲೀಲವೆನ್ನದಂತೆ ಲೈಂಗಿಕ ಮೌಲ್ಯಗಳನ್ನು ಅನಾವರಣಗೊಳಿಸುವ ಕಾರಂತರು ಅನಕೃ, ಕಟ್ಟೀಮನಿಯವರಿಗಿಂತಲೂ ಭಿನ್ನರಾಗಿದ್ದಾರೆ. ವಿ.ಎಂ.ಇನಾಂದಾರರು ಹೇಳುವಂತೆ "ಕಾರಂತರ ಮಾನವೀಯ ದೃಷ್ಟಿಯ ಆಕೆ ವೇಶ್ಯೆಯಾಗಿರುವ ಮೊದಲು ಒಬ್ಬ ಮನುಷ್ಯ ಪ್ರಾಣಿಯಾಗಿರುತ್ತಾಳೆ ಎನ್ನುವುದನ್ನು ತೋರಿಸುತ್ತದೆ...... ಕಾದಂಬರಿ ಒಬ್ಬ ಅಸಾಧಾರಣ ವೇಶ್ಯೆಯನ್ನು ಸಹಾನುಭೂತಿಯಿಂದ ಕಂಡು ಬರೆದ ಚಿತ್ರವಾಗಿದೆ ಎಂದು ಹೇಳಿದರೆ ಕಾದಂಬರಿಯನ್ನು ಕುರಿತು ಹೆಚ್ಚು ಹೇಳಿದಂತಾಗುವುದಿಲ್ಲ" ಎನ್ನುವ ಮಾತು ಕಾದಂಬರಿಯ ಬಗ್ಗೆ ಮಾರ್ಮಿಕವಾಗಿ ಅರ್ಥೈಸುತ್ತದೆ.[೧೫೯]

ಕಾರಂತರು ವಿವಾಹ ವ್ಯವಸ್ಥೆಯೊಳಗಣ ಕುಟುಂಬ ಮತ್ತು ವಿವಾಹದಾಚೆಗಿನ ಕುಟುಂಬಗಳನ್ನು ತೂಕಮಾಡುವ ಪ್ರಯತ್ನವನ್ನು ಮಾಡಿದ್ದಾರೆ. 'ಗರತಿ' ಮತ್ತು 'ರತಿ'ಯರ ತುಲನೆ, ಗರತಿಯು ರತಿಯಾಗಿರಲಿಕ್ಕೆ ಬೇಕು. 'ರತಿ'(ವೇಶ್ಯಾ) ಗರತಿಯಾಗುವುದು ಸಮಾಜದ ದೃಷ್ಟಿಯಲ್ಲಿ ಅಸಾಧ್ಯ. ಅದರೆ ಮಾನವತಾವಾದಿ ಕಾರಂತರು ರತಿ (ವೇಶ್ಯೆ)ಯನ್ನು ಗರತಿಯ ಸ್ಥಾನಕ್ಕೆ ಮಂಜುಳೆಯ ಮೂಲಕ ಏರಿಸುತ್ತಾರೆ. "ಮಂಚಕ್ಕೆ ನನ್ನ ಮನಸ್ಸು ಸೀಮಿತವಾಗಿರಲಿಲ್ಲ. ಮಂಚದಿಂದ ಮೈಯನ್ನು ತುಂಬಿತ್ತು. ಮೈಯಿಂದ ಮನಸ್ಸನ್ನು ತುಂಬಿತ್ತು. ನನ್ನ ತಂಬೂರಿಯ ದಂಡ, ಬುರುಡೆ, ಉಳ್ಳೂರರು. ಆದರೆ ತಂತಿ ಆನಂದರು. ಅವರಿಬ್ಬರು ನನ್ನ ಜತೆಯಲ್ಲಿ ಅನುದಿನ ಇರುವುದರಿಂದ ನಾನು ಸುಮಂಗಲೆ, ನಿತ್ಯ ಸುಮಂಗಲೆ"[೧೬೦] ಎಂದುಕೊಳ್ಳುತ್ತಾಳೆ ಮಂಜುಳೆ. ವೇಶ್ಯೆಯ ಸಂಕಷ್ಟಗಳನ್ನು ಒಂದೆಡೆ ಚಿತ್ರಿಸುವುದರ ಜೊತೆಗೆ ವೇಶ್ಯೆಯ ಆನಂದದ ಕ್ಷಣಗಳನ್ನು ಚಿತ್ರಿಸುತ್ತಾರೆ. ಈ ವಿಷಯದಲ್ಲಿ ಗೃಹಿಣಿಗಿಂತ ಅವಳು ಭಿನ್ನಳಾಗುತ್ತಾಳೆ. ಆ ರೀತಿಯಾಗಲು ಗೃಹಿಣಿಗಾಗಿ ಎಲ್ಲೂ ಬೋಧಿಸುವುದಿಲ್ಲ ಕಾರಂತರು.

ಕಾರಂತರು 'ಘರೋಂದೆ'ಯ ರಾಂಗೇಯ ರಾಘವ, 'ಕ್ರಾಂತಿದೂತ್'ನ ಶ್ರೀಕೃಷ್ಣದಾಸ್, 'ಪ್ರೇತ್ ಔರ್ ಛಾಯಾ'ದ ಇಳಾಚಂದ್ರ ಜೋಷಿ ಮೊದಲಾದ ಪ್ರೇಮ್‌ಚಂದೋತ್ತರ ಕಾಲದ ಹಿಂದಿ ಕಾದಂಬರಿಕಾರರಿಗಿಂತ ಭಿನ್ನರಾಗಿ ಕಾಣುತ್ತಾರೆ. ಈ ಎಲ್ಲಾ ಕಾದಂಬರಿಕಾರರ ವಸ್ತು ವೇಶ್ಯೆಯಾಗಿದ್ದಾಳೆ. ಇವರು ಪುರುಷ ಸಮಾಜದ ವಿರುದ್ಧ ಪ್ರತಿಹಿಂಸೆ ಹಾಗೂ ವಿವಾಹಿತ ಸ್ತ್ರೀಗಿಂತ ತಾನೇ ಹೆಚ್ಚು' ಎನ್ನುವಂತೆ ಚರ್ಚಿಸುತ್ತಾರೆ. ಆದರೆ ಕಾರಂತರು ಮಾನವತಾವಾದವನ್ನು ಪ್ರತಿಪಾದಿಸುವುದರಿಂದ ವೇಶ್ಯೆ ಎಲ್ಲೂ ಗೃಹಿಣಿಗೆ (ವಿವಾಹಿತ ಮಹಿಳೆಗೆ) ಸವಾಲಾಗುವಂತೆ ಎದುರಾಳಿಯನ್ನಾಗಿ ಸೃಜಿಸುವುದಿಲ್ಲ.

ಕನ್ನಡದ 'ದೇವದಾಸೀ' (ದು.ನಿಂ.ಬೆಳಗಲಿ), 'ಸಂಜೆಗತ್ತಲು', 'ನಗ್ನಸತ್ಯ', 'ಶನಿ ಸಂತಾನ', (ಮೂರೂ ಅನಕೃ), 'ಒಂದು ಹೆಣ್ಣಿನ ಒಳಜಗತ್ತು' (ಚನ್ನಣ್ಣ ವಾಲೀಕಾರ), 'ಖಾನಾವಳಿ ನೀಲಾ', 'ಮೋಹದ ಬಲೆಯಲ್ಲಿ'(ಕಟ್ಟೀಮನಿ) - ಮೊದಲಾದ ಕಾದಂಬರಿಗಳಿಗಿಂತಲೂ 'ಮೈಮನಗಳ ಸುಳಿಯಲ್ಲಿ' ಉತ್ತಮಿಕತೆಯನ್ನು ಪ್ರದರ್ಶಿಸುತ್ತದೆ.

ಮಾನವೀಕರಣದ ಗರ್ಭದಲ್ಲಿ ಗುಪ್ತಗಾಮಿನಿಯಂತೆ ಪ್ರವಹಿಸುವ 'ಕಾಮ'ವನ್ನು ಕಾರಂತರು ಎಲ್ಲೂ ಅಲಕ್ಷ್ಯಮಾಡುವುದಲ್ಲ. 'ನಿಗ್ರಹ'ದಲ್ಲಿರಬೇಕಾದ್ದರಿಂದ ಅದು ಸಂಪೂರ್ಣ ನಿಯಂತ್ರಣವಲ್ಲ. ಮಾನವೀಕರಣದ ಸಂದರ್ಭದಲ್ಲಿ ಹಂತಾನುಹಂತವಾಗಿ ಬೆಳೆದು ನಿಯಮಗಳನ್ನು ರೂಪಿಸುವ ಕಾಮ ಸ್ವೇಚ್ಛೆಯಾಗಬಾರದು. ಅದನ್ನು ಗಂಡು - ಹೆಣ್ಣುಗಳ ಆತ್ಮೀಯ ಸಮಾಗಮಕ್ಕೆ - ಬಾಂಧವ್ಯಕ್ಕೆ - ಮನಸ್ಸುಗಳ ಮಿಲನಕ್ಕೆ ಅಣಿಗೊಳಿಸುವುದು ಮುಖ್ಯವಾಗಬೇಕು. ಬಾಹ್ಯ ಸಂಬಂಧವಿರಲಿ (ವಿವಾಹ ರಹಿತ) ಅಥವಾ ಅಂತರ್ ಸಂಬಂಧವಿರಲಿ (ಗಂಡ - ಹೆಂಡತಿ) ಅದನ್ನೊಂದು ಮಾನವೀಯ ಪ್ರಕ್ರಿಯೆನ್ನಾಗಿಸುವಲ್ಲಿ ಕಾರಂತರದು ಎತ್ತಿದ ಕೈ. 'ಕನ್ಯಾಬಲಿ'ಯ ಮಾಲತಿ, 'ಮೈಮನಗಳ ಸುಳಿಯಲ್ಲಿ'ನ ಮಂಜುಳೆ, 'ಕೇವಲ ಮನುಷ್ಯರ'ಲ್ಲಿ ಶಾಂತಿ, 'ಜಾರುವ ದಾರಿ'ಯಲ್ಲಿನ ಗುಲಾಬಿ, 'ಮೂಕಜ್ಜಿಯ ಕನಸುಗಳ' ಮೂಕಜ್ಜಿ, 'ನಂಬಿದವರ ನಾಕ, ನರಕ'ದಲ್ಲಿನ ವಾಗ್ದೇವಿ, 'ಅಳಿದ ಮೇಲೆ'ಯಲ್ಲಿನ ಸರಸಿ - ಮೊದಲಾದ ಪಾತ್ರಗಳು ಕಾಮವನ್ನು ದಾಂಪತ್ಯದ ನೆಲೆಯಲ್ಲೂ, ದಾಂಪತ್ಯ ಹೊರಗಿನ ನೆಲೆಯಲ್ಲೂ ಮತ್ತು ಇವೆರಡೂ ಇಲ್ಲದ ಬರೀ ಜಿಜ್ಞಾಸೆಯಲ್ಲೂ ಕಂಡುಕೊಳ್ಳುತ್ತವೆ. ಈ ಮೂರು ನೆಲೆಗಳಲ್ಲಿ 'ಮದುವೆ'ಯನ್ನು ಶಾಪ ಎನ್ನುವುದು, ಪವಿತ್ರ ಎನ್ನುವುದು, ತ್ಯಾಗ ಮಾಡುವುದು ನಡೆಯುತ್ತದೆ. ಸಮಾಜವು ಮದುವೆಯನ್ನು ಮಾನವೀಕರಣದ ಸೆಲೆಯಾಗುತ್ತದೆ ಎಂದು ಭಾವಿಸಿದೆ. ಆದರೆ ಕಾರಂತರ ಕೆಲವು ಪಾತ್ರಗಳು (ವಾಗ್ದೇವಿ, ಗುಲಾಬಿ, ಶಾಂತಿ, ಮಂಜುಳೆ) ಮದುವೆಯಿಲ್ಲದೆಯೂ ಮಾನವೀಕರಣವನ್ನು ರೂಪಿಸಬಹುದು ಎಂಬುದನ್ನು ನಿರೂಪಿಸುತ್ತವೆ.

'ಜಾರುವ ದಾರಿ'ಯಲ್ಲಿನ 'ಗುಲಾಬಿ' ವೇಶ್ಯೆಯಾಗಿದ್ದು ನಿಷ್ಠಾವಂತ ಬದುಕು ಸಾಗಿಸಿವಳು. ಒಲಿದ ವ್ಯಕ್ತಿ ಬಿಟ್ಟು ಹೋಗಿ ಮತ್ತೆ ಸೇರಲು ಬಂದಾಗ ತಿರಸ್ಕರಿಸುವ ಅವಳ ಮನೋಸ್ಥೈರ್ಯ, ಅವಳ ಆವರೆಗಿನ ಜೀವನದ ನೋವುಗಳು ಮಾನವತೆಯನ್ನು ಎತ್ತಿ ಹಿಡಿಯುತ್ತವೆ. ಅವಳ ಮಾನವತೆ ಡಾ. ಶಿವಪ್ಪ ಮತ್ತು ಪತ್ನಿ ಇಂದೂ ಮತಿಗೆ ಸ್ಪಷ್ಟವಾಗಿ ಪರಿಚಯವಾಗುತ್ತದೆ. ಅವಳ ವೇಶ್ಯಾಜೀವನವು ಸಂಸ್ಕಾರಗೊಂಡ ದೀಪ್ತಿಯಾಗುತ್ತದೆ. ಇವಳು ಒಬ್ಬ ವೇಶ್ಯೆಯಾಗಿದ್ದಳೇ? ಎಂದು ಪ್ರಶ್ನೆ ಕೇಳುವಂತಹ ಜೀವನವನ್ನು ನಡೆಸುತ್ತಾಳೆ.

ಇಂತಹ ಲೈಂಗಿಕತೆಯ ಚಿತ್ರಣಗಳನ್ನು (ಕಾಮವನ್ನು) ಮಾನವೀಯ ಸ್ತರದಲ್ಲಿ ಗುರುತಿಸುವ ಕಾರಂತರು ಲೈಂಗಿಕ ತಜ್ಞರಾಗಿ ಪ್ರತಿನಿಧಿಗೊಳ್ಳುತ್ತಾರೆ. ಅತೃಪ್ತ ಕಾಮ ಅಥವಾ ಆಂತರಿಕ ಕೊರಗು

ಉಂಟುಮಾಡುವ ಮಾನಸಿಕ ಅಸ್ವಸ್ಥತೆಯನ್ನು ನಿವಾರಿಸುವ ಚಿಕಿತ್ಸಕರಾಗಿ ಮನಸ್ಸು - ಮನಸ್ಸುಗಳ ನಡುವಿನ ಸಂಘರ್ಷಗಳಿಗೆ ಸಮಾಧಾನ ಹೇಳುವ ಕಾರಂತರು ಪ್ರೀತಿಯ ತತ್ವವನ್ನು - ಮಾನವೀಕರಣದ ನೀತಿಯನ್ನು ತಿಳಿಸುವ ರೂವಾರಿಗಳಾಗುತ್ತಾರೆ.

ಕಾರಂತರ ಕಾದಂಬರಿಗಳಲ್ಲಿ ಬರುವ ಹಿರಿಯ ಪಾತ್ರಗಳು ಮುಖ್ಯವಾಗಿ 'ವೃದ್ಧೆಯರು' ಸಾರುವ ಮಾನವೀಕರಣವು ಅವರವರ ಸಮಾಜದಲ್ಲಿ ಬಹುಮುಖ್ಯವಾಗುತ್ತದೆ. ಮನೆಯಲ್ಲಿ ಯಾವುದೇ ಪ್ರಕ್ರಿಯೆ ಜರುಗಬೇಕಾದರೆ ಇವರ ಮಾರ್ಗದರ್ಶನ ಅತ್ಯಗತ್ಯ. ಅಂತೆಯೇ ಮಾನವ ಸಮಾಜ ನಿರ್ಮಾಣದಲ್ಲಿ ಮಹತ್ವದ ಪಾತ್ರ ವಹಿಸುತ್ತಾರೆ. 'ಮೂಕಜ್ಜಿ ಕನಸುಗಳ' ಮೂಕಜ್ಜಿ, 'ಮರಳಿ ಮಣ್ಣಿಗೆ'ಯ ಸರಸೋತಿ, 'ಮೈಮನಗಳ ಸುಳಿಯಲ್ಲಿ'ನ ಉಳ್ಳೂರ ಸುಬ್ರಾಯರ ಹೆಂಡತಿ, 'ಸಮೀಕ್ಷೆ'ಯ ಗಂಗಮ್ಮ, 'ಕರುಳಿನ ಕರೆ'ಯ ಭಾಗೀರಥಿ, 'ಇನ್ನೊಂದೇ ದಾರಿ'ಯ ಹೊನ್ನಜ್ಜಿ, 'ಅಳಿದ ಮೇಲೆ'ಯ ಪಾರೋತಿ, 'ಬೆಟ್ಟದ ಜೀವ'ದ ಶಂಕರಿ ಮೊದಲಾದ ಹಿರಿಕರು ಮುಂದಿನ ಪೀಳಿಗೆಗೆ ಮಾನವೀಕರಣದ ಪಾಠವನ್ನು ಪ್ರಯೋಗದ ಮೂಲಕ ಹೇಳುವ ಶಿಕ್ಷಕರಾಗುತ್ತಾರೆ.

ಮೂಕಜ್ಜಿ ಬಾಲ್ಯದಲ್ಲಿಯೇ ವಿಧವೆಯಾದವಳು. 'ಮರಳಿ ಮಣ್ಣಿಗೆ' ಸರಸೋತಿ, 'ಸಮೀಕ್ಷೆ'ಯ ಗಂಗಮ್ಮ, 'ಮೂಕಜ್ಜಿ ಕನಸುಗಳ' ತಿಪ್ಪಜ್ಜಿ, ವೆಂಕಮ್ಮ - ಇವರೂ ಸಹ ಬಾಲವಿಧವೆಯರೇ. ಅನುಭವಿಸಿದ ಕಷ್ಟಗಳೇ ಇವರಿಗೆ ಮಾದರಿಯಾಗುತ್ತವೆ. ಇವರ ನಂಬಿಕೆಗಳೆಲ್ಲ ಸಂಪ್ರದಾಯಿಕ ನೆಲೆಗಟ್ಟನ್ನು ಅವಲಂಬಿಸಿದೆ. ಇವರ ನಂಬಿಕೆಗಳು ಮೌಲ್ಯಗಳಲ್ಲ. ಅವು ಮುಂದಿನವರಿಗೆ ಆದರ್ಶವೂ ಅಲ್ಲದ್ದರಿಂದ ಈ ಪಾತ್ರಗಳು ಸಾರುವ ಮೌಲ್ಯಗಳು ಕೆಲವೊಮ್ಮೆ ಗೊಡ್ಡುಗಳಾಗುತ್ತವೆ. ಮೂಕಜ್ಜಿ ತಂದೆ ಅಣ್ಣಂದಿರನ್ನು ಆಶ್ರಯಿಸಿದಳು. ಗಂಡನ ಪ್ರೀತಿಯೇ ದಕ್ಕಲಿಲ್ಲ. ಆದ್ದರಿಂದಲೇ ಅಥವಾ ಆದರೂ - ಔದಾರ್ಯ, ಕಷ್ಟ, ಸಹಿಷ್ಣುತೆ, ಪ್ರೀತಿ, ವಿಶ್ವಾಸ ಉಳಿಸಿ ಬೆಳೆಸಿಕೊಂಡವಳು."ಇಡೀ ಕಾದಂಬರಿ ಲೋಕದಲ್ಲಿಯೇ ಕರುಣಾಳುವಾದ, ಮಾನವೀಯವಾದ ವ್ಯಕ್ತಿಯಾಗಿದ್ದಾಳೆ. ವೈಚಾರಿಕತೆ, ದೇವರು, ಧರ್ಮ, ಸೃಷ್ಟಿ, ಕಾಮಗಳ ಬಗೆಗೆ ಅವಳು ತಾಳುವ ನಿಲುವುಗಳು ಮಾತ್ರ ಭಿನ್ನ. ಮೂಕಜ್ಜಿ ಪ್ರತಿನಿಧಿಸುವ ಮೌಲ್ಯಗಳ ಸಂಪದ - ಮಾನವೀಯತೆ, ವಾಸ್ತವಿಕತೆಯ ಅರಿವು, ವೈಚಾರಿಕತೆ ; ಮತ್ತೆ ಇವೆಲ್ಲಾ ಕೂಡಿ ನೀಡುವ ಒಂದು ಸಮತೋಲ - ನನಗೆ ಬಹಳ ಮಹತ್ವದ್ದಾಗೋದು. ಮತ್ಸರ, ದ್ವೇಷ, ಕೃತಘ್ನತೆಗಳಂತಹ ಶಕ್ತಿಗಳಿಗೆ ಬಲಿಯಾಗಿಯೂ, ದೇವರಲ್ಲಿ ವಿಶ್ವಾಸವಿಲ್ಲದೆಯೂ, ಮನುಷ್ಯ ಮಾನವೀಯ ಮೌಲ್ಯಗಳಲ್ಲಿ ವಿಶ್ವಾಸ ಕಳೆದುಕೊಳ್ಳದೇ ಮನುಷ್ಯನಾಗಿ ಬಾಳೋದು ಸಾಧ್ಯ ಎನ್ನುವ ಅವರ ನಂಬಿಕೆ ಮನಸ್ಸಿಗೆ ಗೆಲುವು, ಧೈರ್ಯ ತಂದುಕೊಡುತ್ತದೆ."[೧೬೧]

ಕಾರಂತರು ವೇಶ್ಯಾ ಸಮಸ್ಯೆಯನ್ನು ನಿರ್ಮೂಲನ ಮಾಡಲು ಶ್ರಮಿಸಿದರು. ವೇಶ್ಯೆಯರನ್ನು ಮತ್ತು ಅವರ ಮಕ್ಕಳನ್ನು ಸಮಾಜ ಕಾಣುತ್ತಿರುವ ರೀತಿಗೆ ನೊಂದವರು. ಆ ಮಕ್ಕಳ ಭವಿಷ್ಯಕ್ಕಾಗಿ ಶ್ರಮಿಸಿ,

ಒಂದು ದಾರಿಯನ್ನು ಕಲ್ಪಿಸಿದ್ದಾರೆ. 'ರಾ-' ಎಂಬ ಅವರ ಗೆಳೆಯ ವೇಶ್ಯೆಯ ಮಗನಾಗಿದ್ದ, ಅವನಿಗೆ ಮೂವರು ತಂಗಿಯರಿದ್ದರು. ಅವರನ್ನು ಮಾರಾಟ ಮಾಡದೆ, ತಕ್ಕ ವರರನ್ನು ಹುಡುಕಿ ಮದುವೆ ಮಾಡುವ ಸದಾಶಯವನ್ನು ಹೊಂದಿದ್ದರು. ಈ ಕನ್ಯೆಯರನ್ನು ಮದುವೆಯಾಗಲು ಯಾರೂ ಒಪ್ಪದಿದ್ದರೆ ತಾವೇ ಒಬ್ಬಳನ್ನು ವರಿಸಲು ಕಾರಂತರು ಯೋಚಿಸಿದ್ದರು. ಆದರೆ ಅವರ ಬ್ರಹ್ಮಚರ್ಯ ವ್ರತ ಅಡ್ಡಬಂದಿತ್ತು. ಅಷ್ಟರಲ್ಲಿಯೇ ರಾ-ನ ಸಹೋದರಿಯನ್ನು ತಮ್ಮ ಗೆಳೆಯನೊಬ್ಬ ಮದುವೆ ಆಗಲು ಮುಂದೆ ಬಂದ. ಈ ಕೆಲಸಕ್ಕೆ ಕಾರಂತರ ತಾಯಿಯವರಿಂದಲೇ ಅಸಮ್ಮತಿಯಿತ್ತು. ಅದನ್ನು ಲೆಕ್ಕಿಸದೆ ತಮ್ಮ ಕಾರ್ಯ ಮಾಡಿದರು. ಅಂತೆಯೇ ವೇಶ್ಯೆಯರ ಮಕ್ಕಳನ್ನು ಹಲವಾರೆಡೆ ಒಳ್ಳೆಯ ಸಂಬಂಧಗಳನ್ನು ಗುರುತಿಸಿ ಮದುವೆ ಮಾಡಿಸಿದರು. ವೇಶ್ಯಾ ಜೀವನದಲ್ಲಿ ಹೊಲಸು ಮತ್ತು ಸೊಗಸು ಎರಡೂ ಮುಖಗಳನ್ನು ಕಾರಂತರು ಕಂಡಿದ್ದಾರೆ. ಮೈಮನಗಳ ಸುಳಿಯಲ್ಲಿ ಮತ್ತು 'ಕನ್ಯಾಬಲಿ' (ಸೂಳೆಯ ಸಂಸಾರ) ಕಾದಂಬರಿಗಳು ಈ ಎರಡೂ ಮುಖಗಳನ್ನು ಗುರುತಿಸುತ್ತದೆ. ಅಲ್ಲದೆ ಮದುವೆಯಾದ ಎಲ್ಲರೂ ಗಂಡ - ಮನೆ- ಮಕ್ಕಳನ್ನು ಸೌಖ್ಯದಿಂದ ನೋಡಿಕೊಳ್ಳುತ್ತಾರೆ ಎನ್ನುವಂತಿಲ್ಲ. ಅವರಲ್ಲಿ ವೇಶ್ಯೆಯರಿಗಿಂತಲೂ ಕೀಳಾದವರಿರುತ್ತಾರೆ. ರಾ - ನ ತಂದೆಯನ್ನು ಅಂದರೆ ತಾಯಿಯ ಪ್ರೇಮಿಯನ್ನು ಅವಳು ನೋಡಿಕೊಳ್ಳುತ್ತಿದ್ದ ಪರಿ ಯಾವ ಗರತಿಗಿಂತಲೂ ಕಡಿಮೆಯಿರಲಿಲ್ಲ. ''ರಾ-ನ ತಾಯಿ ಕುಲಟೆಯಾಗಿದ್ದರೆ, ಬತ್ತಿದ ಆ ದೀಪವನ್ನು ಕಾಲಿಂದ ಒದೆಯುತ್ತಿದ್ದಳು. ಆಕೆ ಹಾಗೆ ಮಾಡಲಿಲ್ಲ. ಆತನನ್ನು ರಾ - ಮತ್ತು ಇತರ ಮಕ್ಕಳು 'ಪಾಳ' ಎಂಬುದಾಗಿ ಕರೆಯುತ್ತಿದ್ದರು''. ಇದು ಸರ್ವೆ ಸಾಮಾನ್ಯ. ಆದರೆ ಮಧುಕರಿ ಬೇನೆಗೆ ತುತ್ತಾದ ಅವನನ್ನು ಕೊನೆವರೆಗೂ ಶುಶ್ರೂಷೆ ಮಾಡುವ, ಯಾವುದೇ ಅಳುಕು ಇಲ್ಲದೆ ನೋಡಿಕೊಂಡ ಅವಳ ಮಾನವೀಯ ಧರ್ಮ ಮಹತ್ವದ್ದು. ''ಕಾಮವೊಂದೇ ಜೀವನದ ಸೂತ್ರವಲ್ಲ. ಕಾಮವು ಪಶು ಸಹಜವಾದದ್ದಾದರೂ, ಅದು ಪ್ರೇಮಕ್ಕೂ ಸಹಜವಾದ ದಾರಿ. ಅವು ಅನ್ಯೂನ್ಯ ಶಕ್ತಿಗಳು. ಎಲ್ಲಿ ಸಹಜವಾದ ಪ್ರೇಮವಿದೆಯೋ, ಅದೇನೆ ನಿಜವಾದ ದಾಂಪತ್ಯಕ್ಕೆ ಎಡೆಮಾಡಿಕೊಡುತ್ತದೆ. ಅದು ಇಲ್ಲದಲ್ಲಿ ದಾಂಪತ್ಯವೂ ವೇಶ್ಯಾವೃತ್ತಿಯೆನಿಸಬಹುದು. ಮಾನವ ಕುಲದ ನಿರ್ಮಾಣಕ್ಕೆ ಅವಶ್ಯಕವಾದ ಮಾನವೀ ಕಾಮವು, ಅವನ ಮನೋವೃತ್ತಿಯ ಫಲದಿಂದ, ಮೇಲೆನಿಸಲೂಬಹುದು; ತೀರ ಕೀಳೆನಿಸಲೂಬಹುದು.''[೧೨]

ಬಾಲವಿಧವೆಯರನ್ನು ಲಗ್ನ ಮಾಡಿಸುವ ಹೊಣೆಯನ್ನು ಅವರು ತಮ್ಮ ಜೀವನದಲ್ಲಿ ಹೊತ್ತಿದ್ದರು. ಹುಡುಗಿ - ಹುಡುಗನನ್ನು ಒಪ್ಪಿ ಶಾಸ್ತ್ರದ ಒಪ್ಪಿಗೆಯನ್ನೂ ಪಡೆದಿದ್ದರು. ಆದರೆ ಹುಡುಗಿಯ ಮನೆಯವರು ಅವಳನ್ನು ಮನೆಗೆ ಕರೆದುಕೊಂಡು ಹೋದದದ್ದರಿಂದ ಪುನರ್‌ವಿವಾಹ ಘಟಿಸಲಿಲ್ಲ. ಆದರೆ ಇನ್ನೊಂದಡೆಗೆ ಶಾ- ಎನ್ನುವ ಬಾಲವಿಧವೆಯನ್ನು ಪುನರ್‌ವಿವಾಹ ಮಾಡಲು ಯೋಜಿಸಿದ್ದರು.

ಆದರೆ ಅವಳೇ ಇನ್ನೊಬ್ಬ ವಿವಾಹಿತನನ್ನು ಮದುವೆ ಮಾಡಿಕೊಂಡು ಅವನ ಹೆಂಡತಿಯನ್ನು ದೂರ ಮಾಡಿದಳು. ಇದು ಕಾರಂತರಿಗೆ ತುಂಬ ನೋವುಂಟುಮಾಡಿತು. ಇನ್ನೊಬ್ಬರ ವಸ್ತುವನ್ನು ಕಿತ್ತುಕೊಳ್ಳುವಾಗಲೂ ಮಾನವೀಯತೆಯನ್ನು ತೋರಬೇಕಾದದ್ದು ಅತ್ಯಗತ್ಯ. ಅದಕ್ಕಾಗಿ ''ಲೈಂಗಿಕ ಪ್ರಶ್ನೆಯನ್ನು ಹೊಂದಿರುವ ದಾಂಪತ್ಯ ನೀತಿ ಬಲು ಜಿಗುಟಿನ ಸಮಸ್ಯೆ; ನಮ್ಮ ಸಮಾಜದ ಮನುಧರ್ಮಗುರುಗಳೂ, ಅರ್ವಾಚೀನ ನೀತಿಕಾರರೂ ಬಣ್ಣಿಸುವಷ್ಟು ಸುಲಭದಲ್ಲಿ ಖಂಡ ತುಂಡ ನಿಯಮಗಳನ್ನು ಹಿಂಬಾಲಿಸುವ ಪ್ರಶ್ನೆ ಅದಲ್ಲ.''[೧೬೩]

ತಮ್ಮ ಜೀವನದಲ್ಲಿ ಬದುಕನ್ನು ಮಾನವೀಕರಣತೆಗೊಡ್ಡಿದ ಸಂದರ್ಭಗಳು ಬಹಳ ಲೇಖಕರಲ್ಲಿಲ್ಲ. ಅಂತಹವರು ವಿರಳವಾಗಿ ದೊರೆಯುತ್ತಾರೆ. ಕುವೆಂಪು, ಕಾರಂತ, ಬೇಂದ್ರೆ, ಕಟ್ಟೀಮನಿಯಂತಹ ಬರಹಗಾರರು ಮಾತ್ರ ಬದುಕು - ಬರಹ ಒಂದೇ ಎಂದು ನಂಬಿದ್ದರು, ನಡೆದಿದ್ದರು. ಕಾರಂತರು ವಿವಾಹವಾದ ಸಂದರ್ಭವನ್ನು ಗಮನಿಸಿದರೆ ಅವರ ಮಾನವೀಕರಣ ಸ್ಪಷ್ಟವಾಗುತ್ತದೆ. ಬ್ರಾಹ್ಮಣೇತರ ಕನ್ಯೆಯನ್ನು ರಿಜಿಸ್ಟರ್ಡ್ ಮದುವೆಯಾದ ಕಾರಂತರು ಮೊದಲು ಬಾಲವಿಧವೆಯನ್ನೋ ವೇಶ್ಯೆಯ ಮಗಳನ್ನೋ ಮದುವೆಯಾಗಲು ಯೋಜಿಸಿದ್ದರು.

''ನಮ್ಮ ಜೀವನದಲ್ಲಿ ಕಾಡುತ್ತ ಬಂದಿರುವ ಪ್ರಶ್ನೆಗಳಲ್ಲಿ ಗಂಡು - ಹೆಣ್ಣಿನ ಸಮಸ್ಯೆ ಎಂಬುದು ಬಲು ದೊಡ್ಡದು; ಬಲು ಜಟಿಲ. ಅದು ಹೊಟ್ಟೆಪಾಡಿನ ಸಮಸ್ಯೆಗಿಂತ ಅದ್ಭುತ ಆಕಾರದ್ದು. ಅದನ್ನು ಕುರಿತು ಮೊದಲಿನಿಂದಲೂ ಎಚ್ಚರಿಕೆಯಿಂದ ಬರೆದವನು ನಾನು. ವಾಚಕರ ಚಪಲವನ್ನು ಬೆಳೆಯಿಸುವ ಕೆಲಸಕ್ಕೆ ಎಂದೂ ಹೋಗಿಲ್ಲ. ಗಂಡು ಹೆಣ್ಣಿನ ಶೃಂಗಾರ ಪ್ರವೃತ್ತಿಯಲ್ಲಿ ನಿಸರ್ಗದ ಉದ್ದೇಶವೇನು? ಅದರ ಹಿಡಿತ ಎಷ್ಟು? ಅದು ಮನೋದೈಹಿಕ ಪ್ರವೃತ್ತಿಯಾದುದರಿಂದ, ಮಾನವರಲ್ಲಿ ಅದು ಎಷ್ಟೆಲ್ಲ ಮುಖಗಳನ್ನು ತಾಳಿದೆ? ಅದರಲ್ಲಿ ಯಾವ ಅಂಶ ಜಿಗುಪ್ಸೆ ತರಬಹುದು; ಯಾವುದು ಅಮಲು ಬರಿಸಬಹುದು; ಯಾವುದು ಬದುಕಿನ ಸೊಗಸನ್ನು ಹೆಚ್ಚಿಸಬಹುದು - ಎಂಬುವನ್ನು ಬಿಂಬಿಸುವ ಸಲುವಾಗಿಯೇ 'ಮೈಮನಗಳ ಸುಳಿಯಲ್ಲಿ' ಎಂಬ ಕಾದಂಬರಿಯನ್ನು ಬರೆದೆ.''[೧೬೪]

'ಮರಳಿ ಮಣ್ಣಿಗೆಯ' ರಾಮೈತಾಳರು ವಂಶೋದ್ಧಾರಕನಿಗಾಗಿ ದತ್ತು ಪಡೆಯದೆ, ಮೊದಲ ಹೆಂಡತಿಯಿಂದ ನಿಯೋಗದ ಮೂಲಕವೂ ನಿರೀಕ್ಷಿಸದೆ ಇನ್ನೊಂದು ಮದುವೆಯಾಗುತ್ತಾರೆ. ಐತಾಳರು ದುರ್ಬಲರಲ್ಲ. ಇನ್ನೂ ದೃಢನಿಶ್ಚಲ ದೈಹಿಕ ಸಂಪತ್ತನ್ನುಳ್ಳವರು. (ಭೈರಪ್ಪನವರ 'ಪರ್ವ'ದಲ್ಲಿ ಪಾಂಡು ದುರ್ಬಲನಿದ್ದುದರಿಂದ ಕುಂತಿಗೆ ನಿಯೋಗ ಮಾಡಿಸುವುದರ ಮೂಲಕ ಪುತ್ರರತ್ನರನ್ನು ಪಡೆದದ್ದನ್ನೂ ಕಾಣುತ್ತೇವೆ.) 'ಧರ್ಮರಾಯನ ಸಂಸಾರ'ದಲ್ಲಿ ಇದಕ್ಕೆ ವ್ಯತಿರಿಕ್ತವಾಗಿ ಅಂದರೆ ನಾರಾಯಣ ಹೆಬ್ಬಾರರಿಗೆ ಮಕ್ಕಳಾಗದುದರಿಂದ ಹೆಂಡತಿ ಮಹಾಲಕ್ಷ್ಮಿ ವಂಶ ಬೆಳೆಸುವುದಕ್ಕೋಸ್ಕರ ಮನೆಯ ಕೆಲಸದವನೊಂದಿಗೆ ಸೇರಿ ಗರ್ಭಧರಿಸಿ ಕುಲೋದ್ಧಾರಕನನ್ನು ಪಡೆಯುತ್ತಾಳೆ. ಎರಡು

ವೈರುಧ್ಯದ ಮಾನವೀಕರಣ ಇಲ್ಲಿ ಕೆಲಸ ಮಾಡಿರುವುದನ್ನು ಸೂಕ್ಷ್ಮವಾಗಿ ಗಮನಿಸಲೇಬೇಕಾಗುತ್ತದೆ. ಅಲ್ಲಿ ರಾಮೈತಾಳರು ಸಬಲರು ಮತ್ತು ಹೆಂಡತಿ ಪಾರೋತಿ ದುರ್ಬಲಳು. ಹೀಗಿದ್ದಾಗ ಪಾರೋತಿಗೆ ಅನ್ಯಾಯವಾಗದ ರೀತಿಯಲ್ಲಿ ದತ್ತು ತೆಗೆದುಕೊಳ್ಳಬಹುದಿತ್ತು. ಹಾಗಾಗಿದ್ದರೆ ಐತಾಳರ ಸದೃಢ ದೇಹವು ಅನ್ಯ ದಾರಿಗಳನ್ನು ಅರಸುತ್ತಿತ್ತು. ಆಗ ಪರಿಸ್ಥಿತಿ ಇನ್ನೂ ಭೀಕರವಾಗುವ ಹಂತ ತಲುಪುತಿತ್ತು. ಅದೇ ರೀತಿ 'ಧರ್ಮರಾಯನ ಸಂಸಾರ'ದಲ್ಲಿ ನಾರಾಯಣ ಹೆಬ್ಬಾರ ನಿರ್ವೀರ್ಯ ವ್ಯಕ್ತಿಯಾದರೆ, ಹೆಂಡತಿ ಮಹಾಲಕ್ಷ್ಮಿ ಲೈಂಗಿಕ ತೃಪ್ತಿಗಾಗಿ ಇನ್ನೊಬ್ಬರನ್ನು ಅರಸಲೇಬೇಕು. ಒಂದು ವೇಳೆ ಮನೆಬಿಟ್ಟು ಓಡಿಹೋಗಿದ್ದರೆ ಸಮಾಜದಲ್ಲಿ ಮನೆತನದ ಕೀರ್ತಿ ಮಣ್ಣುಪಾಲಾಗುತ್ತದೆ. ಅಂದ ಮಾತ್ರಕ್ಕೆ ವಾರಸುದಾರಿಕೆಯ ಪ್ರಶ್ನೆಯೇ ಇಲ್ಲಿ ಬಹು ಮುಖ್ಯವಾಗಿದೆ. 'ಕೇವಲ ಮನುಷ್ಯರು' ಕೃತಿಯಲ್ಲಿ ಕೂಡ ಸನ್ಯಾಸಿಗೆ ಒಲಿದ ಶಾಂತಿಯು ಮಗುವನ್ನು ಅನೈತಿಕ ಮಾರ್ಗದಿಂದಲೇ ಪಡೆಯುತ್ತಾಳೆ.

ಕಾರಂತರು ನವೋದಯದ ಲೇಖಕರಿಗಿಂತಲೂ ಏಕೆ ಭಿನ್ನರಾಗುತ್ತಾರೆಂದರೆ, ಅವರ ಕಾದಂಬರಿಗಳ ನಾಯಕರೆಲ್ಲರೂ ಮಾನವರಾಗಿದ್ದರು ಮಾನವರಾಗಿಯೇ ಉಳಿಯುತ್ತಾರೆ. ಅಂದರೆ ಅತಿಮಾನವರಾಗುವುದಾಗಲೀ ಇಲ್ಲವೆ ಮಾನವ ಪಾತಳಿಯಿಂದ ಹಿಂದೆ ಸರಿದ ಅಮಾನವನಾಗುವುದಾಗಲೀ ಆಗುವುದಿಲ್ಲ. ಕಾನೂರು ಹೆಗ್ಗಡತಿಯ ಹೂವಯ್ಯ ೧೦ ವರ್ಷಗಳ ನಂತರ ಅತಿಮಾನವನಾಗುತ್ತಾನೆ. ಅದರಂತೆಯೇ 'ಸಮರಸವೇ ಜೀವನ'ದ ನಾಯಕ ಕೂಡ. ಒಳ್ಳೆಯ ಪಾತ್ರಗಳಾಗಿ ಕಾದಂಬರಿಗಳಲ್ಲಿ ಅನಾವರಣಗೊಂಡು ತಮ್ಮ ಭಾಗದ ಕರ್ತವ್ಯವನ್ನು ಸರಿಯಾದ ನಿಟ್ಟಿನಲ್ಲಿ ಸಮರ್ಪಕವಾಗಿ ಪೂರೈಸುವಂತಹ ಪಾತ್ರಗಳೇ ಕಾರಂತರಲ್ಲಿ ಹೆಚ್ಚು. 'ಅಳಿದ ಮೇಲೆ'ಯ ನಿರೂಪಕ ಯಶವಂತರಾಯ 'ಮೂಕಜ್ಜಿಯ ಕನಸುಗಳ' ಮೂಕಜ್ಜಿ - ಸುಬ್ರಾಯ, 'ಮರಳಿ ಮಣ್ಣಿಗೆ'ಯ ರಾಮೈತಾಳರು - ನಾಗವೇಣಿ, 'ಚೋಮನ ದುಡಿ'ಯ ಚೋಮ, 'ಸಮೀಕ್ಷೆ'ಯ ಶ್ರೀನಿವಾಸ, 'ಮೈಮನಗಳ ಸುಳಿಯಲ್ಲಿ'ಯ ಮಂಜುಳೆ, 'ಬೆಟ್ಟದ ಜೀವ'ದ ಗೋಪಾಲಯ್ಯ, 'ಜಾರುವ ದಾರಿಯಲ್ಲಿ'ಯ ಡಾ.ಶಿವಪ್ಪ - ಮೊದಲಾದವರೆಲ್ಲ ಮಾನವ ಸಮಾಜದಲ್ಲಿ ಒಳ್ಳೆಯವರಾಗಿಯೇ ಬಾಳುತ್ತಾರೆ. ಮಾನವ ಸ್ವಭಾವದ Warmth ಹಾಗೂ Wisdom ಅದಕ್ಕಿಂತಲೂ ಹೆಚ್ಚಾಗಿ ಹೃದಯವಂತಿಕೆಯನ್ನು ಉಳಿಸಿಕೊಂಡಿರುತ್ತಾರೆ. "ಕಾರಂತರ ಯಶಸ್ವೀ ಕಾದಂಬರಿಗಳ ಒಂದು ಹಿರಿಮೆ - ಅವರು ಸೃಷ್ಟಿಸುವ ಜಗತ್ತಿನಿಂದ ಮೌಲ್ಯಗಳು ಸಹಜವಾಗಿ ಮೂಡಿ ಬರುತ್ತವೆ ಎನ್ನಬುವುದು. 'ಚೆಲುವಾ'ವಾಗುವ ಬದುಕಿಗೆ ಕಾರಂತರ ಕಾದಂಬರಿಗಳಲ್ಲಿ ಆಧಾರವಾಗುವ ಮೌಲ್ಯಗಳು ಮೂರು - ಆತ್ಮಗೌರವ, ಪ್ರಾಮಾಣಿಕತೆ, ಶ್ರಮ. ಇವನ್ನು ನಮ್ಮ ಬದುಕಿನ ಮೌಲ್ಯಗಳನ್ನಾಗಿ ಸ್ಥಾಪಿಸಿದ್ದು ಅವರ ಕಾದಂಬರಿ ಸಾಹಿತ್ಯದ ಒಂದು ಹಿರಿಯ ಸಾಧನೆ. ನವೋದಯ ಯುಗದ ಪ್ರಚಲಿತ ಮೌಲ್ಯಗಳನ್ನು ವಿವೇಕಾನಂದ, ಗಾಂಧೀಜಿ ಮೊದಲಾದವರು ಮೂಡಿಸಿದ ಮೌಲ್ಯಗಳನ್ನು - ಪ್ರಧಾನ ಮಾಡದೆ ಪಾತ್ರಗಳ ಅನುಭವ

ಜನ್ಯವಾದ ಮೌಲ್ಯಗಳನ್ನೇ ಮೂಡಿಸಿದರು ಕಾರಂತರು. ಆತ್ಮಗೌರವ, ಪ್ರಾಮಾಣಿಕತೆ, ಶ್ರಮಗಳನ್ನು ಮೌಲ್ಯಗಳನ್ನಾಗಿಸಿ ಹರಳಾಗಿಸಿದ ಕಾರಂತರಿಗೆ ನಾವು ಋಣಿಗಳಾಗಿರಬೇಕು.''[೧೬೫]

ಕಾರಂತರು ಚಿಂತನೆಯ ಆರಾಧಕರೇ ಹೊರತು ತತ್ವಜ್ಞಾನ ಹಾಗೂ ಭಕ್ತಿಯ ಆರಾಧಕರಲ್ಲ. ಇವರ ಹಲವು ಕಾದಂಬರಿಗಳಲ್ಲಿ ಬರುವ ಸನ್ಯಾಸಿಗಳು ಕಪಟಿಗಳಾಗಿರುತ್ತಾರೆ. 'ಸನ್ಯಾಸಿಯ ಬದುಕು' ಕಾದಂಬರಿಯಲ್ಲಿ ಶಿವಾನಂದ ಮತ್ತು 'ಸಮೀಕ್ಷೆ'ಯಲ್ಲಿನ ಶ್ರೀನಿವಾಸ ಗೆಳೆಯ ಭೋಜನ ಡಂಬಾಚಾರದ ಸನ್ಯಾಸತ್ವಗಳನ್ನು ಗಮನಿಸಬಹುದು. 'ಸನ್ಯಾಸಿ ಬದುಕು'ವಿನಲ್ಲಿ ಶಂಕರರಾಯನ್ನು ಆಶ್ರಮವನ್ನು ಕಟ್ಟಿ ಶಿವಾನಂದನಾಗಿ ಜನರಿಗೆ ಆಶೀರ್ವಾದ ಮಾಡುತ್ತಾರೆ. ನಂತರ ವಿದೇಶಿಗಳಾದ ಎನ್ನಾಬ್ರೈಟ್‌ಳೊಂದಿಗೆ ಸೇರಿ ಶಿವಾನಂದನು ಕೃಷ್ಣಾನಂದನಾಗುತ್ತಾನೆ. ಈ ಅವತಾರಗಳು ಸಾಕಷ್ಟು ಹಣ ಹೊಡೆಯಲು ಅನುಕೂಲವಾಗುತ್ತವೆ. ಎನ್ನಾಬ್ರೈಟ್‌ಳೊಂದಿಗೆ ಸೇರಿ ಶಿವಾನಂದನು ಕೃಷ್ಣಾನಂದನಾಗುತ್ತಾನೆ. ಈ ಅವತಾರಗಳು ಸಾಕಷ್ಟು ಹಣ ಹೊಡೆಯಲು ಅನುಕೂಲವಾಗುತ್ತವೆ. ಎನ್ನಾಬ್ರೈಟ್‌ಳ ದುರಾಲೋಚನೆಯಿಂದ ಗೋಶಾಲೆ, ಧರ್ಮಶಾಲೆ, ವಾಚನಾಲಯಗಳು ನಿರ್ಮಾಣಗೊಳ್ಳುತ್ತವೆ. ಭಕ್ತರ ಆರಾಧನೆಯಿಂದ ಈ ಇಬ್ಬರು ರಾಧಾ-ಕೃಷ್ಣರಾಗಿ ಮೆರೆಯುತ್ತಾರೆ. ಪ್ರವಾಸಕ್ಕೆ ಬಂದ ಹೆಣ್ಣು - ಗಂಡುಗಳ ಮೇಲೆ ಕಣ್ಣಾಯಿಸುತ್ತಾರೆ. ಪ್ರಣಯ ಭಂಗಿತನಾಗಿ ಬಂದ ಯುವಕನೊಂದಿಗೆ ಎನ್ನಾಬ್ರೈಟ್ ಆಲಿಂಗನಗೊಳ್ಳುತ್ತಾಳೆ. ಇಂತಹ ದುಷ್ಟ ಚಟುವಟಿಕೆಗಳಿಗೆ ಕಪಟ ಸನ್ಯಾಸಕ್ಕೆ ಹೆಸರಾದ ಇವರು ಸಮಾಜದ ಮಾನವೀಕರಣಕ್ಕೆ ಶ್ರಮಿಸುವುದು ಅಷ್ಟಕ್ಕೆ ಇದೆ. 'ಕೇವಲ ಮನುಷ್ಯರು' ಕಾದಂಬರಿಯಲ್ಲಿನ ಭಗವಾನ್ ಅಭಿನ್ನಾನಂದರು ಸಾಮಾಜಿಕ ಸ್ವಾಸ್ಥ್ಯತೆಯ ಬಗ್ಗೆ, ಆಧ್ಯಾತ್ಮಿಕತೆಯ ಬಗ್ಗೆ ಪ್ರವಚನ ನೀಡುತ್ತಾ, ತಮ್ಮ ಆಶ್ರಮಕ್ಕೆ ಬಂದ ವಿಶ್ವನಾಥಯ್ಯನ ಹೆಂಡತಿ ಶಾಂತಿಯನ್ನು ವಶಮಾಡಿಕೊಳ್ಳುತ್ತಾನೆ. ಇದು ಒಂದು ಮುಖವಾದರೆ ಇನ್ನೊಂದೆಡೆ ವೈಚಾರಿಕತೆಯನ್ನು ಪ್ರದರ್ಶಿಸುತ್ತಾ ಲೋಕದ ಅನೇಕ ಅನುಭಾವಿ ಚಿಂತನೆಯನ್ನು ಬಿತ್ತರಿಸುತ್ತಾನೆ. ಕಾದಂಬರಿಯಲ್ಲಿ ಶಾಂತಿಯು ತನ್ನ ಗಂಡನಿಗೆ ಮೋಸಮಾಡುವುದು. ಆ ರೀತಿ ಆಗುವಂತೆ ಪ್ರೇರಣೆ ನೀಡುವ ಸ್ವಾಮೀಜಿಯ ನಯ ವಂಚಕತೆಗಳು ಕಾರಂತರು ಆಧ್ಯಾತ್ಮಿಕತೆ ಮತ್ತು ಸನ್ಯಾಸಿಗಳ ಮೇಲೆ ನಂಬಿಕೆ ಇಟ್ಟಿಲ್ಲವೆನ್ನುವುದಕ್ಕೆ ಸ್ಪಷ್ಟ ನಿದರ್ಶನಗಳಾಗಿವೆ. ''ಆಧ್ಯಾತ್ಮಿಕ ಹುಳು ಇವರನ್ನು ಕೊರೆದಿಲ್ಲ. ಒಬ್ಬ ಲೇಖಕರು ಸೂಚಿಸಿರುವಂತೆ, ದೇವರು ಕಾರಂತರನ್ನು ಕಾಡುವುದಿಲ್ಲ. ಅವರ ಕಲೆ ಮಾನವನಿಗಷ್ಟೆ ಕುರಿತದ್ದು. ಅವರು ಗೆಲ್ಲುವುದು ಅಥವಾ ಬೀಳುವುದು ಮಾನವತಾವಾದಿಯಾಗಿಯೇ''[೧೬೬]

''ಮೂಕಜ್ಜಿಯ ಕನಸುಗಳು ಕಾರಂತರ ಒಂದು ಶ್ರೇಷ್ಠಕಾದಂಬರಿ, ಭಾರತೀಯ ಸಾಹಿತ್ಯದ ಒಂದು ಮಹತ್ವದ ಕೃತಿ. ನಿತ್ಯ ಕುತೂಹಲಿಯೂ ಚಿರಶೋಧಕಳೂ ಆದ ಮೂಕಜ್ಜಿಯನ್ನು ಕಲಾಪ್ರತಿಮೆಯನ್ನಾಗಿಸುವುದು ಕಾರಂತರಂಥ ಕಲಾವಿದರಿಗೆ ಮಾತ್ರ ಸಾಧ್ಯ. ಕಾರಂತರು ತಮ್ಮ

ಜೀವನಾನುಭವ ಪಕ್ವಗೊಂಡ ಕಾಲದಲ್ಲಿ ಈ ಕಾದಂಬರಿಯನ್ನು ರಚಿಸಿದ್ದಾರೆಂಬುದನ್ನು ನಾವು ನೆನಪಿನಲ್ಲಿಟ್ಟುಕೊಂಡಿರಬೇಕು. ಅಸ್ತಿತ್ವವಾದ ಮತ್ತು ಮಾನವತಾವಾದಗಳ ಸಂಗಮವಾದ ಮೂಕಜ್ಜಿಯ ಬಗೆಗೇ ಕೆಲವು ಪ್ರಶ್ನೆಗಳನ್ನು ಕೇಳಲಾಗುತ್ತಿದೆ. ಅದಕ್ಕೆಲ್ಲ ಕಾರಂತರೇ ಉತ್ತರ ಕೊಟ್ಟಿದ್ದಾರೆ. 'ಅಂಥ ಅಜ್ಜಿಯೊಬ್ಬಳು' ಇದ್ದಾರೆಯೇ ಎಂಬ ಸಂಶಯ ಬಂದರೆ, ನಮ್ಮ ಸಂಸ್ಕೃತಿಯ ನಂಬಿಕೆಗಳ ನೇರವನ್ನು ಕುರಿತಾದ ಸಂಶಯ ಪಿಶಾಚಿಯ ರೂಪವೇ ಅವಳೆಂದು ತಿಳಿದರಾಯಿತು."[೧೬೭]

ಅತಿಸೂಕ್ಷ್ಮ ಹಾಗೂ ಜಟಿಲವಾಗುವ ಲೈಂಗಿಕತೆಯನ್ನು ಕಾರಂತರು ಮಡಿ-ಮೈಲಿಗೆಯ ಹಂತಕ್ಕೆ ಕೊಂಡೊಯ್ಯದೆ, ಅತ್ಯಂತ ಆರೋಗ್ಯಕರವಾದ ರೀತಿಯಲ್ಲಿ ಎಂತಹ ಮಾನವಂತನೂ ಗಮನಿಸಬಹುದಾದ ರೀತಿಯಲ್ಲಿ ನಿರೂಪಿಸಿದ್ದಾರೆ. ಕಾರಂತರೇ ಹೇಳುವಂತೆ "ದೈವದ ಪ್ರಶ್ನೆಯಾಗಲಿ ಲೈಂಗಿಕ ಸಂಬಂಧದ ಪ್ರಶ್ನೆಯಾಗಲಿ ಬಹಳ ಗಹನವಾದದ್ದು. ಮನಸ್ಸಿನ ಸ್ಥಿತಿ ವಕ್ರವಾಗಿರುವುದರಿಂದ ಇದನ್ನು ಅರಿಯುವುದು ಕಷ್ಟ. ಇದು ನನ್ನ ಮನಸ್ಸಿಗೆ ಬಂದ ಮೇಲೆ ನನಗೆ ಗೊತ್ತಿರುವುದನ್ನು ಪ್ರಸ್ತಾಪಿಸಿದ್ದೇನೆ. ಗೊತ್ತಿಲ್ಲದ್ದನ್ನು ಗೊತ್ತಿಲ್ಲವೆಂದು ಹೇಳಿದ್ದೇನೆ. ನನ್ನ ಅನುಭವದ ಮೇಲೆ, ನನ್ನ ನಂಬಿಕೆಯ ಮೇಲೆ ಮನಸ್ಸಿನಲ್ಲಿದ್ದದ್ದನ್ನು ತೋಡಿಕೊಂಡಿದ್ದೇನೆ. ಲೈಂಗಿಕ ಪ್ರಜ್ಞೆ ಎಲ್ಲರ ಜೀವನವನ್ನು ಕಾಡುವ ಕಷ್ಟ. ಯಾವ ಶಕ್ತಿ ನಮ್ಮ ಮನಸ್ಸನ್ನು ಕೆಡಿಸಬಲ್ಲುದೋ, ಹುಚ್ಚರನ್ನಾಗಿಸಬಲ್ಲುದೋ, ಕುಣಿಸಬಲ್ಲುದೋ, ಅಸೂಯೆ ಸಾವು ಕೊಲೆ ಮಾಡಿಸಬಲ್ಲುದೋ ಅಂಥ ವಿಷಯವನ್ನು ಬರೆಯುವಾಗ ಜವಾಬ್ದಾರಿ ಅಗತ್ಯ. ಚಪಲ ಬೆಳೆಸುವುದಕ್ಕೆ ಬರೆಯುವುದಿಲ್ಲ"[೧೬೮] ಚಪಲ, ತೀಟೆಗಳಿಗೆ ಕಾದಂಬರಿಯಂತಹ ಬರಹ ಸೂಕ್ತವೂ ಅಲ್ಲ ಸಹ್ಯವೂ ಅಲ್ಲ. 'ಮೈಮನಗಳ ಸುಳಿಯಲ್ಲಿ' ಮತ್ತು 'ಧರ್ಮರಾಯನ ಸಂಸಾರ'ಗಳು ಈ ಮಾತಿಗೆ ತಕ್ಕ ಉತ್ತರ ನೀಡಬಲ್ಲವು. 'ಮೈಮನಗಳ ಸುಳಿಯಲ್ಲಿ'ನ ವೇಶ್ಯಾ ಜೀವನವು ಸಮಾಜಕ್ಕೆ ನಿರೂಪಿಸುವ ನೈತಿಕತೆಯು ಬಹುಮುಖ್ಯವಾಗಿದೆ. ಅದರ ಜೊತೆಗೆ ಯಾರನ್ನೂ ವ್ಯಭಿಚಾರಕ್ಕಾಗಲಿ, ಮೋಸಕ್ಕಾಗಲೀ ತೊಡಗಿಸುವುದಿಲ್ಲ. ಬರೀ ಮೈಮಾರಿಕೊಳ್ಳುವ ಕಸುಬು ವೇಶ್ಯೆಯರದಾಗಿರಬಹುದು ಜೊತೆಗೆ ಮನವನ್ನು ಧಾರೆಯೆರೆಯುವಂತಹ ಮಂಜುಳೆಯಂತಹ ಪಾತ್ರಗಳು ಮಾತ್ರ ಕಾರಂತರಲ್ಲಿ ಸೃಷ್ಟಿಯಾಗುತ್ತವೆ. ಅನಕೃ ಅವರ 'ಸಂಜೆಗತ್ತಲಿ'ನಂತಹ ಪಾತ್ರಗಳು ದೂರವೇ ಉಳಿಯುತ್ತವೆ.

ಯಾವುದೇ ಒಬ್ಬ ವ್ಯಕ್ತಿ ಜೀವನದಲ್ಲಿ ದೊಡ್ಡ ಸಾಧನೆ ಮಾಡಿದ್ದಕ್ಕಾಗಿ ಗೌರವ ಪಡೆಯುವುದಿಲ್ಲ. ಪಡೆದರೂ ಅದು ತಾತ್ಕಾಲಿಕ. ಅಂತಹ ಅರ್ಹ ಗೌರವ ಪಾತ್ರವಾಗುವುದು ಮನುಷ್ಯನೆಂಬ ಹೆಸರಿಗೆ ತಕ್ಕವನಾಗಿ ಮನುಷ್ಯನಾಗಿ ಬಾಳುವುದರಿಂದ. ಬದುಕಿನ ಹೋರಾಟದಲ್ಲಿ ಎದುರಾಗುವ ಅನೇಕ ಸಂಕಷ್ಟಗಳನ್ನು ಎದೆಗುಂದದೆ, ಅಪ್ರಾಮಾಣಿಕನಾಗದೆ ಎದುರಿಸಿ ಜಯಿಸುವುದು. ತಾಳ್ಮೆ, ಕಷ್ಟ ಸಹನಶೀಲತೆ, ನಿಸ್ವಾರ್ಥತೆ, ಸ್ವಾಭಿಮಾನ, ದಯಾಳುತನ, ವಾತ್ಸಲ್ಯ, ಸಹಕಾರ - ಮೊದಲಾದ ಮಾನವೀಯ ಮುಖಗಳನ್ನು ಕಾರಂತರ ಪಾತ್ರಗಳು ಅಳವಡಿಸಿಕೊಂಡಿವೆ. ಮನುಷ್ಯ ನಡೆಸಬೇಕಾದ

ಬಾಳಹೋರಾಟದಲ್ಲಿ ಮಾನವೀಯ ಗುಣಗಳೇ ಮುಖ್ಯ. ಇವುಗಳನ್ನು ಜಯಿಸುವುದೇ ಸಾಧನೆ. ಅಂತಹ ಸಾಧನೆಗಳ ಸಾಕ್ಷಿಯಾಗಿ 'ಅಳಿದ ಮೇಲೆ'ಯ ಯಶವಂತರಾಯ, 'ಮರಳಿ ಮಣ್ಣಿಗೆ'ಯ ಪಾರ್ವತಿ, ಸರಸ್ವತಿ, ನಾಗವೇಣಿ, 'ಔದಾರ್ಯದ ಉರುಳಲ್ಲಿ'ನ ದಯಾನಂದರಾಯ, ಸತ್ಯಭಾಮೆ, ರಾಧಾಕೃಷ್ಣ, 'ಚೋಮನದುಡಿ'ಯ ಚೋಮ, 'ಸಮೀಕ್ಷೆ'ಯ ಶ್ರೀನಿವಾಸ, 'ಮೂಕಜ್ಜಿ ಕನಸುಗಳು' ಮೂಕಜ್ಜಿ, 'ಸ್ವಪ್ನದ ಹೊಳೆ'ಯ ಕಿಟ್ಟಣ, 'ಬೆಟ್ಟದ ಜೀವ'ದ ಗೋಪಾಲಯ್ಯ- ಮೊದಲಾದವರು ನಿಲ್ಲುತ್ತಾರೆ.

'ಜಾರುವ ದಾರಿಯಲ್ಲಿ' ಕಾದಂಬರಿಯ ನಾಯಕ ಸ್ಥಾನವನ್ನು ಕಾಳೂರು ಮತ್ತು ಡಾ.ಶಿವಪ್ಪ ವಹಿಸುತ್ತಾರೆ. ನೈತಿಕ ಮಟ್ಟದಲ್ಲಿ ಅಧಃಪತನದ ದಾರಿಯಲ್ಲಿ ಜಾರುತ್ತಿರುವ ಒಂದು ಊರಿನ ಇಡೀ ಜನಸಮುದಾಯದ ಚಿತ್ರವನ್ನು ಕೊಡುವುದರ ಜೊತೆಗೆ ಹದಗೆಡುತ್ತಿದ್ದ ಜೀವನದ ನಡುವೆಯೇ ಹಟದಿಂದ ಉದಯಿಸುತ್ತಿದ್ದ ಮಾನವೀಯತೆ ಸಾರ್ಥಕತೆಯನ್ನು ಮರೆಯುತ್ತದೆ. ಕಲುಷಿತ ವಾತಾವರಣದತ್ತ ಸಾಗುತ್ತಿದ್ದ ಕಾಳೂರನ್ನು ಗಮನಿಸಿ, ತನ್ನ ಮನಸ್ಸಿನ ಸ್ಥಿಮಿತ ಕಳೆದುಕೊಳ್ಳದೆ ನಿಯಮ ಬದ್ಧವಾದ ನೀತಿ ನಿಷ್ಠೆಗೆ ಡಾ.ಶಿವಪ್ಪ ಪ್ರತೀಕನಾಗಿ ನಿಲ್ಲುತ್ತಾನೆ. ಹೊಸ ಪ್ರವೃತ್ತಿಗಳ ಸುಳಿಯಲ್ಲಿ ತಾನು ಸಿಲುಕಿಕೊಳ್ಳಲಾರೆ ಎಂದು ಸಂಕಲ್ಪ ಮಾಡುತ್ತಾನೆ. ಹಣ ಮತ್ತು ಹಣ ಹರಿದು ಬರುವ ಪ್ರತಿಷ್ಠೆಯ ಗೀಳಿಗಾಗಲಿ ಆತ ಬಲಿಯಾಗುವುದಿಲ್ಲ. ಅಸಹ್ಯವನ್ನು ಹುಟ್ಟಿಸುವ ಸ್ಥಳೀಯ ರಾಜಕೀಯ ಮೊದಲೇ ಬೇಡವಾಗಿತ್ತು. ಬೇನೆಯಿಂದ ಬಳಲುವವರಿಗೆ ತನ್ನ ವೃತ್ತಿಯಿಂದ ಸಾಧ್ಯವಾದ ಸಹಾಯ ಮಾಡುವ ಸಂಕಲ್ಪ ತೊಡುತ್ತಾನೆ. ತನ್ನ ಹೆಂಡತಿಯ ಆರೋಗ್ಯದ ಕಡೆಗೂ ಗಮನ ಕೊಡದಂತಹ ಪುರುಸೊತ್ತಿಲ್ಲದ ಜನಸೇವಾ ಕೈಂಕರ್ಯದಲ್ಲಿ ತೊಡಗಿಸಿಕೊಳ್ಳುತ್ತಾನೆ.

ಎರಡನೇ ಮಹಾಯುದ್ಧದ ಪರಿಣಾಮವಾಗಿ ಔಷಧಿ - ದಿನಸಿಗಳ ಬೆಲೆ ಏರಿದ್ದರಿಂದ ಬಡವರು ಔಷಧಿಕೊಳ್ಳಲಾರದಂತಹ ಸಂಕಷ್ಟಕ್ಕೆ ತುತ್ತಾಗಿರುತ್ತಾರೆ. ಗಮನಿಸಿದ ಶಿವಪ್ಪ ಜನಸೇವೆಯೆಂದು ಉಚಿತವಾಗಿ ಔಷಧಿ ಕೊಡುತ್ತಾನೆ. ತನ್ನ ಸಹಾಯಕನಾಗಿದ್ದವನು ಅತಿಹೆಚ್ಚು ಬೆಲೆಗೆ ಮಾರಿ ಹಣ ಸಂಪಾದನೆ ಮಾಡುತ್ತಾನೆ. ಸ್ನೇಹಿತ ಕಷ್ಟದಲ್ಲಿದ್ದಾಗ ತನ್ನ ತಾಯಿಯ ಅಪರ ಕರ್ಮಗಳಿಗಾಗಿ ಹಣವಿರದಿರುವಾಗಲೂ ಅವನಿಗೆ ಹಣದ ಸಹಾಯ ಮಾಡುತ್ತಾನೆ. ಈ ಮೊದಲಾದ ಸಂದರ್ಭಗಳಲ್ಲಿ ಅವನು ತೋರಿಸುವ ಹೃದಯ ಶ್ರೀಮಂತಿಕೆ ಇತರರಿಗೆ ಮಾದರಿಯಾಗುವಂತಹದು ಗುಲಾಬಿಯೊಂದಿಗೆ ಆತನು ಜೀವನ ನಡೆಸುವ ರೀತಿ ಸಾಮಾಜಿಕರಿಗೆ ಆದರ್ಶ. ಎಂದೂ ಅವಾಸ್ತವಿಕತೆಗೆ ಎಡೆಮಾಡದೆ, ಹೆಂಡತಿಯ ಪ್ರೀತಿಗೆ ವಂಚಿಸದೆ ಮತ್ತು ವೃತ್ತಿಗೆ ದ್ರೋಹ ಬಗೆಯದೆ ಜನತೆಯ ಪ್ರೇಮಾದರಗಳನು ಗಳಿಸುತ್ತಾನೆ. ದಿನೇ ದಿನೇ ವ್ಯಕ್ತಿ ಪಕ್ವಗೊಳ್ಳುತ್ತಾ ಮಾನವೀಯ ಮೌಲ್ಯಗಳ ರೂವಾರಿಯಾಗುತ್ತಾ ಬೆಳೆಯುತ್ತಾನೆ - ಸಮಾಜವನ್ನು ಬೆಳೆಸಲು ಪ್ರಯತ್ನಿಸುತ್ತಾನೆ ಕೂಡ. ಈ ಪ್ರಯತ್ನಕ್ಕೆ ಕಾದಂಬರಿಯ

ಹಲವು ಪಾತ್ರಗಳು ಸ್ಪಂದಿಸುತ್ತವೆ. ವಿಶ್ವ ವ್ಯಾಪಿಯಾಗಬಹುದಾದಂತಹ ಪ್ರೀತಿ -ಮಾನವ ಪ್ರೀತಿಯನ್ನು ಶಿವಪ್ಪ ಅನುಪಾಲಿಸುತ್ತಾನೆ ಮತ್ತು ಅನುಬೋಧಿಸುತ್ತಾನೆ.

‘‘ಈ ಎಲ್ಲಾ ಬದಲಾವಣೆ - ಬೆಳವಣಿಗೆಗಳ ಹಿಂದೆ ಮೊದಲಿನಿಂದ ಇಂದಿನವರೆಗೂ ಅಖಂಡವಾಗಿ ಉಳಿದು ಬಂದಿರುವ ಅಂಶವೆಂದರೆ ಕಾರಂತರ ಮಾನವತಾವಾದ. ಅದು ಅವರ ಜೀವನ ದೃಷ್ಟಿಯ ಕೇಂದ್ರವೇ ಆಗಿದೆ. ಕಾರಂತರು ವ್ಯಕ್ತಿಗಳ ಸ್ವತಂತ್ರ, ಅಸ್ತಿತ್ವ, ನಂಬಿಕೆ, ಬದುಕಿನ ರೀತಿಗಳನ್ನು ಅವರವರ ಪ್ರಾಮಾಣಿಕತೆಯ ಹಿನ್ನೆಲೆಯಲ್ಲಿ ಗೌರವಿಸುತ್ತಾರೆ. ‘ಧರ್ಮರಾಯನ ಸಂಸಾರ’ದ ನಾಯಕಿ ತನ್ನ ಗಂಡ ತೋರಿಸಿದ ಅಮಾನವೀಯ ಕ್ರೌರ್ಯಕ್ಕೆ ಪ್ರತಿಯಾಗಿ ಮನೆಯಲ್ಲಿ ಕೆಲಸಕ್ಕಿದ್ದ ಯುವಕನೊಂದಿಗೆ ಸಂಬಂಧ ಬೆಳಸಿ ತಾಯಾಗಿ, ಕ್ರೂರ ಗಂಡನ ಆಸ್ತಿಗೆ ವಾರಸುದಾರನನ್ನು ಕೊಡುತ್ತಾಳೆ. ಈ ರಹಸ್ಯವನ್ನೆಲ್ಲ ತಾಯಿಯ ಮುಂದೆ ಹೇಳಿಕೊಳ್ಳುತ್ತಾಳೆ. ಕಾರಂತರಿಗೆ ಇದು ಲಂಪಟತೆಯಾಗಿ, ಹಾದರವಾಗಿ ಕಾಣುವುದಿಲ್ಲ. ಇದನ್ನು ಬದುಕಿನ ಸಹಜ ಕ್ರಿಯೆಯೆಂದು ಸಹಾನುಭೂತಿಯಿಂದ ಚಿತ್ರಿಸುತ್ತಾರೆ. ಒಂದೊಂದು ಸಲ ಈ ಮಾನವತಾವಾದದ ಸಹಿಷ್ಣುತೆ ಕಾರಂತರ ಕಾದಂಬರಿಗಳಲ್ಲಿ ಅತಿಯಾಯಿತೇನೋ ಎನಿಸುತ್ತದೆ. ಅವರವರ ನಂಬಿಕೆಗಳು ಅವರಿಗೆ, ಬದುಕಿಗೆ ನೂರು ಮುಖಗಳಿರುವಾಗ ನೂರು ದೃಷ್ಟಿಗಳೂ ಇರಬಹುದು. ನನ್ನದೊಂದೇ ಸರಿಯೆಂದು ಹೇಗೆ ಹೇಳಲಿ ? ಎನ್ನುತ್ತ ಕಾರಂತರು ತಮ್ಮ ಜೀವನ ದೃಷ್ಟಿಗೆ ವಿರುದ್ಧವಾದ ದೃಷ್ಟಿಕೋನಗಳನ್ನು ಅವು ಪ್ರಾಮಾಣಿಕವೆಂಬ ಕಾರಣಕ್ಕಾಗಿ ಗೌರವಿಸಿ ಸಲೀಸಾಗಿ ಬದಿಗೆ ಸರಿಸಿಬಿಡುತ್ತಾರೆ. ಇದರಿಂದಾಗಿ ಅವರ ದೃಷ್ಟಿಕೋನಕ್ಕೆ ಗಂಭೀರವಾದ ಆಹ್ವಾನಗಳೇ ಎದುರಾಗುವುದಿಲ್ಲ. ಒಂದು ಪೂರ್ವನಿಶ್ಚಿತ ದೃಷ್ಟಿಕೋನ ಕೆಲವು ಸಂಕೀರ್ಣ ಜೀವನಾನುಭವಗಳ ಮೂಲಕ ವಿಶ್ಲೇಷಣೆಗೊಂಡು ಬರುತ್ತದೆಯೇ ಹೊರತು, ಸವಾಲುಗನ್ನು ಎದುರಿಸಿ ಗೆದ್ದು, ಇಲ್ಲವೆ ಸವಾಲುಗಳ ಬೆಳಕಿನಲ್ಲಿ ಪರಿಷ್ಕೃತವಾಗಿ ಬರುವುದಿಲ್ಲ. ಇದರಿಂದಾಗಿ ಅವರ ದೃಷ್ಟಿಕೋನಕ್ಕೆ ಹೆಚ್ಚಿನ ಬಲ ಬರುವುದಿಲ್ಲ. ಇದು ಕಾರಂತರ ಜೀವನದೃಷ್ಟಿಯ ಶಕ್ತಿಯೂ ಹೌದು, ದೌರ್ಬಲ್ಯವೂ ಹೌದು. ಶಕ್ತಿ ಏಕೆಂದರೆ - ಇದು ಉಳಿದವರ ದೃಷ್ಟಿಕೋನಗಳನ್ನು ಆತುರದ ಅಸಹಿಷ್ಣುತೆಯಿಂದ ನಿರಾಕರಿಸುವುದಿಲ್ಲ, ದೌರ್ಬಲ್ಯ ಏಕೆಂದರೆ ಉಳಿದವರ ದೃಷ್ಟಿಕೋನಗಳನ್ನು ಸಲೀಸಾಗಿ ಗೌರವಿಸಿಬಿಡುತ್ತದೆ. ಒಟ್ಟಿನಲ್ಲಿ ಇಲ್ಲಿ ಸಾಧುವಾದ ಎರಡು ದೃಷ್ಟಿಕೋನಗಳ ನಡುವೆ ಘರ್ಷಣೆಯೇ ಏರ್ಪಡುವುದಿಲ್ಲ.’’[೧೮೯]

‘‘ನಾವು ಭೂಮಿಗೆ ಬಂದ ದಿನ ನಮ್ಮ ಸುತ್ತಣ ಬದುಕು ಇದ್ದದ್ದಕ್ಕಿಂತ ಒಂದಿಷ್ಟು ಹೆಚ್ಚು ಚಂದವಾಗುವಂತೆ ಮಾಡಿ ಇಲ್ಲಿಂದ ಹೊರಡಬೇಕು.’’[೧೯೦] ಈ ಮಾತು ಬರಿ ಬಾಹ್ಯ ಸೌಂದರ್ಯಕ್ಕಷ್ಟೆ ಸೀಮಿತವಾಗಲಾರದು. ನಮ್ಮ ಮುಂದಿನ ಪೀಳಿಗೆಗೆ ನಾವು ಕೊಡುತ್ತಿರುವ ಕಾಣಿಕೆ ವರ್ಣಮಯವಾಗಿರಬೇಕೆ ಹೊರತು ದುರಂತಮಯವಾಗುವಂತಿರಬಾರದು. ಜಗತ್ತಿನಲ್ಲಿ ಮಾನವ ದಿನೇ ದಿನೇ ಉಂಟುಮಾಡುತ್ತಿರುವ

ಕಲ್ಮಶಗಳು ಬೆರಳೆಣಿಕೆಗೆ ನಿಲುಕುತ್ತಿಲ್ಲ. “ಜಾತ್ರೆಗೆ ಬಂದವರು ಜಾತ್ರೆ ಮುಗಿಸಿ ಹೊರಡುವಾಗ, ತಾವು ನಲಿದು ಉಂಡು ಹೋದ ನೆಲದ ಮೇಲೆ ಎಲ್ಲೆಲ್ಲೂ ತಮ್ಮ ಉಚ್ಚಿಷ್ಟವನ್ನು ಚೆಲ್ಲಿ ಹೋದರೆ ಹೇಗಾದೀತು? ನಾವೇ ಅಲ್ಲಿಗೆ ತಿರುಗಿ ಬಾರದಿದ್ದರೇನಾಯಿತು? ಅಲ್ಲಿಗೆ ಬರುವ ನಮ್ಮ ಮಕ್ಕಳು ಏನೆಂದುಕೊಂಡಾರು? ಅಷ್ಟನ್ನಾದರೂ ಯೋಚಿಸುವ ಬುದ್ಧಿ ಈ ದೇಶವನ್ನು ನಡೆಸುವ ಹಿರಿಯರಿಗೆ ಇಲ್ಲದೇ ಹೋದರೆ ಹೇಗೆ? ಆ ಪ್ರಶ್ನೆಗೆ ಉತ್ತರವಾಗಿ ಅವರವರ ಕರ್ಮ ಅವರವರಿಗೆ ಎಂದರೆ ಸಾಕೇನು? ಜೀವನ ಪ್ರವಾಹದ ಕರ್ಮಕಾಂಡ ವ್ಯಕ್ತಿಗೆ ಬದ್ಧವಾದ, ವ್ಯಕ್ತಿಯಿಂದ ಪ್ರಭಾವಿತವಾಗುವ ಸಾಮೂಹಿಕ ಕರ್ಮಕಾಂಡ. ಆ ಸಮೂಹದ ಒಳಿತು ಕೆಡಕುಗಳ ಪಾಲು ಮತ್ತು ಹೊಣೆ ಪ್ರತಿವ್ಯಕ್ತಿಯ ಪಾಲಿಗೆ ಇದ್ದೇ ಇದೆ.”[೧೭೧] ಜವಾಬ್ದಾರಿಯುತವಾಗಿ ನಿರ್ವಹಿಸಬೇಕಾದ ಹೊಣೆ ಪ್ರತಿ ಮಾನವನ ಮೇಲೂ ಇದೆ. ಹೊಣೆಗೇಡಿಯಾಗಿ ಬಾಳುವೆ ಮಾಡಿದರೆ ನಮ್ಮ ಪರಿಸರದಲ್ಲಿನ ಅಥವಾ ಪ್ರಾಣಿಗಳಿಗೂ - ಮಾನವನಿಗೂ ಇರುವ ಅಂತರವೇ ಗೊತ್ತಾಗುವುದಿಲ್ಲ. ಒಮ್ಮೊಮ್ಮೆ ಮನುಷ್ಯನಿಗಿಂತಲೂ ಪರಿಸರದ ನಿಯಮಗಳೇ ಉಪಯುಕ್ತವೇನೋ ಎನ್ನಿಸುತ್ತದೆ. “ಸೂರ್ಯಕಾಂತಿ - ಅರಳುವ ತನಕ ನೀರ ಕೆಳಗೇನೇ ಇದ್ದು, ಮೊದಲ ದಿನ ಮೇಲೆ ಬಂದು, ಮೂರುದಿನ ಸಕಾಲದಲ್ಲಿ ಅರಳಿ, ಮುಚ್ಚಿ ಸಾವು ಸನ್ನಿಹಿತವಾಗುವ ನೀರಲ್ಲಿ ತಲೆ ತಗ್ಗಿಸಿಕೊಂಡು ಅಡಗುತ್ತದೆ. ಒಂದಿಷ್ಟು ಆಡಂಬರವಿಲ್ಲ, ಬಂದುದೂ ಗೊತ್ತಿಲ್ಲ, ಹೋದುದೂ ಗೊತ್ತಿಲ್ಲ.

ಯಾವುದು ಅರ್ಥವತ್ತಾದ ಬಾಳು? ಅರ್ಥವರಿಯಲೆತ್ನಿಸಿ, ಅದರಂತೆ ಬಾಳಲೆತ್ನಿಸಿದ ಸೋಲು ಯಶಸ್ವಿಯಾದುದಲ್ಲವೇನು? ಬಾಳಿನಲ್ಲಿ ಕಾಣಿಸದ ಅರ್ಥ ಎಲ್ಲಿದ್ದರೇನು ? ಯಾರ ಸಲುವಾಗಿ ಅದಿರಬೇಕು .....”[೧೭೨] ಇಲ್ಲಿ ಸೂರ್ಯಕಾಂತಿ ಮತ್ತು ನೈದಿಲೆಗಳು ಎತ್ತಿ ಹಿಡಿಯುವ ಮೌಲ್ಯಗಳನ್ನು ಕಾರಂತರು ಮಾನವನ ಜೀವನದೊಂದಿಗೆ ಸಮೀಕರಿಸಿದ್ದಾರೆ. ನೈದಿಲೆಯ ಗೌರವಯುತವಾದ, ಮೌಲ್ಯವನ್ನು, ಸೂರ್ಯಕಾಂತಿ ಅನುಮಾನದ ಮೌಲ್ಯಗಳನ್ನು ಪ್ರತಿನಿಧಿಸುವಂತಹ ಅರ್ಥವನ್ನು ಚಿತ್ರಿಸಿದ್ದಾರೆ. ಕಾರಂತರು ಜೀವನದ ಮೌಲ್ಯಗಳಿಗೆ ಕೊಡುವ ಅರ್ಥವತ್ತಾದ ರೂಪಕಗಳು ಅರ್ಥವತ್ತಾಗಿವೆ. ಸಮಾಜದಲ್ಲಿ ನೈದಿಲೆ ಪ್ರತಿನಿಧಿಸುವ ಮೌಲ್ಯಗಳಿಗೆ ಬಹಳ ಹಿಂದಿನಿಂದಲೂ ಇರುವ ಗೌರವದಿಂದಾಗಿ ಆ ಮೌಲ್ಯಗಳನ್ನು ವ್ಯಕ್ತಿಗಳ ಮೂಲಕ ಚಿತ್ರಿಸುವುದು ಹೆಚ್ಚು ಸುಲಭವಾದ್ದರಿಂದ ಮತ್ತು ನೈದಿಲೆಯ ಮೌಲ್ಯಗಳು ಸೂರ್ಯಕಾಂತಿಯ ಮೌಲ್ಯಗಳಿಗಿಂತಲೂ ಹೆಚ್ಚು ಬೆಲೆಯುಳ್ಳವಾಗಿರುವುದರಿಂದ ಕಾರಂತರು ಇಂತಹ ಆಯ್ಕೆಗಳನ್ನು ಮಾಡುತ್ತಾರೆ. 'ಇನ್ನೊಂದೇ ದಾರಿ' ಕಾದಂಬರಿಯ ಹೊನ್ನಜ್ಜಿಯ ಮಗ ಮಹಾದೇವ ದಾರಿಯಲ್ಲಿ' ಬಿದ್ದ ತೆಂಗಿನಕಾಯಿ ತರುವುದು ನೈತಿಕ ಮೌಲ್ಯವನ್ನು ಉಲ್ಲಂಘನೆ ಮಾಡಿದ್ದರಿಂದ, ಹೊನ್ನಜ್ಜಿ ಗಂಡ ಸರ ಕದ್ದಿದ್ದಕ್ಕೆ ದೇವರೊಂದಿಗೆ ಭಕ್ತಿಯಿಂದ ಮಾತನಾಡಿ ಇಂತಹ ಬುದ್ಧಿಯನ್ನು ಗಂಡನಿಗೆ ಕೊಡಬೇಡ. ಒಳ್ಳೆಯ ಬುದ್ಧಿಯನ್ನು ಕಲಿಸೆಂದು ಬೇಡುತ್ತಾಳೆ. ಅಂತೆಯೇ

ತೆಂಗಿನಕಾಯಿಯ ತಂದ ಮಗನ ಮೇಲೆ ಅನುಮಾನ ವ್ಯಕ್ತಪಡಿಸಿ, ಕದ್ದು ತಂದದ್ದೆಂದು ಭಾವಿಸಿ ''ಹೋಗು, ನಡಿ, ತೊಲಗು ಇಲ್ಲಿಂದ, ನಿನ್ನ ಋಣ ಹರಿಯಿತು ನನಗೆ. ಜನ್ಮ ಜನ್ಮವನ್ನು ಹಾಳು ಮಾಡಿದೆ.... ಹೋಗು ನಡೆ, ಉಪಾಧ್ಯರ ಕಾಲಿಗೆ ಬಿದ್ದು ಕಾಯಿಕೊಟ್ಟು ಬಾ''[೧೭೩] ಮಗನಿಗೆ ಹೇಳಿಕೊಡುವ ನೀತಿಯ ಮೌಲ್ಯ ತುಂಬಾ ಸಮಯೋಚಿತವಾದುದು. ಮಾನವೀಕರಣದ ವಕ್ತೃಗಳೆಂದರೆ ಹಿರಿಯರು ಮತ್ತು ಗೆಳೆಯರೆಂದು ಈ ಹಿಂದೆ ಗುರುತಿಸಲಾಗಿದೆ. ಇಲ್ಲಿ ತಾಯಿ ಮಗನನ್ನು ಮಾನವೀಕರಣಕ್ಕಾಗಿ ಅಣಿಗೊಳಿಸುವ ರೀತಿ ಮಾತ್ರ ಸಂಗತವಾಗಿದೆ. 'ಇದ್ದರೂ ಚಿಂತೆ' ಕಾದಂಬರಿಯಲ್ಲಿ ವಾಣಿಜ್ಯೀಕರಣಗೊಂಡ ಗಣಪತಿ ಹೆಗ್ಗಡೆ ಮತ್ತು ರಾಘವೇಂದ್ರರಾಯರಲ್ಲಿ, ಹೆಗ್ಗಡೆಯವರು ಮಾನವೀಯತೆಯನ್ನು ವ್ಯಾಪಾರದಲ್ಲೂ ತೋರಿಸುತ್ತಾರೆ. ರಾಘವೇಂದ್ರರಾಯರಿಗೆ ಅಂತಹುದರ ಅರಿವು ಮೂಡುವುದಿಲ್ಲ. ಹಾಗೆಂದಾಗ ಹೆಗ್ಗಡೆಯವರಿಗೆ ಹಣದ ಬಗ್ಗೆ ಮೋಹವಿಲ್ಲ ಎಂದಾಗಲಿ ರಾಘವೇಂದ್ರರಾಯರಿಗೆ ಮೋಹವಿದೆ ಎಂದಾಗಲೀ ಅಲ್ಲ. ಆರ್ಥಿಕ ಸ್ಥಾನಮಾನಗಳಿಂದ ಮನುಷ್ಯನ ಸ್ಥಾನವನ್ನು ಅಳೆಯುವ ಪ್ರಯತ್ನ ಮಾಡದೆ, ಅವನ ನೈತಿಕ ಮೌಲ್ಯಗಳಿಂದ ಅಳೆಯುತ್ತಾರೆ. ಸಮಾಜದಲ್ಲಿ ಹಣಕ್ಕಿಂತಲೂ ಮುಖ್ಯವಾದುದು ಗೌರವ. ವ್ಯಕ್ತಿಗೆ ಗೌರವವಿಲ್ಲದೆ ಹಣ ಸಾಕಷ್ಟಿದ್ದರೆ ಅದು ತಿಪ್ಪೆಗಿಂತಲೂ ಕಡೆ. ಹೆಗ್ಗಡೆಯವರು ಮಾನ್ಯತೆ ಕೊಡುವ ಸಾಮಾಜಿಕ ಕಳಕಳಿಯ ಭಾವನೆ ಬಹುಮುಖ್ಯವಾದುದು. ಇಂತಹದೇ ವಿಷಯವನ್ನು ಪ್ರಸ್ತಾಪಿಸುವ 'ಒಂಟಿ ದನಿ' ಕಾದಂಬರಿಯಲ್ಲಿ ಡಾ.ಜಯಂತ ಮತ್ತು ಶಹಾ ಅವರಲ್ಲಿ ಜಯಂತ ಅವರಿಗೆ ಇರುವ ಬೌದ್ಧಿಕತೆ ಮತ್ತು ಮಾನವೀಯ ಮಹತ್ತು ಮೌಲ್ಯಧಾರಿತವಾಗಿದೆಂದು ಕಾಣುತ್ತದೆ. ಆದರೆ ಅದು ಸೋಗಿನ ತತ್ವ ಎಂಬ ಸತ್ಯ ಕಾದಂಬರಿಯ ಕೊನೆಗೆ ಗೊತ್ತಾಗುತ್ತದೆ. ಶಹಾರವರ ಧಾರ್ಮಿಕತೆ ಆಚರಣೆ ಕೂಡ ಸೋಗಿನ ಪಾತಳಿಗಿಳಿಯುತ್ತದೆ. ಇದರಿಂದಾಗಿ 'ಒಂಟಿದನಿ' ಕಾದಂಬರಿಯು 'ಈ ಮಾನವೀಕರಣ ನೆಲೆಗಳ ಅಧ್ಯಯನ'ದಿಂದ ಹೊರಗುಳಿಯುತ್ತದೆ.

'ಸಮೀಕ್ಷೆ' ಕಾದಂಬರಿ ಮತ್ತು 'ಅಳಿದ ಮೇಲೆ' ಕಾದಂಬರಿಗಳು ಕೆಲವೊಂದು ನೆಲೆಗಳಲ್ಲಿ ಸಮಾನ ಅಂತರವನ್ನು ಕಾಯ್ದುಕೊಳ್ಳುತ್ತವೆ. ಎರಡೂ ಕೃತಿಗಳ ಕೇಂದ್ರ ಪ್ರಜ್ಞೆ 'ವ್ಯಕ್ತಿಯ ಮೌಲ್ಯ'. ಅಂತಹ ವ್ಯಕ್ತಿಯ ಮೌಲ್ಯವು ಆರಂಭವಾಗುವ ವೈಯಕ್ತಿತೆಯಿಂದ ಸಾಮಾಜಿಕತೆಯೆಡೆಗೆ ಪರಿಕ್ರಮಗೊಳ್ಳುವ ಪ್ರಕ್ರಿಯೆಯಾಗಿ ಪರೋಪಕಾರೀ ಪಾತಳಿಯ ಮಾನವೀಕರಣವನ್ನು ಪ್ರತಿನಿಧಿಸುತ್ತದೆ. 'ಸಮೀಕ್ಷೆ'ಯ ನಾಯಕ ಶ್ರೀನಿವಾಸ ವಿದ್ಯಾರ್ಥಿಯ ದಿಸೆಯಲ್ಲಿಯೇ ಸಾಮಾಜಿಕ ಕಳಕಳಿಯ ಕನಸುಗಾರನಾಗಿರುತ್ತಾನೆ. ಕಾಲಾನಂತರ ತನ್ನಿಂದ ಸಾಧುವಾದದ್ದನ್ನು ಮಾಡಲು ಹಾಗೂ ಅಸಾಧುವಾದುದನ್ನು ತಿರಸ್ಕರಿಸಲು ನಿಶ್ಚಯಿಸುತ್ತಾನೆ. ಅಂತೆಯೇ 'ಅಳಿದ ಮೇಲೆ'ಯ ನಿರೂಪಕ ಹಿರಿಯ ವ್ಯಕ್ತಿಯಾಗಿದ್ದು ಯಶವಂತರ ಆಣತಿಯಂತೆ ಅವರ ಕೆಲಸಗಳನ್ನು ಮಾಡಿ ಮುಗಿಸುತ್ತಾನೆ. ಇಬ್ಬರಿಗೂ ಫಲಾಪೇಕ್ಷೆಯ ಗೀಳಿಲ್ಲ.

ಶ್ರೀನಿವಾಸ ಕನಸುಗಾರ ಗೆಳೆಯರೊಂದಿಗೆ ಇದ್ದು ಅವರಿಗಿಂತಲೂ ಹೆಚ್ಚು ಮಾನವೀಯತೆ ಮೆರೆಯುತ್ತಾನೆ. ಆದರ್ಶವಾದಿತ್ವವನ್ನು ಮೈಗೂಡಿಸಿಕೊಂಡೂ ನಿಷ್ಠುರ ಪ್ರಜ್ಞೆಯನ್ನು ಬೆಳೆಸಿಕೊಳ್ಳುವ ಶ್ರೀನಿವಾಸ ''ಆದರ್ಶ ಜೀವನದ ಪ್ರೇರಣೆಗಳಿಂದ ಉದ್ದೀಪನಗೊಂಡ ಶ್ರೀನಿವಾಸ ತಾರುಣ್ಯ ಸಂಸಾರ ರಥವನ್ನು ಎಳೆಯ ತೊಡಗಿದ ಮೇಲೆ, ಕೆಲವು ವರ್ಷಗಳ ಕಾಲ ದಿಕ್ಕುಗಾಣದಂತಾಗಿತ್ತು. ಎಳೆತನದಲ್ಲಿ ಏನೇನೋ ಕನಸುಗಳು ಅವನ ಮನಸ್ಸಿನಲ್ಲಿ ತುಂಬಿಕೊಂಡಿದ್ದವು. ತಾನು ಕನಸುಗಾರನಾಗಿ, ಆ ಕನಸುಗಳನ್ನು ನಾಲ್ಕು ಜನರಲ್ಲಿಯೂ ಹಂಚಿ,ದೊಡ್ಡ ಕೆಲಸ ಮಾಡಬೇಕು ಎಂಬ ಬಯಕೆ ಹುಟ್ಟಿದ್ದರಿಂದಲೇ, ಶ್ರೀನಿವಾಸ ಮೊದಲಿಗೆ ಉಪಾಧ್ಯಾಯ ವೃತ್ತಿ ಕೈಗೊಂಡುದು ...... ಮದುವೆಯಾದುದು ಅವನ ಪಾಲಿಗೆ ಒಂದು ಸೋಲು ಅನಿಸಿತು. ಆಡುವ ಮಾತುಗಳ ಪರಿಣಾಮಗಳನ್ನು ಊಹಿಸಿಕೊಳ್ಳಲಾರದ ಆ ಅನನುಭವಿಯ ಪಾಲಿಗೆ, ಅದೊಂದು ನೋವಿನ ಕಾಲವೇ ಆಗಿತ್ತು. ಅದಕ್ಕಾಗಿಯೇ ಅವನು ಗುರು ಪಟ್ಟವನ್ನು ನಾಚಿಕೆಯಿಂದಲೇ ಕಿತ್ತೊಗೆದ. ಆನಂತರ ದೈನಂದಿನ ಜೀವನದಲ್ಲಿಯೇ, ಅವನ ವಿಶಾಲ ಹೃದಯವು ತನ್ನ ನೆಲೆಯನ್ನರಸತೊಡಗಿತು. ಶಾರದೆಯ ಅಭಿಮಾನ, ಆಕಾಂಕ್ಷೆ, ತಮ್ಮನ ದುರ್ನಡತೆ, ಭಾವನಿಗೆ ಬಂದ ಆಪತ್ತು, ಇವೆಲ್ಲವನ್ನು ಕಂಡಾಗ ಆತ- ಒಂದೊಂದು ಜೀವವೂ ಒಳಗಿನ ಮತ್ತು ಹೊರಗಿನ ಹತ್ತಾರು ಪ್ರಭಾವಗಳಿಗೆ ತೊಳಲಾಡುತ್ತಿದೆ - ಎಂದು ಕಂಡುಕೊಂಡ. ಅದರಿಂದ ಸಹನೆಯನ್ನೂ ಕಲಿತ, ಸಹಾನುಭೂತಿಯನ್ನು ಕಲಿತ, ಪರರಿಗೆ ಉಪದೇಶ ಹೇಳುವುದನ್ನು ಬಿಟ್ಟ, ಪರರನ್ನು ತಿಳಿಯುವುದಕ್ಕೆ ಪ್ರಯತ್ನಿಸತೊಡಗಿದ.''[೧೭೩] ಶ್ರೀನಿವಾಸನ ಜೀವನದಲ್ಲಿ ಮತ್ತು ಮಾನವೀಕರಣದ ನಿರ್ಮಾಣದಲ್ಲಿ ಈ ಮಾತು ಬಹುಮುಖ್ಯವಾಗುತ್ತದೆ. ಮಾನವೀಯ ಮೌಲ್ಯಗಳ ಮೂಲತತ್ವಗಳಾದ ಸಹನೆ, ಸಹಾನುಭೂತಿ, ಪರರನ್ನು ಅರ್ಥೈಸಿಕೊಳ್ಳುವ ತತ್ವ ಇವಕ್ಕೂ ಹೆಚ್ಚಾದ ಅನ್ಯರಿಗೆ ಹೇಳುವ ಗೊಡ್ಡು ಉಪದೇಶವನ್ನು ಬಿಟ್ಟುಬಿಡುವ ನೀತಿಗಳನ್ನು ಬೆಳಸಿಕೊಳ್ಳುತ್ತಾನೆ. ಸ್ವಯಂ ಪ್ರೇರಣೆಯಿಂದ ಕೈಗೊಂಡ ಈ ಕಾರ್ಯಗಳೊಂದಿಗೆ ತನ್ನಲ್ಲಿಯ ವೈಚಾರಿಕ ಪ್ರಜ್ಞೆ ಹುಟ್ಟೂರನ್ನು ಬಿಟ್ಟು ನುಗ್ಗೇಹಳ್ಳಿಗೆ ಬಂದಾಗ ಮೊಳೆಯುತ್ತದೆ. ಅವನಲ್ಲಿ ವೈಚಾರಿಕ ಮಾನವತಾವಾದ ಆವಿಷ್ಕಾರಗೊಳ್ಳುತ್ತದೆ. ''.... ಅವನಿಗೆ ಇಷ್ಟವಾಗಿ ಕಂಡು ಬಂದ ಒಂದು ವೃತ್ತಿಯೆಂದರೆ, ಜನಗಳ ಸಾಮೂಹಿಕ ಸಂಸ್ಕಾರಗಳ ಪರಿಶೀಲನೆ. ಅವನು ಹುಟ್ಟಿ ಬೆಳೆದ ಬ್ರಹ್ಮಾವರದಲ್ಲಿ ಊರಿನ ಕಟ್ಟು ಕಟ್ಟಲೆ, ಮದುವೆ, ಮುಂಜಿ, ನಂಬಿಕೆ, ಹರಕೆ ಮೊದಲಾದವುಗಳು - ಹೆಚ್ಚಿನ ಕುತೂಹಲ ಹುಟ್ಟಿಸಿರಲಿಲ್ಲ. ಆ ದೃಷ್ಟಿಯಿಂದ ಈ ಆವರಣ ತುಸು ಬೇರೆಯಾಗಿ ಕಾಣಿಸಿತು. ಇಲ್ಲಿನ ಜನ ಬೇರೆ; ಮದುವೆ, ಚವಲ, ಸಾವು, ಹರಕೆ ಮೊದಲಾದ ಹಲವು ಸಂಸ್ಕಾರಗಳ ರೂಪಗಳೂ ಬೇರೆಯಾಗಿ ಕಾಣಿಸಿದುವು. ಅದರಿಂದಾಗಿ ಅವನ್ನು ಆಸಕ್ತಿಯಿಂದ ವಿಚಾರಿಸುತ್ತಿದ್ದ. ಶಕುನ, ಅಪಶಕುನಗಳಿಂದ ತೊಡಗಿ, ಸಾಂಪ್ರದಾಯಿಕವಾದ, ಆದರೂ ತನಗೆ ಹೊಸದೆನಿಸಿದ ಪ್ರತಿಯೊಂದು ಕಟ್ಟು ಕಟ್ಟಲೆಗಳನ್ನು ಕೇಳುವುದು, ತಿಳಿಯುವುದು - ಅವನ ಕೆಲಸವಾಯಿತು. ''ನಮ್ಮೂರಲ್ಲಿ ಇದರ ಬದಲಿಗೆ ಏನು ಮಾಡುತ್ತಾರೆ? ಯಾಕೆ ಈ ನಂಬಿಕೆ

ಬಂದಿತು?'' ಎಂದು ಅವನ ಮನಸ್ಸು ವಿಚಾರ ಮಾಡುತ್ತದೆ. ಅಷ್ಟಕ್ಕೇನೆ ತೃಪ್ತಿಪಡುವ ಮನಸ್ಸು ಅವನದ್ದಲ್ಲ. ಅವನ್ನೆಲ್ಲ ಸಂಗ್ರಹಿಸಿಬಿಡುತ್ತಿದ್ದ, ಬರೆದು ಇಡುತ್ತಿದ್ದ, ಪ್ರಯೋಜನವಿದ್ದೇ ಇಲ್ಲದೆಯೋ ಪುಸ್ತಕವನ್ನು ತುಂಬಿಸುತ್ತಿದ್ದ. ಅವನ ವಿರಾಮಕ್ಕೆ, ಉತ್ಸಾಹಕ್ಕೆ ಅದು ಸಾಕಷ್ಟು ವಿಸ್ತಾರವಾದ ದಾರಿಯನ್ನೇನೋ ಹಾಕಿಕೊಟ್ಟಿತು.''[೧೭೪] ಎಂಬಲ್ಲಿ ಶ್ರೀನಿವಾಸ ಬೌದ್ಧಿಕ ಪ್ರಜ್ಞೆಯ ಪ್ರತಿಯೊಂದು ಸಾಂಪ್ರದಾಯಿಕ ಘಟನೆಗಳು ವೈಚಾರಿಕತೆಯ ಚೌಕಟ್ಟಿನಲ್ಲಿಟ್ಟು ನೋಡಲು ತೊಡಗಿತೆಂಬುದು ತಿಳಿಯುತ್ತದೆ. ವೈಚಾರಿಕ ಪ್ರಕ್ರಿಯೆಗಳನ್ನು ಅವನು ಸಾಂಘಿಕ ಚಟುವಟಿಕೆಗಳಿಗಿಂತಲೂ ಏಕಾಕಿತನದಿಂದ ಮುನ್ನಡೆಸುತ್ತಾನೆ. ಮಾನವೀಕರಣದ ಕಾರ್ಯಶೀಲತೆಗೆ ಅವನ ಬೌದ್ಧಿಕತೆಯ ಅನುಭವವು ಕಾವು ಕೊಡುತ್ತದೆ. ಮತ್ತು ಅವನಲ್ಲಿಯ 'ಸಾಚಾತನ' ಮಾನವೀಯ ಸಂವೇದನೆಗಳಿಗೆ ಸಾಕ್ಷಿಯಾಗುತ್ತದೆ. ಶ್ರೀನಿವಾಸನಲ್ಲಿ ಸಾಮಾಜಿಕ ಕಳಕಳಿಯನ್ನು ನಾವು ಕಾಣದಿದ್ದರೂ ಸಹ ಅವನಲ್ಲಿಯ ಮೌನ ವೈಚಾರಿಕ ಮಾನವೀಯತೆಯ ಚಿಂತನೆಗೆ ಹಚ್ಚುತ್ತದೆ.

ಸಾಂಪ್ರದಾಯಿಕ ಮಾನವೀಯ ಅಂತಃಕರಣ, ಹೃದಯವಂತಿಕೆಯನ್ನು ಪ್ರಚುರಪಡಿಸಲು ಕಾರಂತರು ಯುವ ಪಾತ್ರಗಳಿಗಿಂತಲೂ ಮುದುಕಿಯರ ಪಾತ್ರಗಳನ್ನು ಆಯ್ದುಕೊಂಡಿದ್ದಾರೆ. ಮುದುಕಿಯರಲ್ಲಿ ವೈಚಾರಿಕತೆ ಕೊರೆ ಇದ್ದದ್ದನ್ನು ಮಾನವೀಯ ಅಂತಃಕರಣ, ಹೃದಯವಂತಿಕೆಯ ಆರ್ದ್ರತೆಯಿಂದ ನಯವಾಗಿ ಮರೆಯಿಸುತ್ತಾರೆ. ಅವರಲ್ಲಿನ ಮಾನವೀಯ ತುಡಿತಗಳು ತುಂಬ ಆರೋಗ್ಯವಂತ ಮತ್ತು ಸೂಕ್ಷ್ಮಸಂವೇದನೆಯ ಫಲಗಳೆಂಬಂತೆ ಮೂಡಿ ಬಂದಿದೆ. ಇದರಿಂದಾಗಿ ಅವರ ಬಾಳನ್ನು ಕಟ್ಟಿಕೊಟ್ಟ ನಂಬಿಕೆಗಳು ಉಂಟುಮಾಡಬಹುದಾದ ತಡೆಗಳನ್ನು ದಾಟಿ ಫಲಿಸಬಲ್ಲ ಮಾನವೀಯ ಸ್ಪಂದನ, ಅಂತಃ ಕರಣ ಶುದ್ಧಿ ಆ ಪಾತ್ರಗಳಿಗೆ ಸಾಧ್ಯವಾಗುತ್ತದೆ. ಹೀಗಾಗಿ ಪ್ರಾಮಾಣಿಕತೆಯೊಂದಿಗೆ ಉದಾತ್ತತೆಯನ್ನೂ ಮೆರೆಸುವುದರಿಂದ ಕಾರಂತರ ಮುದುಕಿಯರು ಆದರ್ಶ ಜೀವಿಗಳಾಗಿ ಕಾಣುತ್ತಾರೆ. 'ಮೂಕಜ್ಜಿ ಕನಸುಗಳ' ಮೂಕಜ್ಜಿ, 'ಮರಳಿ ಮಣ್ಣಿಗೆ'ಯ ಸರಸೋತಿ, 'ಅಳಿದ ಮೇಲೆ'ಯ ಪಾರ್ವತಿ, 'ಬೆಟ್ಟದ ಜೀವ'ದ ಶಂಕರಿ ಇವರ ಜೀವನವೆಲ್ಲ ಸಾಂಪ್ರದಾಯಿಕ ಮಾನವೀಯತೆಯನ್ನು ಮೆರೆಯುತ್ತದೆ.

ಕೆಲವು ಸಂಕೀರ್ಣ ಸಂದರ್ಭಗಳಲ್ಲಿ ಅಥವಾ ಅನಿವಾರ್ಯದ ಪರಿಸ್ಥಿತಿಗಳಲ್ಲಿ ಈ ಸಾಂಪ್ರದಾಯಿಕ ನಂಬಿಕೆಗಳು, ಮಾನವೀಯ ಅಂತಃಕರಣವು ಪಲ್ಲಟಗೊಳ್ಳುವುದನ್ನು ಕಾರಂತರು, ಗುರುತಿಸಿದ್ದಾರೆ. ಈ ಪಲ್ಲಟತೆಯು ಜಾತಿ ಸಮಾಜದ ಕಟ್ಟಳೆಯಿಂದಲೋ, ಅವರ ಹಟವಾದಿ ಸ್ವಭಾವದಿಂದಲೋ ಆವಿಷ್ಕಾರಗೊಂಡಿರುತ್ತದೆ. 'ಚೋಮನ ದುಡಿ'ಯ ಸಂಕಪ್ಪಯ್ಯನ ತಾಯಿ, 'ಸಮೀಕ್ಷೆ'ಯ ವಾಸುದೇವ ಪ್ರಭುವಿನ ತಾಯಿ, 'ಇನ್ನೊಂದೇ ದಾರಿ'ಯ ಜಾನಕಿ - ಪಾತ್ರಗಳು ಮಾನವೀಯ ಅಂತಃಕರಣದ ಪಲ್ಲಟವನ್ನುಂಟುಮಾಡುತ್ತವೆ. ಈ ಪಲ್ಲಟತೆಯನ್ನ ಮುದುಕಿಯರು ಮೊದಲಿನ ಮುದುಕಿಯರಂತೆ ಆದರ್ಶನೀಯರಾಗುವುದಿಲ್ಲ. ಘಟನೆಗಳ ನಡುವೆ ಎಲ್ಲೋ ಒಂದು ಕಡೆ ಮರೆಯಾಗುತ್ತಾರೆ ಮತ್ತು

ಓದುಗ ವರ್ಗ ಆ ಕಡೆಗೆ ಮನಸ್ಸು ಹಾಯಿಸದಂತೆ ಅವರನ್ನು ದೂರೀಕರಿಸುವ ರೀತಿಯಲ್ಲಿ ಅವರ ವ್ಯಕ್ತಿತ್ವವನ್ನು ಮೊದಲೇ ಅನಾವರಣಗೊಳಿಸಿರುತ್ತಾರೆ.

ಕಾರಂತರ ಕಾದಂಬರಿಗಳಲ್ಲಿ ವ್ಯಕ್ತಿಗಳು ನಾಯಕರಾಗುವುದಿಲ್ಲ. ಆ ಕಾದಂಬರಿಯ 'ಮಾನವೀಯ ಸಮಸ್ಯೆ' - 'ಮಾನವೀಯ ವಸ್ತು' ನಾಯಕ ಸ್ಥಾನವನ್ನು ಅಲಂಕರಿಸುತ್ತದೆ. ಪ್ರತಿ ಕಾದಂಬರಿಯ ಮುಖ್ಯಪಾತ್ರ ಅಂತಹ ಸಮಸ್ಯೆ - ವಸ್ತುಗಳ ಪಾತ್ರಧಾರಿಗಳೇ ಹೊರತು ಅವರೇ ನಾಯಕರಲ್ಲ. 'ಸರಸಮ್ಮನ ಸಮಾಧಿ' ಯಲ್ಲಿ "ಲೈಂಗಿಕ ಪ್ರಶ್ನೆಯೆ ಇದರ ನಾಯಕ"[೧೭೫] ಸ್ಥಾನದಲ್ಲಿದೆ. 'ಮೂಕಜ್ಜಿಯ ಕನಸು'ಗಳಲ್ಲಿ 'ಮಾನವ ಸಂಸ್ಕೃತಿಯ ನಂಬಿಕೆಗಳು' ನಾಯಕತ್ವವನ್ನು ವಹಿಸುತ್ತವೆ. 'ಚೋಮನ ದುಡಿ'ಯಲ್ಲಿ 'ದಲಿತನ ದುಡಿಮೆಯ ಕಳಕಳಿ - ಭೂಮಿಯನ್ನು ಉಳುಮೆ ಮಾಡುವ ಆಕಾಂಕ್ಷೆ' ನಾಯಕನಾಗಿದೆ. 'ಬೆಟ್ಟದ ಜೀವ' ಕಾದಂಬರಿಯಲ್ಲಿ 'ಕಳೆದುಕೊಂಡ ಸಂಬಂಧವನ್ನು (ಮನೆಬಿಟ್ಟು ಹೋದ ಮಗನನ್ನು ಮನೆಗೆ ಬಂದ ನಿರೂಪಕನಲ್ಲಿ ಕಂಡುಕೊಳ್ಳುವ) ಹುಡುಕುವ ಸಮಸ್ಯೆ' ನಾಯಕ ಪಟ್ಟವನ್ನಲಂಕರಿಸಿದೆ. 'ಮರಳಿ ಮಣ್ಣಿಗೆ'ಯಲ್ಲಿ ಇದ್ದು ಇಲ್ಲದಂತಿರುವ ಸಂಬಂಧ, ತಲೆಮಾರುಗಳ ವಂಶಾವಳಿಯ ಸಮಸ್ಯೆ ನಾಯಕ ಸ್ಥಾನದಲ್ಲಿವೆ. 'ಸಮೀಕ್ಷೆ'ಯಲ್ಲಿ 'ಆದರ್ಶವಾದಿತ್ವ' ಮುಖ್ಯ ಸ್ಥಾನವನ್ನು ವಹಿಸುತ್ತದೆ. 'ಮೈಮನಗಳ ಸುಳಿಯಲ್ಲಿ', 'ಮನಸ್ಸಿನ ತಾಕಲಾಟಗಳು' ಮುಖ್ಯವಾಗಿವೆ. 'ಔದರ್ಯದ ಉರುಳಲ್ಲಿ', 'ಮನುಷ್ಯನ ಮೂಲಭೂತ ಹಕ್ಕಾದ ಸ್ವಾತಂತ್ರ್ಯ' ಮುಖ್ಯವಾಗಿದೆ. 'ಕುಡಿಯರ ಕೂಸುವಿ'ನಲ್ಲಿ 'ಬುಡಕಟ್ಟಿನ ಜನತೆ ಮಾನವೀಯತೆಗಾಗಿ ಜೀವ ತೇಯುವ' ವಸ್ತು ಮುಖ್ಯವಾಗಿದೆ. ಹೀಗೆ ಮಾನವನ ವಿವಿಧ ಮುಖಗಳೇ ನಾಯಕತ್ವ ವಹಿಸಿರುವುದನ್ನು ಅವರ ಕಾದಂಬರಿಗಳಲ್ಲಿ ಕಾಣಬಹುದು.

ಗಂಡು - ಹೆಣ್ಣುಗಳ ನಡುವಿನ ದಬ್ಬಾಳಿಕೆಯ, ವ್ಯಭಿಚಾರದ ಸಂಬಂಧಗಳನ್ನು ಅರ್ಥಪೂರ್ಣ ಸಂಬಂಧವೆಂದು ಕಾರಂತರು ತಿಳಿಯುವುದಿಲ್ಲ. ಏಕೆಂದರೆ, ದಬ್ಬಾಳಿಕೆ, ಅತ್ಯಾಚಾರ - ವ್ಯಭಿಚಾರಗಳು ಅಮಾನುಷವಾಗುತ್ತವೆ. ಆದುರಿಂದಲೇ ಕಾರಂತರು ವಿವಾಹಬಾಹಿರ ಮತ್ತು ವಿವಾಹೇತರ ಸಂಬಂಧ ಮಾನವೀಯ ಸಂಬಂಧವಾಗಿದ್ದಲ್ಲಿ ಅವನ್ನು ಸಹಾನುಭೂತಿಯಿಂದ ಒಪ್ಪಿಕೊಂಡು, ಅರ್ಥಪೂರ್ಣ ಸಂಬಂಧವೆಂದು ಚಿತ್ರಿಸುತ್ತಾರೆ. ಅವರ ಈ ಧೋರಣೆ 'ಸರಸಮ್ಮನ ಸಮಾಧಿ'ಯಿಂದಲೇ ನಿರೂಪಿತವಾಗುತ್ತದೆ. ಕಾರಂತರದ್ದು ಮುಖ್ಯವಾಗಿ ಜೀವಪರವಾದ ಮಾನವೀಯ ಧೋರಣೆ. ಅವರ ಪಾತ್ರಗಳಲ್ಲಿ ನಡೆಯುವ ವಿವಾಹ ಬಾಹಿರ ಸಂಬಂಧಗಳು ಆ ಪಾತ್ರಗಳ ವ್ಯಕ್ತಿತ್ವಕ್ಕೆ ಅಗತ್ಯವಾದದ್ದು. ದಬ್ಬಾಳಿಕೆಯಿಂದ ಪಾರಾಗಿ, ಜೀವಸೆಲೆಯನ್ನು ಉಳಿಸಿಕೊಳ್ಳುವ ಒಂದೇ ಒಂದು ಸಾಧನವಾಗಿ ಇವರಿಗೆ ಅದು ಬೇಕಾಗುತ್ತದೆ. 'ಸರಸಮ್ಮನ ಸಮಾಧಿ'ಯ ಚಂದ್ರಯ್ಯ - ಸುನಾಲಿನಿಯರ ಸಂಬಂಧ, ಭಾಗೀರಥಿ - ಚಂದ್ರಯ್ಯನ ನಡುವೆ ಸಂಭವಿಸಬಹುದಾಗಿದ್ದ ಸಂಬಂಧವನ್ನು ನೆನಪಿಸಿಕೊಳ್ಳಬಹುದು.

‘ಮೈಮನಗಳ ಸುಳಿಯಲ್ಲಿ’, ‘ನಂಬಿದವರ ನಾಕ, ನರಕ’, ‘ಧರ್ಮರಾಯನ ಸಂಸಾರ’, ‘ಕೇವಲ ಮನುಷ್ಯರು’- ಮೊದಲಾದ ಕೃತಿಗಳಲ್ಲಿನ ಹೆಣ್ಣು - ಗಂಡುಗಳ ಸಂಬಂಧವನ್ನು ನೆನೆಯಬಹುದು.

‘ಅಳಿದ ಮೇಲೆ’ ಕಾದಂಬರಿಯಲ್ಲಿ ಒಬ್ಬ ವ್ಯಕ್ತಿಯ ಇತಿಹಾಸದ ಹಿನ್ನೆಲೆಯನ್ನು ತೆಗೆದುಕೊಂಡರೆ ‘ಮೂಕಜ್ಜಿಯ ಕನಸು’ಗಳಲ್ಲಿ ಇಡೀ ಮಾನವ ಕುಲದ ಇತಿಹಾಸಕ್ಕೆ ಕೈ ಹಾಕಿದ್ದಾರೆ. ಭೂತ, ವರ್ತಮಾನ ಮತ್ತು ಭವಿಷ್ಯಗಳನ್ನು ಸಮೀಕರಣಗೊಳಿಸುವ ಪ್ರಯತ್ನ ಮೂಕಜ್ಜಿಯಲ್ಲಿದೆ. ಅತೀಂದ್ರಿಯ ಶಕ್ತಿ ಮತ್ತು ತಾಂತ್ರಿಕಾಂಶಗಳನ್ನು ಬಳಸಿಕೊಳ್ಳುವುದರಿಂದ ಮಾನವೇತಿಹಾಸವನ್ನು ಸಮಗ್ರವಾಗಿಯಲ್ಲದಿದ್ದರೂ ಆಂಶಿಕವಾಗಿ ನೋಡಿದ್ದಾರೆ. “ಕಾರಂತರು ಮೂಕಜ್ಜಿಯನ್ನು ಕನಸು ಕಾಣುವ ಯಂತ್ರವನ್ನಾಗಿ ಮಾಡದೆ ಅವಳನ್ನು ಸಂಪೂರ್ಣವಾಗಿ ‘ಮಾನವೀಕರಣ’ ಮಾಡಿ, ನಮ್ಮ - ನಿಮ್ಮ ನಡುವೆ ಓಡಾಡುವ ಪ್ರಜ್ಞಾವಂತ ಮುದುಕಿಯನ್ನಾಗಿ ಪರಿವರ್ತಿಸಿದ್ದಾರೆ ....... ಮೂಕಜ್ಜಿಯಲ್ಲಿ ಇತಿಹಾಸದ ತುಣುಕುಗಳು ಒಂದು ತಾತ್ವಿಕ ಪ್ರತಿಪಾದನೆಗಾಗಿ, ಒಂದು ಮೌಲ್ಯ ಪ್ರತಿಪಾದನೆಗಾಗಿ ಉಪಯೋಗಿಸಲ್ಪಟ್ಟಿದೆ ಎಂಬುದನ್ನು ನೆನಪಿನಲ್ಲಿಡಬೇಕು”[೧೭೬] ಎಂಬ ಶಾಂತಿನಾಥ ದೇಸಾಯಿ ಅವರ ಮಾತನ್ನು ಗಮನಿಸಬಹುದು.

ಒಟ್ಟಿನ ಮೇಲೆ, ಮೂಕಜ್ಜಿಯೆಂದರೆ ಅಸ್ತಿತ್ವವಾದೀ ಮಾನವತಾವಾದವನ್ನು ಪ್ರತಿಪಾದಿಸುವ ತತ್ವಜ್ಞಾನಿ. ಮೂಕಜ್ಜಿಯ ಎಲ್ಲ ತಾತ್ವಿಕ ಚರ್ಚೆ ಅಸ್ತಿತ್ವವಾದೀ ಮಾನವತಾವಾದದ ತತ್ವ - ದರ್ಶನದ ಚೌಕಟ್ಟಿನಲ್ಲಿಯೇ ನಡೆಯುತ್ತದೆ.”[೧೭೭]

ಒಂದು ರೀತಿಯಿಂದ ಕಾರಂತರ ಎಲ್ಲ ಕಾದಂಬರಿಗಳೂ ಥೀಸಿಸ್ ಕಾದಂಬರಿಗಳು. ಆದರೆ ಕೆಲವು ಉತ್ಕೃಷ್ಟ ಥೀಸಿಸ್ ಕಾದಂಬರಿಗಳು: ‘ಅಳಿದ ಮೇಲೆ’ ಅಂಥ ಕಾದಂಬರಿಗಳಲ್ಲೊಂದು. ಅವರ ಥೀಸಿಸ್ ಮಾನವತಾವಾದವನ್ನು ಬಿಟ್ಟು ಹೋಗುವುದಿಲ್ಲವಾದ್ದರಿಂದ ಅವರು ಮಾನವೀ ಅವಸ್ಥೆಯ (Human Condition) ಬಗ್ಗೆ ಮಾತನಾಡಿದರೂ ಕೊನೆಗೆ ಸಾಮಾಜಿಕ ವ್ಯವಸ್ಥೆ (Social System)ಯನ್ನು ಬಿಟ್ಟು ಹೋಗುವುದಿಲ್ಲ.[೧೭೮]

‘ಬಾಳು ನನಗೆ ಮುಖ್ಯ, ಬಾಳನ್ನು ತಿಳಿಯಬೇಕಾದ ಸಾಧನಗಳೂ ನನಗೆ ಅಷ್ಟೆ ಪ್ರಾಮುಖ್ಯ.’[೧೭೯] ಬಾಳನ್ನು ತಿಳಿಸುವ ಸಾಧನಗಳಲ್ಲಿ ಮಾನವೀಯತೆಯೇ ಪ್ರಮುಖವಾದುದು. ಮಾನವೀಯತೆಯನ್ನೊಳಗೊಂಡ ಅರ್ಥಪೂರ್ಣ ಬದುಕಿನ ಅನ್ವೇಷಣೆಯಲ್ಲಿ ಲಭ್ಯವಾಗುವ ಜೀವನಾನುಭವಗಳನ್ನು ಶೋಧಿಸಿ ಮಂಡಿಸುವ ಕಾಯಕವನ್ನು ಕಾರಂತರು ‘ಬೆಟ್ಟದ ಜೀವ’, ‘ಚೋಮನ ದುಡಿ’, ‘ಮರಳಿ ಮಣ್ಣಿಗೆ’, ‘ಅಳಿದ ಮೇಲೆ’ಗಳಂತಹ ಕಾದಂಬರಿಗಳ ಮೂಲಕ ಸಾಧಿಸಿದ್ದಾರೆ. ಬೆಟ್ಟದ ಜೀವದಲ್ಲಿ ತಪ್ಪಿಸಿಕೊಂಡ ಹಸುವನ್ನು ಹುಡುಕುತ್ತಾ ಹೊರಟ ಶಿವರಾಮ

ಹಸುವಿನ ಜೊತೆಗೆ ಮಾನವೀಯತೆಯನ್ನು ಅರಸುತ್ತಾನೆ. ಗೋಪಾಲಯ್ಯ - ಶಂಕರಿಯರ ಮನೆ ಸೇರಿ ಅಪ್ಪಟ ಮಾನವೀಯ ಗುಣಗಳನ್ನು ಪತ್ತೆ ಹಚ್ಚುತ್ತಾನೆ. ಆದರೆ ಅವನ ಕಳೆದ ಹಸು ಸಿಗುವುದಿಲ್ಲ. ಕಾಣೆಯಾದ ಮಗನನ್ನು ಗೋಪಾಲಯ್ಯ ದಂಪತಿಗಳು ಹುಡುಕುತ್ತಿದ್ದಾರೆ. ಮಗನ ಕಳೆದುಕೊಂಡ ದುಃಖವನ್ನು ಶಿವರಾಮನನ್ನು ಆದರಿಸುವುದರ ಮೂಲಕ ಮರೆಯುತ್ತಾರೆ. ಕಾದಂಬರಿಯಲ್ಲಿ ದ್ವಿಮುಖವಾಗಿ ಮಾನವೀಕರಣದ ಪ್ರಕ್ರಿಯೆ ಸಂಚರಣೆಗೊಳ್ಳುತ್ತದೆ. ಗೋಪಾಲಯ್ಯ ದಂಪತಿಗಳು ಶಿವರಾಮನಲ್ಲಿಯೂ ಶಿವರಾಮನು ಗೋಪಾಲಯ್ಯ ದಂಪತಿಗಳಲ್ಲಿಯೂ ಮಾನವೀಯತೆಯನ್ನು ಪಾರಸ್ಪರಿಕವಾಗಿ ಪಡೆದುಕೊಳ್ಳುತ್ತಾರೆ. ಶಿವರಾಮನ ನಾಗರಿಕ ಮನಸ್ಸು ಗೋಪಾಲಯ್ಯನನ್ನು ಮೊದಮೊದಲು ಸಭ್ಯಗೃಹಸ್ಥನೆಂದಷ್ಟೆ ಗ್ರಹಿಸಿತ್ತು. ಕೊನೆ ಕೊನೆಗೆ ಆತನ ಹಿರಿಮೆಯನ್ನು ಕೊಂಡಾಡುತ್ತಾನೆ. "ನನಗೆ ಗೋಪಾಲಯ್ಯ ಅಪೂರ್ವವಾದ ವ್ಯಕ್ತಿಯಾಗಿ ತೋರಿತು. ಆ ಮನುಷ್ಯ ಸುತ್ತಲಿನ ಜೀವನವನ್ನು ಸೂಕ್ಷ್ಮವಾಗಿ ಅಳೆಯಬಲ್ಲ ವ್ಯಕ್ತಿಯಾಗಿ ಕಂಡಿತು. ಚಿಂತೆಯಿಲ್ಲ ಬೆಟ್ಟದ ಹೊಟ್ಟೆಯಲ್ಲಿ ಹುಟ್ಟಿದ ಮನುಷ್ಯ, ಬೆಟ್ಟದಷ್ಟು ಎತ್ತರ ಬೆಳೆದಿದ್ದಾನೆ. ಮನಸ್ಸೂ ಹಾಗೆ, ಮಾನವು ಹಾಗೆ ಎಂದು ತೋರಿತು" ಹೀಗೆ ಆ ವ್ಯಕ್ತಿ ಮನಸ್ಸಿನ ಶ್ರೀಮಂತಿಕೆಯಲ್ಲಿ ಬೆಟ್ಟದಂತೆ ಬೆಳೆದಿದ್ದಾನೆ. ಪ್ರಕೃತಿಯ ಜೊತೆಗೆ ಮಾನವ ಸಮ್ಮಿಳನಗೊಂಡಿದ್ದಾನೆ. ಆ ದಂಪತಿಗಳ ನೋವಿನಲ್ಲಿ ತಾನೂ ಭಾಗೀದಾರನಾಗುತ್ತ ಬೆಳೆದ ಶಿವರಾಮನೂ ಮಾನವೀಯ ಹೃದಯವಂತಿಕೆಯ ನಿರ್ಮಾತೃವಾಗುತ್ತಾನೆ.

'ಬೆಟ್ಟದ ಜೀವ', 'ಚೋಮನದುಡಿ' ಮತ್ತು 'ಮರಳಿ ಮಣ್ಣಿಗೆ' - ಮೂರೂ ಕಾದಂಬರಿಯ ಪ್ರಕೃತಿ ಒಂದೇ ತೆರನಾಗಿದ್ದುದು ಎಂದು ಮೇಲ್ನೋಟಕ್ಕೆ ಕಾಣಿಸುತ್ತದೆ. ಆದರೆ ಅವುಗಳಲ್ಲಿನ ಭೇದ ತೀರಾ ಸೂಕ್ಷ್ಮವಾಗಿದೆ. 'ಮರಳಿ ಮಣ್ಣಿಗೆ'ಯಲ್ಲಿನ ಪ್ರಕೃತಿ - ಮನುಷ್ಯನೊಂದಿಗೆ ಬೆಸೆದುಕೊಳ್ಳುವ ಸನ್ನಾಹ ಮಾಡುತ್ತಿದೆ. ಕೊನೆಗೆ ಸಾಧಿಸಿಕೊಳ್ಳುತ್ತದೆ. 'ಬೆಟ್ಟದ ಜೀವ'ದಲ್ಲಿ ಆರಂಭದಿಂದಲೂ ಮಾನವೀಕರಣಕ್ಕೆ ಅಂಟಿಕೊಂಡೇ ಸಾಗುತ್ತದೆ. 'ಚೋಮನ ದುಡಿ' ಮಾತ್ರ ಇದಕ್ಕಿಂತ ಭಿನ್ನವೆನ್ನುವ ರೀತಿಯಲ್ಲಿ ಸ್ಪಂದಿಸುತ್ತದೆ. ಮೌಲ್ಯಗಳಿಗೆ ಮಾರಕ (ಚೋಮದ ಕುಟುಂಬದ ಅವನತಿಯನ್ನು ಗಮನದಲ್ಲಿಟ್ಟಕೊಂಡು ಹೇಳಲಾಗಿದೆ)ವೆನ್ನುವಂತೆ ತೊಡಗಿಕೊಳ್ಳುತ್ತದೆ."'ಬೆಟ್ಟದ ಜೀವ'ದ ಮಾನವೀಯ ಮೌಲ್ಯಗಳು ಇನ್ನೂ ಸಜೀವ ಮೌಲ್ಯಗಳು, ಅವಕ್ಕೊಂದು ಸಾರ್ವಕಾಲಿಕ ಸತ್ಯತೆಯಿದೆ ಎಂದೆನಿಸಿದರೆ ಈ ಕೃತಿಯ ಘನತೆ ಇನ್ನೂ ಹೆಚ್ಚುತ್ತದೆ."[೧೮೦]

ಸಮಾಜದಿಂದ ದೂರವಿರುವ ಕಾದಂಬರಿ 'ಬೆಟ್ಟದ ಜೀವ' ಮಾನವೀಕರಣ ಸಾಧಿಸುವುದಾದರೂ ಹೇಗೆ? ನಿಸರ್ಗದೊಂದಿಗೆ ಅನುಸಂಧಾನಗೊಂಡು ಬೆಟ್ಟದಂತಹ ಜೀವಗಳನ್ನು ಸೃಷ್ಟಿಸುತ್ತದೆ. ಕೀರ್ತಿನಾಥ ಕುರ್ತಕೋಟಿ ಅವರು ಒಂದೆಡೆ ಅಭಿಪ್ರಾಯ ಪಡುವಂತೆ "ಕಾರಂತರು ರಾಜಕಾರಣ ಇಲ್ಲವೆ ತತ್ವಶಾಸ್ತ್ರದಂಥ ಯಾವುದೇ ಸಾಹಿತ್ಯೇತರವಾದ ಮಾನದಂಡವನ್ನು ಉಪಯೋಗಿಸುವುದಿಲ್ಲ. ಒಂದು

ಅನುಭವಕ್ಕೆ ಇನ್ನೊಂದು ಅನುಭವ ಪ್ರಮಾಣವಾಗುವಂತೆ ಜೋಡಿಸಿ, ಅವುಗಳ ಪರಸ್ಪರ ಪ್ರತಿಕ್ರಿಯೆಯಲ್ಲಿ ಸತ್ಯ ತಾನಾಗಿ ಮೈದೋರುವಂತೆ ಈ ಕೃತಿಗಳ ಬಂಧವಿರುತ್ತದೆ. ಅನುಭವಗಳ ತಾರತಮ್ಯ ಕಾರಂತರಲ್ಲಿ ಆಳವಾಗಿ ಬೇರೂರಿದ ಮಾನವತಾವಾದದ ಪ್ರಜ್ಞೆಯಿಂದ ನಿರ್ಣೀತವಾಗುತ್ತದೆಂಬುದನ್ನು ಬೇರೆ ಹೇಳುವ ಕಾರಣವಿಲ್ಲ".[೧೮೧]

ಇವರ ಕಾದಂಬರಿಗಳ ಇನ್ನೊಂದು ಬಹುಮುಖ್ಯ ಮೌಲ್ಯವೆಂದರೆ ವ್ಯಕ್ತಿತ್ವ ವಿಕಾಸ. ಪರಂಪಣೀತ ಸಮಾಜವು ಅಲ್ಪಸ್ವಲ್ಪ ಬದಲಾವಣೆಯನ್ನು ಕಾಣಬೇಕಿದ್ದರೆ ಅದು ವ್ಯಕ್ತಿಗಳ ಬದಲಾವಣೆಯಿಂದಲೇ ಹೊರತು ವ್ಯವಸ್ಥೆಯ ಬದಲಾವಣೆಯಿಂದಲ್ಲ. ವ್ಯವಸ್ಥೆಯ ಗುರುತ್ವವನ್ನು ಮೀರಬಲ್ಲಂತಹ ವ್ಯಕ್ತಿತ್ವಗಳು ಇದ್ದೇ ಇರುತ್ತವೆ. ಇಲ್ಲದಿದ್ದರೆ ತಯಾರು ಮಾಡಬೇಕಾದುದು ಅತ್ಯಗತ್ಯ. 'ಸಮೀಕ್ಷೆ'ಯ ಶ್ರೀನಿವಾಸ, 'ಅಳಿದ ಮೇಲೆ'ಯ ಶಂಭು ಹೆಗ್ಗಡೆ, 'ಶನೀಶ್ವರನ ನೆರಳಲ್ಲಿ'ಯ ಶಂಕರ ಜೋಯಿಸರು, 'ಸ್ವಪ್ನದ ಹೊಳೆ'ಯ ಕಿಟ್ಟಣ್ಣ ಮೊದಲಾದವರು ನಿದರ್ಶನರಾಗುತ್ತಾರೆ. ನೈತಿಕವಾದ ನಿಲುವುಳ್ಳ ಕಾರಂತರ ಅನೇಕ ಕಾದಂಬರಿಗಳ ಮುಖ್ಯ ಕಾಳಜಿಯೆಂದರೆ ಮನುಷ್ಯ ಮತ್ತು ಅವನ ಮೂಲಭೂತ ಸ್ವಭಾವ. ಮನುಷ್ಯನ ಮನಸ್ಸು ಮತ್ತು ಸ್ವಭಾವದಿಂದಲೇ ಸಮಾಜದ ಬದಲಾವಣೆ ಸಾಧ್ಯ. ಹೀಗಾಗಿ ಕಾದಂಬರಿಗಳ ಪಾತ್ರಗಳು ಇತ್ಯಾತ್ಮಕವಾಗಿ ಬೆಳೆಯುತ್ತವೆ. ಮನುಷ್ಯ ಒಳ್ಳೆಯವನಾಗಿ, ಪ್ರಾಮಾಣಿಕನಾಗಿದ್ದರೆ ಸಮಾಜ ಸಹ ಆರೋಗ್ಯಕರವಾಗಿರುತ್ತದೆ. ಮನದಲ್ಲಿನ ಬದಲಾವಣೆಯೇ ಬಹುಮುಖ್ಯವೆನ್ನುವುದಕ್ಕೆ 'ನಂಬಿದವರ ನಾಕ, ನರಕ' ಕಾದಂಬರಿಯಲ್ಲಿನ ಸತ್ಯಭಾಮೆ-ವಾಗ್ದೇವಿಯರ ಪಾತ್ರಗಳನ್ನು ಗಮನಿಸಬಹುದು. ವಾಗ್ದೇವಿ ಯಾರದ್ದೋ ಮೋಸಕ್ಕೆ ಬಲಿಯಾಗಿ, ತನಗೆ ಗೊತ್ತಿಲ್ಲದೆ, ಬೇರೆ ಜಾತಿಯವನನ್ನು ಮದುವೆಯಾಗಬೇಕಾಗುತ್ತದೆ. ಆದರೆ ತಾನು ಬೆಳೆದು ಬಂದ ರೀತಿಯಿಂದಾಗಿ ಮನಸ್ಸಿನಲ್ಲಿ ಉಂಟಾದ ಸಾಂಪ್ರದಾಯಿಕ ಭಾವನೆ, ಜಾತೀಯ ಸಮಸ್ಯೆಗಳಿಂದ ಹೊರಬರಲು ಆಕೆಗೆ ಸಾಧ್ಯವಾಗುವುದಿಲ್ಲ. ಹೀಗಾಗಿ ಕೊರಗುತ್ತಾಳೆ, ಭ್ರಮಿಷ್ಠಳಾಗುತ್ತಾಳೆ. ಜೀವನವನ್ನು ನರಕ ಮಾಡಿಕೊಳ್ಳುತ್ತಾಳೆ. ಸತ್ಯಭಾಮೆಯೂ ವಿನಾ ಕಾರಣಕ್ಕಾಗಿ ಸಂಕಟಪಡುವಳು; ಗಂಡನಿಂದ ದೂರವಾದವಳು. ಆದರೆ ತನ್ನ ಮನಸ್ಸನ್ನು ಸಾಂಪ್ರದಾಯಿಕತೆ, ಮೂಢನಂಬಿಕೆಗಳ ವಿರುದ್ಧ ನಿಲ್ಲಿಸುತ್ತಾಳೆ. ಇಲ್ಲಿ ವಾಗ್ದೇವಿ-ಸತ್ಯಭಾಮೆಯರು ಬದುಕುತ್ತಿರುವ ಸಮಾಜ ಹಾಗೂ ಅವರು ಬೆಳೆದು ಬಂದ ರೀತಿ ಒಂದೇ. ಆದರೆ ಅವರ ಮನಸ್ಸಿನ ಬೆಳವಣಿಗೆಯಿಂದ ಭಿನ್ನರಾಗಿದ್ದಾರೆ. 'ಸ್ವಪ್ನದ ಹೊಳೆ'ಯಲ್ಲಿನ ಕಿಟ್ಟಣ್ಣನೂ ಸಹ ಈ ಮಾತಿಗೆ ಸಾಕ್ಷಿಯಾಗಿದ್ದಾನೆ. ವ್ಯಕ್ತಿಯ ಮನಸ್ಸು ಕೆಟ್ಟದಾಗಿ ಯೋಚಿಸತೊಡಗಿದರೆ, ಅವನಿಂದ ಉಂಟಾಗುವ ಕಾರ್ಯಗಳು ಕೂಡ ಕೆಟ್ಟದಾಗಿಯೇ ಇರುತ್ತವೆ. 'ಮರಳಿ ಮಣ್ಣಿಗೆ' ಕಾದಂಬರಿಯ ಲಚ್ಚ ಮತ್ತು 'ನಂಬಿದವರ ನಾಕ, ನರಕ'ದಲ್ಲಿನ ಸುಬ್ರಾಯರು ಕಪಟಿಗಳಾಗಿ, ನಂಬಿದವರಿಗೆ ಮೋಸ ಮಾಡುತ್ತಾ, ತಮ್ಮ ಜೀವನವನ್ನೇ ಹಾಳುಗೆಡವಿಕೊಂಡವರು. ವಿವೇಚನೆಯಿಲ್ಲದೆ ನಡೆದುಕೊಳ್ಳುವ

ಇವರು ಸಮಾಜಕ್ಕೆ ಕೊಡುವುದಿರಲಿ ತಾನೇ ಕಳೆದುಕೊಳ್ಳುವುದು ಸಾಕಷ್ಟಾಗಿದೆ. ಲಚ್ಚ ತಂದೆಗೆ, ತಾಯಿಗೆ, ಹೆಂಡತಿಗೆ ಕೊನೆಗೆ ಮಗನಿಗೂ ಅಸಹ್ಯವಾಗಿ ಕಾಣಿಸುತ್ತಾನೆ. ಇಂತಹವರಿಂದ ಕಾರಂತರು ನಿರೀಕ್ಷಿಸುವುದು ಅಷ್ಟಕಷ್ಟೆ. ಸಂಬಂಧಗಳು ವಿವಾಹದಿಂದಾಗಿ ಒಂದುಕಡೆ ಕೆಡುತ್ತವೆ. ಇನ್ನೊಂದು ಕಡೆ ಸರಿಯಾಗಿರುತ್ತವೆ. ಕಾರಂತರು ಕೆಡುವುದನ್ನೆ ಹೆಚ್ಚು ಗಮನಿಸಿದ್ದಾರೆ. ಗಂಡು-ಹೆಣ್ಣು ಒಬ್ಬರಿಗೊಬ್ಬರು ದಬ್ಬಾಳಿಕೆಯಿಂದ ಅಡಿಯಾಳಾಗಿ ಜೀವಿಸಬೇಕಾಗುತ್ತದೆ. ಇದರಿಂದಾಗಿ ಅರ್ಥಪೂರ್ಣ ಸಂಬಂಧ ಏರ್ಪಡುವುದಿಲ್ಲ, ಅಮಾನುಷವೆನಿಸುತ್ತದೆ. ಹೀಗಾಗಿ ವಿವಾಹೇತರ ಅಥವಾ ವಿವಾಹಬಾಹಿರ ಸಂಬಂಧಗಳು ಮಾನವೀಯವಾಗಿದ್ದಲ್ಲಿ ಅವನ್ನು ಸಹಾನುಭೂತಿಯಿಂದ ಒಪ್ಪಿಕೊಳ್ಳುತ್ತಾರೆ. ಕಾರಂತರ ಈ ಕಾಳಜಿ ಜೀವಪರವಾದುದು. ಆ ಪಾತ್ರಗಳ ವ್ಯಕ್ತಿತ್ವ ನಿರ್ಮಾಣಕ್ಕೆ ಅಗತ್ಯ ಜೀವಸೆಲೆಯೆಂದು ಭಾವಿಸುತ್ತಾರೆ. ಉದಾಹರಣೆಗೆ 'ಸರಸಮ್ಮನ ಸಮಾಧಿ'ನು ಚಂದ್ರಯ್ಯ-ಸುನಾಲಿನಿ ಅಥವಾ ಭಾಗೀರಥಿ-ಚಂದ್ರಯ್ಯನ ನಡುವಿನ ಸಂಬಂಧವನ್ನು ನೆನಪಿಸಿಕೊಳ್ಳಬಹುದು. ಚಂದ್ರಯ್ಯ-ಸುನಾಲಿನಿಯನ್ನೂ, ಭಾಗೀರಥಿ-ಚಂದ್ರಯ್ಯನನ್ನೂ ಇಷ್ಟಪಟ್ಟರೀತಿ ಮಾನವೀಯ ಸಂಬಂಧಕ್ಕೆ ಸೇರುತ್ತದೆ. 'ಅಳಿದ ಮೇಲೆ'ಯಲ್ಲಿನ ಯಶವಂತ-ಧಾರೇಶ್ವರದ ಸರಸಿಯರ ಸಂಬಂಧ, 'ಮೈಮನಗಳ ಸುಳಿ'ಯಲ್ಲಿನ ಮಂಜುಳೆ-ಉಳ್ಳರರ ಸಂಬಂಧಗಳು. 'ನಂಬಿದವರ ನಾಕ, ನರಕ'ದಲ್ಲಿನ ಸತ್ಯಭಾಮೆ ತನ್ನ ಗಂಡನ ತಮ್ಮನ ಬಗ್ಗೆ ತೋರುವ ಲೈಂಗಿಕ ಬಯಕೆ-ಅವಳ ಮಟ್ಟಿಗೆ ಜೀವ ಪರವಾದದ್ದು. ಈ ಸಂಬಂಧ ವಾಸ್ತವ ಸಮಾಜದಲ್ಲಿ ಹಾದರದ ಸಂಬಂಧವಾಗಿರಬಹುದು. "ಗಂಡು ಮತ್ತು ಹೆಣ್ಣು ಇಬ್ಬರೂ ತಮ್ಮೊಳಗಿನ ಸಂಬಂಧದ ಮೂಲಕ ಉಜ್ವಲವಾದಾಗ ಮಾತ್ರ ಆ ಸಂಬಂಧಕ್ಕೆ ಅರ್ಥ ಬರುತ್ತದೆ. ಇಲ್ಲವಾದರೆ, ಅದು ವಿವಾಹದ ಹೊರಗಿನದ್ದಿರಲಿ-ಒಳಗಿನದ್ದಿರಲಿ, ಅಮಾನುಷವಾಗುತ್ತದೆ"ಎಂಬ ಲಾರೆನ್ಸ್ ಅವರ ದೃಷ್ಟಿಕೋನವನ್ನು ಕಾರಂತರು ಬೆಂಬಲಿಸುತ್ತಾರೆ.

ಇಲ್ಲಿಯವರೆಗೆ ಸಮೀಕ್ಷೆಗೊಂಡಿರುವ 'ಚೋಮನದುಡಿ'(೧೯೩೩), 'ಸರಸಮ್ಮನ ಸಮಾಧಿ'(೧೯೩೭), 'ಮರಳಿಮಣ್ಣಿಗೆ'(೧೯೪೧), 'ಬೆಟ್ಟದ ಜೀವ'(೧೯೪೩), 'ಔದಾರ್ಯದ ಉರುಳಲ್ಲಿ'(೧೯೪೭), 'ಸಮೀಕ್ಷೆ'(೧೯೫೬), 'ಅಳಿದ ಮೇಲೆ'(೧೯೬೦), 'ಸ್ವಪ್ನದ ಹೊಳೆ'(೧೯೬೬), 'ಮೂಕಜ್ಜಿಯ ಕನಸುಗಳು'(೧೯೬೮), 'ಮೈಮನಗಳ ಸುಳಿಯಲ್ಲಿ'(೧೯೭೦)- ಕಾದಂಬರಿಗಳು ಮಾನವೀಕರಣದ ಪ್ರಕ್ರಿಯೆಗಳನ್ನು ನಿರ್ವಚಿಸುತ್ತವೆ. ಕಾರಂತರ ಆರಂಭದ ಕಾದಂಬರಿಗಳು ಪತ್ತೇದಾರೀ ಹಾಗೂ ಸಾಮಾಜಿಕ ವಸ್ತುವನ್ನು ಕಥನ ಕ್ರಿಯೆಗೆ ಆಯ್ಕೆ ಮಾಡಿಕೊಂಡಿದ್ದರಿಂದ ಮಾನವತಾವಾದದ ಬೆಳಕು ಅಷ್ಟಾಗಿ ಕಾಣಿಸುತ್ತಿಲ್ಲ. 'ಚೋಮನದುಡಿ'ಯ ಚೋಮನು ಮಾನವೀಕರಣಕ್ಕೆ ವಕ್ತಾರನಾಗುವ ಬದಲು ಅಮಾನವೀಯ ಪದ್ಧತಿಯ ದಾಳವಾಗಿ ಉರುಳುತ್ತಾನೆ. ಅಮಾನವೀಯ ಪದ್ಧತಿಯನ್ನು ಎತ್ತಿ ತೋರಿಸಿ ಅದನ್ನು ಮಾನವೀಯಗೊಳಿಸಬೇಕೆಂಬ ಕಾರಂತರ ಸದಾಶಯ ಸಂಕಪ್ಪಯ್ಯನವರ ತಾಯಿಯಂತಹ ಸಂಪ್ರದಾಯವಾದಿಗಳು ಇರುವವರೆಗೂ ಸಾಧ್ಯವಾಗುತ್ತಿಲ್ಲ. ಹಾಗೆಯೇ ಜಾತಿಪದ್ಧತಿ ಎಂದಿನವರೆಗೂ

ಸಮಾಜದಲ್ಲಿ ನೆಲೆಗೊಂಡಿರುತ್ತದೋ ಅಲ್ಲಿಯವರೆಗೂ ಮಾನವೀಕರಣದ ಸಮಾಜ ನಿರ್ಮಾಣಗೊಳ್ಳುವುದು ಅಸಾಧ್ಯ. ಈ ಜಾತಿ ಪದ್ಧತಿ ನಿರ್ಮೂಲಗೊಳ್ಳಬೇಕಾದರೆ ಚುನಾವಣೆಗಳು, ರಾಜಕೀಯ ನಾಯಕರ ನಿಲುವುಗಳು ಜನಗಣತಿಯಲ್ಲಿ ದಾಖಲಾಗುವ ಜಾತಿ ಕಾಲಂಗಳು ಮತ್ತು ಮೀಸಲಾತಿಯ ನಿಯಮಗಳು ಬದಲಾಗಬೇಕು. ಚೋಮನ ಉಳುಮೆಯ ಇರಾದೆ ಕೂಡ ಭಾರತೀಯ ಸಮಾಜದ ಪ್ರಮುಖ ಸಮಸ್ಯೆಯಾಗಿದೆ. ಈ ಸಮಸ್ಯೆಯ ನಿರ್ಮೂಲನೆಯಿಂದ ಮಾನವೀಕರಣ ಸಾಧ್ಯ.

'ಸರಸಮ್ಮನ ಸಮಾಧಿ'ಯ ಚಂದ್ರಯ್ಯ, ಬೆಳ್ಳಕ್ಕ, ನಾಗವೇಣಿಯರ ಲೈಂಗಿಕ ತೃಷೆ, 'ಮೈಮನಗಳ ಸುಳಿಯಲ್ಲಿ'ನ ಮಂಜುಳೆಯ ದೈಹಿಕ ಕಾಮನೆ, 'ಕೇವಲ ಮನುಷ್ಯರಲ್ಲಿ'ನ ಶಾಂತಿಯ ಮಕ್ಕಳನ್ನು ಪಡೆಯುವ ಅಭೀಪ್ಸೆ, 'ಹೆತ್ತಳಾ ತಾಯಿ'ಯ ಕುಸುಮೆಯ ಮಗುವಿನ ವಾಂಛೆ- ಈ ಮೊದಲಾದವುಗಳೆಲ್ಲ ಕಾಮವು ಮಾನವೀಕರಣದ ಸೃಷ್ಟಿಯ ಬಿಂದುವಾಗಿದೆ ಎಂಬುದನ್ನು ಸಾಬೀತು ಮಾಡುತ್ತವೆ.

'ಮರಳಿಮಣ್ಣಿಗೆ'ಯ ಮೊದಲ ತಲೆಮಾರಿನ ರಾಮ ಐತಾಳ, ಸರಸೋತಿ, ಪಾರೋತಿ, ನಾಗವೇಣಿ ಹಾಗೂ ಮೂರನೇ ತಲೆಮಾರಿನ ರಾಮ- ಇವರು ಮಾನವೀಕರಣದ ಪ್ರಕ್ರಿಯೆಗಳಲ್ಲಿ ಸಕ್ರಿಯ ಕಾರ್ಯಕರ್ತರಾಗಿದ್ದಾರೆ. ಐತಾಳ ಸಂಪ್ರದಾಯಿಕ ಮೌಲ್ಯಗಳೊಂದಿಗೆ ನಿರೂಪಗೊಂಡ ಕೃತಿ ರಾಮನ ಆಧುನಿಕ ಮೌಲ್ಯಗಳೊಂದಿಗೆ ಕೊನೆಗೊಳ್ಳುತ್ತದೆ. ರಾಮನ ನಗರ ಜೀವನವು ಹೊಸ ಆಸೆಗಳೊಂದಿಗೆ ಮೂರ್ತರೂಪ ತಾಳುತ್ತದೆ. ಅವನ ಹಾಗೂ ಅವನ ತಾಯಿ ನಾಗವೇಣಿಯ ಸಹನೆ-ಸಹಾನುಭೂತಿ, ಔದಾರ್ಯದ ಹೃದಯವಂತಿಕೆ, ಕಷ್ಟದ ಸಹನಶೀಲತೆಗಳು ಓದುಗನನ್ನು ತುದಿಗಾಲಿನಲ್ಲಿ ನಿಲ್ಲಿಸಿ ಆಲಿಸುವಂತೆ ಮಾಡುತ್ತವೆ. ಅವರ ಜೀವನದ ಆದರ್ಶ ಓದುಗರಿಗೂ ತಾಕಬೇಕಾದುದು ಅಗತ್ಯ.

'ಬೆಟ್ಟದ ಜೀವ'ದಲ್ಲಿನ ಮಾನವೀಯ ಮೌಲ್ಯದ ಹುಡುಕಾಟ ಶಿವರಾಮನ ಮೂಲಕ ನಡೆದಾಗ 'ಮಾನವೀಯ ಮೌಲ್ಯಗಳ ನಿಧಿ' ಗೋಪಾಲಯ್ಯನಲ್ಲಿ ಗೋಚರಗೊಳ್ಳುತ್ತದೆ. ಗೋಪಾಲಯ್ಯನಲ್ಲಿ ಮಗನನ್ನು ಕಳೆದುಕೊಂಡ ದುಃಖವಿದ್ದಾಗ್ಯೂ ಅದನ್ನು ಮರೆತು ಯಾವಾಗಲೂ ಹಸನ್ಮುಖಿಯಾಗಿ ಎಲ್ಲರೊಂದಿಗೂ ಚಟುವಟಿಕೆಯಿಂದ ನಲಿದಾಡುವ ಕ್ರಿಯೆ ಆಪ್ಯಾಯಮಾನವೆನಿಸುತ್ತದೆ. ಶಂಕರಮ್ಮನಲ್ಲಿಯ ದುಃಖ ಎಂತಹ ಕರುಳನ್ನೂ ಚುರುಗುಟ್ಟಿಸುತ್ತದೆ. ಅವಳು ಮಗನಿದ್ದೂ ಇಲ್ಲದಂತಿರುವ ಯಾತನೆಯನ್ನು ಅನುಭವಿಸುವುದು ವಿಚಿತ್ರವೇ ಸರಿ. ಇಂತಹುದೇ ಪರಿಸ್ಥಿತಿಯನ್ನು ಮರಳಿ ಮಣ್ಣಿಗೆಯ ಪಾರೋತಿ ಎದುರಿಸುತ್ತಾಳೆ. ನಾಗವೇಣಿಯನ್ನು ಮದುವೆಯಾಗಿ ಬಿಟ್ಟು ಹೋದ ಲಚ್ಚ ದೂರದಲ್ಲಿಯೇ ಉಳಿಯುತ್ತಾನೆ. ಅವನು ಹಿಂತಿರುಗಿ ಬಂದರೂ ಬೇಡವೆನ್ನುವ ಸ್ಥಿತಿ ಅವಳದು. ನಾಗವೇಣಿಗೆ ಕೂಡ ಹೆಸರಿಗೆ ಮಾತ್ರ ಗಂಡನಿದ್ದಾನೆ-ತಂದು ಹಾಕುವುದಕ್ಕಾಗಲಿ, ಕಷ್ಟ-ಸುಖ ನೋಡುವುದಕ್ಕಾಗಲಿ ಇಲ್ಲ.

ಸ್ವಾತಂತ್ರ್ಯ ಚಳುವಳಿಯ ಕಾವನ್ನು ಒಡಲಲ್ಲಿಟ್ಟುಕೊಂಡು ಹೊರಬಂದ ಕಾದಂಬರಿಗಳಲ್ಲಿ 'ಔದಾರ್ಯದ ಉರುಳಲ್ಲಿ' ಮುಖ್ಯವಾಗುತ್ತದೆ. ರಾಷ್ಟ್ರೀಯ ಸೇವೆ ಹಾಗೂ ನೆರೆಹಾವಳಿಯ ಸಮಸ್ಯೆಯನ್ನು ಮಾನವೀಯ ನೆಲೆಯಲ್ಲಿ ನಿರೂಪಿಸುವುದರಿಂದ ನನ್ನ ಅಧ್ಯಯನದಲ್ಲಿ ಪ್ರಮುಖ ಪಾತ್ರವಹಿಸುತ್ತದೆ. 'ಮೂಜನ್ಮ'-ಕಾದಂಬರಿ ಕೂಡ ೧೯೪೨ರ ಸ್ವಾತಂತ್ರ್ಯ ಚಳುವಳಿಯನ್ನು ಕೇಂದ್ರವಾಗಿಟ್ಟುಕೊಂಡು ಹೊರಬಂದಿದೆ. ಈ ಕಾದಂಬರಿ "ಅತಂತ್ರ ಭಾರತ, ಸ್ವತಂತ್ರ ಭಾರತ ಮತ್ತು ಕುತಂತ್ರ ಭಾರತ"ದ ರಾಜಕೀಯ ಚಿತ್ರಣವನ್ನು ನೀಡುವುದರಲ್ಲಿ ಯಶಸ್ವಿಯಾಗಿದೆ. ಈ ಎರಡು ಕಾದಂಬರಿಗಳು ಸ್ವಾತಂತ್ರ್ಯಪೂರ್ವದ ಸ್ಥಿತ್ಯಂತರವನ್ನು ಚಿತ್ರಿಸಿದರೆ 'ಅದೇ ಊರು, ಅದೇ ಮರ' ಕಾದಂಬರಿಯು ಸ್ವಾತಂತ್ರ್ಯಾನಂತರದ ನಾಲ್ಕು ದಶಕಗಳ ಸ್ಥಿತ್ಯಂತರಗಳನ್ನು ಅವಲೋಕಿಸುತ್ತದೆ. 'ಗೊಂಡಾರಣ್ಯ' ಕಾದಂಬರಿಯು ಸಂಸ್ಥಾನಿಕ ರಾಜಕಾರಣವನ್ನು ಅನಾವರಣಗೊಳಿಸುತ್ತದೆ. ಚುನಾವಣೆಯ ಗೊಂದಲ, ರಾಜಕಾರಣಿಗಳ ಆರ್ಭಟಗಳೂ ಆಶ್ರಯ ಪಡೆದಿವೆ. ಈ ನಾಲ್ಕು ಕಾದಂಬರಿಗಳು ರಾಜಕೀಯ ಚಿತ್ರಣವನ್ನು ನೀಡಿದರೆ, 'ನಾವು ಕಟ್ಟಿದ ಸ್ವರ್ಗ' ಕಾದಂಬರಿಯು ರಾಜಕೀಯ ವಿಡಂಬನೆಯ ವಸ್ತುವನ್ನು ಒಳಗೊಂಡಿದೆ.

ಕಾರಂತರ ಸ್ವಾತಂತ್ರ್ಯ ಪೂರ್ವದ ಕಾದಂಬರಿಗಳ ನಾಯಕರ ಮಾನವೀಕರಣ ಈ ರೀತಿ ಇದ್ದರೆ ಸ್ವಾತಂತ್ರ್ಯಾನಂತರದ ಮಾನವೀಕರಣ ಇನ್ನೊಂದು ತೆರನಾಗಿರುತ್ತದೆ. ಈ ಎರಡರ ನಡುವಿನ ವ್ಯತ್ಯಾಸ ಗಮನಾರ್ಹವಾಗಿಲ್ಲದಿದ್ದರೂ ಭಾರತ ದಾಸ್ಯತ್ವದಲ್ಲಿದ್ದ ಸಂದರ್ಭದ ಸಮಸ್ಯೆಗಳಿಗೆ ಕಾದಂಬರಿಗಳ ನಾಯಕರು ಸ್ಪಂದಿಸಿದ್ದಾರೆ.

'ಸಮೀಕ್ಷೆ' ಮತ್ತು 'ಅಳಿದ ಮೇಲೆ' ಕಾದಂಬರಿಗಳು ಜೀವನದ ಸಾರ್ಥಕತೆಯ ಪ್ರಶ್ನೆಯನ್ನೆತ್ತಿಕೊಂಡು ಸಾಗುತ್ತವೆ. ಅಳಿದವರ ಸಾರ್ಥಕತೆಯನ್ನು ಪರಾಂಬರಿಸುವ ಕಾರ್ಯವನ್ನು ಎರಡನೆಯದು ಮಾಡಿದರೆ, ಉಳಿದವರ ಜೀವನ ಸಾರ್ಥಕ್ಯವನ್ನು ಪರಿಚಲನಗೊಳಿಸುವ ಕೆಲಸವನ್ನು 'ಸಮೀಕ್ಷೆ' ಮಾಡುತ್ತದೆ. ಅಳಿದ ಯಶವಂತರಾಯರು, ಉಳಿದ ಶ್ರೀನಿವಾಸ ಮಾನವೀಕರಣದ ಪ್ರಕ್ರಿಯೆಗಳನ್ನು ತಮ್ಮ ಹಾಗೂ ತಮ್ಮವರ ಮಧ್ಯೆ ಚಲಾಯಿಸುತ್ತಾರೆ. ಯಶವಂತರಿಗೆ ನಿರೂಪಕ ಕಾರಂತರು ಪ್ರತಿನಿಧಿಯಾಗಿ ಅವರ ಜೀವನ ವಿಧಾನಗಳ ಶೋಧ ನಡೆಸುತ್ತಾರೆ. ಶ್ರೀನಿವಾಸ ತನ್ನ ಜೀವನ ವಿಧಾನಗಳ ಅನುಭವಿಕ ಹಾಗೂ ಶೋಧಕ ತಾನೇ ಆಗಿ ನಿಯುಕ್ತನಾಗಿದ್ದಾನೆ. ಸಹಾಯಕರಾಗಿ ವಾಸುದೇವ, ಸೂರ-ಕಾಳಿ, ಗಂಗತ್ತೆಯರು ಆವಿರ್ಭವಿಸುತ್ತಾರೆ. ಆದರೆ ಅಳಿದ ಮೇಲೆಯಲ್ಲಿ ಇಂತಹ ಸಹಾಯಕರ ಬದಲು ಮಾನವೀಕರಣದ ಫಲಾನುಭವಿಗಳಾಗಿ ಪಾರ್ವತಮ್ಮ, ಮಂಜಯ್ಯನವರು ಅವತರಿಸುತ್ತಾರೆ. ಯಶವಂತರ ದಿನಚರಿ, ಪತ್ರ-ಚಿತ್ರಗಳು ಅವರ ಜೀವನದ ಮಾನವೀಯ ಮೌಲ್ಯ ತಿಳಿದುಕೊಳ್ಳುವ ನಿದರ್ಶನಗಳಾದರೆ, ಸಮೀಕ್ಷೆಯಲ್ಲಿ ಶ್ರೀನಿವಾಸನ ಬೃಹತ್ ಜೀವನವೇ ಸಾಕ್ಷಿಯಾಗಿದೆ. ಯಶವಂತ ಮತ್ತು ಶ್ರೀನಿವಾಸ

ಇಬ್ಬರ ಅನ್ವೇಷಣೆಯ ದಾರಿ ಒಂದೇ-ಅದು 'ಅಳಿದ ಮೇಲೆ ಉಳಿಯುವುದು ಯಾವುದು?' ಎಂಬ ಪ್ರಶ್ನೆಯ ಉತ್ತರ. ಜೀವನದ ಸಾಫಲ್ಯವೇ ಅವರ ಧ್ಯೇಯ. ಯಶವಂತರ ಔದಾರ್ಯ, ಸಹನೆ-ಸಮಾಧಾನ, ಹೃದಯ ವೈಶಾಲ್ಯ, ಕಷ್ಟ ಸಹಿಷ್ಣುತೆಗಳು ಶ್ರೀನಿವಾಸನಲ್ಲೂ ಕಾಣುತ್ತವೆ. ಶ್ರೀನಿವಾಸ ಜೀವಂತ ನಾಯಕನಾಗಿ ಮಾನವೀಕರಣದ ವಕ್ತಾರನಾಗಿದ್ದಾನೆ. ಯಶವಂತ ಅಳಿದ ನಾಯಕನಾಗಿ ಅದೇ ಮಾನವೀಯ ಮೌಲ್ಯಗಳ ವಾರಸುದಾರನಾಗುತ್ತಾರೆ. 'ಜಾರುವ ದಾರಿಯಲ್ಲಿ' ಕಾದಂಬರಿಯ ಶಿವಪ್ಪ ಕೂಡ ಸಮೀಕ್ಷೆಯ ಶ್ರೀನಿವಾಸನನ್ನು ಹೋಲುತ್ತಾನೆ. ಶಿವಪ್ಪ ವೈದ್ಯ ವೃತ್ತಿಯಲ್ಲಿರುತ್ತಾನೆ. ಬರಗಾಲ, ಯುದ್ಧದ ಸಂದರ್ಭದಲ್ಲಿ ಬಡವರಿಗೆ ಔಷಧಿ ಒದಗಿಸಿ ಸಹಾಯ ಮಾಡುತ್ತಾನೆ. ಶ್ರೀನಿವಾಸನ ಇನ್ನೊಂದು ಮುಖವಾಗಿ ಕಾರ್ಯನಿರ್ವಹಿಸುತ್ತಾನೆ.

'ಸ್ವಪ್ನದ ಹೊಳೆ'ಯ ಕೃಷ್ಣರಾವ್‌ನ ತ್ಯಾಗಜೀವನ 'ಸಮೀಕ್ಷೆ' ಕಾದಂಬರಿಯ ವಾಸುದೇವನ ತ್ಯಾಗಜೀವನ ತೀರಾ ಭಿನ್ನವಾಗಿ ಕಾಣಿಸುತ್ತವೆಯಾದರೂ ಮಾನವೀಕರಣದ ಸಂದರ್ಭದಲ್ಲಿ ಒಂದೇ ಪಾತಳಿಯಲ್ಲಿ ನಿಲ್ಲುತ್ತವೆ. ಕೃಷ್ಣರಾವ್‌ನು ತನ್ನ ಕಾಲೇಜಿನ ಸಹೋದ್ಯೋಗಿಯನ್ನೇ ಮೋಹಿಸಿ ಮೋಸ ಹೋದ ಬನ್ನಿಯನ್ನು ಮದುವೆಯಾಗಿ ಅವಳಿಗೆ ಬಾಳುಕೊಡುತ್ತಾನೆ. ಅದೇ ರೀತಿ ವಾಸುದೇವ ವೇಶ್ಯಾಕುಲದ ಕನ್ಯೆಯಾದ ಕುಸುಮೆಯನ್ನು ಮದುವೆಯಾಗಿ ಆದರ್ಶ ಮೆರೆಯುತ್ತಾನೆ. ಸ್ವಪ್ನದ ಹೊಳೆಯ ಕೃಷ್ಣರಾವ್‌ನು ಅಧ್ಯಾಪಕನಾಗಿ ತನ್ನ ವಿದ್ಯಾರ್ಥಿ ಮಿತ್ರರಿಗೆ ಮಾನವೀಯ ಮೌಲ್ಯಗಳ ಅನುಷ್ಠಾನಕ್ಕೆ ಸಹಾಯ ಮಾಡುತ್ತಾನೆ.

'ಮೂಕಜ್ಜಿಯ ಕನಸುಗಳು' ಕಾದಂಬರಿಯಲ್ಲಿನ ಮೂಕಜ್ಜಿ ಧರ್ಮ ನಿರಪೇಕ್ಷ ಮಾನವತೆಯನ್ನು ಹಾಗೂ ಸಮಾಜವಾದೀ ಮಾನವತೆಯನ್ನು ಮೆರೆಯುತ್ತಾಳೆ. ಸುಬ್ರಾಯ-ನಾಗಿ-ರಾಮಣ್ಣ ಅವಳ ಮಾನವೀಕರಣದ ನಿಯೋಗಿಗಳಾಗಿದ್ದಾರೆ. ಮೂಕಜ್ಜಿಯು ತೋರುವ ಆದಾರಣೀಯ ವಿಚಾರಗಳು ಸಂಪ್ರದಾಯಿಕ ಚೌಕಟ್ಟನ್ನು ಪಡೆದರೂ ನವಯುಗದ ಚಲಾವಣೆಯ ನಾಣ್ಯಗಳಾಗುತ್ತವೆ. ಅವಳ ಪ್ರತಿ ನಡವಳಿಕೆಯೂ ಮಾನವೀಯ ಚಿಂತನೆಗೆ ಗ್ರಾಸವಾಗುತ್ತವೆ.

'ಮೈ ಮನಗಳ ಸುಳಿಯಲ್ಲಿ' ಕಾದಂಬರಿಯು ವಿಶಿಷ್ಟ ಸ್ಥಾನವನ್ನು ಪಡೆಯುತ್ತದೆ. ವೇಶ್ಯೆಯಲ್ಲಿ ಮಾನವತೆಯನ್ನು ಹುಡುಕಲು ಸಾಧ್ಯವೇ? ಎಂಬ ಪ್ರಶ್ನೆಯಿಂದಲೇ ಆರಂಭಿಸಿದರೆ ಅದಕ್ಕೆ 'ಸಾಧ್ಯ' ಎಂದು ಉತ್ತರ ಹೇಳುವ ಮಂಜುಳೆ ಸ್ಪಷ್ಟ ನಿದರ್ಶನ. 'ಸೂಳೆ' ಯಾವಾಗಲೂ ಹಣ-ಆಸ್ತಿ ನುಂಗುವ ಪುರುಷನನ್ನು 'ಅರ್ಥ'ಹೀನನನ್ನಾಗಿ ಮಾಡುವಳು' ಎಂಬೆಲ್ಲ ನುಡಿಗಟ್ಟುಗಳಿದ್ದಾಗ್ಯೂ ಮಂಜುಳೆ ಅವನ್ನು ತೊರೆದು ನಿಲ್ಲುತ್ತಾಳೆ. ಮಂಜುಳೆ ಕೆಲವೊಮ್ಮೆ ಗರತಿಯರಿಗಿಂತಲೂ ಹೆಚ್ಚಾಗಿ ನಡೆದುಕೊಳ್ಳುತ್ತಾಳೆ. ಅವಳು ಪುರುಷರಲ್ಲಿ ಮಾನವೀಕರಣ ಕಂಡರೆ, ಉಳ್ಳೂರರು, ಪೈಗಳು, ಸ್ವಾಮಿ ಲಕ್ಷ್ಮಣತೀರ್ಥರು ಅವಳಲ್ಲಿ ಮಾನವೀಕರಣವನ್ನು ಕಾಣುತ್ತಾರೆ.

‘ನಿರ್ಭಾಗ್ಯ ಜನ್ಮ’ ಕಾದಂಬರಿಯಲ್ಲಿ ಮನೋರಮೆ ಎಂಬ ವೇಶ್ಯೆಯು ತನ್ನ ಸಹೋದರನ ಮೂಲಕ ಹೆಣ್ಣುಗಳನ್ನು ವೇಶ್ಯಾವೃತ್ತಿಗೆ ಎಳೆಯುತ್ತಿರುತ್ತಾಳೆ. ಅವರ ಬಲಿಗೆ ಭಾಗ್ಯಲಕ್ಷ್ಮಿಯ ಗಂಡ ಆನಂದ ಅವನ ಬಲಿಗೆ ಬಿದ್ದು ಸಂಸಾರದ ವಿಷಯದಲ್ಲಿ ಭಾಗ್ಯಲಕ್ಷ್ಮಿಯನ್ನು ನಿರ್ಗತಿಕಳನ್ನಾಗಿ ಮಾಡುತ್ತಾನೆ. ಆನಂದನ ವೇಶ್ಯಾ ಸಹವಾಸ ಕುಟುಂಬವನ್ನೇ ಹಾಳುಮಾಡಿರುತ್ತದೆ. ಭಾಗ್ಯಲಕ್ಷ್ಮಿಯನ್ನೂ ಅಪಹರಿಸಿ ವೇಶ್ಯವೃತ್ತಿಗೆ ಎಳೆಯಲು ಪ್ರಯತ್ನಿಸುತ್ತಾರೆ. ಆದರೆ ಅವಳ ಗಟ್ಟಿತನದಿಂದ ಅದು ಕೈಗೂಡುವುದಿಲ್ಲ. ಅದೇ ಜಾಗಕ್ಕೆ ಆನಂದನೂ ಬಂದು ಭಾಗ್ಯಲಕ್ಷ್ಮಿಯನ್ನು ಕೂಡುತ್ತಾನೆ. ತನ್ನ ತಪ್ಪಿನ ಅರಿವಾಗಿ ವೇಶ್ಯೆ ಮನೋರಮೆಯನ್ನು ತಂಗಿಯೆಂದು ಸ್ವೀಕರಿಸಿ-ಭಾಗ್ಯಲಕ್ಷ್ಮಿಯನ್ನು ಸತಿದೇವಿಯನ್ನಾಗಿ ಮನೆಗೆ ಕರೆದುಕೊಂಡು ಹೋಗಿ ಮಾನವೀಯತೆ ಮೆರೆಯುತ್ತಾನೆ. ಸಾಮಾಜಿಕ ಕಾದಂಬರಿಯಾದ್ದರಿಂದ ಮಹತ್ವದ ಕಾದಂಬರಿಯಾಗಿ ಬೆಳಕಿಗೆ ಬಂದಿಲ್ಲ.

‘ಕನ್ಯಾ ಬಲಿ’ ಅಥವಾ ‘ಸೂಳೆಯ ಸಂಸಾರ’ ಎಂಬ ಕಾದಂಬರಿ ಕೂಡ ವೇಶ್ಯಾ ಜಗತ್ತಿನ ವಿಮುಖತೆಯನ್ನು ಪರಿಚಯಿಸುತ್ತದೆ. ವೇಶ್ಯೆಯೊಬ್ಬಳು ತನ್ನ ತಂದೆಗೆ ತನ್ನ ಮೈ ಮಾರಿಕೊಳ್ಳುವಂತಹ ಪರಿಸ್ಥಿತಿ ಎದುರಾದಾಗ ತನ್ನ ಜೀವನವನ್ನೇ ಬಲಿಕೊಡುತ್ತಾಳೆ. ಮಾಲತಿ ಬಡತನದ ಬೇಗೆಯಲ್ಲಿ ಬೆಂದು ವೇಶ್ಯಾಕುಲ ಪ್ರವೇಶ ಪಡೆಯುತ್ತಾಳೆ. ಆಕಸ್ಮಿಕವಾಗಿ ಬಂದ ಪುರುಷನೊಬ್ಬ ಅವಳ ದೇಹವನ್ನು ಬಯಸುತ್ತಾನೆ. ಅವನು ತನ್ನ ತಂದೆ ಎಂದು ತಿಳಿದಾಗ ಒಳಹೋಗಿ ಮಗುವಿನೊಂದಿಗೆ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಅವನು ಉನ್ಮತ್ತನಾಗಿ ಒಳ ಹೋಗಿ ಅಪ್ಪಿಕೊಳ್ಳಲು ಹೋಗುತ್ತಾನೆ. ದೇಹ ತಣ್ಣಗಾಗಿದ್ದಲ್ಲದೆ ಕೊರಳಲ್ಲಿಯ ತನ್ನ ಪುತ್ರಿಯ ಕರಿಮಣಿ ಸರ ಕಂಡು ಬೆರಗಾಗುತ್ತಾನೆ. ವೇಶ್ಯಾ ಜೀವನವು ತಂದೊಡ್ಡುವ ಸಮಸ್ಯೆಯನ್ನು ಹಾಗೂ ಅದರಿಂದ ಪಾರಾಗಿ ಮಾನವೀ ಜೀವನದ ಜಯವನ್ನು ಕಾದಂಬರಿ ಎತ್ತಿ ತೋರಿಸುತ್ತದೆ.

‘ಹೆತ್ತಳಾ ತಾಯಿ’ ಕಾದಂಬರಿಯಲ್ಲಿ ಗಂಡನಿಂದ ಎರಡು ಬಾರಿ ಗರ್ಭಧರಿಸಿದರೂ ಮಕ್ಕಳನ್ನು ಪಡೆಯದ ಕುಸುಮೆ ಕೊನೆಗೆ ವೆಂಕಪ್ಪಯ್ಯನ ಸಹವಾಸದಿಂದ ಗಂಡು ಮಗುವನ್ನು ಪಡೆಯುವುದರ ಮೂಲಕ ತನ್ನ ಅಭೀಪ್ಸೆಯನ್ನು ಈಡೇರಿಸಿಕೊಳ್ಳುತ್ತಾಳೆ. ಮೊದಲಿಗೆ ಗೊತ್ತಾಗದ ಈ ವಿಷಯ ಕಾಲಾನಂತರ ಗಂಡ ಸುಬ್ಬಯ್ಯನಿಗೆ ಗೊತ್ತಾಗಿ ಕಾಯಿಲೆಯಿಂದ ಸಾಯುತ್ತಾನೆ. ಗಂಡನ ಬಗ್ಗೆ ತೀರಾ ಅನಾದಾರ ತಾಳಿದ್ದ ಕುಸುಮೆ ಸಾಯುವ ಸಂದರ್ಭದಲ್ಲಿ ಆತನ ಸೇವೆ ಮಾಡಿ, ಮಾಡಿದ ತಪ್ಪಿಗೆ ಪಶ್ಚಾತ್ತಾಪ ಪಡುತ್ತಾಳೆ. ಯಾವ ರೀತಿಯಿಂದಲೋ ಮಕ್ಕಳಾದರೆ ಸಾಕೆನ್ನುವ ಸ್ತ್ರೀ ಸಮಾಜದ ಕಾರ್ಯಕರ್ತೆಯಾದ ಕುಸುಮೆ ತನ್ನ ಜೀವನದ ಕೊನೆಯಲ್ಲಿ ಗಳಸಿಕೊಳ್ಳುವುದಕ್ಕಿಂತಲೂ ಕಳೆದುಕೊಳ್ಳುವುದೇ ಹೆಚ್ಚಾಗಿದೆ. ‘ಕೇವಲ ಮನುಷ್ಯರು’ ಕಾದಂಬರಿಯಲ್ಲಿ ಕೂಡ ಶಾಂತಿ ಎಂಬ ಗೃಹಿಣಿ ಗಂಡ ವಿಶ್ವನಾಥಯ್ಯನಿಂದ ಮಕ್ಕಳಾಗದಿದ್ದಾಗ ಗುರೂಜಿಯ ಮಹಿಮೆಯಿಂದೆಂಬಂತೆ ಅಭಿನ್ನಾನಂದರ

ಸಂಸರ್ಗದಿಂದ ಗಂಡುಮಗುವಿಗೆ ಜನ್ಮವೀಯುತ್ತಾಳೆ. ತನ್ನ ಗಂಡ ವಿಶ್ವನಾಥಯ್ಯನಿಗೆ ಅನುಮಾನ ಬರದಂತೆ ಮೊದಲು ದೂರವಿರಿಸಿ ನಂತರ ಅವನನ್ನು ಹತ್ತಿರ ಕರೆದುಕೊಳ್ಳುತ್ತಾಳೆ. ಶಾಂತಿಯು ಸ್ವಾಮಿ ಅಭಿನ್ನಾನಂದರ ಮೇಲೆ ಮೋಹಗೊಳ್ಳುವುದು ವ್ಯವಸ್ಥೆಯ ವಿಪರ್ಯಾಸವಾದರೂ ತಾಯ್ತನವನ್ನು ಹಂಬಲಿಸುವ ಹೆಣ್ಣು ಜೀವಕ್ಕೆ ಸಹ್ಯವಾಗಿ ಕಾಣುತ್ತದೆ. ವಿ.ಎಂ.ಇನಾಂದಾರ್ ಅವರು ''ಕಾರಂತರ ಮೊದಲಿನ ಕೆಲವು ಕಾದಂಬರಿಗಳಲ್ಲಿ ಬರುವ ಸಾಧುಗಳು ಕಪಟ ಸನ್ಯಾಸಿಗಳಾದರೆ ಇಲ್ಲಿಯ ಅಭಿನ್ನಾನಂದ ನಡೆಯಬೇಕಾದ ಕೆಲಸವನ್ನು ನಡೆಯಬೇಕಾದ ರೀತಿಯಲ್ಲಿ ಮಾಡುವ ಪ್ರಯತ್ನದಲ್ಲಿ ತೊಡಗಿದವ''[೧೮೨] ಎಂದಿದ್ದಾರೆ. ಆದರೆ ಮೇಲ್ನೋಟಕ್ಕೆ ಹಾಗೆ ತೋರುವ ಅಭಿನ್ನಾನಂದ ವಿಶ್ವನಾಥಯ್ಯನ ಹೆಂಡತಿಯ ಮೋಹಕ್ಕೆ ಒಳಗಾಗಿದ್ದು ಸಕ್ರಮವಲ್ಲ. ಸಮಾಜದ ದೃಷ್ಟಿಯಲ್ಲಿ ನಿಷ್ಪಾಪತನಾಗಿ ಕಾಣುವ ಸಾಧು ಗೋಮುಖವ್ಯಾಘ್ರನಾಗಿದ್ದಾನೆ.

ವಿಡಂಬನೆಯ ಗುಂಪಿಗೆ ಸೇರುವ ಇನ್ನೊಂದು ಕಾದಂಬರಿಯೆಂದರೆ 'ಜಗದೋದ್ಧಾರ...ನಾ'. ಭಗವದ್ಗೀತೆ, ಉಪನಿಷತ್ತು, ಆಶ್ರಮ, ಭಕ್ತಿ- ಇತ್ಯಾದಿಗಳ ಹೆಸರಿನಲ್ಲಿ ನಡೆಯುವ ಮೋಸ-ಡಾಂಭಿಕತೆಯನ್ನು ತೀರಾ ವ್ಯಂಗ್ಯವಾಗಿ ನಿರೂಪಿಸಿದ್ದಾರೆ. 'ಆಳ - ನಿರಾಳ', 'ಇದ್ದರೂ ಚಿಂತೆ', 'ಇನ್ನೊಂದೇ ದಾರಿ', 'ಉಕ್ಕಿದ ನೊರೆ', 'ಇಳೆಯೆಂಬ.....', 'ಕನ್ನಡಿಯಲ್ಲಿ ಕಂಡಾತ', 'ಅದೇ ಊರು, ಅದೇ ಮರ', 'ಕಣ್ಣಿದ್ದೂ ಕಾಣರು', 'ಅಂಟಿದ ಅಪರಂಜಿ'- ಈ ಮೊದಲಾದ ಕಾದಂಬರಿಗಳು ಕಾರಂತರ ವಿಶಿಷ್ಟ ಬರಹವನ್ನು ಪ್ರತಿನಿಧಿಸುತ್ತವೆ.

'ನಷ್ಟ ದಿಗ್ಗಜಗಳು'-ಸಾಮಾಜಿಕ ಜೀವನದ ವಿಡಂಬನೆಯನ್ನು ಸಾದರಪಡಿಸುತ್ತದೆ. ಜೈನಧರ್ಮದ ಹೆಸರಿನಲ್ಲಿ ನಡೆಯುವ ಧಾರ್ಮಿಕ ಹಾಗೂ ಆಧಾತ್ಮಿಕ ಚಟುವಟಿಕೆಗಳನ್ನು ಕಾದಂಬರಿಯ ಚೌಕಟ್ಟಿಗೆ ಹಾಕಿ ಚರ್ಚಿಸಿದ್ದಾರೆ ಕಾರಂತರು. ವ್ಯಾಪಾರೋದ್ಯಮಗಳು-ರಾಜಕಾರಣಿಗಳು-ದೇಶಭಕ್ತರು ಎಂಬೆಲ್ಲ ಹಣೆಪಟ್ಟಿಗಳಿಂದ ನಡೆಸುವ ಅವ್ಯವಹಾರಗಳು ಚಿತ್ರಿತಗೊಂಡಿವೆ.

ಎರಡನೆಯ ಮಹಾಯುದ್ಧದ ಸಂದರ್ಭದ ಆರ್ಥಿಕ, ಸಾಮಾಜಿಕ, ರಾಜಕೀಯ ಏರುಪೇರುಗಳನ್ನು ಚಿತ್ರಿಸುವ 'ಮುಗಿದ ಯುದ್ಧ' ಕಾದಂಬರಿಯು ಮಾನವೀಕರಣದ ಪ್ರಕ್ರಿಯೆಗೂ ಎಳಸುತ್ತದೆ. ಯುದ್ಧ ಸಮಯದ ಸಂಕಷ್ಟಗಳನ್ನೇ ಲಾಭದ ದೃಷ್ಟಿಯಿಂದ ಗಮನಿಸುವ ವ್ಯಾಪಾರಿಗಳು, ವೈದ್ಯರು, ರಾಜಕಾರಣಿಗಳು ತಮ್ಮ ಮನುಷ್ಯತ್ವವನ್ನೇ ಮರೆತು ಬೆಲೆ ಏರಿಕೆ, ಕಾಳಸಂತೆ, ಭ್ರಷ್ಟಾಚಾರಗಳನ್ನು ಮೆರೆಸುತ್ತಾರೆ.

'ಮೊಗ ಪಡೆದ ಮನ', 'ಕರುಳಿನ ಕರೆ', 'ಚಿಗುರಿದ ಕನಸು', 'ಜಾರುವ ದಾರಿಯಲ್ಲಿ', 'ಭತ್ತದ ತೊರೆ', 'ಒಡಹುಟ್ಟಿದವರು', 'ನಂಬಿದವರ ನಾಕ, ನರಕ', 'ಇದ್ದರೂ ಚಿಂತೆ', 'ಒಂಟಿ ದನಿ' 'ಧರ್ಮರಾಯನ ಸಂಸಾರ' ಈ ಮೊದಲಾದ ಕಾದಂಬರಿಗಳು ಆಂಶಿಕವಾಗಿ ಮಾನವೀಕರಣದ ಮಡಿಲಿಗೆ

ಸಾಗುತ್ತವೆ. 'ಗೊಂಡಾರಣ್ಯ' 'ಔದಾರ್ಯದ ಉರುಳಲ್ಲಿ', 'ಮೂಜನ್ಮ', 'ನಾವು ಕಟ್ಟಿದ ಸ್ವರ್ಗ' ಕಾದಂಬರಿಗಳು ರಾಜಕೀಯ ಹಾಗೂ ಸ್ವಾತಂತ್ರ್ಯ ಚಳುವಳಿಯ ವಸ್ತುವನ್ನು ಕೇಂದ್ರೀಕರಿಸಿಕೊಂಡು ಬರೆಯಲ್ಪಟ್ಟಿವೆ. ಈ ನಾಲ್ಕು ಕಾದಂಬರಿಗಳ ಪ್ರತಿನಿಧಿಯಾಗಿ 'ಔದಾರ್ಯದ ಉರುಳಲ್ಲಿ' ಕಾದಂಬರಿಯು ಈ ಅಧ್ಯಾಯದಲ್ಲಿ ವಿಶ್ಲೇಷಣೆಗೊಂಡಿದೆ. ಅದೇ ರೀತಿ 'ದೇವ ದೂತರು'-ಇದೊಂದು ವಿಡಂಬನಾತ್ಮಕ ಕೃತಿ. ದೇವರುಗಳು ಭೂಮಿಗೆ ಅವತರಿಸಿ ಬಂದುದರ ಚಿತ್ರಣವಿದೆ. ಹೀಗಾಗಿ ಮಾನವೀಕರಣದ ಅಧ್ಯಯನದಿಂದ ಹೊರಗುಳಿದಿದೆ. 'ಶನೀಶ್ವರನ ನೆರಳಲ್ಲಿ'-ಕಾನನದ ಕತೆಯಾಗಿದೆ. ಕಥೆಯುದ್ದಕ್ಕೂ ಶನಿಶ್ವರನ ಕೃಪೆ, ಕೃಪೆಗೆ ಪಾತ್ರರಾದ ಸಂಪ್ರದಾಯಸ್ಥ ಜನತೆಯ ಚಿತ್ರಣವೇ ಇದೆ. ಕಾದಂಬರಿಯಲ್ಲಿ ಮಾನವೀಕರಣದ ನಿಯೋಗಿಯಾಗಿ ಕಾವೇರಮ್ಮ ನಿಲ್ಲುತ್ತಳಾದರೂ ಅವಳು ಧರ್ಮದ ವಕ್ತಾರಳಾಗುತ್ತಾಳೆ.

ಬತ್ತದ ತೊರೆ' ಕಾದಂಬರಿ ಕೊನೆಯಲ್ಲಿ ವಿನತೆಗೆ ಹೇಳುವ ಮಾತು "ವಿನೂ, ನನ್ನ ತುಂಬಿದ ಎದೆಯಿಂದ ಒಂದು ಮಗುವಿಗೂ ಹಾಲುಡಿಸದೆ ನಾನು ಸಾಯಬೇಕು, ಅನ್ನುತ್ತೀಯ? ನೀನು ನಾಲ್ಕು ಮಕ್ಕಳ ತಾಯಿ. ನಿನಗೆ ನನ್ನ ದುಃಖ ಹೇಗೆ ಗೊತ್ತಾಗಬೇಕು? ನಾನು ಅರವತ್ತು ಮಕ್ಕಳನ್ನು ಸಾಕುತ್ತಿರುವೆನಾದರೂ ಅವಾವುದೂ ನನ್ನವಲ್ಲ. ನನ್ನದೆಂಬ ಪದಾರ್ಥ ನನಗಿಲ್ಲ ಎಂದು ಕರುಳು ಕೊರೆಯುತ್ತಿದೆ. ನಾನು ತಾಯಿಯಾಗದೆ ಸಾಯಲಾರೆ. ನಾನು ಹೆಣ್ಣು ಅದಕ್ಕಾಗಿ ಹುಟ್ಟಿದವಳು ತಾನು-ಎಂದು ನನ್ನ ಹೃದಯ ಹೇಳುತ್ತಿದೆ". ಈ ತಾಯಿಯ ಹಂಬಲವನ್ನೇ ಹೊತ್ತವಳು 'ಹೆತ್ತಳಾ ತಾಯಿ'ಯ ಕುಸುಮೆ ಮತ್ತು 'ಕೇವಲ ಮನುಷ್ಯರು' ಕೃತಿಯ ಶಾಂತಿ. ಕುಸುಮೆ ಅನ್ಯಮಾರ್ಗದಿಂದ ಪಡೆಯುವ ಮಗುವಿನ ನೈತಿಕತೆಯನ್ನು ಕಾರಂತರಲ್ಲಿ ವಿ.ಎಂ.ಇನಾಂದಾರ್ ಅವರು ಪ್ರಶ್ನೆ ಮಾಡಿದಾಗ "ನಾನು ಖಂಡಿತವಾಗಿಯೂ ಸುಮರ್ಥಿಸುತ್ತೇನೆ. ಧರ್ಮ ಕೂಡ ಸಮರ್ಥನೆ ಮಾಡುತ್ತದೆ. ಇಂದಿನ ನಮ್ಮ ಸಮಾಜದ ಅಳತೆಗೋಲುಗಳ ಲೆಕ್ಕದಿಂದ ಯಾವುದನ್ನೂ ಸಮರ್ಥಿಸಬಹುದು ಅಥವಾ ಬಿಡಹಬುದು. ನಮ್ಮಲ್ಲಿ ಋಷಿ ನಿಯೋಗ ಎನ್ನುವುದೊಂದಿತ್ತಲ್ಲ? ಅದನ್ನು ನಮ್ಮ ಹಿಂದಿನವರು ಒಪ್ಪಿಕೊಂಡಿದ್ದರಲ್ಲ? ನಮಗೆ ಆ ನೇರವಾದ ದಾರಿ ಈಗ ವಿಚಿತ್ರವಾಗಿ ಕಾಣಿಸುವುದರಿಂದ ಅದರ ಬಗೆಯಲ್ಲಿ ಒಂದು ಕಪಟ ಮನೋವೃತ್ತಿಯನ್ನು ನಾವು ಅನುಸರಿಸಿದ್ದೇವೆ. ಒಬ್ಬ ಲೇಖಕನಾಗಿ ನನ್ನ ಕೆಲಸ ಸಹಾನುಭೂತಿ ತೋರಿಸುವುದು. ಅಷ್ಟೆ. ಬಹಳ ಉದಾರ ಎಂದು ಹೇಳಿಕೊಳ್ಳಬೇಕಾದ ಔದಾರ್ಯವೇನಲ್ಲ. ನಾನು ಸಹಾನೂಭೂತಿ ತೋರಿಸಿದ್ದು ತಪ್ಪು ಎಂದು ಅನೇಕರಿಗೆ ಕಾಣಿಸಿದ್ದರಿಂದ ಅವರಿಗಿಂತ ನಾನು ಉದಾರ"[೧೮೩] ಎಂದು ಶಿವರಾಮ ಕಾರಂತರು ಸಮರ್ಥನೆ ನೀಡುತ್ತಾರೆ. ಒಬ್ಬ ತಾಯಿ ತನ್ನ ಮಗುವಿನಿಂದ ಅನುಭವಿಸುವ ಆನಂದ, ಸಮಾಧಾನಗಳು ಮನುಷ್ಯ ಪ್ರೇರಿತವಾದವುಗಳಲ್ಲ-ನೈಸರ್ಗಿಕ ಹಾಗೂ ಸ್ವಾಭಾವಿಕವಾಗಿರುವಂತಹವುಗಳು. ಇಂತಹ ನೈಸರ್ಗಿಕ ಆನಂದಕ್ಕೆ ಲೈಂಗಿಕ ಸಂಬಂಧ ಒಂದು ಸಾಧನವಷ್ಟೆ. ನಿಸರ್ಗದತ್ತವಾದ ಸಂತಾನಾಭಿವೃದ್ಧಿ ಹಲವು ಮಾರ್ಗಗಳಲ್ಲಿ ನೆರವೇರುತ್ತದೆ. ಲೈಂಗಿಕ

ಆಕರ್ಷಣೆಯ ಹಿಂದೆ ಮಕ್ಕಳನ್ನು ಪಡೆಯುವ ಹಂಬಲವಿರುತ್ತದೆ. ಆದರೆ ಇದು ಎಲ್ಲ ಸ್ತ್ರೀಯರಿಗೂ ಅನ್ವಯಿಸದೇ ಇರಬಹುದು. ಮಗುವಿಗೆ ತಾಯಿ ಮೊಲೆಯುಣ್ಣಿಸಿ ಪಡೆಯುವ ಆನಂದ ಒಂದು ತೆರನಾದರೆ, ತಾಯಿಯ ಮೊಲೆಯುಂಡು ಮಗು ಪಡೆಯುವ ಸಂತೋಷ ಇನ್ನೊಂದು ತೆರನಾದ್ದು. ಈ ಎರಡೂ ಕ್ರಿಯೆಗಳು ನಿಸರ್ಗ ನಿರ್ಮಿತ ಎಲ್ಲೂ ಅಸಭ್ಯತೆಯಿಲ್ಲ. ಹೀಗಿದ್ದಾಗ ಕುಸುಮಾ ಮಗು ಪಡೆಯಲು ಬಳಸುವ ದಾರಿ ವ್ಯಭಿಚಾರವಲ್ಲ. ಶಾಂತಿಯ ದಾರಿಯೂ ಕೂಡ. 'ಬೆಟ್ಟದ ಜೀವ'ದ ಶಂಕರಮ್ಮ ಈ ಆನಂದ ಅನುಭವಿಸಿಯೂ ಮಗ ಮನೆ ಬಿಟ್ಟು ಹೋದಾಗ ಅನುಭವಿಸುವ ಸಂಕಷ್ಟ ಕೂಡ ತಾಯಿಯ ನಿಸರ್ಗದತ್ತವಾದ ಮಮತೆಯದ್ದೆ. ಶಿವರಾಮನಲ್ಲಿ ಮಗನ ಚರ್ಯೆಯನ್ನು ಕಾಣುತ್ತಾಳೆ. ಅವನನ್ನು ಮಗನೆಂದೇ ಭಾವಿಸಬಹುದಿತ್ತು ಸಹ. ಆದರೆ ಅವಳ ಅಂತರಂಗದ ಹಂಬಲ, ಈ ಮೊದಲು ಕಂಡುಂಡ ಶಂಭುವಿನ ಮೇಲಿನ ಮಮತೆ ಅದಕ್ಕೆ ಎಳಸುವುದಿಲ್ಲ. 'ಸಮೀಕ್ಷೆ'ಯ ಶ್ರೀನಿವಾಸ-ಶಾರದೆಗೆ ಕುಸುಮೆಯ ಮಗಳು ಸುವಾಸಿನಿ ಮಗಳಂತೆಯೇ ಇದ್ದರೂ ಅವರು ಮಕ್ಕಳಿಗಾಗಿ ಹಂಬಲಿಸುತ್ತಾರೆ. ತಾಯಿ ಸತ್ತ ತಂದೆ ಇದ್ದೂ ಕಾಣದಿರುವ ಸುವಾಸಿನಿಯ ಆಗು ಹೋಗುಗಳನ್ನು ಇವರೇ ನೋಡಿಕೊಳ್ಳುತ್ತಾರೆ. ಮದುವೆ-ಹೆರಿಗೆ ಎಲ್ಲವನ್ನು ನೋಡಿಕೊಳ್ಳುತ್ತಾರೆ. ಕೊನೆಗೆ ಶಾರದೆ ಗಂಡು ಮಗುವನ್ನು ಪಡೆಯುತ್ತಾಳೆ. ಹೀಗಾಗಿ ಹೆಣ್ಣು ಅನ್ಯ ಮಗುವನ್ನು ತನ್ನದೆಂದು ಒಪ್ಪಿಕೊಳ್ಳಲಾರಳು. ಒಪ್ಪಿಕೊಂಡರೆ ಅವಳು ಮಗು ಪಡೆಯಲು ಅಸಮರ್ಥಳಾದಾಗ ಮಾತ್ರ.

'ಮರಳಿ ಮಣ್ಣಿಗೆ'ಯ ರಾಮ ಐತಾಳರು ಸಹ ಈ ತಾಯ್ತನವನ್ನು ಅರಿತೇ ದತ್ತು ತೆಗೆದುಕೊಳ್ಳಲು ಹಿಂಜರಿದು ಸತ್ಯಭಾಮೆಯನ್ನು ಮದುವೆಯಾಗುತ್ತಾರೆ. ತಾಯ್ತನದ ಹಂಬಲ ಹೆಣ್ಣಿಗಷ್ಟೆ ಸೀಮಿತವಾಗಿಲ್ಲ. ಗಂಡಿಗೂ ವ್ಯಾಪಿಸಿದೆ. ಹೆಣ್ಣಿನಂತೆ ವ್ಯಭಿಚಾರದ ಹೆಸರಿನಲ್ಲಿ ಮಕ್ಕಳನ್ನು ಪಡೆಯುವ ಸ್ಥಿತಿ ಗಂಡಸಿಗಿಲ್ಲ. ಹೆಂಡತಿ ಅಸಮರ್ಥಳಿದ್ದರೆ ಇನ್ನೊಂದು ಮದುವೆಯಾಗುತ್ತಾನೆ. ತಾನೇ ಅಸಮರ್ಥನಿದ್ದರೆ 'ಕುಸುಮೆ'(ಹೆತ್ತಳಾ ತಾಯಿ), ಶಾಂತಿ(ಕೇವಲ ಮನುಷ್ಯರು)ಯರ ಮಾರ್ಗಕ್ಕೆ ಅನುವು ಮಾಡಿಕೊಡಬಹುದು. ಇದು ಸಮಾಜದ ದೃಷ್ಟಿಯಲ್ಲಿ ಬಾಹಿರವಾದ ಕ್ರಿಯೆಯಾದ್ದರಿಂದ-ಪ್ರಾಚೀನ ಸಮಾಜ-ಪುರಾಣಗಳು ನಂಬಿರುವ 'ನಿಯೋಗ ಪದ್ಧತಿ'ಗೆ ಮೊರೆ ಹೋಗಬೇಕಾಗುತ್ತದೆ. ಪಾಂಡವರು ಹುಟ್ಟಿರುವುದು 'ನಿಯೋಗ'ದಿಂದಲೇ ಎಂದು ಸಾಬೀತುಪಡಿಸುವ ಎಸ್.ಎಲ್.ಭೈರಪ್ಪ ಅವರ 'ಪರ್ವ' ಈ ದೃಷ್ಟಿಯಿಂದ ಗಮನಾರ್ಹ.

'ಸಮೀಕ್ಷೆ' ಕಾದಂಬರಿಯು ಮಾಡುವ ಬಾಳ ಸಮೀಕ್ಷೆಯಲ್ಲಿ ಯಾರ ಬದುಕು ಸಾರ್ಥಕ? ಎನ್ನುವ ಪ್ರಶ್ನೆಗೆ ಕಾರಂತರು 'ಸೂರ-ಕಾಳಿ'ಯರ ಜೀವನವನ್ನೆ ಉತ್ತರಿಸುವ ಒಲವು ತೋರಿಸಿದ್ದಾರೆ. ಇದನ್ನು ಗಮನಿಸಿ ನರಹಳ್ಳಿ ಬಾಲಸುಬ್ರಹ್ಮಣ್ಯ ಅವರು ಪ್ರಶ್ನಿಸುವ ರೀತಿ ಬಹುಮುಖ್ಯವಾಗುತ್ತದೆ.

‘‘ಯಾವುದು ಸಾರ್ಥಕ ಬದುಕು? ಎನ್ನುವಾಗ ಕಾರಂತರು ಕಾದಂಬರಿಯ ಕಡೆಯಲ್ಲಿ ‘ಸೂರ-ಕಾಳಿ’ಯರ ಬದುಕನ್ನು ನಮ್ಮ ಕಣ್ಮುಂದೆ ಆದರ್ಶವಾಗಿ ನಿಲ್ಲಿಸುತ್ತಾರೆ. ಅವರ ಬದುಕಿನ ರೀತಿಯನ್ನು ವೈಭವಿಸುತ್ತಾರೆ. ಪ್ರತಿದಿನ ಒಬ್ಬೊಬ್ಬರ ಮನೆಯ ಮುಂದೆ ನಿಂತು ಕೈಚಾಚುವ ಸೂರ-ಕಾಳಿಯರು ಕಾರಂತರ ಮೆಚ್ಚುಗೆ ಗಳಿಸುತ್ತಾರೆ. ಕಾದಂಬರಿಯಲ್ಲಿ ಬಹಳ ಮುಖ್ಯರಾಗಿ ಬಿಡುತ್ತಾರೆ. ಇದಕ್ಕೆ ಕಾರಣ ಸೂರ ಕಾಳಿಯರ ನಿಷ್ಕಪಟ ನಡತೆ, ಮುಗ್ಧ ಪ್ರೀತಿಯೆಂಬುದು ಸ್ಪಷ್ಟ. ಆದರೆ-ಸಾಮಾಜಿಕ ಸಂದರ್ಭದಲ್ಲಿ ಇಂಥದನ್ನು ವೈಭವಿಸುವಾಗ ಸೂರ-ಕಾಳಿಯರ ಸಾಮಾಜಿಕ ಸ್ಥಿತಿಯ ‘ದುರಂತ’ ಮುಖ್ಯವಾಗದೆ ಆ ಸ್ಥಿತಿಯ ದುರಂತವೇ ವೈಭವೀಕೃತವಾಗುವುದು ಅಪಾಯಕಾರಿಯಲ್ಲವೇ?’’[೧೮೪] ಈ ಪ್ರಶ್ನೆ ನನ್ನದೂ ಸಹ. ಆದರೆ ಕಾರಂತರು ಹೆಚ್ಚಾಗಿ ಸಾರ್ಥಕ ಬದುಕನ್ನು ಕಾಣುವುದು ಕೆಳವರ್ಗದ ಪಾತ್ರಗಳಲ್ಲೆ. ‘ಸೂರ-ಕಾಳಿ’ಯರಂತೆ ‘ಮೈಮನಗಳ ಸುಳಿಯಲ್ಲಿ’ನ ‘ಪಮ್ಮ-ದುಗ್ಗಿ’ಯರಲ್ಲೂ-ಜೀವನದ ಸಾರ್ಥಕತೆಯನ್ನು ಕಂಡುಕೊಳ್ಳುತ್ತಾರೆ. ಸಾರ್ಥಕ-ನಿರರ್ಥಕಗಳ ‘‘ಅರ್ಥ’ ಬರೀ ಯಶಸ್ಸಿನ ದೃಷ್ಟಿಯಿಂದಲ್ಲ ಜೀವನ ಅರ್ಥವತ್ತಾಗಿ, ರಸವತ್ತಾಗಿ, ಸಹ್ಯವಾಗಿ ಕಾಣಿಸಬೇಕೆಂಬ ದೃಷ್ಟಿಯಿಂದ.’’[೧೮೫] ‘ಸೂರ-ಕಾಳಿ’ಯರ ಬದುಕು ಸಾರ್ಥಕ್ಯ ಪಡೆಯುತ್ತದೆ. ಸೂರ್ಯಕಾಂತಿ, ನೈದಿಲೆಯ ಪ್ರತಿಮೆಗಳನ್ನು ಉದಾಹರಿಸಿದ್ದಾರೆ. ನೈದಿಲೆಯ ‘ಸೂರ-ಕಾಳಿ’ಯರ ಜೀವನವನ್ನು ಪ್ರತಿಪಾದಿಸುತ್ತದೆ. ಸಾಂಸ್ಕೃತಿಕ ಸಂದರ್ಭದಲ್ಲಿ ‘ಸೂರ-ಕಾಳಿ’ಯರ ಬದುಕನ್ನು ವೈಭವೀಕರಿಸುವುದು ಅಮುಖ್ಯವಾದರೂ ಅಂತಹ ಜೀವನವನ್ನು ಉದಾಹರಿಸುವುದು ತಪ್ಪಲ್ಲ. ಅಂತಹದೇ ಜೀವನವನ್ನು ನಡೆಸುವಂತೆ ಪಾಠ ಹೇಳುವುದು ಕಾರಂತರ ಇರಾದೆಯಲ್ಲ. ಆದರೆ ಸ್ಪಷ್ಟ, ಮುಗ್ಧ, ಇನ್ನೊಬ್ಬರಿಗೆ ತೊಂದರೆಯಾಗದಂತಹ, ಬದುಕು ಹೊರೆಯಾಗಿದೆ ಎಂದು ನಿರಾಶನಾಗದೆ ಜೀವನ ನಡೆಸುವಂತೆ ಬೋಧಿಸುತ್ತಾರೆ. ‘‘ಎಲ್ಲ ರೀತಿಯ ಜೀವನಾನುಭವಗಳಿಗೆ ಮುಕ್ತವಾಗಿ ತಮ್ಮನ್ನು ತಾವು ತೆರೆದುಕೊಂಡು ಅವುಗಳ ಇತಿಮಿತಿಗಳನ್ನೂ, ವ್ಯಾಪ್ತಿ ವಿಸ್ತಾರಗಳನ್ನೂ ಆ ನೆಲೆಯಲ್ಲಿಯೇ ಅರ್ಥಮಾಡಿಕೊಳ್ಳಲು ಕಾರಂತರು ಪ್ರಾಮಾಣಿಕವಾಗಿ ಪ್ರಯತ್ನಿಸಿದ್ದಾರೆ’’[೧೮೬] ಎನ್ನುವ ನರಹಳ್ಳಿಯವರ ಮಾತೇ ಸಮರ್ಥನೆ ನೀಡುತ್ತದೆ.

ಮನುಷ್ಯನ ಬದುಕಿನ ವ್ಯಾಖ್ಯಾನವೇ ಕಾರಂತರ ಕಾದಂಬರಿಗಳ ಮುಖ್ಯ ಆಶಯವಾಗಿರುವುದರಿಂದ ಭಿಕ್ಷಾಟನೆ-ಶ್ರೀಮಂತಿಕೆ, ಕೊಳಚೆ ಪ್ರದೇಶ-ಅರಮನೆ, ದೌರ್ಜನ್ಯ-ಸೌಜನ್ಯ, ರಾಜಕಾರಣ-ಅಧಿಕಾರಗಳೆಂಬ ಬೇಧ ಕಲ್ಪಿಸದೆ ಕಥಾವಸ್ತು ಆಯ್ದುಕೊಳ್ಳುತ್ತಾರೆ. ಈ ಎಲ್ಲವುಗಳ ಅನುಭವಿಕರ ಜೀವನದ ಸಹನೆ, ಜೀವನದ ಏರಿಳಿತ, ಜೀವನದ ಮೌಲ್ಯ ಹಾಗೂ ಔದಾರ್ಯಗಳು ಮುಖ್ಯವಾಗುತ್ತವೆಯೇ ಹೊರತು ಅವರ ಕ್ರಿಯೆಗಳಲ್ಲ. ಹಾಗೆ ನೋಡಿದಾಗ ‘ಮೈಮನಗಳ ಸುಳಿಯಲ್ಲಿ’ ಕಾದಂಬರಿಯೂ ಸಹ ವೇಶ್ಯಾ ಜೀವನವನ್ನು ವಿಜೃಂಭಿಸುವಂತಹ ಪ್ರಶ್ನೆಯನ್ನು ಹುಟ್ಟು ಹಾಕುತ್ತದೆ. ‘‘ಕಾರಂತರು ನೈತಿಕ ಜೀವನದ ಪ್ರತಿಪಾದಕರು. ಆದರೆ ಅವರ ನೀತಿ ಸಂಹಿತೆ ಮಹಾ ಪುರುಷರನ್ನು ದೃಷ್ಟಿಯಿಟ್ಟುಕೊಂಡದ್ದಲ್ಲ;

ಸಾಮಾನ್ಯ ಜನರನ್ನು ಕೇಂದ್ರದಲ್ಲಿರಿಸಿಕೊಂಡದ್ದು."[೧೮೭] ಆದ್ದರಿಂದ ಸೂರ-ಕಾಳಿ, ಪಮ್ಮ-ದುಗ್ಗಿ, ನಾಗಿ-ರಾಮಣ್ಣ ಮೊದಲಾದವರು ಮುಖ್ಯರಾಗುತ್ತಾರೆ.

ಕಾರಂತರು 'ಕೇವಲ ಮನುಷ್ಯ'ರಲ್ಲ ಮಹಾಮಾನವತಾವಾದಿಗಳು. ಪರಿಸರ, ಶಿಕ್ಷಣ, ನೈತಿಕತೆ, ವಿಜ್ಞಾನ ಮೊದಲಾದ ವಿಷಯಗಳಲ್ಲಿ ಮಾನವತಾವಾದವನ್ನು ಮೆರೆದಿದ್ದಾರೆ. ಭೂಮಿ ಮೇಲೆ ಜನಿಸಿದ ಸಕಲ ಜೀವರಾಶಿಗಳಲ್ಲಿ ಮನುಷ್ಯನೊಬ್ಬನೆ ಸುಖಿಯಾಗಿದ್ದರೆ ಸಾಲದು, ಉಳಿದ ಪರಿಸರ ಜೀವಿಗಳಿಗೂ ಬದುಕಲು ಸಹಕಾರಿಯಾಗಬೇಕು. ಈ ಸಹಕಾರಿ ತನ್ನ ಜೀವನಕ್ಕೆ ಅನುಕೂಲ ಎಂದು ಮಾನವನಿಗೆ ತಿಳಿಯಬೇಕು. ತಿಳಿಯದಿದ್ದರೆ ಪರಿಸರ ನಾಶದೊಂದಿಗೆ ತನ್ನ ಅವನಾಶವೂ ಆಗುತ್ತದೆ ಎಂದಿದ್ದಾರೆ. ಜನಸಂಖ್ಯೆಯ ಬೆಳವಣಿಗೆಯಿಂದಾಗಿ ಉಂಟಾಗುವ ಆಹಾರ-ಆಶ್ರಯ-ಉದ್ಯೋಗಗಳಂತಹ ಸಮಸ್ಯೆಗಳ ಬಗ್ಗೆಯು ಮನುಷ್ಯ ಚಿಂತಿಸಬೇಕು. ೧೯೦೨ರಲ್ಲಿ ೨೦ ಕೋಟಿ ಇದ್ದ ಭಾರತದ ಜನಸಂಖ್ಯೆ ಈಗ ನೂರು ಕೋಟಿಯಾಗಿದೆ. ಇದು ತೀರಾ ಹಿಮ್ಮುಖ ಬೆಳವಣಿಗೆ. ಮಾನವ ಬರು ಬರುತ್ತಾ ಸಂಸ್ಕೃತಿ, ಮಾನವತೆ ಬೆಳೆಸಿಕೊಳ್ಳಬೇಕು. ಆದರೆ ಮರೆಯುತ್ತಿದ್ದಾನೆ. ಮಾನವಕುಲ ಸಂಖ್ಯಾದೃಷ್ಟಿಯಿಂದ ಅಭಿವೃದ್ಧಿ ಹೊಂದುತ್ತಿರಬಹುದು. ಪರೋಕ್ಷವಾಗಿ ಅದು ಅಪಾಯದ ಸ್ಥಿತಿಗೆ ತಲುಪುತ್ತಿರುವುದು ಸ್ಪಷ್ಟ. ಶಂಬಾ ಜೋಶಿಯವರು ಹೇಳಿದಂತೆ 'ಮಾನವ ತಾನು ದಿನೇ ದಿನೇ ಅವನತಿಯತ್ತ ಸಾಗುತ್ತಿದ್ದಾನೆ. ಬುದ್ಧಿವಂತನಾಗುತ್ತಿಲ್ಲ-ಸಂಸ್ಕೃತಿ ಹೀನತ್ವಕ್ಕೆ ಸಾಗುತ್ತಿದ್ದಾನೆ' ಎಂಬ ಅಭೀಪ್ಸೆ ಕಾರಂತರದೂ ಕೂಡ. 'ಪರಿಸರದ ಬಗೆಗೆ ಗಂಭೀರವಾಗಿ ನಾವು ಯೋಚಿಸದಿದ್ದರೆ ನಾಳಿನ ಭವಿಷ್ಯ ಭೀಕರವಾಗುತ್ತದೆ. ನಮ್ಮ ಜನರಿಗೆ ಪರಿಸರ ವಿಚಾರವನ್ನು ನಾವು ಸರಿಯಾಗಿ ತಿಳಿಸಬೇಕು"[೧೮೮] ನಾಶವಾಗುತ್ತಿರುವುದು ಮಾನವನ ಸ್ವಾರ್ಥದಿಂದಲೇ, ವೈಜ್ಞಾನಿಕ ಪ್ರಗತಿಯ ನೆಪದಿಂದಾಗಿ ಪರಿಸರ/ಅರಣ್ಯ ನಾಶಮಾಡುತ್ತಾ ಆಣೆಕಟ್ಟು, ವಿದ್ಯುತ್ ಕಾರ್ಯಾಗಾರ, ಕಾರ್ಖಾನೆಗಳನ್ನು ನಿರ್ಮಿಸುತ್ತಿದ್ದಾನೆ. ಮಾನವನ ಈ ಯೋಚನೆಯು ತನ್ನ ಕುಲದ ಭವಿಷ್ಯಕ್ಕೆ ಮಾರಕವೇ ಆಗಿದೆ. ಆಣೆಕಟ್ಟು ನಿರ್ಮಾಣದಿಂದ ಅರಣ್ಯ ಹಾಗೂ ಉಳುವ ಭೂಮಿ ಮುಳುಗಡೆಯಾಗುತ್ತದೆ. ಇದರಿಂದ ಸಲಹುತ್ತಿರುವ ಪರಿಸರ ಹಾಗೂ ಅನ್ನ ಒದಗಿಸುತ್ತಿರುವ ಭೂಮಿ ಎರಡು ರೀತಿಯಲ್ಲಿ ಜೀವನದ ಅಮೂಲ್ಯ ವಸ್ತುಗಳನ್ನು ಕಳೆದುಕೊಳ್ಳಬೇಕಾಗುತ್ತದೆ. ಇದನ್ನು ಮನಗಂಡೇ ಕಾರಂತರು ಬೇಡ್ತಿಯೋಜನೆಯನ್ನು ವಿರೋಧಿಸಿದರು. ವಿದ್ಯುತ್ ಉತ್ಪಾದನೆಗಾಗಿ ನಿರ್ಮಾಣ ಮಾಡಲು ಯೋಜಿಸಿರುವ ಕೊಂಜೆಂಟ್ರಿಕ್ಸ್ (ನಂದಿಕೂರು) ಕಂಪನಿ ಮತ್ತು ಸರ್ಕಾರದ ನಿರ್ಧಾರವನ್ನು ಪ್ರಬಲವಾಗಿ ಖಂಡಿಸಿದರು. ಈಗ ಉತ್ಪಾದನೆಯಾಗುತ್ತಿರುವ ವಿದ್ಯುತ್ತನ್ನೆ ಸರಿಯಾಗಿ, ಪೋಲಾಗದಂತೆ ಬಳಸಬೇಕು. ಅಲ್ಲದೆ ಬಾಕಿ ಇಟ್ಟುಕೊಂಡವರು ಹಣ ಕಟ್ಟಿದರೆ ಯಾವುದೇ ದುಸ್ಥಿತಿ ಒದಗಲಾರದು ಎಂಬುದು ಕಾರಂತರ ನಿಲುವು.

ರಷ್ಯಾದ ಚೆರ್ನೊಬಿಲ್ ದುರಂತದ ಪಾಠ ಕಣ್ಮುಂದೆ ಇದ್ದಾಗ್ಯೂ ಕೈಗಾ ಯೋಜನೆಯನ್ನು ಕೈಗೆತ್ತಿಕೊಂಡಿರುವುದು ಮನುಕುಲಕ್ಕೆ ಮಾಡುತ್ತಿರುವ ಅವಮಾನವೇ ಸರಿ. "ವಿಷಾನಿಲ ಅಣುಬಾಂಬ್‌ಗಳಿಂದ ಮಾನವಕುಲ ತತ್ತರಿಸಿದೆ. ಥರ್ಮಲ್ ರಿಯಾಕ್ಟರ್‌ದಿಂದ ಬಿದ್ದ ಬೂದಿ ಹೊಳೆಗೆ ಹೋದರೆ ಏನಾದೀತು? ಎಂಬ ಪ್ರಜ್ಞೆ ಇದೆಯೇ? ವಿಜ್ಞಾನ ಚಿರಕಾಲ ಕೊಡುವ ಕ್ಯಾನ್ಸರ್, ಜೀವಬಾಧೆಯ ರೋಗಗಳನ್ನು ಹರಡ ಹೊರಟಿದೆ. ರೇಡಿಯೇಶನ್ ಇಷ್ಟೊಂದು ಅಪಾಯಕಾರಿ ಎಂಬ ತಿಳುವಳಿಕೆ ನಮಗೆ ಬೇಡವೆ? ಕೈಗಾ ಅಣುಸ್ಥಾವರದಿಂದ ಭವಿಷ್ಯದಲ್ಲಿ ಗಂಡಾಂತರವಿದೆ. ಕಾಯಿಲೆಯಾದರೆ ಕೋರ್ಟಿಗೆ ಹೋಗಬೇಕೆ? ದೇಶಕ್ಕೆ ಬೆಂಕಿ ಬಿದ್ದರೆ ಯಾರಿಗೆ ದುಃಖವಿಲ್ಲ ಎಂಬ ಸ್ಥಿತಿಗೆ ನಾವು ಬಂದಿದ್ದೇವೆ. ಕಳಪೆ ದರ್ಜೆಯ ಕಾಮಗಾರಿಯಿಂದ ನಿರ್ಮಿತವಾದ ಅಣುಸ್ಥಾವರಗಳು ಮಾನವಕುಲಕ್ಕೇ ಮಾರಕವಾಗಿವೆ ಎಂಬುದನ್ನು ನಾವು ತಿಳಿಯಬೇಕು"[೧೮೯]ಎನ್ನುವುದು ಕಾರಂತರ ನಿಲುವಾಗಿದೆ. ಮನುಕುಲಕ್ಕೆ ಮಾರಕವಾಗಬಹುದಾದಂತಹ ಯೋಜನೆಗಳನ್ನು ಕೈಬಿಡಬೇಕು. ಪ್ರಗತಿಯ ನೆಪದಲ್ಲಿ ವಿಗತಿಯನ್ನುಂಟುವ ಈ ಯೋಜನೆಗಳ ಬಗ್ಗೆ ಸರಿಯಾದ ತಿಳುವಳಿಕೆ ಅಗತ್ಯ.

ಕಾರಂತರಿಗೆ ಇರುವ ಪರಿಸರ ಕಾಳಜಿಯೂ ಸಹ ಮಾನವೀಯ ಮುಖವನ್ನು ಪಡೆದುಕೊಂಡಿವೆ. ಈ ನಿಟ್ಟಿನಲ್ಲಿ ಹರಿಹರ ಪಾಲಿಫೈಬರ್ಸ್ ಅವರು ತುಂಗಭದ್ರಾ ನದಿಗೆ ಬಿಡುತ್ತಿದ ಮಲಿನ ದ್ರವವನ್ನು ವಿರೋಧಿಸಿ, ಕೈಗಾ ಅಣುಸ್ಥಾವರದ ಪರಿಸರ ನಾಶದ ಕ್ರಮವನ್ನು ವಿರೋಧಿಸಿ, ಕರ್ನಾಟಕ ಪಲ್ಸ್‌ವುಡ್ ಸಂಸ್ಥೆಗೆ ಅನುಮತಿ ನೀಡಿದ್ದ ಸರಕಾರದ ಕ್ರಮವನ್ನ ವಿರೋಧಿಸಿ ಚಳುವಳಿಗೆ ತೊಡಗಿದರು. ಸರ್ವೋಚ್ಚ ನ್ಯಾಯಲಯಕ್ಕೆ ದಾವೆ ಹೂಡಲು ತಾವೇ ಮೊದಲಿಗರಾಗಿ ನಿಂತರು. ಪರಿಸರ ನಾಶದ ಕ್ರಮಗಳಿಂದ ನಮ್ಮ ಮುಂದಿನ ಪೀಳಿಗೆಗೆ ಕೊಡುವ ದಿನಗಳು ಬರಡಗಾರುತ್ತವೆ. ಹಾಗಾಗದೇ ಬಂಗಾರದಂತಹ ಭವಿಷ್ಯವನ್ನು ಅವರಿಗೆ ಕೊಡುವ ಸದುದ್ದೇಶ ಕಾರಂತರದು.

ಶಿವರಾಮ ಕಾರಂತ ಅವರು ಭಾರತ ಸರ್ಕಾರ ತಮ್ಮಗೆ ಕೊಟ್ಟಿದ್ದ 'ಪದ್ಮಭೂಷಣ' ಪ್ರಶಸ್ತಿಯನ್ನು ತುರ್ತು ಪರಿಸ್ಥಿತಿಯ ಹೇರಿಕೆಯನ್ನು ಪ್ರತಿಭಟಿಸಿ ಸರ್ಕಾರಕ್ಕೆ ಹಿಂತಿರುಗಿಸಿದರು. ಸರ್ಕಾರ ಪ್ರಜೆಗಳ ಮೇಲೆ ಹೇರಿದ ತುರ್ತುಪರಿಸ್ಥಿತಯ ಶಾಸನವು ಅಮಾನವೀಯವೆಂದು ಪ್ರತಿಭಟಿಸಿದ್ದಾರೆಂದು ಬೇರೆ ಹೇಳಬೇಕಾಗಿಲ್ಲ. ಅಂತೆಯೇ ತಮ್ಮ ಜೀವನದ ಮುಖ್ಯ ಘಟ್ಟವಾದ ಮದುವೆಯನ್ನು ಬಂಟ ಸಮುದಾಯದ ಸ್ತ್ರೀಯನ್ನು ಮದುವೆಯಾದರು. ಹಾಗೆಯೇ "ನನ್ನ ಮಗಳು ಪಂಜಾಬಿಯನ್ನು ಮಾಡಿಕೊಂಡಿದ್ದಾಳೆ. ನನ್ನ ಮಗ ತುಳು ಸ್ತ್ರೀಯನ್ನು ಮದುವೆಯಾಗಿರುವನು"[೧೯೦] ಎಂಬುದು ಅವರ ಕುಟುಂಬವೇ ಮಾನವೀಯ ಬಂಧುತ್ವವನ್ನು ಮೆರೆದಿರುವುದನ್ನು ಸಾದರಪಡಿಸುತ್ತದೆ. "ನಾನು ನನ್ನ ಬಾಳನ್ನು ಸಾರ್ಥಕ ಬಾಳನಾಗಿಸಿಕೊಂಡಿದ್ದೇನೆಂಬ ಭಾವನೆ ಇತರರ ಬಾಯಲ್ಲಿ ಬಂದರೆ ನಮ್ಮ ಬದುಕು

ಸಾರ್ಥಕವಾದಂತೆಯೇ ಸರಿ. ಹಿರಿದಾದ ಜೀವನ ನಾಡು, ನುಡಿ, ರಾಷ್ಟ್ರದ ಒಳಿತಿಗೆ ದುಡಿದಾಗ ಮಾತ್ರ ಅದು ಶ್ರೇಷ್ಠವಾಗುತ್ತದೆ.''[೧೯೧] ಎಂಬ ಮಾತು ನಮಗೆಲ್ಲ ಆದರ್ಶನೀಯ.

''ನಾನು ಹುಟ್ಟಿದ್ದು ಮನುಷ್ಯ ಕುಲದಿಂದ''[೧೯೨] ಎನ್ನುವ ಕಾರಂತರು ಜಾತಿ-ಮತಗಳನ್ನು ತಳ್ಳಿಹಾಕುತ್ತಾರೆ. ಯಾವುದೇ ವ್ಯಕ್ತಿ ಹುಟ್ಟುವುದು ಮನುಷ್ಯನಾಗಿ ಆದರೆ ಸಮಾಜದ ಜಾತಿಯ ಕಬಂಧ ಬಾಹುಗಳು ಆತನನ್ನು ಜಾತಿಯ ತೆಕ್ಕೆಗೆ ಹಾಕಿಕೊಳ್ಳುತ್ತವೆ. ಈ ಸಮಾಜದಲ್ಲಿ ಚಿಕ್ಕಂದಿನಿಂದ ನಾವು ಬೆಳೆಯುವ ರೀತಿಯಲ್ಲಿಯೇ ನಮ್ಮ ಅನುಭವಗಳಿಗೆ ಸಂಕೋಲೆ ಬೀಳುತ್ತದೆ. ಬ್ರಾಹ್ಮಣನಿಗೆ ಬೇರೆ ಜಾತಿಯವರ ಮನೆಯ ರೀತಿ ನೀತಿಗಳು ಹೇಗೆಂದು ಗೊತ್ತಿಲ್ಲದ, ಹೊಲೆಯರಿಗೆ ಬೇರೆ ಜಾತಿಯವರ ಮನೆಯ ರೀತಿ ನೀತಿಗಳು ಹೇಗೆಂದು ತಿಳಿಯದೆ ಅನುಭವದಲ್ಲಿ ಕೊರತೆಯುಂಟಾಗುತ್ತದೆ. ಇಂತಹ ಅನುಭವದ ಕೊರತೆಗೆ ಸಮಾಜದ ಜಾತಿ ವ್ಯವಸ್ಥೆಯೇ ಕಾರಣ. ಜೀವನದಲ್ಲಿ ಕಾರಂತರು ಜಾತಿಯತೆಯನ್ನು ವಿರೋಧಿಸಿದರು. ಅವರ ಅನೇಕ ಕಾದಂಬರಿಗಳು ಜಾತ್ಯಾತೀತತೆಯನ್ನು ಬೆಳೆಸುತ್ತವೆ.

'ಗೆದ್ದ ದೊಡ್ಡಸ್ತಿಕೆ' ಕಾದಂಬರಿಯಲ್ಲಿ ನಾಗೇಂದ್ರ ನಾಯಕ ವ್ಯಕ್ತಿಯಾಗುತ್ತಾನೆ. ಆತನ ಮಾನವೀಯ ಗುಣವೇ ಪ್ರಮುಖವಾಗುತ್ತದೆ. ಊರಿನಲ್ಲಿ ನಡೆಯುತ್ತಿದ್ದ ಅಕ್ರಮ ಕಾರುಭಾರವನ್ನು ಚಿಕ್ಕ ವಯಸ್ಸಿನಲ್ಲೇ ಖಂಡಿಸುತ್ತಿದ್ದ. ಜನರಿಗಾಗುತ್ತಿದ್ದ ಅನ್ಯಾಯದ ವಿರುದ್ಧ ಮೌನವಾಗಿಯೇ ಪ್ರತಿರೋಧಿಸುತ್ತಿದ್ದ. ಜಾತೀಯತೆಯ ಹಂಗು ತೊರೆದು ಶಾಲೆಯಲ್ಲಿ ಅಸ್ಪೃಶ್ಯ ಹುಡುಗ ಹ್ಯಾಂಡನ ಗೆಳೆತನ ಮಾಡಿದ್ದ. ಇದರಿಂದ ಅವನ ಸಮಾಜದವರ ಕೋಪಕ್ಕೆ ಗುರಿಯಾದರೂ ಸಹ ಹ್ಯಾಂಡನ ಕೀಳರಿಮೆಯನ್ನು ಅಳಿಸಿ ತುಂಬಾ ಸ್ವೇಚ್ಛೆಯಾಗಿಯೇ ಸುತ್ತಾಡುತ್ತಾನೆ. ಜೀವನದ ಧ್ಯೇಯಾದರ್ಶನಗಳ ಪರಿಕಲ್ಪನೆಯಲ್ಲಿ ತೊಡಗಿದ ಸಂದರ್ಭದಲ್ಲಿಯೇ ತಂದೆ ನಾರಾಯಣಯ್ಯನ ಸಾವಿನಿಂದ ಅನಾಥನಾಗುತ್ತಾನೆ.

ನಾಗಾನಂದ ಎಂಬ ಉಡುಪಿಯ ಯುವಕ ತನ್ನ ಗೆಳೆಯರೊಂದಿಗೆ ಗೋಕರ್ಣಕ್ಕೆ ವಿಹಾರಕ್ಕೆಂದು ಬಂದಿರುತ್ತಾನೆ. ಸ್ನಾನ ಮಾಡಲು ಸಮುದ್ರಕ್ಕಿಳಿದಾಗ ಎಚ್ಚರ ತಪ್ಪಿ ಮುಳುಗುವುದರಲ್ಲಿದ್ದ. ತಂದೆಯ ಕ್ರಿಯಾವಿಧಿಗಳನ್ನು ನಡೆಸಲು ಅಲ್ಲಿಗೆ ಬಂದಿದ್ದ ನಾಗೇಂದ್ರ ಸಮುದ್ರಕ್ಕಿಳಿದು ಸಾವಿನಂಚಿನಲ್ಲಿದ್ದ ನಾಗಾನಂದನನ್ನು ರಕ್ಷಿಸುತ್ತಾನೆ. ಶ್ರೀಮಂತನಾದ ನಾಗಾನಂದ ನಾಗೇಂದ್ರನ ಉಪಕಾರನ್ನು ಮರೆಯದೆ ಕೃತಜ್ಞತೆ ಅರ್ಪಿಸುತ್ತಾನಲ್ಲದೆ ನಾಗೇಂದ್ರನ ಸ್ನೇಹ ಬೆಳಸಿ ಮನೆಗೆ ಆಹ್ವಾನಿಸುತ್ತಾನೆ. ನಂತರ ಉಡುಪಿಯ ನಾಗಾನಂದ ಮನೆಗೆ ಬಂದ ನಾಗೇಂದ್ರನನ್ನು ತನ್ನ ಹಿರಿಯರೆಲ್ಲರಿಗೂ ಪರಿಚಯಿಸಿಕೊಟ್ಟು ಅವನ ವಿದ್ಯಾಭ್ಯಾಸಕ್ಕೆ ವ್ಯವಸ್ಥೆ ಮಾಡಿಕೊಡುತ್ತಾನೆ. ತನ್ನ ಮನೆಯಲ್ಲಿಯೇ ಉಳಿದುಕೊಳ್ಳಲು ಸೂಚಿಸುತ್ತಾನೆ. ನಾಗಾನಂದನ ಆಶ್ರಯ-ಅನುಕೂಲತೆಗಳಿಂದ ನಾಗೇಂದ್ರ ವಿದ್ಯಾಭ್ಯಾಸ ಮುಂದುವರಿಸಿ, ಬಿ.ಎ.ಮುಗಿಸುತ್ತಾನೆ. ಹತ್ತಾರು ವ್ಯಾಪಾರೀ ಉದ್ಯಮಗಳನ್ನು ನಡೆಸುತ್ತಿದ್ದ ನಾಗಾನಂದನ ಸಂಸ್ಥೆಯೊಂದರಲ್ಲಿ ಉದ್ಯೋಗಸ್ಥನಾಗಿ ಕೆಲಸ ಮಾಡಲು ನಾಗೇಂದ್ರನಲ್ಲಿ ವಿನಂತಿಸಿಕೊಳ್ಳುತ್ತಾನೆ.

ಅವನ ಮಾತಿಗೆ ಒಪ್ಪಿ ಐದು ವರ್ಷ ಮಾತ್ರ ಇರುವುದಾಗಿ ಷರತ್ತಿನ ಮೇಲೆ ಉಳಿದುಕೊಳ್ಳುತ್ತಾನೆ. ಕಾಲೇಜು ದಿನಗಳಿಂದಲೇ ನಾಗಾನಂದನ ಚಿಕ್ಕಪ್ಪನ ಮಗಳಾದ ಮೀನಾಕ್ಷಿಯ ಮೇಲೆ ನಾಗೇಂದ್ರ ಅನುರಕ್ತಗೊಂಡಿರುತ್ತಾನೆ. ಶ್ರೀಮಂತ ಕುಟುಂಬಕ್ಕೆ ತಾನು ತಕ್ಕವನಲ್ಲ ಎಂದು ಪರಿಭಾವಿಸಿಯೂ ಮೀನಾಕ್ಷಿಯ ಹಟದಿಂದ ಪ್ರಣಯ ಪತ್ರಗಳ ವಹಿವಾಟು ನಡೆಸಿರುತ್ತಾನೆ. ಮೀನಾಕ್ಷಿ ಮದುವೆಗೆ ಮನೆಯಲ್ಲಿ ವರನೋಡುತ್ತಿದ್ದರೆ, ಅವಳು ವಿದ್ಯಾಭ್ಯಾಸದ ನೆಪದಿಂದ ಮುಂದೂಡುತ್ತಲೇ ಬಂದಿರುತ್ತಾಳೆ. ನಂತರ ನಳಿನಿಯ ಮೂಲಕ ಮೀನಾಕ್ಷಿಯ ತಂದೆಗೆ ವಿಷಯ ತಿಳಿದಾಗ, ಅವರು ನಾಗೇಂದ್ರನ ಮೇಲೆ ಅಪವಾದ ಹೊರಿಸಿ ಕೆಲಸ ಬಿಡುವಂತೆ ಮಾಡುತ್ತಾರೆ. ವಿಷಯ ಗೊತ್ತಿಲ್ಲದ ನಾಗಾನಂದನಿಗೆ ನಾಗೇಂದ್ರ ಕೆಲಸ ಬಿಟ್ಟ ಕಾರಣವನ್ನು ನೆನೆದು 'ನನ್ನಿಂದಾಗಿ ನಿರಾಪರಾಧಿ ನಾಗೇಂದ್ರನಿಗೆ ತೊಂದರೆಯಾಯಿತಲ್ಲ' ಎಂದು ಬಗೆದು ಅವನಿಗೆ ಉಪಕಾರ ಮಾಡಬೇಕೆಂದು ಮೀನಾಕ್ಷಿಯೊಂದಿಗೆ ಸರಳವಾಗಿ ಗುಪ್ತವಾಗಿ ಮದುವೆ ಮಾಡುತ್ತಾನೆ. ತನ್ನ ಊರಿನ ಬಳಿಯಲ್ಲಿಯೇ ಭೂಮಿಕೊಳ್ಳಲು ಸಹಾಯ ಮಾಡುತ್ತಾನೆ. ಅಲ್ಲಿಯೇ ನಾಗೇಂದ್ರ -ಮೀನಾಕ್ಷಿಯರಿಗೆ ಆಶ್ರಯವನ್ನು ನಿರ್ಮಿಸುತ್ತಾನೆ. ಹಿಂದೆ ನಾಗೇಂದ್ರನ ಹೆಸರಿನಲ್ಲಿ ಮಾಡಿದ್ದ ಎರಡು ಲಾರಿಗಳನ್ನು ಅವನ ವಶಕ್ಕೆ ಒಪ್ಪಿಸುತ್ತಾನೆ. ನಾಗೇಂದ್ರ ತನ್ನ ತಾಯಿಯೊಂದಿಗೆ ನಾಗಾನಂದನ ಔದಾರ್ಯ, ದೊಡ್ಡಸ್ತಿಕೆಯನ್ನು ಕೊಂಡಾಡುತ್ತಿರುವ ಸಂದರ್ಭದಲ್ಲಿಯೇ ಮೀನಾಕ್ಷಿಯ ತಂಗಿ ನಳಿನಿಯೊಂದಿಗೆ ಅವಳ ತಂದೆ, ತಾಯಿಯರೂ ಬರುತ್ತಾರೆ. ತಮ್ಮ ತಪ್ಪಿನ ಅರಿವಾಗಿ ಬಂದಿದ್ದ ಬಾಲಕೃಷ್ಣರಾಯರು ನಾಗೇಂದ್ರನನ್ನು ಹಾರ್ದಿಕವಾಗಿ ಅಳಿಯನೆಂದು ಒಪ್ಪಿಕೊಳ್ಳುತ್ತಾರೆ.

ಕಾದಂಬರಿಯಲ್ಲಿ ನಾಗಾನಂದ ತನ್ನ ಜೀವ ಉಳಿಸಿದ ಕಾರಣಕ್ಕಾಗಿ ನಾಗೇಂದ್ರನಿಗೆ ಏನೆಲ್ಲಾ ಸವಲತ್ತುಗಳನ್ನು ಒದಗಿಸುತ್ತಾನೆ. ಶ್ರೀಮಂತನಾದರೂ ಗರ್ವವಿಲ್ಲದ ಬಾಳು ಸಾಗಿಸುತ್ತಾನೆ. ನಾಗೇಂದ್ರನೂ ಕೂಡ ಬಡತನದಿಂದ ಬಂದವನಾದ್ದರಿಂದ ಅನುಚಿತವಾಗಿ ಎಂದೂ ವರ್ತಿಸುವುದಿಲ್ಲ. ಜೀವದ ಗೆಳೆಯರಾಗಿ ಮಾನವೀಕರಣದ ರೂವಾರಿಗಳಾಗಿ ಒಬ್ಬೊರಿಗಿಂತ ಒಬ್ಬರು ಮಿಗಿಲಾಗಿಯೇ ಪ್ರೀತಿಸುತ್ತಾರೆ. ಕೊನೆಗೆ ನಾಗಾನಂದನ ಚಿಕ್ಕಪ್ಪ ಕೂಡ ಅವರ ಪ್ರಯತ್ನಗಳಿಗೆ ಕೈಗೂಡಿಸುವುದು ಅವರ ಮಾನವೀಯ ಮೌಲ್ಯಗಳಿಗೆ ದೊರೆತ ವಿಜಯವೇ ಆಗಿದೆ.

ಈ ಹತ್ತು ಕಾದಂಬರಿಗಳೊಂದಿಗೆ 'ಗೆದ್ದ ದೊಡ್ಡಸ್ತಿಕೆ', 'ಜಾರುವ ದಾರಿಯಲ್ಲಿ', 'ಧರ್ಮರಾಯನ ಸಂಸಾರ', 'ಕರುಳಿನ ಕರೆ', 'ಕಣ್ಣಿದ್ದೂ ಕಾಣರು', 'ಮೊಗ ಪಡೆದ ಮನ', 'ಒಡ ಹುಟ್ಟಿದವರು', 'ನಂಬಿದವರ ನಾಕ, ನರಕ', 'ಇನ್ನೊಂದೇ ದಾರಿ', ಹಾಗೂ 'ಒಂಟಿದನಿ'ಯಂತಹ ಹಲವಾರು ಕಾದಂಬರಿಗಳು ಮಾನವೀಕರಣದ ಪ್ರಕ್ರಿಯೆಗಳನ್ನು ಅನುಚಲನಗೊಳಿಸುತ್ತವೆ. ಕಾರಂತರ ಕಾದಂಬರಿಗಳಲ್ಲಿ ನಾಯಕರು ವಿಜೃಂಭಿಸುವ ಬದಲು ಕಥನದ ವಸ್ತು ವಿಜೃಂಭಿಸುತ್ತವೆ. ಎಲ್ಲ ಕೃತಿಗಳ ವಸ್ತು

ಮಾನವೀಯ ಮೌಲ್ಯದ ನೆಲೆಯಲ್ಲಿಗೊಳ್ಳುತ್ತವೆ. ವಿಡಂಬನೆಯ ಕಾದಂಬರಿಗಳಲ್ಲೂ ಕೂಡ ಓದುಗನಿಗೆ ಸೂಚ್ಯವಾಗಿ ಅರ್ಥವಾಗುವಂತೆ ಮಾನವೀಕರಣವನ್ನು ಬೋಧಿಸಿರುತ್ತಾರೆ. ಹೀಗಾಗಿ ''ಕಾರಂತರೊಡನೆ ಹೋಲಿಸಿ ಚರ್ಚಿಸಬಹುದಾದ ಇನ್ನೊಬ್ಬ ಪ್ರಮುಖ ಕಾದಂಬರಿಕಾರ ಸಿಕ್ಕುವುದಿಲ್ಲ''[೯] ಎಂಬ ಡಿ. ಆರ್. ನಾಗರಾಜರ ಮಾತು ಅರ್ಥಗಳಿಸುತ್ತದೆ.

## ಕಾರಂತರ ಕಾದಂಬರಿಗಳಲ್ಲಿ ಮಾನವೀಕರಣದ ವೈರುಧ್ಯಗಳು

ಕಾರಂತರು ತಮ್ಮ ಕಾದಂಬರಿಗಳ ನಿರೂಪಣಾ ಸಂದರ್ಭದಲ್ಲಿ ಅಮಾನವೀಯ ಮೌಲ್ಯಗಳನ್ನು ಪ್ರಚೋದಿಸುವಂತಹ ಘಟನೆ, ಪಾತ್ರ, ಸಂದರ್ಭಗಳನ್ನು ಚಿತ್ರಿಸಿದ್ದಾರೆ. ಕಾದಂಬರಿಕಾರನಿಗೆ ಯಾವುದೇ ನೈತಿಕ ಮೌಲ್ಯವನ್ನು ಬೋಧಿಸುವ ಸಂದರ್ಭದಲ್ಲಿ ಅದರ ಇನ್ನೊಂದು ಮುಖವಾದ ಅನೈತಿಕತೆಯನ್ನೂ ಪರಿಚಯಿಸುವ ಅನಿವಾರ್ಯತೆಯಿರುತ್ತದೆ. 'ಕಳ್ಳತನ ಮಾಡಬೇಡ' ಎನ್ನುವುದು ನೀತಿಯಾದರೆ 'ಕಳ್ಳತನ' ಎನ್ನುವುದನ್ನು ಪರಿಚಯಿಸಲೇಬೇಕು. 'ಅಹಿಂಸೆ' ಯನ್ನು ಬೋಧಿಸುವಾಗ ಹಿಂಸೆಯ ಮುಖವನ್ನೂ ಪರಿಚಯಿಸಬೇಕಾಗುತ್ತದೆ. ಅಮಾಷತ್ವವನ್ನು ಅನಾವರಣಗೊಳಿಸುವುದು ಅವರ ಕೆಲಸವಲ್ಲ. ಆದರೆ ಅದರಿಂದಾಗುವ ಅನಾಹುತಗಳನ್ನು ತೋರಿಸಿ, ಮಾನವತ್ವವೇ ಅಗತ್ಯವೆಂದು ಹೇಳುತ್ತಾರೆ ಕಾರಂತರು. ಕೆಲವೊಮ್ಮೆ ಮಾನವೀಯ ವಿಚಾರಗಳನ್ನು ಹೇಳುವ ಬದಲು ವಿರುದ್ಧದ ಚಿತ್ರ ಕೊಡಲುಬಹುದು. ಇದು ಮಾತ್ರ ತುಂಬಾ ಅಪಾಯಕಾರಿ. 'ಮೂಕಜ್ಜಿಯ ಕನಸು'ಗಳಲ್ಲಿ ಮೂಕಜ್ಜಿ ಮಾನವೀಕರಣದ ರೂವಾರಿ, ಶಿಕ್ಷಕಿ, ಆದರ್ಶನೀಯ ಪಾತ್ರ ಎಂದೆಲ್ಲಾ ಚಿತ್ರಿಸಿಕೊಂಡಿದ್ದಾರೆ. ಆದರೆ ಮೂಕಜ್ಜಿ ಬಾಲವಿಧವೆಯೆಂದು ಹೇಳುವಾಗ ಅವಳ ಕೇಶಮಂಡನದ ವಿಚಾರ ಹೇಳುತ್ತಾರೆ. ಇದು ಅಪ್ರಸ್ತುತ. ಸಾಮಾಜಿಕ ಜೀವನದಲ್ಲಿ ಕೇಶಮಂಡನವು ಅಮಾನವೀಯ ಎಂದು ಇತ್ತೀಚಿಗೆ ತಿಳುವಳಿಕೆ ಬಂದಿರುವುದರಿಂದ ಜನತೆ ಈಗ ಅನುಪಾಲಿಸುತ್ತಿಲ್ಲ. ಕಾರಂತರು ಸಹ ಈ ವಿಷಯವನ್ನು ಪ್ರಸ್ತಾಪಿಸದೆ ಇದ್ದಿದ್ದರೂ ಕಾದಂಬರಿ ವಸ್ತುವಿಗೆ ಕುಂದುಂಟಾಗುತ್ತಿರಲಿಲ್ಲ. ಅದೇರೀತಿ ನಾಗಿ ಮತ್ತು ಅವಳ ಮಕ್ಕಳು ಹಸಿದು ಬಂದ ದಿನವೊಂದರಂದು ಸೀತೆ(ಸುಬ್ರಾಯನ ಹೆಂಡತಿ) ಅವರಿಗೆ ಊಟ ಹಾಕುವುದು ಹೊರಗಿನ ಅಂಗಳದಲ್ಲಿ. ಈ ಎರಡು ಅಂಶಗಳು ಮಾತ್ರ ಅನಿವಾರ್ಯವಲ್ಲದಿದ್ದರೂ ಚಿತ್ರಿಸಿದ್ದಾರೆ.

'ನಿರ್ಭಾಗ್ಯ ಜನ್ಮ'ದಲ್ಲಿ ವೇಶ್ಯೆಯ ಸಹವಾಸಕ್ಕೆ ಸಿಲುಕಿದ ಆನಂದ ಹೆಂಡತಿಯನ್ನೆ ಮರೆಯುತ್ತಾನೆ. ಅರಿಯದ ಹೆಂಡತಿ ಕಷ್ಟಕ್ಕೆ ಬಲಿಯಾಗುತ್ತಾಳೆ. ಆನಂದ ತೀರಾ ಕಟುಕನಾಗಿ ಬಾಳುವ ಚಿತ್ರಣವಿದ್ದರೂ ಕಾದಂಬರಿಯ ಅಂತ್ಯಕ್ಕೆ ಸುಖಮಯ ಪ್ರಾಪ್ತಿಯಾಗುತ್ತದೆ. ನೈತಿಕತೆಯನ್ನು ಹೇಳಲು ಕಾದಂಬರಿಯು ಯಶಸ್ವಿಯಾಗಿದೆ. 'ಕನ್ಯಾಬಲಿ'ಯಲ್ಲಿ ವೇಶ್ಯೆಯನ್ನರಸಿ ಹೋದವನಿಗೆ ಹಾಸಿಗೆಗೆ ಬರಬೇಕಾಗಿದ್ದವಳು ತನ್ನ ಮಗಳೇ ಆಗಿರುತ್ತಾಳೆ. ಇದು ತಕ್ಷಣಕ್ಕೆ ಅಮಾನವೀಯ ಎಂಬುದನ್ನು ಕೃತಿಕಾರರು ಸಮರ್ಥವಾಗಿಯೇ ನಿರೂಪಿಸಿದ್ದಾರೆ. ಆದರೆ ಸಮಾಜ ಬಾಹಿರವಾದ ಸಂಬಂಧಗಳನ್ನು ಹೇಳುವುದು ಸಮಂಜಸವೇ?

ಎನ್ನುವ ಪ್ರಶ್ನೆ ಕಾಡುತ್ತದೆ. 'ಸ್ವಪ್ನದ ಹೊಳೆ'ಯಲ್ಲಿ ಅಧ್ಯಾಪಕ ಮಡಂಗಾವ್‌ಕರ್ ತನ್ನ ವಿದ್ಯಾರ್ಥಿನಿ ಬನ್ಸಿಯನ್ನು ಮೋಹಿಸುವುದು. ಮೋಹಿಸುವುದು ತಪ್ಪಲ್ಲ. ಆದರೆ ಅವನಿಗೆ ಈಗಾಗಲೇ ಮದುವೆಯಾಗಿದೆ ಹಾಗೂ ಕೊನೆಗೆ ಗರ್ಭಕ್ಕೆ ಕಾರಣನಾಗುತ್ತಾನೆ. ಈ ಎರಡು ಅಂಶಗಳಿಂದ ಆದರ್ಶ ಉಪನ್ಯಾಸಕನ ಪ್ರತಿಷ್ಠೆ ಹಾಳಾಗುತ್ತಿದೆ. 'ಮಾನವೀಕರಣದ ಪಲ್ಲಟ' ಎಂದು ಗುರುತಿಸಿರುವ ಅಂಶ ಇಲ್ಲಿ ವ್ಯಕ್ತವಾಗಿದೆ. ಉಪನ್ಯಾಸಕ ಪಾಠ ಹೇಳುವ ನೆಪದಲ್ಲಿ ಹುಡುಗಿಯನ್ನು ಅನ್ಯದಾರಿಗೆಳೆಯುವುದು, ವೈದ್ಯ ಸ್ತ್ರೀ ರೋಗಿಯನ್ನು ಪರೀಕ್ಷೆ ಮಾಡುವ ನೆಪದಲ್ಲಿ ಅವಳನ್ನು ದುರುಪಯೋಗ ಮಾಡುವುದು ಅಮಾನವೀಯ. ಹೀಗಾಗಿ ಕಾರಂತರು ಮಡಂಗಾವ್‌ಕರ್‌ನ ಅಮಾನುಷ್ಯತ್ವವನ್ನು ಕಿಟ್ಟಣ್ಣನ ಮನುಷ್ಯತ್ವದ ಮೂಲಕ ಮರೆಮಾಚಿಸಿದ್ದಾರೆ. ಶಿಕ್ಷಕ ಸಮಾಜದ ನಿಯಮಪಾಲಕ ಹಾಗೂ ನಿರ್ಮಾತೃವೇ ಹೊರತು ನಿಯಮ ವಿರೋಧಿಯಲ್ಲ. ಈ ಹೇಳಿಕೆಗೆ ಕಿಟ್ಟಣ್ಣನ ಪಾತ್ರ ನಿದರ್ಶನವಾಗುತ್ತದೆ.

'ಚೋಮನ ದುಡಿ' ಕಾದಂಬರಿಯು ಅಮಾನವೀಯ ಪದ್ಧತಿಯೊಂದರ ಅನಾವರಣಕ್ಕೆ ಕಾರಣವಾಗುತ್ತದೆ. ಈ ಹಿಂದೆ ಹೇಳಿದಂತೆ ಅಮಾನವೀಯ ಪದ್ಧತಿಯನ್ನು ತೋರಿಸಿ ಇದು ನಮ್ಮ ಮನುಕುಲಕ್ಕೆ ಅರ್ಹವಲ್ಲ ಎಂದು ತೋರಿಸುವ ಕೆಲಸವನ್ನು ಕಾರಂತರು ಮಾಡಿದ್ದಾರೆ. 'ಹೊಲೆಯನಿಗೆ ಭೂಮಿ ಉಳುಮೆ ಮಾಡುವ ಹಕ್ಕಿಲ್ಲ' ಎನ್ನುವುದು ಮಾನವ ಹಕ್ಕುಗಳಿಗೆ ವಿರುದ್ಧವಾದುದೇ ಆಗಿದೆ. ಇಂಥಹ ಅಮಾನವೀಯ ಪದ್ಧತಿ ಸಲ್ಲದು ಎಂಬುದನ್ನು ತೋರಿಸುವುದು ಕಾರಂತರಿಗೆ ಮುಖ್ಯವಾಗಿತ್ತು. ಆದ್ದರಿಂದ ಇದು ಮಾನವೀಯತೆಯ ಪಲ್ಲಟವೂ ಅಲ್ಲ, ಅಮಾನವೀಯವೂ ಅಲ್ಲ. 'ಸರಸಮ್ಮನ ಸಮಾಧಿ' ಕಾದಂಬರಿಯಲ್ಲಿ ಸುನಾಲಿನಿ, ನಾಗವೇಣಿ, ಬೆಳ್ಳಕ್ಕ-ಮೊದಲಾದವರು ತಮ್ಮ ಲೈಂಗಿಕ ತೃಷೆಯಲ್ಲಿ ಅತೃಪ್ತರಾದ್ದರಿಂದ ಅನ್ಯಪುರುಷನನ್ನು ಬಯಸುವ ಕ್ರಮ ಸರಿಯಲ್ಲ. ಲೈಂಗಿಕತೆಯ ವಿಷಯದಲ್ಲಿ ಅತೃಪ್ತರಾದವರು ತೃಪ್ತತೆಯನ್ನು ಪಡೆಯುವುದು ಸಹ್ಯ. ಆದರೆ ಅದು ಸಮಾಜ ಬಾಹಿರ ನೀತಿಗಳಿಂದ ಆಗಿರದೆ ಪ್ರೀತಿಸಿರುವ ವ್ಯಕ್ತಿಯೊಂದಿಗೆ ಸಲ್ಲಬೇಕಾದುದು.

'ಮರಳಿ ಮಣ್ಣಿಗೆ' ಕಾದಂಬರಿಯ ಲಚ್ಚ ಮಾನವತೆಗೆ ಹೆಸರಾಗುವ ಬದಲು ಅಮಾನುಷತೆಯ ನಾಯಕನಾಗಲು ಇಚ್ಛಿಸುತ್ತಾನೆ. ಇಡೀ ಕಾದಂಬರಿಯುದ್ದಕ್ಕೂ ಬಾಲ್ಯ ಜೀವನವನ್ನು ಹೊರತುಪಡಿಸಿದರೆ, ಮನೆಗೆ-ಊರಿಗೆ-ಓದುಗರಿಗೂ ಸಹ ಅನಾಗರಿಕನಾಗಿ ವರ್ತಿಸುತ್ತಾನೆ. ನಾಗವೇಣಿಯ ಸಂಕಷ್ಟಗಳಿಗೆ ಎಣೆಯಿಲ್ಲ. ಲಚ್ಚನ ಕೈಹಿಡಿದು ಸುಖ ಜೀವನ ನಡೆಸಬೇಕಾಗಿದ್ದ ಜೀವ ಕಣ್ಣೀರಿನಲ್ಲಿಯೇ ಕೈತೊಳೆಯುತ್ತದೆ. ಲಚ್ಚನ ವೇಶ್ಯಾ ಸಹವಾಸ, ಕುದುರೆ ಜೂಜು, ಓದುವಾಗ ಹೊಂದಿದ್ದ ಜಲಜೆಯ ಸಂಬಂಧ, ನಾಗವೇಣಿಗೆ ನಂಬಿಸಿ ಅವಳ ಜೊತೆ ಸಂಬಂಧ ಹೊಂದಿದ್ದು, ಕೊನೆಗೆ ಆಸ್ತಿಯನ್ನೇ ಲಪಟಾಯಿಸಿದ್ದು, ಮಗನನ್ನೇ ಅಸಭ್ಯತನದಿಂದ ಕಂಡದ್ದು- ಈ ಎಲ್ಲ ಘಟನೆಗಳು ಲಚ್ಚನಲ್ಲಿ ಅಮಾನವೀಯತೆಗೆ ಸಾಕ್ಷಿಗಳಾಗುತ್ತವೆ. ಇವು ಅಮಾನವೀಯ ಘಟನೆಗಳು ಎಂದು ಕಾರಂತರು

ಅರ್ಥವತ್ತಾಗಿ ನಿರೂಪಿಸುತ್ತಲೇ ಇವು 'ಮಾನವ' ಮಾಡಬಾರದ ಕೆಲಸಗಳು; ಈ ರೀತಿ ವರ್ತಿಸಿದ್ದೇ ಆದರೆ ಅವನಿಗೆ ಪ್ರಾಪ್ತಿಯಾಗುವ 'ಕೀರ್ತಿ'ಯನ್ನು, 'ಬಿರುದು-ಬಾಲಿ'ಗಳನ್ನು ಸೂಕ್ಷ್ಮವಾಗಿಯೇ ನಿರ್ದೇಶಿಸುತ್ತಾರೆ.

ಕಾದಂಬರಿಕಾರನಿಗೆ ಓದುಗನೂ ಅಸಹ್ಯಪಡಬಹುದಾದ ವ್ಯಕ್ತಿತ್ವವನ್ನು ರೂಪಿಸುವ ಹರಕತ್ತು ಇರಬೇಕಾದುದು ಅನಿವಾರ್ಯ ಹಾಗೂ ಅಗತ್ಯಕೂಡ. ಉದಾತ್ತ ಯೋಚನೆಗಳ, ಗುಣಗಳ ದೀರೋದಾತ್ತ ನಾಯಕ ಯಾವ ರೀತಿ ಸೃಜನ ಹೊಂದುತ್ತಾನೋ ಅದೇ ರೀತಿ ಆ ನಾಯಕನಿಗೆ ಪ್ರತಿಸ್ಪರ್ಧಿಯೆನ್ನಬಹುದಾದ ಖಳನಾಯಕನೂ ಉದ್ಭವಿಸಬೇಕು. ಆಗಲೇ ನಾಯಕ ಪಾತ್ರಕ್ಕೆ ಕಳೆಕಟ್ಟುವುದು. ವಾದಕ್ಕೆ-ಪ್ರತಿವಾದ, ತಂತ್ರಕ್ಕೆ-ಪ್ರತಿತಂತ್ರ ಅಂತೆಯೇ ಮಾನವೀಕರಣಕ್ಕೆ-ಅಮಾನವೀಕರಣ ಎದುರಾಗಿ ನಿಲ್ಲಬೇಕು. ರಾಮ ಐತಾಳರನ್ನು ಉತ್ತಮ ಮನುಷ್ಯ ಎನ್ನುವುದು ರಾಮಾಯಣದ ಶ್ರೀರಾಮನಿಗಿಂತಲೂ ಉತ್ತಮನಲ್ಲ. ಆದರೆ (ಅದೇ ಕಾದಂಬರಿ) ಲಚ್ಚಗಿಂತ ಉತ್ತಮ ಎಂದು ಲಚ್ಚನೊಂದಿಗೆ ಹೋಲಿಕೆ ಮಾಡಿದಾಗ ಮಾತ್ರ ಹೇಳಬೇಕಾಗುತ್ತದೆ.

'ಬೆಟ್ಟದ ಜೀವ' ಕಾದಂಬರಿಯ ಶಂಭು ತನ್ನ ತಂದೆತಾಯಿಯರಿಂದ ದೂರುವುಳಿಯುತ್ತಾನೆ. ಮನೆಯಲ್ಲಿ ಸದಸ್ಯಳಂತಿರುವ ಲಕ್ಷ್ಮಿಯೊಂದಿಗೆ ಸಖ್ಯ ಬೆಳೆಸುವುದು ಅವನ ವಾಂಛೆಯಾಗಿದೆ. ಆದರೆ ಅದಕ್ಕೆ ಲಕ್ಷ್ಮಿಯ ಸಮ್ಮತಿಯಿಲ್ಲದ್ದರಿಂದ ಅದರ ಆಸೆಯನ್ನೆ ಬಿಟ್ಟು ಊರನ್ನೇ ಬಿಡುತ್ತಾನೆ. ತಂದೆ-ತಾಯಿಯರಿಂದ ದೂರ ಹೋಗುವ-ಇಷ್ಟು ವರ್ಷ ಹಾಕಿದ ಜೀವಗಳಿಗೆ ಹತ್ತಿರವಿದ್ದು ಕೃತಜ್ಞತೆಗಳನ್ನು ಸೂಚಿಸಿದಂತಹ ಅಮಾನುಷತೆಗೆ ಶಂಭು ಬಲಿಯಾಗುತ್ತಾನೆಂದು ಕಾರಂತರು ಶಂಭುವಿನ ಅಮಾನುಷತೆಯನ್ನು ಹೇಳಲು ಪ್ರಯತ್ನಿಸಿದ್ದಾರೆ. ಈ ಸಂದರ್ಭದಲ್ಲಿ ಒಂದು ಪ್ರಶ್ನೆ ಎದುರಾಗುತ್ತದೆ. 'ಸರಸಮ್ಮನ ಸಮಾಧಿ'ಯ ಸುನಾಲಿನಿ ಚಂದ್ರಯ್ಯನನ್ನು, 'ಕೇವಲ ಮನುಷ್ಯರು' ಕಾದಂಬರಿಯ ಶಾಂತಿ ಅಭಿನ್ನಾನಂದ ಸ್ವಾಮಿಜಿಯನ್ನು, ಜಾರುವ ದಾರಿಯಲ್ಲಿನ ಗುಲಾಬಿ ಡಾ.ಶಿವಪ್ಪನವರನ್ನು, 'ಹೆತ್ತಳಾ ತಾಯಿ'ಯ ಕುಸುಮೆ ವೆಂಕಪ್ಪನನ್ನು ಇಷ್ಟಪಡುವುದಾದರೆ 'ಬೆಟ್ಟದ ಜೀವ'ದ ಶಂಭು ಲಕ್ಷ್ಮಿಯನ್ನು ಇಷ್ಟಪಡುವುದರಲ್ಲಿ ಯಾವ ತಪ್ಪಿದೆ? ಈ ಪ್ರಶ್ನೆ ತುಂಬಾ ಸೂಕ್ಷ್ಮವಾಗಿದೆ. ಹೆಣ್ಣಿಗೆ ಲೈಂಗಿಕ ಕಾಮನೆ ಎಷ್ಟು ಮುಖ್ಯವೋ ಗಂಡಿಗೂ ಅಷ್ಟೆ ಮುಖ್ಯವೆಂಬುದನ್ನು ಕಾರಂತರು ಗೊತ್ತಿದ್ದು ಹೀಗೆ ಯಾಕೆ ಮಾಡಿದರೋ?

'ಮುಗಿದ ಯುದ್ಧ'ದಲ್ಲಿ ಯುದ್ಧ ಹಾಗೂ ತುರ್ತುಪರಿಸ್ಥಿತಿಗಳಲ್ಲಿ ವ್ಯಾಪಾರಗಾರರು ಮಾನವೀಯತೆಯನ್ನು ಮರೆತು ವಾಣೀಜ್ಯೀಕರಣಗೊಳ್ಳುತ್ತಾರೆ. ಒಂದಕ್ಕೆ ಎರಡು ಬೆಲೆ ಮಾಡಿ ಕಾಳಸಂತೆಯಲ್ಲಿ ವಸ್ತುಗಳನ್ನು ಮಾರಿ ಲಾಭಗಳಿಸುವುದೇ ಅವರ ಗುರಿಯಾಗುತ್ತದೆ. ಬಡವರ ಸಂಕಷ್ಟಗಳು ಅರ್ಥವಾಗದೆ ತಮ್ಮ ಅಭಿವೃದ್ಧಿಯನ್ನು ಮಾತ್ರ ಗಮನದಲ್ಲಿಟ್ಟುಕೊಳ್ಳುತ್ತಾರೆ. ಇಂತಹ

ಎಷ್ಟೋ ಜನ ನಮ್ಮ ನಡುವಿದ್ದಾರೆ. ಇಂತಹ ಕ್ರಮಗಳನ್ನು ಮಾಡಬಾರದೆನ್ನುವ ನೀತಿಯನ್ನು ಕೊನೆಗೆ ಕಾದಂಬರಿ ಹೇಳುತ್ತದೆ.

'ಔದಾರ್ಯದ ಉರುಳಲ್ಲಿ'ನ ಡಾ.ನಂದ, ಪ್ರಭುದೇವ, ಪುರುಷೋತ್ತಮರಂತಹ ಸ್ವಾರ್ಥಿಗಳು ಮಾನವೀಕರಣವನ್ನು ಮರೆಯುತ್ತಾರೆ. ಕಾರ್ಮಿಕರ ಹಿತಗಳನ್ನು ಬಲಿಕೊಡುವುದು, ರಾಧಾಕೃಷ್ಣನ 'ಔದ್ಯೋಗಿಕ ಸಂಸ್ಥೆ'ಗೆ ಒಂದಂಕಿ ಲಾಟರಿ ಮೂಲಕ ಸಂಗ್ರಹಿಸುವ ಹಣ ಮೋಸದ್ದಾಗುತ್ತದೆ. ಶಾಲೆಯ ಹೆಸರನ್ನು ದುರುಪಯೋಗ ಪಡಿಸಿಕೊಳ್ಳುವಂತಹ ಅನೇಕ ಪ್ರಭುದೇವರು ಇಂದು ಇದ್ದಾರೆ. ಇಂತಹವರನ್ನು ನಿಯಂತ್ರಿಸುವ ರಾಧಾಕೃಷ್ಣರಂತಹ ಮಾನವೀಯ ರೂವಾರಿಗಳು ಅಗತ್ಯ. ಔದಾರ್ಯದ ಉರುಳಿಲ್ಲ ಅಮಾನವೀಕರಣಕ್ಕಿಂತಲೂ ಮಾನವೀಕರಣವನ್ನೇ ಬೋಧಿಸುತ್ತದೆ.

'ಮೊಗ ಪಡೆದ ಮನ', 'ಸನ್ಯಾಸಿಯ ಬದುಕು', 'ಕರುಳಿನ ಕತೆ', 'ಚಿಗುರಿದ ಕನಸು', 'ಬತ್ತದ ತೊರೆ', 'ಒಡಹುಟ್ಟಿದವರು', 'ನಂಬಿದವರ ನಾಕ-ನರಕ', 'ಅಳ-ನಿರಾಳ', 'ಇದ್ದರೂ ಚಿಂತೆ', 'ಇನ್ನೊಂದೇ ದಾರಿ', 'ಕೇವಲ ಮನುಷ್ಯರು', 'ಧರ್ಮರಾಯನ ಸಂಸಾರ', 'ಅಂಟದ ಅಪರಂಜಿ'- ಮೊದಲಾದ ಕಾದಂಬರಿಗಳು ಕಾದಂಬರಿಯ ಬೆಳವಣಿಗೆಗಾಗಿ ಅಲ್ಲಲ್ಲಿ ಅಮಾನವತ್ವವನ್ನು ಹೇಳುವಂತಹ ಪಾತ್ರ-ಘಟನೆಗಳು ನಿರೂಪಿತಗೊಳ್ಳುತ್ತದೆ. ಅವುಗಳ ಬೆನ್ನಲ್ಲೆ ಕಾರಂತರು ಮಾನವೀಯತೆಯನ್ನು ಮೆರೆಸುವಂತಹ ಚಿತ್ರಣಕೊಡುತ್ತಾರಾದ್ದರಿಂದ ಅಮಾನವೀಕರಣ ಇಲ್ಲಿ ಗೌಣ.

'ಸಮೀಕ್ಷೆ', 'ಮೂಕಜ್ಜಿಯ ಕನಸುಗಳು', 'ಸ್ವಪ್ನದ ಹೊಳೆ', 'ಮೈಮನಗಳ ಸುಳಿಯಲ್ಲಿ' - ಕಾದಂಬರಿಗಳಲ್ಲಿನ ಪಾತ್ರಗಳಾದ ಕ್ರಮವಾಗಿ ವಾಸುದೇವ, ಶೀನಪ್ಪ, ಮಡಗಾಂವ್‌ಕರ್, ಕಂ.ವಾ.ಪೈಗಳು ಅಮಾನವೀಯ ತತ್ವಗಳ ವಕ್ತಾರರಂತೆ ನಡೆದುಕೊಳ್ಳುತ್ತಾರೆ. ವಾಸುದೇವ ಧ್ಯೇಯ ಆದರ್ಶಗಳನ್ನಿಟ್ಟುಕೊಂಡು ವೇಶ್ಯೆಕುಲದ ಕುಸುಮೆಯನ್ನು ಮದುವೆಯಾಗಿಯೂ ಅವಳನ್ನು ಶಂಕಿಸಿ ಆತ್ಮಹತ್ಯೆಗೆ ಪ್ರಚೋದಿಸುವುದು ಮಾತ್ರ ಓದುಗರ ಮನಸ್ಸಿನಲ್ಲಿ ಸ್ಪಷ್ಟವಾಗಿ ಅಮಾನವೀಯವಾಗಿ ಉಳಿಯುತ್ತದೆ. ಶೀನಪ್ಪ-ನಾಗಿಯನ್ನು ಅಮರ ಪ್ರೇಮವೆಂದೋ ಅಥವಾ ದೈಹಿಕ ತೃಷೆಯ ಈಡೇರಿಕೆಗೋ ಅವಳನ್ನು ನಂಬಿಸಿ ಪ್ರೇಮಿಸಿ ಕೊನೆಗೆ ಕೈಕೊಟ್ಟದ್ದಲ್ಲದೆ ಅವಳ ಸಂಸಾರ ಹಾಳಾಗುವಂತೆ ಮಾಡುತ್ತಾನೆ. ಇಂತಹ ಕೃತ್ಯಗಳು ಮಾನವನಿಗಲ್ಲವಾದ್ದರಿಂದ; ಶೀನಪ್ಪನ ಅಮಾನವೀಯತೆಯನ್ನು ಮೂಕಜ್ಜಿ ನಾಗಿ-ರಾಮಣ್ಣರನ್ನು ಒಂದುಗೂಡಿಸುವುದರ ಮೂಲಕ ಮರೆ ಮಾಚಿಸುತ್ತಾಳೆ. ಶೀನಪ್ಪ ಮಾತ್ರ ಓದುಗರಿಂದ ಅನುಕಂಪಗಳಿಸದೆ ಅಮಾನವೀಯನಾಗುತ್ತಾನೆ. ಸ್ವಪ್ನದ ಹೊಳೆಯ ಮಡಗಾಂವ್‌ಕರ್ ಮದುವೆಯಾಗಿಯೂ ತನ್ನ ವಿದ್ಯಾರ್ಥಿನಿ ಬನ್ಸಿಯನ್ನು ಮೋಹಿಸಿ-ಮೋಸ ಮಾಡುವುದು ಅಮಾನವೀಕರಣದ ಉತ್ತುಂಗತೆಯಲ್ಲದೆ ಮತ್ತೇನು?. 'ಮೈಮನಗಳ ಸುಳಿಯಲ್ಲಿ' ಮಂಜಳೆಯನ್ನು ಕೂಡುವ ಪೈಗಳು, ಬಂಗಾರದ ಉಂಗುರವೆಂದು ಹೇಳಿ ರೋಡ್ ಗೋಲ್ಡ್ ಕೊಟ್ಟು ಅವಳಿಂದ

ಸುಖ ಪಡೆದು ಹೋಗುವಂತಹವರು ಮಾನವೀಯ ಮೌಲ್ಯಗಳ ಪ್ರತಿಪಾದಕರಾಗುವುದಿಲ್ಲ. ಮಂಜುಳೆ ಮಗು ಪಡೆಯುವ ಬಯಕೆಯಿಂದ ಅವನನ್ನು ಇಷ್ಟಪಟ್ಟರೆ, ಪ್ರತಿಯಾಗಿ ಅವನು ತೆವಲು ತೀರಿಸಿಕೊಳ್ಳುವ ಕೇವಲನಾಗುತ್ತಾನೆ.

ಈ ಪಾತ್ರಗಳ ಅಮಾನವೀಕರಣದಿಂದ ಸಮಾಜದ ಸ್ವಾಸ್ಥ್ಯ ಕೆಡುತ್ತದೆ. ಅಂತಹವುಗಳನ್ನು ವಿಜೃಂಭಿಸುವುದು ಶ್ರೇಷ್ಠ ಕೃತಿಕಾರನ ಕೆಲಸವಲ್ಲ. ಅಂತೆಯೇ ನರಹಳ್ಳಿ ಬಾಲಸುಬ್ರಹ್ಮಣ್ಯ ಅವರು ಎತ್ತುವ ಪ್ರಶ್ನೆ. ಸೂರ-ಕಾಳಿಯರಂತಹವರನ್ನು ವಿಜೃಂಭಿಸುವುದು ಕೂಡ ಲೇಖಕನ ಜವಾಬ್ದಾರಿಯಲ್ಲ.

## ಅಡಿಟಿಪ್ಪಣಿಗಳು

೧. ಶಿವರಾಮ ಕಾರಂತ, ಬಾಳ್ವೆಯೇ ಬೆಳಕು, ೧೯೯೯, ಪು. ೪

೨. ಅದೇ, ಪು. ೪೪

೩. ಅದೇ, ಪು. ೪೨

೪. ಅದೇ, ಪು. ೯೫

೫. ಅದೇ, ಪು. ೯೯

೬. ಅದೇ, ಪು. ೧೦೨

೭. ಅದೇ, ಪು. ೧೪೩

೮. ಅದೇ, ಪು. ೧೪೪

೯. ಚೋಮನ ದುಡಿ, ೧೯೯೨, ಪು. ೨೪

೧೦. ಅದೇ, ಪು. ೨೪

೧೧. ಅದೇ, ಪು. ೨೫

೧೨. ಅದೇ, ಪು. ೨೫

೧೩. ಅದೇ, ಪು. ೪೬

೧೪. ಅದೇ, ಪು. ೧೧೧

೧೫. ಅದೇ, ಪು. ೧೨೧

೧೬. ಅದೇ, ಪು. ೫೨-೫೩

೧೭. ಅದೇ, ಪು. ೩೨

೧೮. ಅದೇ, ಪು. ೩೨

೧೯. ಅದೇ, ಪು. ೭೮

೨೦. ಅದೇ, ಪು.೪೮

೨೧. ಜಿ. ಎಸ್. ಆಮೂರ, ಕನ್ನಡ ಕಥನ ಸಾಹಿತ್ಯ: ಕಾದಂಬರಿ, ೧೯೯೪, ಪು. ೧೨೬-೧೨೭

೨೨. ಮರಳಿ ಮಣ್ಣಿಗೆ, ೧೯೯೦, ಪು. ೫೮

೨೩. ಅದೇ, ಪು. ೨೩೧

೨೪. ಅದೇ, ಪು. ೧೧೦

೨೫. ಅದೇ, ಪು. ೧೧೧

೨೬. ಅದೇ, ಪು. ೧೪೯

೨೭. ಅದೇ, ಪು. ೧೫೧

೨೮. ಅದೇ, ಪು. ೧೬೪

೨೯. ಅದೇ, ಪು. ೨೧೯

೩೦. ಅದೇ, ಪು. ೨೧೦

೩೧. ಅದೇ, ಪು. ೨೪೦

೩೨. ಅದೇ, ಪು. ೨೪೨

೩೩. ಡಿ.ಎಲ್.ಎನ್., ಕಾರಂತ ಪ್ರಪಂಚ, ಪು. ೪೪೯

೩೪. ಅದೇ, ಪು. ೪೪೮

೩೫. ಅದೇ, ಪು. ೪೪೬

೩೬. ಅದೇ, ಪು. ೨೯೨

೩೭. ಬೆಟ್ಟದ ಜೀವ, ಮುನ್ನುಡಿ

೩೮. ಎಲ್. ದ್ವಾರಕಾನಾಥ, ಕಾರಂತ ಪ್ರಪಂಚ, ೧೯೬೯, ಪು. ೪೮೭

೩೯. ಅದೇ, ಪು.೫೬

೪೦. ಬಾಳ್ವೆಯೇ ಬೆಳಕು, ಪು.

೪೧. ಶಿವರಾಮ ಕಾರಂತ, ಬೆಟ್ಟದ ಜೀವ, ಜುಲೈ ೯೮, ಪು.೬೨

೪೨. ಜುಲೈ, ೯೮, ಪು. ೫೯

೪೩. ಅದೇ, ಪು. ೬೮

೪೪. ಅದೇ, ಪು. ೬೮

೪೫. ಅದೇ, ಪು. ೬೮

೪೬. ಆಗಸ್ಟ್, ಪು. ೫೨

೪೭. ಅದೇ., ಪು. ೬೫

೪೮. ಅದೇ, ಪು.೬೫

೪೯. ಅದೇ, ಪು. ೬೫

೫೦. ಸೆಪ್ಟೆಂಬರ್, ೧೯೯೮, ಪು. ೬೨

೫೧. ಅದೇ, ಪು. ೬೩

೫೨. ಅದೇ, ಪು. ೬೩

೫೩. ಅಕ್ಟೋಬರ್, ೧೯೯೮, ಪು. ೬೪

೫೪. ಅದೇ, ಪು. ೬೪

೫೫. ಅದೇ, ಪು. ೬೪

೫೬. ಅದೇ, ಪು. ೬೮

೫೭. ಅದೇ, ಪು. ೭೪

೫೮. ಅದೇ, ಪು. ೭೫

೫೯. ಸೆಪ್ಟೆಂಬರ್, ೧೯೯೮, ಪು. ೭೨

೬೦. ಅದೇ, ಪು. ೭೩

೬೧. ಅದೇ, ಪು. ೭೩

೬೨. ಅಕ್ಟೋಬರ್, ೧೯೯೮, ಪು. ೬೩

೬೩. ಅದೇ, ಪು. ೬೪

೬೪. ನವೆಂಬರ್, ೧೯೯೮, ಪು. ೬೩

೬೫. ಅದೇ, ಪು. ೬೩

೬೬. ಬಾಳ್ವೆಯೇ ಬೆಳಕು, ೧೯೯೯, ಪು. ೧೧೦

೬೭. ಹುಚ್ಚು ಮನಸ್ಸಿನ ಹತ್ತುಮುಖಗಳು, ೧೯೯೧, ಪು. ೧೨೫

೬೮. ಅಕ್ಟೋಬರ್ ೧೯೯೮, ಪು. ೬೯

೬೯. ವಿವರಕ್ಕೆ ನೋಡಿ: ಪೋಲಂಕಿ ರಾಮಮೂರ್ತಿ, ಕಾದಂಬರಿಕಾರರಾಗಿ ಕಾರಂತ, ೧೯೮೩, ಪು. ೮೩

೭೦. ಎಲ್. ಎಸ್. ಶೇಷಗಿರಿರಾವ್, ಕಾದಂಬರಿ-ಸಾಮಾನ್ಯ ಮನುಷ್ಯ, ೧೯೫೭, ಪು. ೧೧೪-೧೧೫

೭೧. ಜಿ. ಎಸ್. ಆಮೂರ, ಕಾರಂತ ಪ್ರಪಂಚ, ೧೯೬೯, ಪು. ೪೮೫

೭೨. ಔದಾರ್ಯದ ಉರುಳಲ್ಲಿ, ೧೯೮೮, ಮುನ್ನುಡಿ

೭೩. ಅದೇ, ಪು. ೪೧

೭೪. ಅದೇ, ಪು. ೧೮೫

೭೫. ಅದೇ, ಮುನ್ನುಡಿ

೭೬. ಅದೇ, ಪು.೧೧೬

೭೭. ಅದೇ, ಪು. ೧೨೦

೭೮. ಅದೇ, ಪು. ೧೨೪

೭೯. ಅದೇ, ಪು. ೧೨೭

೮೦. ಅದೇ, ಪು. ೧೩೧

೮೧. ಅದೇ, ಪು. ೧೩೨

೮೨. ಅದೇ, ಪು. ೧೩೨

೮೩. ಅದೇ, ಪು. ೧೫೧

೮೪. ಅದೇ, ಪು. ೧೫೨

೮೫. ಅದೇ, ಪು. ೩೯೧

೮೬. ಅದೇ, ಪು. ೪೦೨

೮೭. ಅದೇ, ಪು. ೪೦೩

೮೮. ಅದೇ, ಪು. ೪೧೩

೮೯. ಅದೇ, ಪು. ೪೨೮

೯೦. ಅದೇ, ಪು. ೪೬೧

೯೧. ಅದೇ, ಪು. ೪೬೧

೯೨. ಅದೇ, ಪು. ೪೬೧

೯೩. ಅದೇ, ಪು. ೪೬೨

೯೪. ಅದೇ, ಪು. ೪೬೨

೯೫. ಅದೇ, ಪು. ೪೬೬

೯೬. ಅದೇ, ಪು. ೧೫೫

೯೭. ಅದೇ, ಪು. ೨೧೧

೯೮. ಅದೇ, ಪು. ೨೫೨

೯೯. ಅದೇ, ಪು. ೩೫೯

೧೦೦. ಅದೇ, ಪು. ೩೯೬

೧೦೧. ಸಮೀಕ್ಷೆ, ೧೯೬೪, ಪು. ೬೩

೧೦೨. ಅದೇ. ಪು. ೬೩

೧೦೩. ಟಿಪ್ಪಣಿ: ಕಾರಂತರು ವೇಶ್ಯೆಯರ ಮಕ್ಕಳ ಮದುವೆ ಮಾಡುವುದಾಗಿ ಗಾಂಧೀಜಿಯವರಿಗೆ ಪತ್ರ ಬರೆದಾಗ-ಗಾಂಧೀಜಿಯವರು 'ಹುಡುಗಿಯರು ಯಾವಜ್ಜೀವ ಬ್ರಹ್ಮಚರ್ಯೆ ನಡೆಯಿಸಲಿ' ಎಂದು ಬರೆದಿದ್ದರು. ಅದನ್ನು ಟೀಕಿಸಿ ಕಾರಂತರು 'ಮನುಷ್ಯ ಸ್ವಭಾವದ ಪರಿಚಯವೇ ಗಾಂಧೀಜಿಗಿಲ್ಲ! ತಾನು ಮಾಡಿದಂತೆ ಎಲ್ಲರಿಂದಲೂ ಆಗುತ್ತದೆ ಎಂದು ತಿಳಿದುಕೊಂಡಿದ್ದಾರೆ' ಎನಿಸಿತು. ಈ ರೀತಿ ಹೇಳಿ ಕಾರಂತರು ರಾ-ನ ಸಹೋದರಿಯರನ್ನು ಯೋಗ್ಯ ವರನಿಗೆ ಮದುವೆ ಮಾಡಿ ಗಾಂಧೀಜಿಯ ವಿಚಾರವನ್ನು ಧಿಕ್ಕರಿಸುತ್ತಾರೆ. ಹುಚ್ಚು ಮನಸ್ಸಿನ ಹತ್ತು ಮುಖಗಳು, ೧೯೯೧, ಪು.೫೩-೫೪.

೧೦೪. ಸಮೀಕ್ಷೆ, ೧೯೬೪, ಪು. ೭೬

೧೦೫. ಅದೇ, ಪು. ೧೧೫

೧೦೬. ಅದೇ, ಪು. ೨೧೬

೧೦೭. ಅದೇ, ಪು. ೧೯೬

೧೦೮. ಅದೇ, ಪು. ೧೯೮

೧೦೯. ಅದೇ, ಪು. ೨೬೧

೧೧೦. ಅದೇ, ಪು. ೨೬೩

೧೧೧. ಸಮೀಕ್ಷೆ, ಮುನ್ನುಡಿ

೧೧೨. ಅದೇ, ಪು. ೨೫೩-೨೫೪

೧೧೩. ಅದೇ, ಪುಟ. ೬೯

೧೧೪. ಅದೇ, ಪು. ೧೧೩

೧೧೫. ಅದೇ, ಪು. ೧೪೧

೧೧೬. ಅದೇ, ಪು. ೧೫೪

೧೧೭. ಅದೇ, ಪು. ೩೩

೧೧೮. ಅದೇ, ಪು. ೪೮

೧೧೯. ಅದೇ, ಪು. ೪೮

೧೨೦. ಅದೇ, ಪು. ೫೨

೧೨೧. ಅದೇ, ಪು. ೬೫

೧೨೨. ಅದೇ, ಪು. ೧೭೩

೧೨೩. ಅದೇ, ಪು. ೧೭೮

೧೨೪. ಅದೇ, ಪು. ೨೦೦

೧೨೫. ಅದೇ, ಪು. ೨೦೯

೧೨೬. ಅದೇ, ಪು. ೨೩೭

೧೨೭. ಅದೇ, ಪು. ೨೦೪

೧೨೮. ಅದೇ, ಪು. ೨೩೭

೧೨೯. ಅದೇ, ಪು. ೨೦೨

೧೩೦. ಅದೇ, ಪು. ೨೩೯

೧೩೧. ಜಿ. ಎಸ್. ಆಮೂರ, ಕನ್ನಡ ಕಥನ ಸಾಹಿತ್ಯ : ಕಾದಂಬರಿ, ೧೯೯೪, ಪು. ೧೬೨

೧೩೨. ಶಾಂತಿನಾಥ ದೇಸಾಯಿ, ಕಾರಂತ ಪ್ರಪಂಚ, ೧೯೬೯, ಪು.೫೦೬

೧೩೩. ಅದೇ, ಪು. ೫೦೬-೫೦೭.

೧೩೪. ಅದೇ, ಪು. ೫೦೭

೧೩೫. ಸಂ.ಗೋಪಾಲ ಕೃಷ್ಣ ಅಡಿಗ, ಕಾರಂತರ ಸಂದರ್ಶನ, ಸಾಕ್ಷಿ, ಏಪ್ರಿಲ್, ೧೯೭೮, ಪು. ೧೨೭

೧೩೬. ವಿವರಗಳಿಗೆ ನೋಡಿ : ಕು.ಶಿ.ಹರಿದಾಸಭಟ್ಟ, ಕಾರಂತ ಪ್ರಪಂಚ, ೧೯೬೯, ಪು. ೧೯೩

೧೩೭. ಡಿ.ವಿ.ಕೆ.ಮೂರ್ತಿ; ಜೀವನ ಮೌಲ್ಯಗಳು ಮತ್ತು ಸಾಹಿತ್ಯ, ೧೯೮೯, ಪು. ೧೧೧

೧೩೮. ವಿವರಗಳಿಗೆ ನೋಡಿ : ಅದೇ,

೧೩೯. ಪಾ.ವೆಂ.ಆಚಾರ್ಯ, ಕಾರಂತರ ಕಾದಂಬರಿಗಳಲ್ಲಿ ಜೀವನದೃಷ್ಟಿ, ಕಾದಂಬರಿ ಕಣ್ಣಲ್ಲಿ ಕಾರಂತರು, ೧೯೯೨, ಪು. ೧೩೮

೧೪೦. ಸ್ವಪ್ನದ ಹೊಳೆ, ೧೯೬೬, ಪು. ೧೭೯

೧೪೧. ಅದೇ, ಪು. ೧೭೯

೧೪೨. ಅದೇ, ಪು. ೨೪೪

೧೪೩. ಅದೇ, ಪು. ೨೪೫

೧೪೪. ಮೂಕಜ್ಜಿಯ ಕನಸುಗಳು, ೧೯೮೭, ಪು. ೧೬

೧೪೫. ಅದೇ, ಪು. ೨೪೫

೧೪೬. ಕಾರಂತ ಪ್ರಪಂಚ ಪು. ೪೨೩

೧೪೭. ಮೂಕಜ್ಜಿಯ ಕನಸುಗಳು, ಪು. ೩೬

೧೪೮. ಅದೇ, ಪು. ೨೨೦

೧೪೯. ಅದೇ, ಪು. ೨೨೦

೧೫೦. ಅದೇ, ಪು. ೧೯೧

೧೫೧. ಅದೇ, ಪು. ೨೩೫

೧೫೨. ಮೂಕಜ್ಜಿಯ ಕನಸುಗಳು, ಪು. ೨೨೯-೨೩೦

೧೫೨a. ಜಿ.ಎಸ್.ಆಮೂರ, ೧೯೯೪, ಪು. ೧೬೯

೧೫೩. ಮೂಕಜ್ಜಿಯ ಕನಸುಗಳು, ಪು. ೧೭೧

೧೫೪. ಅದೇ, ಪು. ೨೨೧-೨೨೨

೧೫೫. ಅದೇ, ಪು.೨೨೨

೧೫೬. ಡಿ.ಎ.ಶಂಕರ್ ಮೂಕಜ್ಜಿಯ ಕನಸುಗಳು : ಒಂದು ಅಭ್ಯಾಸ. ಸಾಕ್ಷಿ ೧೯೭೮ ಜುಲೈ ಪು. ೪೮

೧೫೭. ಮೈಮನಗಳ ಸುಳಿಯಲ್ಲಿ, ೧೯೮೩, ಪು. ೨೭೮

೧೫೭. ಅದೇ, ಪು. ೮೫

೧೫೯. ಉದ್ಧೃತ: ಟಿ.ಪಿ.ಅಶೋಕ, ಕಾರಂತ ಮಂಥನ, ೧೯೯೩, ೨೯೨

೧೬೦. ಮೈಮನಗಳ ಸುಳಿಯಲ್ಲಿ, ೧೯೮೩, ಪು. ೨೮೪

೧೬೧. ಟಿ.ಪಿ.ಅಶೋಕ, ಕಾರಂತ ಮಂಥನ, ೧೯೯೩, ಪು. ೪೧೫

೧೬೨. ಹುಚ್ಚು ಮನಸ್ಸಿನ ಹತ್ತು ಮುಖಗಳು, ೧೯೯೧, ಪು. ೫೫

೧೬೩. ಅದೇ, ಪು. ೫೭

೧೬೪. ಅದೇ, ಪು. ೩೨೪-೩೨

೧೬೫. ಎಲ್.ಎಸ್.ಶೇಷಗಿರಿರಾವ್, ಕಾರಂತ ಮಂಥನ, ೧೯೯೪, ಪು. ೬೩-೬೪

೧೬೬. ಎಚ್.ವೈ. ಶಾರದಾ ಪ್ರಸಾದ್, ಅನುಕಂಪ, ಜ್ಞಾನಗಳಿಗೆ ಮೀಸಲಾದ ಬಾಳು ಸಂ.ಟಿ.ಪಿ.ಅಶೋಕ. ಕಾರಂತ ಮಂಥನ, ೧೯೯೪, ಪು. ೫೧

೧೬೭. ಹಾ.ಮಾ.ನಾಯಕ, ಕಾರಂತ ಮಂಥನ, ೧೯೯೪, ಪು. ೫೫

೧೬೮. ಮೈಮನಗಳ ಸುಳಿಯಲ್ಲಿ, ಪು.

೧೬೯. ಗಿರಡ್ಡಿ ಗೋವಿಂದರಾಜು, ಸಾಹಿತ್ಯ ಮತ್ತು ಪರಂಪರೆ, ೧೯೮೧, ಪು. ೭೮

೧೭೦. ಹುಚ್ಚು ಮನಸ್ಸಿನ ಹತ್ತು ಮುಖಗಳು, ೧೯೯೧, ಪು. v

೧೭೧. ಅದೇ, ಪು. v

೧೭೨. ಸಮೀಕ್ಷೆ, ೧೯೬೪, ಪು. ii

೧೭೨a. ಇನ್ನೊಂದು ದಾರಿ, ೧೯೫೯, ಪು. ೩೫

೧೭೩. ಸಮೀಕ್ಷೆ, ೧೯೬೪, ಪು. ೧೦೮-೧೦೯

೧೭೪. ಅದೇ, ಪು. ೧೧೧

೧೭೫. ಸರಸಮ್ಮನ ಸಮಾಧಿ, ೧೯೭೬, ಮುನ್ನುಡಿ

೧೭೬. ಉದ್ಧೃತ ಟಿ.ಪಿ. ಅಶೋಕ, ಕಾರಂತ ಮಂಥನ, ೧೯೯೩, ಪು. ೨೧೭

೧೭೭. ಶಾಂತಿನಾಥ ದೇಸಾಯಿ, ಕಾರಂತ ಮಂಥನ, ೧೯೯೩, ಪು.೨೪೦

೧೭೮. ಅದೇ, ಪು. ೧೩.

೧೭೯. ಹುಚ್ಚು ಮನಸ್ಸಿನ ಹತ್ತು ಮುಖಗಳು, ೧೯೯೧, ಪು. ೧೨೫

೧೮೦. ಉದ್ಧೃತ. ಟಿ.ಪಿ. ಅಶೋಕ, ೧೯೯೩. ಪು. ೧೩೯

೧೮೧. ಅದೇ, ಪು. ೨೬೭

೧೮೨. ವಿ.ಎಂ.ಇನಾಂದಾರ್, ಶಿವರಾಮ ಕಾರಂತ: ಬದುಕು-ಬರೆಹ, ೧೯೭೮, ಪು. ೧೧೫

೧೮೩. ಕಾರಂತ ಪ್ರಪಂಚ, ೧೯೭೯, ಪು. ೧೩೭

೧೮೪. ವಿವರಗಳಿಗೆ ನೋಡಿ: ನರಹಳ್ಳಿ ಬಾಲಸುಬ್ರಹ್ಮಣ್ಯ, ಅನುಸಂಧಾನ, ೧೯೮೧, ಪು. ೫೦

೧೮೫. ಸಮೀಕ್ಷೆ, ಮುನ್ನುಡಿ

೧೮೬. ನರಹಳ್ಳಿ ಬಾಲಸುಬ್ರಹ್ಮಣ್ಯ, ಅನುಸಂಧಾನ, ೧೯೮೧, ಪು. ೩೯

೧೮೭. ಪಾ.ವೆಂ.ಆಚಾರ್ಯ, ಕಾರಂತರ ಕಾದಂಬರಿಗಳನ್ನು ಕುರಿತು, ೧೯೭೮, ಪು. ೧೫

೧೮೮. ಡಾ.ಜಿ.ಎಂ.ಹೆಗಡೆ, ಬಹುಮುಖಿ, ೧೯೯೯, ಪು. ೧೫೩

೧೮೯. ಅದೇ, ಪು. ೧೫೬

೧೯೦. ಅದೇ, ಪು. ೧೮೫

೧೯೧. ಅದೇ, ಪು. ೧೫೭

೧೯೨. ಅದೇ, ಪು.೧೫೮

೧೯೩. ಅಮೃತ ಮತ್ತು ಗರುಡ, ೧೯೯೮, ಪು. ೩೮

ಅಧ್ಯಾಯ ೫

# ಸಮಾರೋಪ

ಮಾನವೀಕರಣವೆಂಬುದು ಒಂದು ಮಹತ್ವಪೂರ್ಣವಾದ ಪ್ರಕ್ರಿಯೆ. ಮಾನವ ಸಮಾಜದಲ್ಲಿ ಮಹತ್ವಪೂರ್ಣ ಮೌಲ್ಯವಾಗಿರುವ ಮಾನವೀಯತೆಯಿಂದ ಪರಿಷ್ಕೃತಗೊಂಡಿದೆ. ಮಾನವೀಯತೆಯೆಂಬ ಮಾತು ನಮ್ಮ ನಡುವೆ ದಿನನಿತ್ಯ ಚಲಾವಣೆಯಲ್ಲಿರುವ ಶಬ್ದ. ಇದು ಬಡ ಅನಾಥನಿಂದ ಹಿಡಿದು ಶ್ರೀಮಂತನವರೆಗೂ ಬಳಕೆಗೊಳ್ಳುತ್ತದೆ. ಸಾಮಾಜಿಕ, ರಾಜಕೀಯ ನೆಲೆಗಳಲ್ಲಿ ಹೆಚ್ಚು ಅರ್ಥಪಡೆದು ಕೊಂಡಿರುವ ಮಾನವೀಯತೆ ಮಾನವ ಸಮಾಜದಲ್ಲಿ ತುಂಬಾ ಬೆಳೆಯುಳ್ಳದ್ದು. ಸಮಾಜವನ್ನು ರೂಪಿಸುವ-ಅಂದಗೆಡಿಸುವ ಎರಡೂ ಕೆಲಸಗಳನ್ನು ಮಾಡುತ್ತಿದೆ. ವ್ಯಕ್ತಿಯಿಂದ ಆರಂಭವಾಗಿ ಸಮಾಜ ಮುಖಿಯಾಗಿ ಸಾಗುವ ಮಾನವೀಯತೆಯು ರಾಜ್ಯ, ರಾಷ್ಟ್ರಗಳ ಸಂಬಂಧಗಳನ್ನು ಉತ್ತಮಗೊಳಿಸುವ ಕಾರ್ಯವನ್ನು ಹೊತ್ತಿದೆ. ಮಾನವೀಯತೆಯು ಎಂದೂ ದುರ್ಮಾರ್ಗವನ್ನು ತೋರಿಸಲಾರದು. ಆದರೆ ಅದು ಬಳಸುವವರನ್ನು ಅವಲಂಬಿಸಿದೆ. ಅವರಿಂದ ಮಾನವೀಯತೆಗೆ ಕೆಟ್ಟ ಹೆಸರು ಬರುತ್ತದೆ. ಅಂದರೆ ಯಾವುದೊ ಕಾರ್ಯ ಮಾಡುವಾಗ ಮಾನವತೆ ಎಂದು ಹೇಳಿ ಅಮಾನವತೆಯನ್ನು ಮಾಡುವುದು. ಮಾನವೀಯತೆ ಬಳಸಿದ, ಅಳವಡಿಸಿಕೊಂಡ ನಾಗರಿಕ ಉತ್ತಮಿಕೆಯನ್ನು ಹೊಂದಬಲ್ಲ. ಮಾನವೀಕರಣವು ಒದು ದ್ಯುತಿಸಂವಿಶ್ಲೇಷಣೆಯ ಕ್ರಿಯೆಯೆಂದು ಹಿಂದೆ ನೋಡಿದ್ದೇವೆ. ಈ ಕ್ರಿಯೆ ಯಿಂದ ಪ್ರತಿ ನಾಗರೀಕನೂ ಮಾನವತಾವಾದಿಯಾಗಬೇಕೆಂಬುದು ನಮ್ಮ ಅಭೀಪ್ಸೆ. ಮಾನವತಾವಾದಿ ಗಳಾಗುವುದು ಸುಲಭ. ಅಂದರೆ ಅನಾಥರನ್ನು ರಕ್ಷಿಸುವುದು ಅನ್ಯರಿಗೆ ಸದಾ ಒಳಿತನ್ನೇ ಬಯಸಿ ಕೈಲಾದ ಸಹಾಯ ಮಾಡುವುದು, ಸಮಾಜದಲ್ಲಿ ಅಹಿತಕರ ಘಟನೆಗಳಿಗೆ ಅವಕಾಶಕೊಡದಿರುವುದು, ರೋಗಿಗಳಿಗೆ ಸಹಾಯ ಮಾಡುವುದು ಮೊದಲಾದ ಅತಿಚಿಕ್ಕ ಕೆಲಸಗಳೂ ಮಾನವೀಕರಣದ ಪ್ರವೇಶಾತಿಯಾಗುತ್ತವೆ. ರಾಜಕಾರಣಿಗಳು ಮಾಡುವ ಕೆಲಸಗಳು ರಾಜಕೀಯ ಪ್ರೇರಿತವಾಗಿರುತ್ತವೆ. ಆದರೆ ಎಲ್ಲ ರಾಜಕಾರಣಿಗಳು ಹಾಗೆ ಮಾಡದೆ ಮಾನವೀಯ ಧೋರಣೆಯನ್ನು ಇಟ್ಟುಕೊಂಡಿರುತ್ತಾರೆ. ಸಮಾಜ ಸುಧಾರಣಾವಾದಿಗಳು, ಸಾಹಿತಿಗಳು, ಕಲಾವಿದ ಈ ಪ್ರಕ್ರಿಯೆಗೆ ರೂವಾರಿಗಳಾಗುತ್ತಾರೆ.

ಪ್ರತಿನಾಗರಿಕನೂ ತನ್ನ ಜೀವನದ ಬಾಳನ್ನು ಮಾನವೀಕರಣದ ನೆಲೆಯಲ್ಲಿ ಸಾಗಿಸಬೇಕೆಂಬ ಆಶಯ ಈ ಪ್ರಬಂಧದ ಮುಖ್ಯ ಉದ್ದೇಶ. ಅಂತಹ ಸದಾಶಯದ ನಿರೂಪಣೆಗೆ ಕಾರಂತರ ಕಾದಂಬರಿಗಳನ್ನು ಅವಲಂಬಿಸಲಾಗಿದೆ. ಅವರ ಕೃತಿಗಳ ಪಾತ್ರಗಳ ನಡವಳಿಕೆ ಮತ್ತು ಕಾದಂಬರಿಯ ಆಶಯವು ಮಾನವೀಕರಣದತ್ತ ಸಾಗುವ ಪ್ರಕ್ರಿಯೆ ಸ್ಪಷ್ಟವಾಗಿದೆ. ಅದಕ್ಕೂ ಮೊದಲು ಕನ್ನಡ ಕಾದಂಬರಿ ಸಾಹಿತ್ಯದುದ್ದಕ್ಕೂ ಹರವಿಕೊಂಡಿರುವ ಮಾನವೀಕರಣವು ಯಾವ ತರಹದಲ್ಲಿದೆ ಎಂಬುದನ್ನು ಗಮನಿಸಲಾಗಿದೆ. ಗಳಗನಾಥರ 'ಪ್ರಬುದ್ಧ ಪದ್ಮನಯನೆ'ಯಿಂದ ಕುಂ.ವೀ.ಅವರ ಇತ್ತೀಚಿನ ಕಾದಂಬರಿ ಶಾಮಣ್ಣನವರೆಗೆ ಕನ್ನಡದ ಮಾನವತಾವಾದ ತನ್ನದೇ ಆದ ಸ್ಥಾನವನ್ನು ಹೊಂದಿದೆ. ಸಾಂಪ್ರದಾಯಿಕ ಮೌಲ್ಯಗಳನ್ನು ಆಧರಿಸಿದ ಮಾನವೀಯತೆಯು ಆರಂಭದಲ್ಲಿತ್ತಾದರೂ ಬರು-ಬರುತ್ತಾ ಪರಿಷ್ಕರಣೆಗೊಂಡು ಆಧುನೀಕರಣ ಪ್ರಕ್ರಿಯೆಗಳಲ್ಲಿ ತೊಡಗಿಸಿಕೊಂಡಿದೆ. ಮಾನವೀಯ ಮೌಲ್ಯಗಳು ಪ್ರತಿ ವ್ಯಕ್ತಿಯಲ್ಲೂ ಅಡಕಗೊಂಡಿವೆ. ಅರಿತೋ ಅಥವಾ ಅರಿಯದೆಯೋ ದಿನೆ ದಿನೇ ಸಾಕಷ್ಟು ಸಂದರ್ಭಗಳಲ್ಲಿ ಅವುಗಳನ್ನು ಬಳಸುತ್ತೇವೆ. ಪ್ರಜ್ಞಾವಂತ ವ್ಯಕ್ತಿಯಾದರೆ ಅವನು ಸಮಯ-ಸಂದರ್ಭ ಅರಿತು ತನ್ನ ಮನುಷ್ಯತ್ವ ಮೆರೆಯುತ್ತಾನೆ. ಅನಕ್ಷರಸ್ಥ ತನ್ನ ಅಲ್ಪತೆಯಿಂದ ಅಥವಾ ಮೌಢ್ಯತೆಯಿಂದ ಮನುಷ್ಯತ್ವ ಮರೆಯುತ್ತಾನೆ. ಮರೆಯದೆ ಹಾಗೆ ಅವನಲ್ಲಿ ಮಾನವೀಯ ಮೌಲ್ಯಗಳ ಪ್ರಜ್ಞೆಯನ್ನು ಬೆಳಸಬೇಕು. ಒಮ್ಮೊಮ್ಮೆ ಅಕ್ಷರವಂತ ವ್ಯಕ್ತಿಯೇ ಅಮಾನವೀಯವಾಗಿ ವರ್ತಿಸಿರಬಹುದು. ಸಂದರ್ಭಗಳ ಒತ್ತಡಗಳೋ ಅವನ ವ್ಯಕ್ತಿತ್ವದ ಬೆಳವಣಿಗೆಯೋ ಹಾಗೆ ಮಾಡಿಸಿರುತ್ತವೆ. ಅದ ಅಕ್ಷಮ್ಯ. ಒಮ್ಮೆ ಮಾಡಿದ ತಪ್ಪು ಇನ್ನೊಮ್ಮೆ ಆಗಲಾರದಂತೆ ಎಚ್ಚರವಹಿಸಬೇಕಾದುದು ಅಗತ್ಯ. ಮನುಷ್ಯನ ವ್ಯಕ್ತಿತ್ವ ನಿಂತಿರುವುದೇ ಮನುಷ್ಯತ್ವವನ್ನಾಧರಿಸಿ. ಆದ್ದರಿಂದ ಪ್ರತಿ ಮನುಷ್ಯನಲ್ಲೂ ಮನುಷ್ಯತ್ವವನ್ನು ಬೆಳಸಬೇಕಾದುದು ಅತ್ಯಗತ್ಯ.

ಮಾನವೀಯತೆಯನ್ನು ರೂಪಿಸುವ ಪ್ರಕ್ರಿಯೆಯೇ ಮಾನವೀಕರಣವಾಗಿರುವುದರಿಂದ; ಪ್ರಗತಿಯ ಹೆಸರಿನಲ್ಲಿರುವ ತಂತ್ರಜ್ಞಾನ, ಸಮೂಹ ಮಾಧ್ಯಮ, ಜನಸಂಖ್ಯೆಗಳು ಹಿಮ್ಮುಖ ಚಲನೆಗೆ ಕಾರಣವಾಗುತ್ತವೆ. ಮಾನವೀಯ ಗುಣಗಳನ್ನು ಆಧರಿಸಿದ ವಿಜ್ಞಾನ-ತಂತ್ರಜ್ಞಾನ ನಮಗೆ ಅವಶ್ಯವಾಗಿದೆ. ಅದಿರಿನಿಂದ ಕಬ್ಬಿಣವನ್ನು ಭೌತವಿಜ್ಞಾನ ಉತ್ಪಾದಿಸುತ್ತದೆ; ಕೃತಕ ಗರ್ಭಧಾರಣೆ ಮೂಲಕ ಹಸುಗಳಿಂದ ಜೀವವಿಜ್ಞಾನ ಕರು ಪಡೆಯುತ್ತದೆ; ಕಸಿ ಮಾಡುವುದರಿಂದ ಬೀಜ ರಹಿತ ಹಣ್ಣುಗಳನ್ನು ಸಸ್ಯಶಾಸ್ತ್ರ ಪಡೆಯುತ್ತದೆ; ಅದರಂತೆಯೇ ಮಾನವನ ಮನಸ್ಸನ್ನು ಪರಿವರ್ತಿಸಬಲ್ಲ ತಂತ್ರವೋ ಮಂತ್ರವೋ ಅಥವಾ ವಿಜ್ಞಾನದ ವಿದ್ಯೆಗಳು ನಮಗಿನ್ನೂ ಲಭ್ಯವಾಗಿಲ್ಲ. ಇಂತಹದನ್ನು ಬಯಸದೆಯೇ ನಮ್ಮ ನಮ್ಮಲ್ಲಿಯೇ ಅರಿತು ಬಾಳಬೇಕಾಗಿದೆ. ವಿಜ್ಞಾನ-ತಂತ್ರಜ್ಞಾನಗಳು ನಮ್ಮ ಜೀವನದಲ್ಲಿಂದು ಯಥೇಚ್ಛವಾಗಿ ಬಳಕೆಯಾಗುತ್ತವೆ. ಇವುಗಳಿಂದಾಗಿ ಮನುಷ್ಯ ತನ್ನ ಸಂಬಂಧಗಳನ್ನು ಕಳಚಿಕೊಳ್ಳುತ್ತಿದ್ದಾನೆ. ಹಾಗೆಂದು

ವಿಜ್ಞಾನವನ್ನೂ ದೂರೀಕರಿಸುವಂತಿಲ್ಲ. ವಿಜ್ಞಾನ ಮನುಷ್ಯನಿಗೆ ಜೀವನದಲ್ಲಿ ಮನುಷ್ಯ ಸಂಬಂಧಗಳನ್ನು ಬೆಳೆಸುವಂತಿರಬೇಕೇ ಹೊರತು ಬೀಳಿಸುವಂತಿರಬಾರದು.

ವ್ಯಕ್ತಿಯಲ್ಲಿ ಅಮೂರ್ತವಾಗಿರುವ ಮಾನವೀಕರಣವು ಮೂರ್ತಗೊಳ್ಳುವುದು ಅವನು ಪ್ರಬುದ್ಧಗೊಂಡಾಗ ಮಾತ್ರ. ಯುವ ಪೀಳಿಗೆಯಲ್ಲಿ ಕಾಣಬೇಕಾದ ಮಾನವೀಕರಣ ಕಾಣುತ್ತಿಲ್ಲ. ಇದಕ್ಕೆ ಕಾರಣ ಅಧ್ಯಯನದ ಶಿಸ್ತು, ಸಮಾಜದ ನಿಯಮಗಳ ಸಡಿಲಿಕೆ, ಪಾಶ್ಚಾತ್ಯ ಪ್ರಭಾವ. ತಾಂತ್ರಿಕ ಅಧ್ಯಯನಗಳ ಶಿಸ್ತು ಮನುಷ್ಯನ ಜೀವನದ ದಿಕ್ಕನ್ನು ಬದಲಿಸುತ್ತದೆ. ಮಾನವೀಕರಣದ ಬದಲು ಯಾಂತ್ರೀಕರಣವನ್ನು ಬೋಧಿಸುತ್ತದೆ. ಮೌಲ್ಯಗಳು ಮರೆಯಾಗುತ್ತವೆ. ಇದರಿಂದ ಜೀವನ ಅಪಮೌಲ್ಯೀಕರಣಕ್ಕೆ ಬಲಿಯಾಗುತ್ತದೆ. ಭ್ರಷ್ಟಾಚಾರ, ಲಂಚ, ರುಷುವತ್ತುಗಳು ಇಂದು ತಾಂಡವಾಡುತ್ತಿರುವುದರಿಂದ ಮಾನವೀಕರಣ ಮಾಯವಾಗತೊಡಗಿದೆ.

ಪಾಶ್ಚಾತ್ಯ ಸಾಹಿತ್ಯವಲಯದಲ್ಲಿ ಆವಿಷ್ಕಾರಗೊಂಡ ಮಾನವತಾವಾದ ಇಡೀ ಪ್ರಪಂಚಕ್ಕೆ ಸಾವಧಾನವಾಗಿ ವ್ಯಾಪಿಸಿಕೊಂಡಿತು. ಭಾರತೀಯ ಸಾಹಿತ್ಯದಲ್ಲೂ ಮಾನವತಾವಾದವಿತ್ತು. ಭರತನಿಂದಲೇ ಕಾಣುತ್ತೇವೆ. ಅದೇ ರೀತಿ ಧರ್ಮ ಪ್ರವರ್ತಕರು ತಮ್ಮ ಬೋಧನೆಗಳಲ್ಲಿ ಮಾನವತೆಯನ್ನು ಎಂದೂ ಮರೆಯದೆ ಉಪದೇಶಿಸಿದರು. ಗೌತಮಬುದ್ಧ 'ಹಿಂಸೆ ಮಾಡಬಾರದು' ಎಂದರೆ ಮಹಾವೀರ 'ಯಾರಿಗೂ ಕಷ್ಟಕೊಡಬಾರದು' ಎಂದನು. ಶಂಕರಾಚಾರ್ಯರು 'ಯಾರಲ್ಲೂ ಭೇದ ಕಲ್ಪಿಸದೆ ಅದ್ವೈತವನ್ನು ಹೇಳಿದರೆ, ಬಸವಣ್ಣ 'ಎಲ್ಲರನೂ ಒಂದೇ ಎಂಬೆ' ಎಂದು ಸಾರ್ವತ್ರಿಕತೆಯನ್ನು ಹೇಳಿದ್ದಾರೆ. 'ಅನ್ಯರಿಗೆ ಅನ್ಯಥಾ ಹಿಂಸೆ ಮಾಡಬೇಡ' ಎನ್ನುವುದು ಭಗವದ್ಗೀತೆಯ ತಿರುಳಾಗಿದೆ. ಅಂದರೆ ಪರಿಚಿತರಿಗೆ ಉದ್ದೇಶಿತ ಹಿಂಸೆ ಮಾಡಬಹುದೇ? ಎನ್ನುವ ಪ್ರಶ್ನೆ ಉದ್ಭವಿಸುತ್ತದೆಯಾದರೂ; ಹಿಂಸೆ ಹಿಂಸೆಯೇ ಆದ್ದರಿಂದ ಪರಿಚಿತರಿಗೂ ಮಾಡಬಾರದು ಎಂಬುದು ಮಾನವೀಕರಣದ ತಿರುಳು. ಅದೇ ರೀತಿ ಯೇಸುಕ್ರಿಸ್ತ, ಮಹಮದ್ ಪೈಗಂಬರ್, ಕನ್‌ಫ್ಯೂಷಿಯಸ್ ಮೊದಲಾದ ಪ್ರವರ್ತಕರು ಮಾನವತೆಯನ್ನು ಮರೆತಿಲ್ಲ.

ಸಾಹಿತ್ಯ ರಚನಾಕಾರರಾದ ರಸೆಲ್, ಹೆಗಲ್, ಟಾಲ್ ಸ್ಟಾಯ್, ಮಾಕ್ಸಿಂಗಾರ್ಕಿ, ಕಾಂಟ್, ಝೋಲ್ ಮತ್ತು ಬಾಲ್ಜಾಕ್ ಮೊದಲಾದ ಪಾಶ್ಚಾತ್ಯರು ತಮ್ಮ ಕೃತಿಗಳಲ್ಲಿ ಮಾನವತಾವಾದವನ್ನು ಅನಾವರಣಗೊಳಿಸಿದ್ದಾರೆ. ಭಾರತೀಯ ಬರಹಗಾರರ ಪ್ರೇಮ್‌ಚಂದ್, ಶರತ್ ಚಂದ್ರ ಚಟರ್ಜಿ, ರವೀಂದ್ರನಾಥ ಠಾಗೋರ್, ಮೈಥಿಲೀ ಶರಣಗುಪ್ತ, ಪನ್ನಾಲಾಲ್ ಪಟೇಲ್, ವಿರೇಶಲಿಂಗಂ ಪತುಲಯ, ವಿಶ್ವನಾಥ ಸತ್ಯನಾರಾಯಣ, ತಕಳಿ ಶಿವಶಂಕರ ಪಿಳ್ಳೆ-ಮೊದಲಾದವರು ಮಾನವೀಕರಣದ ವಕ್ತೃಗಳಾಗಿದ್ದಾರೆ. ಕನ್ನಡದ ಮಟ್ಟಿಗೆ ಪಂಪ, ಬಸವಣ್ಣ, ಕುವೆಂಪು, ಮಾಸ್ತಿ ವೆಂಕಟೇಶ್ ಅಯ್ಯಂಗಾರ್, ಬಸವರಾಜ ಕಟ್ಟೀಮನಿ, ದೇವನೂರು ಮಹಾದೇವ, ಡಾ. ಅನುಪಮಾ ನಿರಂಜನ, ತ್ರಿವೇಣಿ, ಲಂಕೇಶ್, ಯಶವಂತ ಚಿತ್ತಾಲ, ಚದುರಂಗ, ಬರಗೂರು ರಾಮಚಂದ್ರಪ್ಪ ಮೊದಲಾದ ಲೇಖಕರು ಈ ನಿಟ್ಟಿನಲ್ಲಿ ಚಿಂತನೆ ನಡೆಸಿದ್ದಾರೆ.

ಈ ಬರಹಗಾರರಿಗಿಂತ ಒಂದು ಹೆಜ್ಜೆ ಮುಂದೆ ನಿಂತು ಮಾನವೀಕರಣದ ಬಗ್ಗೆ ಯೋಚಿಸಿರುವ ಶಿವರಾಮ ಕಾರಂತರು ನನ್ನ ಅಧ್ಯಯನದಲ್ಲಿ ಬಹು ಮುಖ್ಯರಾಗುತ್ತಾರೆ. ಅವರ ಬರಹಗಳಲ್ಲಿ ಸಿಂಹಪಾಲು ಪಡೆದಿರುವ ಕಾದಂಬರಿಗಳನ್ನು ನನ್ನ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವೆ. ಶಿವರಾಮ ಕಾರಂತರು ಕಾದಂಬರಿ ಸಾಹಿತ್ಯಕ್ಕೆ ಅಮೂಲ್ಯ ಕೊಡುಗೆಯನ್ನು ನೀಡಿದ್ದಾರೆ. ಅವರ ಎಲ್ಲ ಕಾದಂಬರಿಗಳನ್ನು ಗಮನಿಸುವ ಸಾಹಸಕ್ಕೆ ಕೈ ಹಾಕದೆ ಪ್ರಾತಿನಿಧಿಕವಾಗಿ ಹತ್ತು ಕೃತಿಗಳನ್ನು ಆಯ್ದುಕೊಂಡಿದ್ದೇನೆ.

ಜಾಗತಿಕ ಸಂದರ್ಭದಲ್ಲಿ ಪ್ರಸ್ತುತ ತಲೆದೋರಿರುವ ಹಲವಾರು ಸಮಸ್ಯೆಗಳಿಗೆ ಮಾನವೀಕರಣವು ಉತ್ತರವನ್ನು ಹುಡುಕುವ ಪ್ರಯತ್ನ ಮಾಡಬಲ್ಲದು. 'ಹಿಜಬುಲ್ ಮುಜಾಹಿದ್ದಿನ್' ಅವರ ಅಮಾನವೀಯ ಕೃತ್ಯಗಳಿಗೆ ಸಂಧಾನ ಪ್ರಕ್ರಿಯೆ ಅತ್ಯಗತ್ಯ. ಅಮಾಯಕ ಜನತೆಯನ್ನು ಕಗ್ಗೊಲೆ ಮಾಡಿದರೆ ಅವರ ಆಸೆ, ಉದ್ದೇಶ ಈಡೇರಲಾರದು. ಹಿಜಬುಲ್ ಮುಜಾಹಿದ್ದೀನ್ ಸಾರಿದ್ದ ಕದನವನ್ನು ಪ್ರಧಾನಿ ಅವರು ಮಾನವೀಕರಣದ ಆಧಾರದ ಮೇಲೆ ಕದನ ವಿರಾಮ ಘೋಷಿಸಿದರು. ಒಂದು ವೇಳೆ ವೈರತ್ವವನ್ನು ಗಮನದಲ್ಲಿಟ್ಟುಕೊಂಡು ಕದನ ನಡೆಸಿದಿದ್ದರೆ, ಅಪಾರ ಮಾನವ ಹಾನಿ ನಷ್ಟವಾಗುತ್ತಿತ್ತು. ಅದಕ್ಕಾಗಿ ಸಮಸ್ಯೆಯನ್ನು ಕೂಲಂಕುಷವಾಗಿ ಚರ್ಚಿಸಿ, ಬೇಕಾದ ಪರಿಹಾರಗಳನ್ನು ವಾದಿ-ಪ್ರತಿವಾದಿಗಳು ಕಂಡುಕೊಳ್ಳಬಹುದು. ಅದೇ ರೀತಿ 'ಫಿಜಿಯ ಪ್ರಧಾನಿಯನ್ನು ಬಂಧಿಸಿ ನಡೆಸಿದ ಅಮಾನವೀಯ ಘಟನೆ ಜಗತ್ತಿನ ಇತಿಹಾಸದಲ್ಲಿ ಮರೆಯಲಾರದಂತದ್ದು. ಯಕಶ್ಚಿತ್ ಕಾರಣಕ್ಕೆಲ್ಲ ಅಮಾನುಷ ಮಾರ್ಗಗಳನ್ನು ಅರಸುವುದು ಮಾನವನ ಮೂಲಗುಣವಾಗಬಾರದು. ಪಾಕಿಸ್ತಾನದ ಪ್ರಧಾನಿಯ ಪದಚ್ಯುತಿ ಮತ್ತು ಮಿಲಿಟರಿ ಆಡಳಿತದ ಹೇರಿಕೆ ಕೂಡ ಅಮಾನವೀಯತೆಯನ್ನು ಪ್ರಚೋದಿಸುತ್ತದೆ. ಇವೆಲ್ಲ ಜಾಗತಿಕ ಮಟ್ಟದಲ್ಲಿ ಮನುಷ್ಯಕುಲವನ್ನು ನಲುಗಿಸುತ್ತಿದ್ದರೆ; ಭಾನುಮುಷ್ತಾಕ್ ಅವರ ಕುಟುಂಬವನ್ನು ಸಮಾಜ ಬಾಹಿರವೆಂದು ಘೋಷಿಸುವುದು, ಹಂಗರಳ್ಳಿಯಲ್ಲಿ ಕೂಲಿಕಾರರ ಕಾಲಿಗೆ ಸರಪಳಿ ಕಟ್ಟಿ ದುಡಿಸಿಕೊಳ್ಳುವುದು, ಕೊಡಗಿನಲ್ಲಿರುವ 'ಅಜಲು ಪದ್ಧತಿ'ಗಳು ಭಾರತೀಯ ನೆಲೆಯ ಸಮಾಜದಲ್ಲಿ ಮನುಷ್ಯ ಕುಲವನ್ನು ನಲುಗಿಸುತ್ತವೆ. ಅಜಲು ಪದ್ಧತಿಯಂತಹ ಪದ್ದತಿಗಳು ಇನ್ನೂ ಎಷ್ಟೋ ಇರಬಹುದು. ಅಂತಹ ಪದ್ಧತಿಗಳನ್ನು ಕಾರಂತರು ಖಂಡಿಸುತ್ತಲೇ ಬಂದಿದ್ದರು. ಅವರು ಯು.ಆರ್.ಅನಂತಮೂರ್ತಿ ಅವರು ಮಾಡುವ ಒಂದು ಸಂದರ್ಶನದಲ್ಲಿ "ಇವತ್ತಿಗೂ ಉಳಿದಿರೋ ಸಮಸ್ಯೆ ಮಾತ್ರವಲ್ಲ, ಇದು ನನ್ನ ಇತ್ತೀಚಿನ ಕಾದಂಬರಿಗಳಲ್ಲಿ ಅವನ್ನೇ ತಿರುಗಿ ಹೇಳಿದ್ದೇನೆ. ಮೊದಲನೇ ಕಾಲದಲ್ಲಿ ಎಂಜಲು ಕೊಡ್ತಿದ್ರು. ನಾನು ಹೊರಗೆ ಬಂದ ಕಾಲದಲ್ಲಿ ಮನೆ ಮನೆಗೆ ಹೋಗಿ ಎಂಜಲು ಕೊಡಬೇಡಿ, ಅನ್ನ ಕೊಡಿ ಅಂತ ಬೇಡಿದ್ದೇನೆ. ಹದಿನೈದು ದಿವಸದ ಹಿಂದೆ ಮಠದಿಂದ ಹೊರಗೆ ಬೀಳುವಾಗ ಎಂಜಲನ್ನ ಅವರು ತಿನ್ನೋದನ್ನ ನೋಡಿದ್ದೇನೆ. ಆದ್ದರಿಂದ ಇವರ ಸಮಸ್ಯೆ ಮುಗ್ದಿಲ್ಲ ನನಗೆ. ಚೋಮನ ತಕ್ಕೊಂಡು, ಇದನ್ನ ಹೇಳಲಿಕ್ಕೆ ಸಾಧ್ಯ ಇಲ್ಲ. ಚೋಮನಂತಹ

ಹರಿಜನರಿಗೆ ನಾಲ್ಕು ಗದ್ದೆಯ ತುಂಡು, ನಾಲ್ಕು ಗಿಡ ನೆಡ್ತಕ್ಕಂಥ ಜಾಗವನ್ನು ಇವತ್ತಿಗೂ ಕೊಟ್ಟಿಲ್ಲ'' ಎಂದು ಅಜಲು ಪದ್ಧತಿ ಹಾಗೂ ಚೋಮನಂತಹ ಉಳುಮೆ ಮಾಡುವ ಉದ್ದೇಶದ ಹೊಲೆಯರಿಗೆ ಭೂಮಿ ಇಲ್ಲದ್ದನ್ನು ಅನಂತಮೂರ್ತಿಯವರೊಂದಿಗಿನ ಸಂದರ್ಶನದಲ್ಲಿ ಪ್ರಸ್ತಾಪಿಸಿದ್ದಾರೆ.

ಬಾನು ಮುಷ್ತಾಕ್ ಅವರು 'ಮುಸ್ಲಿಂ ಹೆಣ್ಣುಮಕ್ಕಳಿಗೆ ಮಸೀದಿಯಲ್ಲಿ ನಮಾಜು ಮಾಡುವ ಹಕ್ಕು ಬೇಕೆಂದು' ಕೇಳಿರುವುದು ಮಾನವೀಕರಣದ ದೃಷ್ಟಿಯಿಂದ ಸಮಂಜಸವಾಗಿದೆ. ಆದರೆ ಮುಸ್ಲಿಂ ಧರ್ಮದ ಮೌಲ್ವಿಗಳ ಸಂಪ್ರದಾಯ ನಿಷ್ಠತೆ, ಮೂಲಭೂತವಾದಿತನಗಳು ಮುಸ್ಲಿಂ ಮಹಿಳೆಯನ್ನು ಬಂಧನದಲ್ಲಿಯೇ ಇರಿಸಿವೆ. ಧರ್ಮದ ಕಬಂಧ ಬಾಹುಗಳನ್ನು ಸಡಿಲಿಸುವ ಸಲುವಾಗಿ, ಮಹಿಳೆಯೂ ಧರ್ಮದ ನೆಲೆಗಟ್ಟಿನ ವಿಷಯದಲ್ಲಿ ನಮಾಜು ಮಾಡಲಿಕ್ಕೆ ಅರ್ಹಳು ಎಂದು ಕುರಾನ್ ಹೇಳಿರುವುದರಿಂದ ಹಾಗೂ ಅವಳು ನಮಾಜು ಮಾಡಲಿಕ್ಕೆ ಸಿದ್ಧಳಿರುವುದರಿಂದ ಮೌಲ್ವಿಗಳ ವಿಚಾರ ಅಮಾನವೀಯ ವಾಗುವುದು ಸ್ಪಷ್ಟ. ಫಿಜಿ ದೇಶದಲ್ಲಿ ಹಾಗೂ ಭಾರತದಲ್ಲಿ ಕೆಲವೆಡೆ ಮಹಿಳೆಗೆ ನಮಾಜಿನ ಹಕ್ಕನ್ನು ಕೊಡಲಾಗಿದೆ. ಇದು ಗೊತ್ತಿದ್ದಾಗ್ಯೂ ಮುಷ್ತಾಕ್ ಅವರ ಕುಟುಂಬದ ಮೇಲೆ ಹೇರಿರುವ ನಿಷೇಧ ಅಮಾನವೀಯವಲ್ಲದೆ ಮತ್ತೇನು?. ''ಮುಸ್ಲಿಂ ಸಮುದಾಯದಲ್ಲಿರುವ ಮೂಲಭೂತವಾದಿ ಹಾಗೂ ಅದರ ಸಮುದಾಯದ ಸಂಬಂಧಗಳ ಬಗೆಗಿರುವ ಗ್ರಹಿಕೆಗಳ ಬಗೆಗೇ ನನ್ನ ಭಿನ್ನಭಿಪ್ರಾಯವಿದೆ. ತಾತ್ವಿಕವಾಗಿ ಅದು ಮುಸ್ಲಿಂ ಸಮುದಾಯವನ್ನು ಧರ್ಮನಿಷ್ಠೆಯ ಹೆಸರಿನಲ್ಲಿ ಹಿಂದೆ ಹಿಂದಕ್ಕೆ ಎಳೆದುಕೊಂಡು ಹೋಗುವ ಪ್ರವೃತ್ತಿಯುಳ್ಳದ್ದು ಹಾಗೂ ಸಮುದಾಯದ ಬೌದ್ಧಿಕ ವಿಕಾಸಕ್ಕೆ ಸೃಜನಶೀಲತೆಗೆ ಮಹಾತಡೆಯನ್ನುಂಟು ಮಾಡಿರುವಂತಹದು ಎಂಬುದು ನಿಜ'' ಎಂದು ರಹಮತ್ ತರೀಕೆರೆ ಅವರು ಈ ಕುರಿತು ಲಂಕೇಶ ಪತ್ರಿಕೆಯಲ್ಲಿ ಹೇಳಿರುವ ಮಾತು ಮೌಲ್ವಿಗಳ ಅಮಾನವೀಯತೆಯನ್ನು ಸ್ಪಷ್ಟಪಡಿಸುತ್ತದೆ. ಸಲ್ಮಾನ್ ರಷ್ದಿ, ತಸ್ಲೀಮಾ ನಸ್ರಿನ್ ಮೊದಲಾದ ಬರಹಗಾರರ ಕೃತಿಗಳಲ್ಲಿನ ಬರಹವನ್ನೆ ಗಮನದಲ್ಲಿಟ್ಟುಕೊಂಡು ಅವರ ವಿರುದ್ಧ ಹೇರಿದ ಫಟ್ವಾ ಅಮಾನವೀಯ. ಧರ್ಮದ ಇಂತಹ ಅಮಾನವೀಯ ಕಾನೂನುಗಳು ಮಾನವ ಸಮಾಜವನ್ನ ಹಿಮ್ಮುಖ ಚಲನೆಗೆ ಕೊಂಡೊಯ್ಯುತ್ತವೆ. ಮಾನವ ಸರ್ವ ರೀತಿಯಿಂದಲೂ ಸ್ವತಂತ್ರ ಅವನ ವಿಚಾರಗಳಿಗೆ ಬೆಲೆ ಕೊಡಬೇಕು. ಆದರೆ ನಿರ್ಬಂಧ ಹಾಕಬಾರದು. ಬೇಕಿದ್ದರೆ ಸ್ವೀಕರಿಸಬೇಕು, ಬೇಡದಿದ್ದರೆ ಕೈಬಿಡಬೇಕು.

ಕಾರಂತರ ಕಾದಂಬರಿಗಳನ್ನು ಅಧ್ಯಯನಕ್ಕಾಗಿ ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಎಂದು ಎರಡು ಭಾಗಗಳಿಂದ ಆಯ್ಕೆ ಮಾಡಿಕೊಂಡ ಉದ್ದೇಶವಿಷ್ಟೆ. ಅವರು ಸ್ವಾತಂತ್ರ್ಯ ಪೂರ್ವದಲ್ಲಿ ಭಾರತದ ದಾಸ್ಯತ್ವವನ್ನು ಅನುಭವಿಸಿದವರು. ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದವರು. ಹಾಗೂ ಸ್ವಾತಂತ್ರ್ಯನಂತರದ ದಾಸ್ಯಮುಕ್ತ ಜೀವನದಲ್ಲಿ ನಲಿದವರು. ಹೀಗಾಗಿ ಎರಡು ಭಾಗಗಳಿಂದ ಆಯ್ಕೆ ಮಾಡಿಕೊಂಡು ಅಧ್ಯಯಿನಿಸಲಾಗಿದೆ.

ಕರ್ನಾಟಕದುದ್ದಕ್ಕೂ ಸಂಚರಿಸಿ ವಿವಿಧ ಪ್ರದೇಶದ ಜನತೆಯ ಸಂಕಷ್ಟಗಳನ್ನು ಅರಿತಿರುವುದರಿಂದ, ಕನ್ನಡದ ಲೇಖಕರಲ್ಲಿ ಕುವೆಂಪು ಅವರನ್ನು ಹೊರತುಪಡಿಸಿದರೆ ಮಾನವೀಕರಣದ ರೂವಾರಿಯಾಗಿರುವುದು ಕಾರಂತರೊಬ್ಬರೆ. ಈ ದೃಷ್ಟಿಯಿಂದ ಅವರ ಕೃತಿಗಳನ್ನು ಮಾನವೀಕರಣದ ಅಧ್ಯಯನಕ್ಕೆ ಅಳವಡಿಸಿಕೊಳ್ಳಲಾಗಿದೆ. ಕನ್ನಡದ ಕಾದಂಬರಿಗಳಲ್ಲಿಯೇ ಅಗ್ರಗಣ್ಯವಾಗುವ ಇವರ ಕೃತಿಗಳು ಅನಾವರಣಗೊಳಿಸುವ ತತ್ವಗಳು ಹಲವು. ಅವುಗಳಲ್ಲಿ 'ಮಾನವೀಕರಣ' ಮಾತ್ರ ಮಹತ್ವದ್ದೆಂದು ಭಾವಿಸಿ ಅಧ್ಯಯನಕ್ಕೆ ಆಯ್ಕೆಸಲಾಗಿದೆ. ಶಂಬಾ, ಕುವೆಂಪು, ಕಾರಂತ ಈ ಮೂರು ವ್ಯಕ್ತಿಗಳು ಕನ್ನಡದ ಮಾನವೀಕರಣದ ನಿರ್ಮಾತೃಗಳು. ಶಂಬಾ ಅವರು ಹೇಳುವ 'ಮಾನವಸಂಸ್ಕೃತಿ'ಯು ಮಾನವೀಕರಣದ ಬುನಾದಿಯಾದರೆ, ಕುವೆಂಪು ಅವರ 'ಮನುಜ ಮತ ವಿಶ್ವಪಥ' ಹಾಗೂ ಕಾರಂತರ 'ಉದಾರವಾದೀ ಮಾನವತಾವಾದ'ಗಳು ಬುನಾದಿಯ ಮೇಲೆ ಕಂಗೊಳಿಸುತ್ತಿರುವ ಸುಂದರ ಕಟ್ಟಡದ ಗೋಡೆಗಳು. ಕಾರಂತರ ಮಾನವತಾವಾದಿ ಸಿದ್ಧಾಂತವನ್ನೇ 'ಮಾನವೀಕರಣ ಸಿದ್ಧಾಂತ'ಎಂದು ಗುರುತಿಸಿಕೊಂಡಿದ್ದೇವೆ. ಅವರಲ್ಲಿ ಎಲ್ಲೂ ಇದರ ಉಲ್ಲೇಖವಿಲ್ಲ. ಕನ್ನಡದಲ್ಲಿ ಹುಟ್ಟು ಹಾಕಿರುವ ಹೊಸ ಸಿದ್ಧಾಂತ. ಇದು ಹೊಸ ಸಿದ್ಧಾಂತ ಎಂದು ಹೇಳುವಲ್ಲಿಯೂ ಸ್ವಲ್ಪ ಮೂಜುಗರ. ಏಕೆಂದರೆ ಈಗಿರುವ ಸಾಹಿತ್ಯದ ಮಾನದಂಡದ ಸಿದ್ಧಾಂತಗಳು ಸೋಲೊಪ್ಪಿಕೊಂಡಿಲ್ಲ(ಅಂದರೆ ಯಾವುದೇ ಒಂದು ಸಿದ್ಧಾಂತ ರೂಪುಗೊಳ್ಳಬೇಕಾದರೆ ಈವರೆಗಿರುವ ಸಿದ್ಧಾಂತಗಳು ಸಾಹಿತ್ಯವನ್ನು ಮಾಪಿಸುವಲ್ಲಿ ವಿಫಲವಾಗಿರಬೇಕು). ಆದರೂ ಈ ಸಿದ್ಧಾಂತರದ ನಿರ್ಮಾಣವೇಕೆ? ಎನ್ನಬಹುದು. ಇದೊಂದು 'ಹಳೆಯ ಬೇರು ಹೊಸ ಚಿಗುರು' ಎನ್ನುವಂತೆ ಹೊಸ ಸಿದ್ಧಾಂತವಾದರೂ ಸಾಹಿತ್ಯೇತರ ಸಿದ್ಧಾಂತವನ್ನಾಗಿ ನಿರೂಪಿಸಿ ಸಾಹಿತ್ಯ ಕೃತಿಗಳನ್ನು ಪ್ರಮಾಣೀಕರಿಸಲು ಪ್ರಯತ್ನಿಸಲಾಗಿದೆ. ಇತಿಹಾಸ, ಸಾಹಿತ್ಯ ಹಾಗೂ ವಾಸ್ತವಿಕ ಘಟನೆಗಳನ್ನು ಸಮ್ಮಿಲನಗೊಳಿಸುವ ಹಾಗೂ ಈ ತ್ರಿವೇಣಿ ಸಂಗಮದ ಮಾನವೀಕರಣದಿಂದ ಮನುಷ್ಯ ಜೀವನಕ್ಕೊಂದು 'ಅರ್ಥ' ಒದಗೀತೆಂಬ ಆಶಯವಿದೆ.

ಕಾರಂತರ ಕಾದಂಬರಿಗಳನ್ನು ಈ ಹೊಸ ಮಾನವೀಕರಣ ಸಿದ್ಧಾಂತದ ಚೌಕಟ್ಟಿನಲ್ಲಿಟ್ಟು ನೋಡುವ ಕಿರುಪ್ರಯತ್ನ ಮಾತ್ರ ಇಲ್ಲಿದೆ. ಚೋಮನ 'ನನಗೂ ಉಳುಮೆ ಮಾಡಲು ಭೂಮಿ ಕೊಡಿ' ಎಂಬ ಮಾನವೀಯ ಕೂಗಿನಿಂದ ಆರಂಭವಾಗಿರುವ ಅಧ್ಯಯನ ಸಂಕಪ್ಪಯ್ಯನ ತಾಯಿಯ 'ಇಲ್ಲ, ನನ್ನಂತಹ ಸಂಪ್ರದಾಯಸ್ಥ ಜೀವಗಳು ಸಾಯುವವರೆಗೂ ಅದು ಸಾಧ್ಯವಿಲ್ಲ' ಎನ್ನುವ ಅಮಾನವೀಯ ಧೋರಣೆಯನ್ನೂ ಗಮನಿಸುತ್ತದೆ(ಚೋಮನದುಡಿ). ಅತೃಪ್ತ ಕಾಮದಿಂದ ಸತ್ತ ಬೆಳ್ಳಕ್ಕ 'ಲೈಂಗಿಕತೆಯಲ್ಲಿ ಸಂತೃಪ್ತಿ ಹೊಂದಿದವ ಮಾತ್ರ ಸಂಪೂರ್ಣ ಮನುಷ್ಯ' ಎನ್ನುವ ಲೈಂಗಿಕತೆಯ ಸಮರ್ಥನೆಯನ್ನು ಬೋಧಿಸುವ ಶಿಕ್ಷಕಿಯಾಗುತ್ತಾಳೆ(ಸರಸಮ್ಮನ ಸಮಾಧಿ). ರಾಮ ಐತಾಳರ ಹಳೆಯ ಸಂಪ್ರದಾಯಸ್ಥ ಮೌಲ್ಯಗಳು, ಲಚ್ಚನ ಅಪಮೌಲ್ಯಗಳು ಹಾಗೂ ಆಧುನೀಕರಣಗೊಂಡ ಮೂರನೆಯ ತಲೆಮಾರಿನ ರಾಮರಾವ್‌ನ ಮಾನವೀಕರಣದ ತತ್ತ್ವಗಳು ಓದುಗರಿಗೆ ಹೊಸ ಅನುಭವವನ್ನು ನೀಡುತ್ತವೆ(ಮರಳಿ ಮಣ್ಣಿಗೆ). ಕಳೆದ ಮಗುವನ್ನು ಹುಡುಕಿಕೊಡುವ ಭರವಸೆ ಹಾಗೂ ಮಾನವೀಕರಣದ ಮೌಲ್ಯಗಳನ್ನು

ಅನುಭವಿಸಿ ಕಾಡಿನಿಂದ ನಾಡಿಗೆ ಮಾನವೀಯ ಮೌಲ್ಯಗಳನ್ನು ಹೊತ್ತು ಶಿವರಾಮಯ್ಯ; ಮಗನ ಮಮತೆಯನ್ನು ಅನ್ಯರಲ್ಲೂ ಕಾಣುವ ಶಂಕರಮ್ಮ-ಗೋಪಾಲಯ್ಯರು ಮಾನವತೆಯ ಮಾರ್ಗದರ್ಶಕರಾಗಿದ್ದಾರೆ(ಬೆಟ್ಟದ ಜೀವ). ನೈಸರ್ಗಿಕ ಪ್ರವಾಹಕ್ಕೆ ಸಿಲುಕಿ ಜೀವ ಕಳೆದುಕೊಳ್ಳುತ್ತಿದ್ದ ಹೊಲೆಯರ ಅತ್ತೆ-ಸೊಸೆ-ಮಗುವನ್ನು ರಕ್ಷಿಸಿ, ಬಡ ಮಕ್ಕಳಿಗಾಗಿ ಔದ್ಯೋಗಿಕ ಶಾಲೆಯನ್ನು ಆರಂಭಿಸಿ, ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ, ಅನೈತಿಕ ರಾಜಕಾರಣವನ್ನು ಧಿಕ್ಕರಿಸಿ ನಿಲ್ಲುವ ರಾಧಾಕೃಷ್ಣ ಸ್ವಾತಂತ್ರ್ಯ ಬರುವ ಮುಂಚಿನ ಸಂದರ್ಭದಲ್ಲಿದ್ದ ನಾಯಕ ಜೊತೆಗೆ ಮಾನವೀಕರಣದ ಇನ್ನೊಬ್ಬ ಪ್ರತಿನಿಧಿಯಾದ ಬಿರುಮ ಯಾವಾಗಲೂ ಎಂತಹ ಓದುಗನಿಗೂ ಆದರ್ಶನಾಗುತ್ತಾನೆ (ಔದಾರ್ಯದ ಉರುಳಲ್ಲಿ).

ದುರಂತ ಜೀವನದಲ್ಲಿ ಸುಖವನ್ನು ಅನುಭವಿಸುವ ಸೂರ-ಕಾಳಿಯರ ಜೀವನ ಆದರ್ಶನೀಯವಲ್ಲದಿದ್ದರೂ ಅಂತಹ ಗೊಂದಲಗಳಿಲ್ಲದ ಜೀವನ ಬೇಕು; ಶ್ರೀನಿವಾಸನ ಪರೋಪಕಾರಿ ನೀತಿ, ವಾಸುದೇವನು ವೇಶ್ಯಾಕುಲದ ಕನ್ಯೆಯ ಕೈಹಿಡಿದು ಅವಳ ಜೀವನವೂ ಹಸನುಗೊಳಿಸುವಲ್ಲಿ ಕಾರಂತರೇ ಆವಿರ್ಭವಿಸುತ್ತಾರೆ(ಸಮೀಕ್ಷೆ). 'ಕಾಯ ಅಳಿದರೂ ಮಾಡಿದ ಕಾಯಕ ಉಳಿದಿರಬೇಕೆನ್ನುವ' ಮಾನವೀಕರಣದ ತತ್ವದ ಪ್ರತಿಪಾದಕ ಯಶವಂತರಾಯರು ಕಾರಂತರ ಮೂಲಕ ಪ್ರಚುರ ಪಡಿಸುವ (ಅಥವಾ ಕಾರಂತರೇ ಯಶವಂತರ ಮೂಲಕ) ಮೌಲ್ಯಗಳು ಪ್ರತಿನಾಗರಿಕನಿಗೂ ದಾರಿದೀಪಗಳು(ಅಳಿದ ಮೇಲೆ). ಅನ್ಯರು ಮಾಡಿದ ತಪ್ಪು ತನಗೆ ಗೊತ್ತಿದ್ದರೂ, ಆದ ಅಚಾತುರ್ಯವನ್ನು ಮರೆತು, ತನ್ನ ಜೀವನಕ್ಕೆ ಮಡಂಗಾವ್‌ಕರ್‌ನಿಂದ ಗರ್ಭಧರಿಸಿದ್ದ ಬನ್ನಿಯನ್ನು ಬಾಳಸಂಗಾತಿಯನ್ನಾಗಿ ಮಾಡಿಕೊಳ್ಳುವ ಕೃಷ್ಣರಾವ್-ಅಸಡ್ಡೆಗೆ ಗುರಿಯಾದ ಬನ್ನಿಯಂತಹವರಿಗೆ ಆರಾಧ್ಯದೈವ(ಸ್ವಪ್ನದ ಹೊಳೆ). ಅರಿಯದೆ ಸಾಮಾಜಿಕರು, ಸಕುಟುಂಬಿಗಳು ಮಾಡುವ ಅನೇಕ ತಪ್ಪುಗಳನ್ನು ತಿದ್ದುವ, ಸರಿಯಲ್ಲದ್ದನ್ನು ಕೈಬಿಡಲು ಹೇಳುವ, ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿಯುವ ಮೂಕಜ್ಜಿ ಬಾಲ್ಯತನದಿಂದಲೇ ವೈದವ್ಯಕ್ಕೆ ಬಲಿಯಾದವಳು. ಅವಳು ಹೇಳುವ ಪ್ರತಿ ವಾಕ್ಯವೂ ಮಾನವೀಕರಣದ ವಿಧಿಗಳಾಗುತ್ತವೆ (ಮೂಕಜ್ಜಿಯ ಕನಸುಗಳು). ನೀರಿನಲ್ಲಿ ಬಿದ್ದು ಸಾಯುತ್ತಿದ್ದ ತನ್ನನ್ನು ಬದುಕಿಸಿದ ಮಾತ್ರಕ್ಕೆ ನಾಗಾನಂದ ಅಜೀವ ಪರ್ಯಾಂತ ನಾಗೇಂದ್ರನಿಗೆ ಶಿಕ್ಷಣ, ಉದ್ಯೋಗ ಕೊನೆಗೆ ಮದುವೆ-ಮನೆಯನ್ನು ಮಾಡಿಸಿ ಉಪಕಾರಕ್ಕೆ ಪ್ರತ್ಯುಪಕಾರ ಮಾಡುವ ಮಾನವೀಕರಣದ ಪ್ರತಿನಿಧಿಯಾಗುತ್ತಾನೆ(ಗೆದ್ದ ದೊಡ್ಡಸ್ತಿಕೆ). ಯುದ್ಧ ಹಾಗೂ ತುರ್ತು ಪರಿಸ್ಥಿತಿಗಳಂತಹ ಸಂದರ್ಭದಲ್ಲಿ ಬಡವರಿಗೆ ಅನುಕೂಲವಾಗುವಂತೆ ಔಷಧಿ-ಆಹಾರವನ್ನು ಒದಗಿಸುವ, ಕಾಳಸಂತೆಯಲ್ಲಿ ಔಷಧಿಯನ್ನು ಮಾರುವವರನ್ನು ಖಂಡಿಸುವ, ಹೆರಿಗೆಯ ಸಂದರ್ಭದಲ್ಲಿ ಸಾಯುತ್ತಿರುವ ಸ್ತ್ರೀ-ಮಗುವನ್ನು ಉಳಿಸುವ ಶಿವಪ್ಪನಂತಹ ಉದಾರಿ ನಾಯಕರು ನಮ್ಮ ಪಾಲಿಗೆ ಆದರ್ಶನೀಯ(ಜಾರುವ ದಾರಿಯಲ್ಲಿ). ತಮ್ಮ ಇಡೀ ಜನಾಂಗವನ್ನೇ ತಮ್ಮದೇ ಆದ ಮಾನವೀಯ ಧೋರಣೆಗಳಲ್ಲಿ ಮುನ್ನಡೆಸುವ ಕುಡಿಯರ

ನಾಯಕ ಕರಿಯ ಬುಡಕಟ್ಟು ಸಂಸ್ಕೃತಿಯ ವಾರಸುದಾರನಾಗುತ್ತಾನೆ. ಅಲ್ಲದೆ ಅಂತಹ ಸಂಸ್ಕೃತಿಗಳ ಜನತೆಗೆ ಆದರ್ಶನಾಗುತ್ತಾನೆ(ಕುಡಿಯರ ಕೂಸು). ವೇಶ್ಯೆಗೂ ಒಂದು ಮಾನವೀಯತೆ ಇದೆ ಅವಳು ತನ್ನ ಮೈಯನ್ನು ಮಾರಿಕೊಳ್ಳಬಹುದು. ಆದರೆ ಅದರ ಜೊತೆಗೆ ಸಾಂಗತ್ಯದ ಸಂದರ್ಭದಲ್ಲಿ ಮನಸ್ಸನ್ನೂ ತಾದಾತ್ಮ್ಯಗೊಳಿಸುತ್ತಾಳೆ. ಅದರಿಂದಲೇ ಅವಳಲ್ಲಿ ಮಾನವೀಕರಣವಿದೆ ಎನ್ನುವುದು ಮೂರ್ಖತನವಾಗುತ್ತದೆ. ಆದರೆ ತನ್ನ ಜೀವನವನ್ನು ಸಮಾಜದಲ್ಲಿ ತೆರೆದಿಡುವ ರೀತಿ, ಸಮಾಜದೊಂದಿಗೆ ಅಸಹನೀಯವಾಗಿ ಬಾಳುವಂತಹ ಸಂದರ್ಭದಲ್ಲೂ ಆನಂದದಿಂದ-ಕಲಾವಿದಳಾಗಿ ಅಥವಾ ಇನ್ನಾವುದೋ ಸಮಾಜೋಮುಖಿ ಪ್ರಕ್ರಿಯೆಗಳಲ್ಲಿ ತೊಡಗಿಸಿಕೊಳ್ಳುವಿಕೆ ಮುಖ್ಯವಾಗುತ್ತದೆ(ಮೈಮನಗಳ ಸುಳಿಯಲ್ಲಿ). ಈ ನಿಟ್ಟಿನಲ್ಲಿ ಕಾರಂತರು ಮಂಜುಳೆಯ ಮನಸ್ಸನ್ನು, ಮನುಷ್ಯತ್ವವನ್ನು ನಿರೂಪಿಸಿರುವ ಕ್ರಮ ಸೂಕ್ಷ್ಮವಾಗಿದೆ.

'ಸಮೀಕ್ಷೆ' ಕಾದಂಬರಿಯ ನಾಯಕ ಶ್ರೀನಿವಾಸ, 'ಅಳಿದ ಮೇಲೆ'ಯ ಯಶವಂತ, 'ಜಾರುವ ದಾರಿಯಲ್ಲಿ'ನ ಡಾ.ಶಿವಪ್ಪ, 'ಮೂಕಜ್ಜಿಯ ಕನಸುಗಳಲ್ಲಿ'ನ ಮೂಕಜ್ಜಿ, 'ಔದಾರ್ಯದ ಉರುಳಲ್ಲಿ'ಯ ರಾಧಾಕೃಷ್ಣ, ಬಿರುಮ ಮರಕಾಲ, ಸತ್ಯಭಾಮೆ, 'ಮರಳಿ ಮಣ್ಣಿಗೆ' ರಾಮ ಐತಾಳ, 'ಬೆಟ್ಟದ ಜೀವ'ದ ಗೋಪಾಲಯ್ಯ, ಶಿವರಾಮ, 'ಸ್ವಪ್ನದ ಹೊಳೆ'ಯ ಕೃಷ್ಣರಾವ್, 'ಗೆದ್ದ ದೊಡ್ಡಸ್ತಿಕೆ'ಯ ನಾಗೇಂದ್ರ ಮೊದಲಾದ ಪಾತ್ರಗಳು ನಮ್ಮ ಜೀವನದಲ್ಲಿ ಅನುಬೋಧಿಸುವ ತತ್ವಗಳು ಹಲವು. ಅಲ್ಲದೆ ಇದುವರೆಗೆ ಕಾರಂತರ ಕಾದಂಬರಿಗಳುದ್ದಕ್ಕೂ ಪಾತ್ರಗಳ ವಿವಿಧ ರೀತಿಯ ಮಾನವೀಯತೆಯನ್ನ ಗಮನಿಸಿದ್ದೇವೆ. ಕಾರಂತರು ವೇಶ್ಯೆಯಲ್ಲೂ ಮಾನವೀಯತೆ ಇದೆ. ಬಡವನಲ್ಲೂ ಇದೆ. ಶ್ರೀಮಂತನಲ್ಲೂ ಇದೆಯೆಂದು ಹೇಳಿದ್ದಾರೆ. ಅವರು ಹೆಚ್ಚಾಗಿ ಮಾನವೀಕರಣಕ್ಕೆ ತೊಡಗಿಸಿಕೊಂಡ ಪಾತ್ರಗಳು ಸಣ್ಣ ಅಥವಾ ಕೆಳವರ್ಗದ ಪಾತ್ರಗಳನ್ನು. ಈ ಸಣ್ಣ ಅಥವಾ ಕೆಳವರ್ಗದ ಪಾತ್ರಗಳು. ಮಾನವೀಕರಣದ ಸಂದರ್ಭದಲ್ಲಿ ನಾಯಕ ಪಾತ್ರಗಳಿಗಿಂತಲೂ ಒಂದು ಹೆಜ್ಜೆ ಮುಂದೆ ನಿಲ್ಲುತ್ತದೆ. 'ಚೋಮನ ದುಡಿ'ಯ ಚೋಮ, 'ಮರಳಿ ಮಣ್ಣಿಗೆ'ಯ ಸೂರ ಮತ್ತು ಅವನ ಮಕ್ಕಳು, 'ಬೆಟ್ಟದ ಜೀವ'ದ ಬಟ್ಯ, 'ಸಮೀಕ್ಷೆ'ಯ ಸೂರ-ಕಾಳ, 'ಮೂಕಜ್ಜಿಯ ಕನಸುಗಳಲ್ಲಿ'ನ ನಾಗಿ-ರಾಮಣ್ಣ, 'ಮೈಮನ ಸುಳಿಯಲ್ಲಿ'ನ ಪಮ್ಮ-ದುಗ್ಗಿ ಈ ಪಾತ್ರಗಳು ಮಾನವೀಕರಣದ ನಿರ್ಮಾಣದಲ್ಲಿ ವಹಿಸುವ ತಾದಾತ್ಮ್ಯ ಮುಖ್ಯವಾಗಿದೆ. ಅವರ ಅನುಭವವನ್ನು ನಮ್ಮ ಜೀವನಕ್ಕೆ ಅಳವಡಿಸಿಕೊಂಡರೆ ಕನ್ನಡ ಕಾದಂಬರಿಗಳು ಹಾಗೂ ಕಾರಂತರ ಕೃತಿಗಳು ಸಾರ್ಥಕ ಹೊಂದುತ್ತವೆ.

## ಅಧ್ಯಾಯ ೬

# ಅನುಬಂಧ


**ಅನಂತ ನಾರಾಯಣ ಎಸ್.**
ಕಾರಂತರ ಕಾದಂಬರಿಗಳಲ್ಲಿ ನಿಸರ್ಗ ೧೯೯೧
ಕರ್ನಾಟಕ ಸಂಘ, ಪುತ್ತೂರು

**ಅನಂತಮೂರ್ತಿ ಯು.ಆರ್.**
ಸಂಸ್ಕಾರ ೧೯೯೨
ಅಕ್ಷರ ಪ್ರಕಾಶನ, ಹೆಗ್ಗೋಡು

**ಅಶೋಕ ಟಿ.ಪಿ.**
ಕನ್ನಡ ಸಾಹಿತ್ಯ : ಈ ಶತಮಾನದ ನೋಟ
ಶಿವರಾಮ ಕಾರಂತ ೧೯೯೩
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕಾರಂತರ ಕಾದಂಬರಿಗಳಲ್ಲಿ ಗಂಡು - ಹೆಣ್ಣು ೧೯೮೨
ಅಕ್ಷರ ಪ್ರಕಾಶನ, ಹೆಗ್ಗೋಡು

ಕಾರಂತ ಮಂಥನ ೧೯೯೪
ಕರ್ನಾಟಕ ಸಂಘ, ಪುತ್ತೂರು

ಪುಸ್ತಕ ಪ್ರೀತಿ ೧೯೯೩
ಅಕ್ಷರ ಪ್ರಕಾಶನ, ಹೆಗ್ಗೋಡು

ವಾಸ್ತವತಾ ವಾದ ೧೯೯೨
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

ಶಿವರಾಮ ಕಾರಂತ ಎರಡು ಅಧ್ಯಯನಗಳು, ೧೯೯೯
ಅಕ್ಷರ ಪ್ರಕಾಶನ, ಹೆಗ್ಗೋಡು

**ಆರ್ಕೆ ಮಣಿಪಾಲ**
ಲೋಕಗ್ರಹಿಕೆ ಮತ್ತು ಅಭಿವ್ಯಕ್ತಿ ೧೯೯೫
ಸಂಕ್ರಮಣ ಪ್ರಕಾಶನ, ಧಾರವಾಡ

**ಆಮೂರ ಜಿ.ಎಸ್.**
ಕನ್ನಡ ಕಥನ ಸಾಹಿತ್ಯ : ಕಾದಂಬರಿ ೧೯೯೪
ಶ್ರೀ ಹರಿ ಪ್ರಕಾಶನ, ಧಾರವಾಡ

ಸಮಕಾಲೀನ ಕಥೆ ಕಾದಂಬರಿ ಹೊಸ
ಪ್ರಯೋಗಗಳು ೧೯೮೧
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

ಆಚಾರ್ಯ ನರೇಂದ್ರದೇವ — ಸಮಾಜವಾದದೆಡೆಗೆ — ೧೯೮೧
ಜನ ಪ್ರಕಾಶನ, ಸಮಾಜವಾದಿ ಅಧ್ಯಯನ ಕೇಂದ್ರ, ಬೆಂಗಳೂರು

ಇನಾಂದಾರ್ ವಿ.ಎಂ. — ಶಾಪ — ೧೯೯೧
ಗೀತಾ ಬುಕ್ ಹೌಸ್, ಮೈಸೂರುರ

ಶಿವರಾಮ ಕಾರಂತ ಬದುಕು - ಬರಹ — ೧೯೭೮
ರಾಷ್ಟ್ರಕವಿ ಗೋವಿಂದ ಪೈ ಸ್ಮಾರಕ ಸಂಶೋಧನಾ ಕೇಂದ್ರ, ಉಡುಪಿ

ಕಟ್ಟಿ ಎ.ಆರ್. — ಸಮಾಜಶಾಸ್ತ್ರದ ಮೂಲತತ್ತ್ವಗಳು — ೧೯೮೯
ವಿಜಯ ಬುಕ್ ಡಿಪೋ, ಗದಗ

ಕೃಷ್ಣಮೂರ್ತಿ ಎಂ.ಜಿ. — ಕೃತಿ ಸಂಸ್ಕೃತಿ — ೧೯೯೪
ರುಜುವಾತು ಪ್ರಕಾಶನ, ಮೈಸೂರು

ಕೃಷ್ಣರಾಯ ಎಸ್.ಎಂ.(ಸಂ) — ಚಿರಚೇತನ — ೧೯೭೨
ವಿಶ್ವಭಾರತಿ ಪ್ರಕಾಶನ, ಗೋವೆ

ಕೀರ್ತಿನಾಥ ಕುರ್ತಕೋಟಿ — ನೂರುಮರ ನೂರು ಸ್ವರ — ೧೯೯೮
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಯುಗಧರ್ಮ ಮತ್ತು ಸಾಹಿತ್ಯ ದರ್ಶನ — ೧೯೮೩
ವಿಶ್ವಕನ್ನಡ ಸಮ್ಮೇಳನ, ಬೆಂಗಳೂರು

ವಿಮರ್ಶೆಯ ವಿನಯ ಕಾದಂಬರಿ — ೧೯೮೫
ಮನೋಹರ ಗ್ರಂಥಮಾಲೆ, ಧಾರವಾಡ

ಕುವೆಂಪು — ಕಾನೂರು ಹೆಗ್ಗಡತಿ — ೧೯೯೨
ಉದಯರವಿ ಪ್ರಕಾಶನ, ಮೈಸೂರು

ಮಲೆಗಳಲ್ಲಿ ಮದುಮಗಳು — ೧೯೯೨
ಉದಯರವಿ ಪ್ರಕಾಶನ, ಮೈಸೂರು

ವಿಚಾರ ಕ್ರಾಂತಿಗೆ ಆಹ್ವಾನ — ೧೯೮೭
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

ಖಂಡೋಬಾ ಪಿ.ಕೆ. — ಶಿವರಾಮ ಕಾರಂತ — ೧೯೯೬
ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ

ಗಿರಡ್ಡಿ ಗೋವಿಂದರಾಜ — ಕಾದಂಬರಿ : ವಸ್ತು ಮತ್ತು ತಂತ್ರ — ೧೯೯೭
ಸ್ನೇಹ ಪ್ರಕಾಶನ, ಬೆಂಗಳೂರು

ಸಾತತ್ಯ — ೧೯೯೨
ಸ್ನೇಹ ಪ್ರಕಾಶನ, ಬೆಂಗಳೂರು

ಆಚಾರ್ಯ ನರೇಂದ್ರದೇವ — ಸಮಾಜವಾದದೆಡೆಗೆ — ೧೯೮೧
ಜನ ಪ್ರಕಾಶನ, ಸಮಾಜವಾದಿ ಅಧ್ಯಯನ ಕೇಂದ್ರ, ಬೆಂಗಳೂರು

ಇನಾಂದಾರ್ ವಿ.ಎಂ. — ಶಾಪ — ೧೯೯೧
ಗೀತಾ ಬುಕ್ ಹೌಸ್, ಮೈಸೂರುರ

ಶಿವರಾಮ ಕಾರಂತ ಬದುಕು - ಬರಹ — ೧೯೭೮
ರಾಷ್ಟ್ರಕವಿ ಗೋವಿಂದ ಪೈ ಸ್ಮಾರಕ ಸಂಶೋಧನಾ ಕೇಂದ್ರ, ಉಡುಪಿ

ಕಟ್ಟಿ ಎ.ಆರ್. — ಸಮಾಜಶಾಸ್ತ್ರದ ಮೂಲತತ್ತ್ವಗಳು — ೧೯೮೯
ವಿಜಯ ಬುಕ್ ಡಿಪೋ, ಗದಗ

ಕೃಷ್ಣಮೂರ್ತಿ ಎಂ.ಜಿ. — ಕೃತಿ ಸಂಸ್ಕೃತಿ — ೧೯೯೪
ರುಜುವಾತು ಪ್ರಕಾಶನ, ಮೈಸೂರು

ಕೃಷ್ಣರಾಯ ಎಸ್.ಎಂ.(ಸಂ) — ಚಿರಚೇತನ — ೧೯೭೨
ವಿಶ್ವಭಾರತಿ ಪ್ರಕಾಶನ, ಗೋವೆ

ಕೀರ್ತಿನಾಥ ಕುರ್ತಕೋಟಿ — ನೂರುಮರ ನೂರು ಸ್ವರ — ೧೯೯೮
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಯುಗಧರ್ಮ ಮತ್ತು ಸಾಹಿತ್ಯ ದರ್ಶನ — ೧೯೮೩
ವಿಶ್ವಕನ್ನಡ ಸಮ್ಮೇಳನ, ಬೆಂಗಳೂರು

ವಿಮರ್ಶೆಯ ವಿನಯ ಕಾದಂಬರಿ — ೧೯೮೫
ಮನೋಹರ ಗ್ರಂಥಮಾಲೆ, ಧಾರವಾಡ

ಕುವೆಂಪು — ಕಾನೂರು ಹೆಗ್ಗಡತಿ — ೧೯೯೨
ಉದಯರವಿ ಪ್ರಕಾಶನ, ಮೈಸೂರು

ಮಲೆಗಳಲ್ಲಿ ಮದುಮಗಳು — ೧೯೯೨
ಉದಯರವಿ ಪ್ರಕಾಶನ, ಮೈಸೂರು

ವಿಚಾರ ಕ್ರಾಂತಿಗೆ ಆಹ್ವಾನ — ೧೯೮೭
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

ಖಂಡೋಬಾ ಪಿ.ಕೆ. — ಶಿವರಾಮ ಕಾರಂತ — ೧೯೯೬
ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ

ಗಿರಡ್ಡಿ ಗೋವಿಂದರಾಜ — ಕಾದಂಬರಿ : ವಸ್ತು ಮತ್ತು ತಂತ್ರ — ೧೯೯೭
ಸ್ನೇಹ ಪ್ರಕಾಶನ, ಬೆಂಗಳೂರು

ಸಾತತ್ಯ — ೧೯೯೨
ಸ್ನೇಹ ಪ್ರಕಾಶನ, ಬೆಂಗಳೂರು

| | | |
|---|---|---|
| ಪುರುಷೋತ್ತಮ ಬಿಳಿಮಲೆ | ಶಿಷ್ಟ, ಪರಿಶಿಷ್ಟ<br>ಮದಿಪು ಪ್ರಕಾಶನ, ಮಂಗಳೂರು | ೧೯೯೨ |
| ಬಡಕ್ಕಿಲ ಕೃಷ್ಣಭಟ್ | ಎಂ. ಎನ್. ರಾಯ್<br>ಐಬಿಎಚ್ ಪ್ರಕಾಶನ, ಬೆಂಗಳೂರು | ೧೯೮೭ |
| ಬರಗೂರು ರಾಮಚಂದ್ರಪ್ಪ | ಬಂಡಾಯ ಸಾಹಿತ್ಯ ಮೀಮಾಂಸೆ<br>ಅನ್ವೇಷಣೆ ಪ್ರಕಾಶನ, ಬೆಂಗಳೂರು | ೧೯೯೬ |
| | ಸಂಸ್ಕೃತಿ ಮತ್ತು ಸೃಜನಶೀಲತೆ<br>ಸಂವಾದ ಪ್ರಕಾಶನ, ಬೆಂಗಳೂರು | ೧೯೮೯ |
| | ಸಾಹಿತ್ಯ ಮತ್ತು ರಾಜಕಾರಣ<br>ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು | ೧೯೯೮ |
| ಭಟ್ ಜಿ.ಎಸ್. ಮತ್ತು<br>ಶಿವಕುಮಾರ ಕೆ.ವೈ. | ಕಾರಂತ ಕೆಲವು ಮುಖಗಳು<br>ಮಿತ್ರ ಪ್ರಕಾಶನ, ಮೈಸೂರು | ೧೯೮೨ |
| ಭೈರಪ್ಪ ಎಸ್.ಎಲ್. | ತಬ್ಬಲಿ ನೀನಾದೆ ಮಗನೆ<br>ಸಾಹಿತ್ಯ ಭಂಡಾರ, ಬೆಂಗಳೂರು | ೧೯೮೩ |
| | ದಾಟು<br>ಸಾಹಿತ್ಯ ಭಂಡಾರ, ಬೆಂಗಳೂರು | ೧೯೭೮ |
| | ನಾನೇಕೆ ಬರೆಯುತ್ತೇನೆ<br>ಸಾಹಿತ್ಯ ಭಂಡಾರ, ಬೆಂಗಳೂರು | ೧೯೮೦ |
| | ವಂಶವೃಕ್ಷ<br>ಸಾಹಿತ್ಯ ಭಂಡಾರ, ಬೆಂಗಳೂರು | ೧೯೮೮ |
| ಮನು ಬಳಿಗಾರ್ | ಬಹುಮುಖಿ<br>ಪರಮಶಂಕರ ಪ್ರಕಾಶನ, ಶಿಗ್ಗಿ | ೧೯೯೯ |
| ಮಲ್ಲಿಕಾ ಘಂಟಿ | ಬಸವರಾಜ ಕಟ್ಟಿಮನಿ ಸಾಹಿತ್ಯ<br>ಯುವವೇದಿಕೆ, ಬಾಗಲಕೋಟೆ | |
| ಮಲ್ಲೇಪುರಂ ಜಿ.ವೆಂಕಟೇಶ್ | ಶಂಬಾಕೃತಿ ಸಮೀಕ್ಷೆ<br>ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು | ೧೯೯೨ |
| ಮಹಾದೇವ ಕಣವಿ | ಕನ್ನಡ ಪ್ರಾತಿನಿಧಿಕ ಪ್ರಾದೇಶಿಕ ಕಾದಂಬರಿಗಳು<br>ಒಂದು ಅಧ್ಯಯನ<br>ಪ್ರತಿಮಾ ಪ್ರಕಾಶನ, ಗುಳೇದಗುಡ್ಡ | ೧೯೯೪ |
| ಮಾಲಿನಿ ಮಲ್ಯ ಬಿ. | ಶಿವರಾಮ ಕಾರಂತರ ಕೃತಿ ಕೈಪಿಡಿ<br>ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ<br>ಉಡುಪಿ | ೧೯೯೭ |

| | | |
|---|---|---|
| | ಶಿವರಾಮ ಕಾರಂತರ ಲೇಖನಗಳು ಸಂಪುಟ ೪<br>ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ | ೧೯೯೪ |
| | ಶಿವರಾಮ ಕಾರಂತ ವಾಙ್ಮಯ ವೃತ್ತಾಂತ<br>ಎಸ್.ಬಿ.ಎಸ್.ಪಬ್ಲಿಷರ್ಸ್, ಬೆಂಗಳೂರು | ೧೯೯೨ |
| ಮಿರ್ಜಿ ಅಣ್ಣಾರಾಯ | ನಿಸರ್ಗ<br>ವಿಶ್ವಕನ್ನಡ ಸಮ್ಮೇಳನ, ಬೆಂಗಳೂರು | ೧೯೮೩ |
| ಮೂರ್ತಿ ಡಿ.ವಿ.ಕೆ | ಜೀವನ ಮೌಲ್ಯಗಳು ಮತ್ತು ಸಾಹಿತ್ಯ<br>ಡಿವಿಕೆ ಮೂರ್ತಿ ಪ್ರಕಾಶನ, ಮೈಸೂರು | ೧೯೮೯ |
| ಯರವಿನ ತಲೆಮಠ ಸಿ.ಆರ್. | ಪಾಶ್ಚಾತ್ಯ ಸಾಹಿತ್ಯ ವಾದಗಳು<br>ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ | ೧೯೯೪ |
| ಯಶವಂತ ಚಿತ್ತಾಲ | ಶಿಕಾರಿ<br>ಮನೋಹರ ಗ್ರಂಥಮಾಲೆ, ಧಾರವಾಡ | ೧೯೯೦ |
| ರಹಮತ್ ತರೀಕೆರೆ | ಪ್ರತಿಸಂಸ್ಕೃತಿ<br>ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು | ೧೯೯೩ |
| ರಾಘವೇಂದ್ರರಾವ್ ಎಚ್.ಎಸ್. | ನಿಲುವು<br>ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು | ೧೯೮೯ |
| ರಾಮಕೃಷ್ಣ ಜಿ. | ವೈಚಾರಿಕ ಜಾಗೃತಿ<br>ಬಿ.ಎಂ.ಶ್ರೀ.ಪ್ರತಿಷ್ಠಾನ, ಬೆಂಗಳೂರು | ೧೯೯೨ |
| ರಾಮಚಂದ್ರ ದೇವ | ಕಾರಂತರ ಕಾದಂಬರಿಗಳನ್ನು ಕುರಿತು<br>ಅಕ್ಷರ ಪ್ರಕಾಶನ, ಹೆಗ್ಗೋಡು | ೧೯೭೮ |
| ರಾಮಚಂದ್ರನ್ ಸಿ.ಎನ್. | ಸ್ವರೂಪ<br>ಕನ್ನಡ ಅಧ್ಯಯನ ವಿಭಾಗ,<br>ಮುಂಬಾಯಿ ವಿಶ್ವವಿದ್ಯಾಲಯ | ೧೯೮೮ |
| | ಶಿಲ್ಪವಿನ್ಯಾಸ<br>ಕನ್ನಡ ಸಂಘ, ಪುತ್ತೂರು | ೧೯೮೬ |
| ವ್ಯಾಸರಾಯ ಬಲ್ಲಾಳ | ಬಂಡಾಯ<br>ಗೀತಾ ಬುಕ್ ಹೌಸ್, ಮೈಸೂರು | ೧೯೯೧ |
| ವಿವಿಧ ಲೇಖಕರು | ಕನ್ನಡ ಸಾಹಿತ್ಯದಲ್ಲಿ ನೋವಿನ ನೆಲೆಗಳು<br>ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು | ೧೯೯೩ |
| | ಕನ್ನಡ ಸಾಹಿತ್ಯದಲ್ಲಿ ಮನುಷ್ಯನ ಪರಿಕಲ್ಪನೆ<br>ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು | ೧೯೯೩ |
| | ಕಾದಂಬರಿ ಕಣ್ಣಲ್ಲಿ ಕಾರಂತರು<br>ಪ್ರತಿಭಾ ಯುವ ವೇದಿಕೆ, ಬೆಂಗಳೂರು | ೧೯೯೨ |

| | | |
|---|---|---|
| ವಿವೇಕ ರೈ | ಕನ್ನಡ ಕಾದಂಬರಿ ಮೊದಲ ಹೆಜ್ಜೆಗಳು<br>ಕನ್ನಡ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ | ೧೯೮೭ |
| ವೈದೇಹಿ | ಅಸ್ಪೃಶ್ಯರು<br>ನವಕರ್ನಾಟಕ ಪ್ರಕಾಶನ, ಬೆಂಗಳೂರು | ೧೯೯೨ |
| ಸದಾಶಿವ ಒಡೆಯರ | ಜೀವನದಲ್ಲಿ ಮಾನವೀಯ ಮೌಲ್ಯಗಳು<br>ಡೆ. ಚನ್ನಬಸಪ್ಪ ಪ್ರಾಥಮಿಕ ಶಿಕ್ಷಣ ಪ್ರತಿಷ್ಠಾನ,<br>ಧಾರವಾಡ | ೧೯೯೦ |
| ಸಿದ್ದಯ್ಯ ಪುರಾಣಿಕ | ವಚನೋದ್ಯಾನ<br>ಶ್ರೀ ಗಿರಿ ಪ್ರಕಾಶನ, ಬೆಂಗಳೂರು | ೧೯೭೨ |
| ಸಿದ್ಧಲಿಂಗಯ್ಯ ಜಿ.ಎಸ್.<br>ಮತ್ತು ಪಿ.ವಿ.ನಾರಾಯಣ | ವಿಮರ್ಶೆಯ ದಾರಿ ೨<br>ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ | ೧೯೮೦ |
| ಸೀತಾಲಕ್ಷ್ಮಿ ಕರ್ಕಿಕೋಡಿ | ಪರಾಮರ್ಶೆ<br>ಸ್ಮೃತಿ ಪ್ರಕಾಶನ, ಅಡ್ಯನಡ್ಕ | ೧೯೯೭ |
| ಸುಜನಾ | ಪರಂಪರೆ ಮತ್ತು ಕುವೆಂಪು<br>ಸಹ್ಯಾದ್ರಿ ಪ್ರಕಾಶನ, ಮೈಸೂರು | ೧೯೮೪ |
| ಸುನೀತಾ ಎಂ.ಶೆಟ್ಟಿ | ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಸ್ತ್ರೀ<br>ಕನ್ನಡ ವಿಭಾಗ, ಮುಂಬಾಯಿ ವಿಶ್ವವಿದ್ಯಾಲಯ | ೨೦೦೦ |
| ಸುಮಿತ್ರಾ ಎಲ್.ಸಿ. | ವಿಭಾವ<br>ಅಕ್ಷರ ಪ್ರಕಾಶನ, ಹೆಗ್ಗೋಡು | ೧೯೯೭ |
| ಸುಮಿತ್ರಾಬಾಯಿ ಬಿ.ಎನ್. | ಅಯನ<br>ವಿದ್ಯಾವರ್ಧಕ ಸಂಘ, ಮಹಿಳಾ ಪ್ರಥಮ<br>ದರ್ಜೆ ಕಾಲೇಜು, ಬೆಂಗಳೂರು | ೧೯೯೫ |
| ಸೇತುರಾವ್ ಎಂ.ಎ. ಮತ್ತು<br>ಗೋಪಾಲಕೃಷ್ಣರಾವ್ ಕೆ.ಎಲ್. | ನವಕರ್ನಾಟಕ ಜ್ಞಾನ ವಿಜ್ಞಾನಕೋಶ<br>ನವಕರ್ನಾಟಕ ಪ್ರಕಾಶನ, ಬೆಂಗಳೂರು | ೧೯೯೯ |
| ಶಂಬಾ ಜೋಶಿ | ಜೀವನ ಅರ್ಥಗ್ರಹಣ ಪದ್ಧತಿ<br>ಕಾಲಗತಿ ಪ್ರಕಾಶನ, ರಾಯಭಾಗ, ಬೆಳಗಾವಿ | ೧೯೮೬ |
| | ವೈವಸ್ವತ ಮನುಪ್ರಣೀತ ಮಾನವ<br>ಧರ್ಮದ ಆಕೃತಿ<br>ಕಾಲಗತಿ ಪ್ರಕಾಶನ, ರಾಯಭಾಗ, ಬೆಳಗಾವಿ | ೧೯೭ |
| ಶಾಂತರಾಮ ಎಚ್.<br>ಮತ್ತು ಎ.ವಿ.ನಾವಡ | ದರ್ಶನ ಕಾರಂತ ಸಂಚಿಕೆ<br>ಭಂಡಾರಕರ್ ಕಾಲೇಜು, ಕುಂದಾಪುರ | ೧೯೭೮ |
| ಶಾಂತಿನಾಥ ದೇಸಾಯಿ | ನವ್ಯ ಸಾಹಿತ್ಯ ದರ್ಶನ<br>ಪರಿಸರ ಸಾಹಿತ್ಯ ಪ್ರಕಾಶನ, ಶಿವಮೊಗ್ಗ | ೧೯೯೦ |

| | | |
|---|---|---|
| | ಎಂ. ಎನ್. ರಾಯ್<br>ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು | ೧೯೯೫ |
| ಶಾಸ್ತ್ರಿ ಪಿ.ವಿ. | ಸಾಹಿತ್ಯದಲ್ಲಿ ತತ್ವವಾದಗಳು<br>ಸಮಾಜ ಪುಸ್ತಕಾಲಯ, ಧಾರವಾಡ | ೧೯೭೬ |
| ಶಿವರಾವ್ ಬಿ. | ಮಹಾತ್ಮಗಾಂಧಿ ನೂರುವರ್ಷಗಳು<br>ಗಾಂಧೀ ಶಾಂತಿ ಪ್ರತಿಷ್ಠಾನ, ನವದೆಹಲಿ | ೧೯೬೮ |
| ಶಿವರಾಮ ಕಾರಂತ | ಅಳಿದ ಮೇಲೆ<br>ಎಸ್.ಬಿ.ಎಸ್.ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್,<br>ಬೆಂಗಳೂರು | ೧೯೯೦ |
| | ಇದ್ದರೂ ಚಿಂತೆ<br>ರಾಜಲಕ್ಷ್ಮಿ ಪ್ರಕಾಶನ, ಬಳೇಪೇಟೆ, ಬೆಂಗಳೂರು | ೧೯೮೫ |
| | ಔದಾರ್ಯದ ಉರುಳಲ್ಲಿ<br>ಐ.ಬಿ.ಎಚ್.ಪ್ರಕಾಶನ, ಬೆಂಗಳೂರು | ೧೯೮೮ |
| | ಕುಡಿಯರ ಕೂಸು<br>ರಾಜಲಕ್ಷ್ಮಿ ಪ್ರಕಾಶನ, ಬಳೇಪೇಟೆ, ಬೆಂಗಳೂರು | ೧೯೮೫ |
| | ಕೇವಲ ಮನುಷ್ಯರು<br>ಹರ್ಷ ಪ್ರಕಟಣಾಲಯ, ಪುತ್ತೂರು | ೧೯೭೧ |
| | ಗೆದ್ದ ದೊಡ್ಡಸ್ಥಿಕೆ<br>ರಾಜಲಕ್ಷ್ಮಿ ಪ್ರಕಾಶನ, ಬಳೇಪೇಟೆ, ಬೆಂಗಳೂರು | ೧೯೭೯ |
| | ಗೊಂಡಾರಣ್ಯ<br>ವಾಹಿನಿ ಪ್ರಕಾಶನ, ಬೆಂಗಳೂರು | ೧೯೫೪ |
| | ಚೋಮನ ದುಡಿ<br>ಎಸ್.ಬಿ.ಎಸ್.ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್,<br>ಬೆಂಗಳೂರು | ೧೯೯೨ |
| | ಜಾರುವ ದಾರಿಯಲ್ಲಿ<br>ಹರ್ಷ ಪ್ರಕಟಣಾಲಯ, ಪುತ್ತೂರು | ೧೯೫೨ |
| | ನಂಬಿದವರ ನಾಕ, ನರಕ<br>ಹರ್ಷ ಪ್ರಕಟಣಾಲಯ, ಪುತ್ತೂರು | ೧೯೫೮ |
| | ನಿರ್ಭಾಗ್ಯ ಜನ್ಮ<br>ವಸಂತ ಪ್ರಕಾಶನ, ಕುಂದಾಪುರ | ೧೯೩೫ |
| | ಬತ್ತದ ತೊರೆ<br>ಹರ್ಷ ಪ್ರಕಟಣಾಲಯ, ಪುತ್ತೂರು | ೧೯೬೨ |

| | | |
|---|---|---|
| | ಬಾಳ್ವೆಯೇ ಬೆಳಕು<br>ಎಸ್.ಬಿ.ಎಸ್.ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್,<br>ಬೆಂಗಳೂರು | ೧೯೯೯ |
| | ಬೆಟ್ಟದ ಜೀವ<br>ಮಯೂರ (ಮಾಸಿಕ) ಸಂಪುಟ ೩೧,<br>ಸಂಚಿಕೆ ೭-೧೧, ಬೆಂಗಳೂರು | ೧೯೯೮ |
| | ಮರಳಿ ಮಣ್ಣಿಗೆ<br>ಎಸ್.ಬಿ.ಎಸ್.ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್,<br>ಬೆಂಗಳೂರು | ೧೯೯೦ |
| | ಮನೋದೇಹಿಯಾದ ಮಾನವ<br>ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ | ೧೯೭೪ |
| | ಮುಗಿದ ಯುದ್ಧ<br>ಹರ್ಷ ಪ್ರಕಟಣಾಲಯ, ಪುತ್ತೂರು | ೧೯೪೫ |
| | ಮೂಕಜ್ಜಿಯ ಕನಸುಗಳು<br>ರಾಜಲಕ್ಷ್ಮಿ ಪ್ರಕಾಶನ, ಬೆಂಗಳೂರು | ೧೯೮೭ |
| | ಮೈಮನಗಳ ಸುಳಿಯಲ್ಲಿ<br>ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು | ೧೯೮೩ |
| | ಸರಸಮ್ಮನ ಸಮಾಧಿ<br>ರಾಜಲಕ್ಷ್ಮಿ ಪ್ರಕಾಶನ, ಬೆಂಗಳೂರು | ೧೯೭೬ |
| | ಸಮೀಕ್ಷೆ<br>ಹರ್ಷ ಪ್ರಕಟಣಾಲಯ, ಪುತ್ತೂರು | ೧೯೬೪ |
| | ಹುಚ್ಚು ಮನಸ್ಸಿನ ಹತ್ತು ಮುಖಗಳು<br>ಅಕ್ಷರ ಪ್ರಕಾಶನ, ಹೆಗ್ಗೋಡು | ೧೯೯೧ |
| | ಹೆತ್ತಳಾ ತಾಯಿ<br>ಸಮಾಜ ಪುಸ್ತಕಾಲಯ, ಧಾರವಾಡ | ೧೯೪೫ |
| ಶಿವರಾವ್ ಬಿ. | ಮಹಾತ್ಮಗಾಂಧಿ ನೂರು ವರ್ಷಗಳು<br>ಗಾಂಧೀ ಶಾಂತಿ ಪ್ರತಿಷ್ಠಾನ, ನವದೆಹಲಿ | ೧೯೬೮ |
| ಶಿವರುದ್ರಪ್ಪ ಜಿ.ಎಸ್. | ಕನ್ನಡದ ಕೆಲವು ಪ್ರಮುಖ ಕಾದಂಬರಿಗಳು<br>ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು | ೧೯೯೦ |
| | ಕಾದಂಬರಿಕಾರರಾಗಿ ಕಾರಂತ<br>ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ | ೧೯೮೩ |
| | ಸಾಹಿತ್ಯ ಮತ್ತು ಸಾಮಾನ್ಯ ಮನುಷ್ಯ<br>ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ | ೧೯೭೭ |

| | | |
|---|---|---|
| **ಶೇಷಗಿರಿರಾವ್ ಎಲ್.ಎಸ್.** | ಹೊಸಗನ್ನಡ ಸಾಹಿತ್ಯ<br>ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು | ೧೯೬೩ |
| **ಶ್ರೀಕಂಠಯ್ಯ ಎಲ್.** | ಸಮಾಜವಾದ<br>ನವಕರ್ನಾಟಕ ಪಬ್ಲಿಕೇಷನ್ಸ್(ಪ್ರೈ) ಲಿಮಿಟೆಡ್,<br>ಬೆಂಗಳೂರು | ೧೯೮೫ |
| **ಹರಿದಾಸ ಭಟ್ ಕು.ಶಿ.** | ಕಾರಂತ ಪ್ರಪಂಚ<br>ಗೀತಾ ಬುಕ್ ಹೌಸ್, ಮೈಸೂರು | ೧೯೭೯ |
| | ಲೋಕಾಭಿರಾಮ ೮೦<br>ಗೀತಾ ಬುಕ್ ಹೌಸ್, ಮೈಸೂರು | ೧೯೭೭ |
| **ಹಿರಣ್ಮಯ ಬ್ಯಾನರ್ಜಿ** | ಠಾಕೂರರ ಮಾನವತಾ ಸಿದ್ಧಾಂತ<br>ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ | ೧೯೭೫ |

# ಪತ್ರಿಕೆಗಳು

**ಅಂಕಣ (ದ್ವೈಮಾಸಿಕ)**
ಚಿ.ಶ್ರೀನಿವಾಸರಾಜು
ಪಿ.ಪಿ.ಬಳಗ, ಬೆಂಗಳೂರು

**ಪುಸ್ತಕ ಪ್ರಪಂಚ**
ಸಂಪುಟ ೪೧, ಸಂಚಿಕೆ ೧

**ಲಂಕೇಶ್ ಪತ್ರಿಕೆ (ಜುಲೈ, ೧೯,೨೦೦೦)**
ಗೌರಿ ಲಂಕೇಶ್
ಪತ್ರಿಕಾ ಪ್ರಕಾಶನ, ಬೆಂಗಳೂರು

ಸಂಕ್ರಮಣ ಸಾಹಿತ್ಯ
ಸಂ.ಚಂದ್ರಶೇಖರ ಪಾಟೀಲ

ಸಾಕ್ಷಿ ತ್ರೈಮಾಸಿಕ
ಸಂ.ಗೋಪಾಲಕೃಷ್ಣ ಅಡಿಗ

ಥಿಯೋಡರ್ ರೋಸ್ಜಕ್
(ಪವಾಡಗಳತ್ತ ಪಯಣ)

ಪೋಲಂಕಿ ರಾಮಮೂರ್ತಿ
(The Return of the Native-Hardy)

ರಹಮತ್ ತರೀಕೆರೆ
(ಪ್ರಗತಿಪರರ ಕಷ್ಟಗಳು)

ದೇವನೂರು ಮಹಾದೇವ ಸಂಪುಟ ೨,
(ಮಾನವೀಯತೆ ಅಂತಾರಲ್ಲ ಅದರ ಬಗ್ಗೆ)

ಶಿವರಾಮ ಕುರಿತ ವಿಶೇಷ ಸಂಚಿಕೆ
೧೯೭೮ ಏಪ್ರಿಲ್ ಹಾಗೂ ಜುಲೈ ಸಂಚಿಕೆಗಳು

# ಇಂಗ್ಲಿಷ್ ಪುಸ್ತಕಗಳು


| | | |
|---|---|---|
| **Blackham H.J.& Kingsley Martin** | Objections to Humanism<br>Penguin Books Ltd.,<br>England | 1967 |
| **Encyclopedia** | Encyclopedia Amaricana<br>Volume XIV | 1959 |
| **Encyclopedia** | Encyclopedia Britanica<br>Volume II, USA | 1969 |
| **Encyclopedia** | Encyclopedia of Indian<br>Literature Volume II | 1988 |
| **Petrosyan M.** | Humanism<br>Progress Publishers,<br>Moscow | 1972 |
| **Raymod williams** | Keywords<br>Foutana Press, Horper | 1988 |
| **Tony Davies** | Humanism<br>Routledge, London | 1997 |
| **Venketeswarlu B.** | Humanism & Jewish<br>American Drama<br>Prestige Books, New Delhi | 1990 |

